...-೩ಂನೇ ತಾರೀಖುಗಳಲ್ಲಿ
ನೆರೆದ...

...-ನೆಯ ಶ್ರೀಮದ್ವೀರಶೈವ ಮಹಾಸಭಾ

ಮತ್ತು

# ಮೊದಲನೆಯ

# ವೀರಶೈವ ಮಹಿಳಾಪರಿಷತ್ತಿನ

## ರಿಪೋರ್ಟು.

ಇದನ್ನು
ಬಳ್ಳಾರಿ ಸತ್ಕಾರಕ ಸಂಘದವರಿಂದ
ಪ್ರಥಮ ಮುದ್ರಣ ೧೦೦೦,—ಪ್ರತಿಗಳು.

ಬಳ್ಳಾರಿಯಲ್ಲಿರುವ
ಯಸ್. ಕೆ. ಕೃಷ್ಣಸ್ವಾಮಿ ಶೆಟ್ರುವರ
ಸ್ವಕೀಯ
ಕರ್ನಾಟಕ ಬುಕ್‌ಡಿಪೋ ಮುದ್ರಾಕ್ಷರಶಾಲೆಯಲ್ಲಿ
ಮುದ್ರಿಸಲ್ಪಟ್ಟಿತು.

ಬಳ್ಳಾರಿ.

೧೯೧೦

ರು. ೨—೦—೦ ರೂಪಾಯಿ.

## ವಿಶೇಷ ಸೂಚನೆ.

ಈ ರಿಪೋರ್ಟಿನ ಯಾವತ್ತು ಹಕ್ಕನ್ನು ಸತ್ಕಾ
ಸುಪೇಟೆ ಮ॥ ರಾ॥ ರಾ॥ ಸಾದ್ರಿ. ಷಣ್ಮುಖಪ್ಪನವರಿಗೆ
ವರು ಅವರ ಅಡ್ರೆಸ್ಸಿಗೆ ಬರೆದು ಪುಸ್ತಕಗಳನ್ನು ತರಿಸಿ

೫-ನೆಯ ವೀರಶೈವ ಮಹಾಸಭಾ ಸತ್ಕಾರಕ
ಸ್ವತಂತ್ರವನ್ನು ವಹಿಸಿ ಕೊಟ್ಟಿರುತ್ತಾರಾದಕಾರಣ ಆ
ಕ್ಷಕರು ಬರೆಯುತಕ್ಕದ್ದು. ...

ಮಹಾಸಭಾ ಆಫೀಸಿನ ಶಾಯಿ ಮೊಹರು
ತಕ್ಕವರು ಕಳುವಿನ ಛಾರ್ಜಿಗೆ ಗುರಿಯಾಗುವರು.

ಈ ರಿಪೋರ್ಟಿನ ಕ್ರಯ ಪ್ರತಿ ೧-ಕ್ಕೆ ವಿ. ಪಿ. ಛಾರ್ಜಿ

ಸ
ವೀರಶೈವ



MADRAS.
1873.

# ಪೀ ಠಿ ಕೆ.

ಶ್ರೀಮದ್ವೀರಶೈವ ಮಹಾಸಭೆಯು ಸರ್ವಸೂತ್ರ ಚಾಲಕರಾದ ಶ್ರೀ ಹಾನಗಲ್ಲು ಕು
ಮಾರ ಮಹಾಸ್ವಾಮಿಗಳ ಕೃಪಾವಿಶೇಷದಿಂದಲು ರಾ॥ ಬ॥ ಅರಟಾಳ ರುದ್ರಗೌಡರೇ
ಮುಂತಾದ ಮಹನೀಯರ ಹಸ್ತಾವಲಂಬನದಿಂದಲು, ಇದುವರೆಗು ನಾಲ್ಕು ಸಭೆಗಳು
ಜರುಗಿ ನಮ್ಮ ಸಮಾಜಕ್ಕೆ ಅದೆಷ್ಟು ಪ್ರಯೋಜನವಾಗಿದೆ ಯೆಂಬುದು ಸರ್ವರಿಗು ವಿದಿತ
ವಾದ ವಿಷಯವಷ್ಟೆ ! ಇಂತಹ ಮಹಾಸಭೆಗಳು ಪ್ರತಿಯೊಂದು ಪ್ರಾಂತದಲ್ಲಿಯು ನೆರೆ
ಯುವದರಿಂದ ಸಮಾಜದಲ್ಲಿ ಪರಸ್ಪರ ಸ್ನೇಹಭಾವವು ಬೆಳೆದು ಆಚಾರವ್ಯವಹಾರಗಳಲ್ಲಿ ಏಕ
ರೂಪತೆಯುಂಟಾಗಿ ತಂತಮ್ಮಲ್ಲಿರುವ ಭೇದಭಾವಗಳನ್ನು ಹೋಗಲಾಡಿಸಿಕೊಂಡು ಕಾಲ
ದೇಶಾನುಗುಣ್ಯವಾದ ಉಚ್ಚಸ್ಥಿತಿಯನ್ನು ಹೊಂದುವದಕ್ಕೆ ಹೇತುವಾಗಿರುತ್ತದೆ ಅದರೊ
ಳಗು ಮದ್ರಾಸು ಪ್ರಾಂತದವರು ಪ್ರತಿಯೊಂದು ಬಾಬಿನಲ್ಲಿಯು ಚೇತರಿಸಿಕೊಳ್ಳಬೇಕಾದುದ
ವಶ್ಯ ಕರ್ತವ್ಯವಾಗಿರುವ ಕಾರಣ ನಾವು ಮಹಾಸಭೆಯ ಮೂಲಕ ಜನಗಳನ್ನು ಎಚ್ಚರ
ಗೊಳಿಸುವದು ಸಮರ್ಪಕವಾಗಿ ಕಂಡುಬಂದಿತು. ಆದಕಾರಣ ಮದ್ರಾಸು ಪ್ರೆಸಿಡೆನ್ಸಿಯ
ವೀರಶೈವ ಜನಾಂಗಕ್ಕೆ ಮುಖ್ಯ ಪಟ್ಟಣವಾದ ಬಳ್ಳಾರಿಯಲ್ಲಿ ಮಹಾಸಭೆಯನ್ನು ಕೂಡಿ
ಸುವಂತೆ ನಿರ್ಧರಿಸಿಕೊಂಡೆವು, ನಮ್ಮ ಪ್ರಾಂತದ ಪೂರ್ವದ ಇತಿಹಾಸವು ಸದ್ಯದ ಶೋಚ
ನೀಯಾವಸ್ಥೆಯು ಮುಂದೆ ನಾವು ಮಾಡಬೇಕಾದ ಕರ್ತವ್ಯ ಕರ್ಮವು ಸ್ವಾಗತ ಕಮಿಟಿಯ
ಅಧ್ಯಕ್ಷರ ಭಾಷಣದಿಂದ ವ್ಯಕ್ತವಾಗುತ್ತಿವೆ, ಪೂಜ್ಯಪಾದರ ಆಶೀರ್ವಾದಬಲದಿಂದಲು, ಗಾ
ವನೀಯರಾದ ಮಹನೀಯರ ಪ್ರಯತ್ನ ವಿಶೇಷದಿಂದಲು, ಮುಂದಾಳುಗಳ ಚಟುವಟಿಕೆ
ಯಿಂದಲು, ಮಹಾಸಭೆಯ ನಿಯಮಗಳು ಪ್ರಜಾಮಂಡಲಿಯಲ್ಲಿ ಆಚರಣೆಯಲ್ಲಿ ಬಂದು
ನೇದಿನೇ ವೀರಶೈವ ಪ್ರಭಾಕರನು ತನ್ನ ದಿವ್ಯಕಿರಣಗಳಿಂದ ದಿಙ್ಮಂಡಲಗಳನ್ನು ಮು
ಳುಕಿ ಸಮಸ್ತರನ್ನು ಚಕಿತರನ್ನಾಗಿ ಮಾಡುವಕಾಲವು ಕ್ಷಿಪ್ರದಲ್ಲಿಯೇ ಬರುವಂತೆಯು,
ಮಹಾಸಭಾ ಬಾಲಕನು ದೀರ್ಘಾಯುವಾಗಿರುವಂತೆಯು, ಆಶೀರ್ವದಿಸಬೇಕೆಂದು ಶಿವನ
ನ್ನೇ ಬರಿತು ಪ್ರಾರ್ಥಿಸಿ ಈ ಪೀಠಿಕೆಯನ್ನು ವಿರಮಿಸುತ್ತೇನೆ.

ನಿರಂ

ಶಿಂದಿಗಿ ಗವಿಯಪ್ಪ

ಜನರಲ್ ಸೆಕ್ರೆಟರಿ,

೫ನೇ ವೀರಶೈವ ಮಹಾಸಭಾ ಬಳ್ಳಾರಿ.

ರಾ॥ ಶಿ

. ಕಲಿಗ

ರಾ. ಚನ್ನ

ರಾ॥ ಚನ್ನ

## —( ವಿಷಯಾನುಕ್ರಮಣಿಕೆ. )—

### ಮೊದಲನೆಯ ದಿವಸ.

೪-ನೇ ವಿಷಯ ಪಟ್ಟಚರಾಧಿಕಾರಕ್ಕೆ ನಿಯಮಿಸುವ ವಟುಗಳು ಅವ
ಸದಾಚಾರ ಸಂಪನ್ನರಾಗಿಯೂ ವಿದ್ಯಾವಂತರಾಗಿಯೂ ಇರಬೇಕು.

ಮೈಸೂರು ಶಿ. ಮೂ. ಸುತ್ತೂರು ಶಾಂತವೀರ ಶಾಸ್ತ್ರಿಗಳ ಭಾಷಣವು. ...
ಮಿರಜಿ ಶಿ. ಮೂ. ಸಣ್ಣ ತಮ್ಮಪ್ಪ ಶಾಸ್ತ್ರಿಗಳ ಭಾಷಣವು. ... ...

೩-ನೆಯ ದಿವಸ. ಮಠಾರ್ಹ ವಟುಗಳು.

ಶಿ. ಮೂ. ಬಸವಯ್ಯ ಚನ್ನಬಸವಯ್ಯ ಕಿತ್ತೂರು ಇವರ ಭಾಷಣವು.
ಶಿ. ಮೂ. ನಂದಿಕೊಟಕೂರು ನೀಲಕಂಠ ಶಾಸ್ತ್ರಿಗಳ ಭಾಷಣವು. ...

ಧಾರ್ಮಿಕ ವಿಷಯ.

ಮ॥ರಾ॥ರಾ॥ ಗಂಗಪಟ್ಟಣಂ ಸುಬ್ಬರಾಯ ದೇವರ ಭಾಷಣವು. ...
ಶಿ. ಮೂ. ಪಂಚಲಿಂಗಸ್ವಾಮಿ ಕಡೋಲಿ ಇವರ ಭಾಷಣವು. ...
ಸಭಾಪರವಾಗಿ ವೇ॥ ಮಲ್ಲಂಪಲ್ಲಿ ಮಲ್ಲಿಕಾರ್ಜುನ ಶಾಸ್ತ್ರಿಗಳು ರಚಿಸಿ ಹೇಳಿದ ಶ್ಲೋಕ
ಮತ್ತು ಆಂಧ್ರ ಪದ್ಯಗಳು.

೫-ನೇ ವಿಷಯ ಸ್ತ್ರೀಶಿಕ್ಷಣದವಶ್ಯಕತೆ.

ಶ್ರೀಮಂತ ಶಿವಲಿಂಗರಾವು ಜಗದೇವರಾವು ದೇಶಮುಖ ಪರಗಣೆ ಆಲಮೇಲ, ಇವರ
ಭಾಷಣವು.
ಮ॥ರಾ॥ರಾ॥ ಹೆಚ್. ಜಿ. ಬಸಪ್ಪ ಶಿವಮೊಗ್ಗ ಇವರ ಭಾಷಣವು, ...

೬-ನೇ ವಿಷಯ ಸಮಾಜ ಸುಧಾರಣೆಗೆ ಕೈಕೊಳ್ಳಬೇಕಾದ ಉಪಾಯ

ಮ॥ರಾ॥ರಾ॥ ಶರಭಪ್ಪ ಮೆಣಸಿನಕಾಯಿ ಬಾಗಲಕೋಟೆ ಇವರ ಭಾಷಣವು.
ಮ॥ರಾ॥ರಾ॥ ಗಂಗಾಧರಪ್ಪ ಭೋಜಪ್ಪ ರಬಕವಿ, ಇವರ ಭಾಷಣವು.
ಶಿ. ಮೂ. ಮಣೂರು ಮಲ್ಲಿಕಾರ್ಜುನಶಾಸ್ತ್ರಿ ಸೋಲಾಪುರ ಇವರ ಭಾಷಣವು.

ವಿದ್ಯಾ ವಿಷಯ.

ಶ್ರೀಮಾನ್ ಅನರಬಿಲ್ ಬಂಟಮುರಿ ದೇಶಾಯಿಯವರ ತಮ್ಮನ ಮಗನಾದ ಶಂಕರ
ಬಾಳಗೌಡ ಈತನ ಭಾಷಣವು.

ವೀರಶೈವ ಮಹಾಸಭಾ ಕಾರ್ಯನಿರ್ವಾಹಕ ಸಂಘಗಳ ರಿಪೋರ್ಟು.

ಮೆ॥ ಫಕೀರಪ್ಪ ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ ಇವರು ಓದಿದ್ದು.

ವೀರಶೈವ ವಿದ್ಯಾರ್ಥಿ ನಿಲಯಗಳವಶ್ಯಕತೆ.

ಮೆ॥ ವೀರಬಸವಪ್ಪ ಶ್ರೇಷ್ಠಿ ಬಿ. ಏ. ಕೊಲ್ಹಾಪುರ ಇವರ ಭಾಷಣವು.

೭-ನೇ ವಿಷಯ ವೀರಶೈವರ ಮಿಲ್ಲು, ಗಿರಣಿ, ಮತ್ತು ಬ್ಯಾಂಕು.

ಶಿ. ಮೂ. ಶಿವಮೂರ್ತ್ಯಯ್ಯಸ್ವಾಮಿ ಕಣಬುರ್ಗಿಮಠ ಇವರ ಭಾಷಣವು.
ಮ॥ರಾ॥ರಾ॥ಮಲ್ಲಿಕಾರ್ಜುನಪ್ಪ ಅಪ್ಪಾರಾವುಪಾಟೀಲ ಸೋಲಾಪುರ ಇವರ ಭಾಷಣ

## ೮-ನೇ ವಿಷಯ ಕಾಯಿದೆ ಕೌನ್ಸಿಲ್ ಸಭೆಗಳಲ್ಲಿ ಲಾರ್ಡ್ ಮೋರ್ಲೀ ಸಾಹೇಬರು ಮಾಡಿದ ಹೊಸ ಸುಧಾರಣೆಯು, ಮತ್ತು ವೀರ ಶೈವರಿಗೆ ಅದರೊಳಗೆ ಸ್ಥಳವು ದೊರಕುವ ಉಪಾಯಗಳು.



## ೯-ನೇ ವಿಷಯ ಕೃಷಿ, ವಾಣಿಜ್ಯ, ಕಲಾಕೌಶಲ್ಯ ಇವುಗಳ ಸುಧಾರಣೋಪಾಯಗಳು.



## ೧೦-ನೇ ವಿಷಯ ಬಾಲವಿವಾಹ ಮತ್ತು ವೃದ್ಧವಿವಾಹ ನಿಷೇಧ.



## ಶಿವಯೋಗಮಂದಿರದ ವಿಷಯ.



## ಸ್ಟಾರ್ ಪತ್ರಿಕೆಗಾಗಿ ಸಹಾಯ.



## ೪-ನೆಯ ದಿವಸ.



## ೪-ನೆಯ ದಿವಸ.

## ವೀರಶೈವ ಮಹಿಳಾಪರಿಷತ್ತು.

ಸಭಾಧ್ಯಕ್ಷೆಯರಾದ ಶ್ರೀಮತಿ ನಾಗಮ್ಮ ದೇಶಾಯಿಣಿ ಪರಗಣೆ ಆಲಮೇಲ ಇವರ ಭಾಷಣವು.

ಶ್ರೀಮತಿ ಚನ್ನಮ್ಮ ಮೈಸೂರು ಇವರ ಭಾಷಣವು. ... ...

## ಸ್ತ್ರೀಜನೋತ್ಕರ್ಷದ ಸಾರಾಸಾರ ವಿಚಾರ.

ಶ್ರೀಮತಿ ಭಾಗೀರಥಿಬಾಯಿ ಸೋಲಾಪುರ ಇವರ ಭಾಷಣವು. ...

## ದಾಂಪತ್ಯಾನುಕೂಲ್ಯದ ಫಲವು.

ಶ್ರೀಮತಿ ಬಸಮ್ಮ ಮೈಸೂರು ಇವರ ಭಾಷಣವು. ... ...

## ಪಾತಿವ್ರತ್ಯ ಮಾಹಾತ್ಮೆ.

ಶ್ರೀಮತಿ ಚನ್ನಬಸವ್ವ ಬೆಳಗಾಂವಿ ಇವರ ಭಾಷಣವು. ...

ಶ್ರೀಮತಿ ಶಾಂತವೀರವ್ವ ನವರ ಭಾಷಣವು. ... ...

## ಸ್ತ್ರೀಶಿಕ್ಷಣದವಶ್ಯಕತೆ.

ಶ್ರೀಮತಿ ಭಾಗೀರಥಿಬಾಯಿ ಮುತ್ತೂರು, ರಬಕವಿ ಇವರ ಭಾಷಣವು.

ಶ್ರೀಮತಿ ಅಂಬಾಬಾಯಿ ಶೇಟ ಸೋಲಾಪುರ ಇವರ ಭಾಷಣವು. ...

ಶ್ರೀಮತಿ ಗೌರವ್ವ ಮಡಿಕಿ ಸೋಲಾಪುರ ಇವರ ಭಾಷಣವು. ...

## ಸ್ತ್ರೀಯರು ಧರ್ಮವನ್ನು ರಕ್ಷಿಸುವ ಬಗೆ.

ಶ್ರೀಮತಿ ಅಕ್ಕುಬಾಯಿ ದೇಶಾಯಿಣಿ ಸಂಸ್ಥಾನ ಶಾಂತಗೇರಿ ಇವರ ಭಾಷಣವು.

## ಮಹಾಸಭೆಗಳ ಪ್ರಯೋಜನ.

ಶ್ರೀಮತಿ ಅಂಕಲಕೋಟೆ ಶಿದ್ದಲಿಂಗಮ್ಮ ಇವರ ಭಾಷಣವು. ...

ವೀರಶೈವ ಮಹಿಳಾಪರಿಷತ್ತಿನಲ್ಲಿ ಪಾಸಾದ ನಿರ್ಣಯಗಳು. ...]

## ಬಾಲವಿವಾಹ ಮತ್ತು ವೃದ್ಧವಿವಾಹ ನಿಷೇಧ.

ಮ|| ರಾ|| ರಾ|| ಸತ್ಯಪ್ಪ ತಮ್ಮಪ್ಪ ಚಿಕ್ಕೋಡಿ ರಬಕವಿ ಇವರ ಭಾಷಣವು ೨೧೮ ಪೇಜಿಯಿಂದ ಮುಂದೆ ಸಾಗಿದುದು.

## ಮಹಿಳಾಪರಿಷತ್ತಿನಲ್ಲಿ ಬಾಲ್ಯವಿವಾಹದಿಂದಾಗುವ ಹಾನಿಯು.

ಶ್ರೀಮತಿ ಬಸಮ್ಮ ಮಾನ್ವಿ ಗದಗು ಇವರು ಮಾಡಿದ ಭಾಷಣವು. ...

ಶ್ರೀಮತಿ ವೀರಮ್ಮ ಬುಳ್ಳಾನವರ ಗದಗು ಇವರ ಭಾಷಣವು. ...

ಕರಸ್ಪಾಂಡೆನ್ಸು. ... ... ... ...

೧೨ ವರ್ಷದ ಬಾಲಕನಾದ ಪಂಪಣ್ಣ ಸಂಗಪ್ಪ ಮುದಗಲ್ ಈ ವಿದ್ಯಾರ್ಥಿಯು ಇಂಗ್ಲೀಷು ಭಾಷಣವು.

R.M.VEERABHADRAIAH

# ೫-ನೆಯ ಶ್ರೀ ಮದ್ವೀರಶೈವ ಮಹಾಸಭಾ ಬಳ್ಳಾರಿ.

## ಸಮಸ್ತ ವೀರಶೈವರಿಗೆ ವಿನಯಪೂರ್ವಕ ವಿಜ್ಞಾಪನೆ!

(೧) ಈ ಭರತಖಂಡದಲ್ಲಿ ನಮ್ಮ ವೀರಶೈವ ಜನಾಂಗವು ಬೊಂಬಾಯಿ, ಮದ್ರಾಸು ಪ್ರಾಂತ, ಮೈಸೂರು, ಹೈದರಾಬಾದು ಸಂಸ್ಥಾನ, ಮಧ್ಯಪ್ರಾಂತ, ಈ ಭಾಗಗಳಲ್ಲಿ ವಿಶೇಷ ವಾಸವಾಗಿದ್ದು ಕಾಶ್ಮೀರ, ನೇಪಾಳ, ವಾಯುವ್ಯ ಪ್ರಾಂತಗಳಲ್ಲಿಯೂ ಕೂಡ ಸ್ವಲ್ಪಸ್ವಲ್ಪ ಸಂಖ್ಯೆಯಾಗಿ ವ್ಯಾಪಿಸಿದೆ, ಇದರ ಸಂಖ್ಯೆಯು ೩೫ ಲಕ್ಷದವರಿಗು ಇರುತ್ತದೆಂದು ತಿಳಿಯಬರುತ್ತಿದೆ. ... ... ... *

(೨) ಪೂರ್ವಕಾಲದಲ್ಲಿ ಈ ಮಂಡಲಿಯು ಧಾರ್ಮಿಕ, ಸಾಮಾಜಿಕ, ಮತ್ತು ರಾಜಕೀಯ ವ್ಯವಹಾರಗಳಲ್ಲಿ ಪ್ರಬಲವೆನಿಸಿಕೊಂಡು ವ್ಯಾಪಾರ ಮತ್ತು ವ್ಯವಸಾಯಗಳಲ್ಲಿ ಸಂಪೂರ್ಣ ಉಚ್ಚಸ್ಥಿತಿಯನ್ನು ಹೊಂದಿ, ಪ್ರಖ್ಯಾತಿಪಡೆದಿದ್ದಿತು. ಆದರೆ ಕ್ರಮಕ್ರಮವಾಗಿ ವಿದ್ಯಾಪ್ರಾಬಲ್ಯವು, ಧರ್ಮಶ್ರದ್ಧೆಯು, ಐಕಮತ್ಯವು ಕಡಿಮೆಯಾಗಿ ಸಮಾಜವು ಕ್ಷೀಣದಶೆಯನ್ನು ಹೊಂದುತ್ತಾ ಬಂದಿದೆ, ಇಂತಹ ದುಸ್ಥಿತಿಯನ್ನು ಹೋಗಲಾಡಿಸಿ ಕಾಲಾನುಗುಣ್ಯವಾಗಿ ಪಾಶ್ಚಿಮಾತ್ಯ ಪಂಡಿತರ ಪದ್ಧತಿಪ್ರಕಾರ ಉಚ್ಚಪ್ರತಿಯ ಶಿಕ್ಷಣವನ್ನು ಕೊಟ್ಟು ಸಮಾಜ ಸುಧಾರಣೆಮಾಡುವ ದತ್ಯಂತಾವಶ್ಯಕವಾಗಿದೆ. ... *

(೩) ಈ ಸದುದ್ದೇಶದಿಂದಲೇ ವೀರಶೈವ ಪ್ರಮುಖ ಮಹನೀಯರು ಪ್ರತಿವರ್ಷವು ಶ್ರೀಮದ್ವೀರಶೈವ ಮಹಾಸಭೆ ಎಂಬ ಸಂಸ್ಥೆಯು ನಡಿಯಬೇಕೆಂಬದಾಗಿ ನಿರ್ಣಯಿಸಿ ತನ್ಮೂಲಕ ಧರ್ಮಾಭಿವೃದ್ಧಿ, ಐಕಮತ್ಯ, ಉದ್ಯೋಗತತ್ಪರತೆ, ವಿದ್ಯಾಪ್ರಾಬಲ್ಯತೆ, ಇವುಗಳನ್ನು ನೆಲೆಗೊಳಿಸಬೇಕೆಂದು ಪ್ರಯತ್ನಮಾಡಿರುವ ವಿಷಯವು ಸರ್ವರಿಗು ವಿದಿತವಾಗಿಯೇ ಇರುತ್ತದೆ. ... ... ... *

(೪) ಇದನ್ನನುಸರಿಸಿಯೇ ಈ ವರಿವಿಗು ಧಾರವಾಡ, ಬೆಂಗಳೂರು, ಸೋಲಾಪುರ, ಬಾಗಲಕೋಟೆ, ಈ ಪಟ್ಟಣಗಳಲ್ಲಿ ಕ್ರಮವಾಗಿ ನಾಲ್ಕುವಾರ್ಷಿಕ ಮಹಾಸಭೆಗಳು ನಡೆದು ನಮ್ಮ ಸಮಾಜಕ್ಕೆ ಉತ್ತಮ ಲಾಭಗಳುಂಟಾಗಿವೆ ಎಂಬದು ತಮ್ಮೆಲ್ಲರಿಗು ಗೋಚರವೇ ಇದೆ. ಹೀಗೆ ಮಹಾಸಭೆಗಳನ್ನು ಆಯಾಯ ಪ್ರಾಂತದ ಮುಖ್ಯ ಪಟ್ಟಣಗಳಲ್ಲಿ

ಕೂಡಿಸುವದರಿಂದ ಸಮಾಜದ ಏಳಿಗೆಗೆ ಸಾಧನವಾಗುವದೆಂದೆಣಿಸಿ; ಬಳ್ಳಾರಿ ವೀರಶೈವರಾದ ನಾವು ಈವರ್ಷ ೫ನೆಯ ಶ್ರೀಮದ್ವೀರಶೈವಮಹಾಸಭಾ ಕಾರ್ಯವನ್ನು ನಿರ್ವಹಿ ತಮ್ಮ ಕೃಪಾಬಲದಿಂದ ಕೈಕೊಂಡಿದ್ದೇವೆ, ಅದ್ದರಿಂದ ವೀರಶೈವ ಮಹನೀಯರಾದ ತಾವು ದಯಮಾಡಿ ಬಂದು ದರ್ಶನವನ್ನು ಕೊಟ್ಟು ನಮ್ಮಿಂದ ಕೊಡಲ್ಪಡುವ ಆದರಾತಿಥ್ಯಗಳನ್ನು ಸ್ವೀಕರಿಸಿ, ಕಳೆದ ನಾಲ್ಕು ಮಹಾಸಭೆಗಳಂತೆ ಈ ಮಹತ್ಕಾರ್ಯವು ಸಾಂಗವಾಗಿ ನೆರವೇರುವಂತೆ ಪ್ರೋತ್ಸಾಹಿಸಿ ನಮ್ಮ ಮನಸ್ಸಂತೋಷ ಪಡಿಸುವ ಭಾರವು ತಮ್ಮದಾಗಿಯೇ ಇರುತ್ತದೆಂದು ಸಂಪೂರ್ಣ ನಂಬಿಯಿದ್ದೇವೆ. ... ... *

(೫) ಮಂಗಳಪ್ರದವಾದ ಈ ಮಹಾಸಭೆಯನ್ನು ಇದೇ ಸಂ॥ ಡಿಶಂಬರ ೨೭, ೨೮, ೨೯, ನೇ ತೇದಿಗಳಲ್ಲಿ ಯಥಾಪ್ರಕಾರ ನೆರೆಯಿಸುವದಲ್ಲದೆ ೩೦-ನೇ ತೇದಿಯಲ್ಲಿ ಸ್ತ್ರೀಸಭೆಯೂ ಸಹಾ ಕೂಡುವಂತೆ ನಿಷ್ಕರ್ಷೆಮಾಡಿರುತ್ತದಾದ ಪ್ರಯುಕ್ತ ತಾವು ಸರ್ವಪ್ರಾಂತದ ಮಹನೀಯರು ತಮ್ಮ ತಮ್ಮ ಪ್ರದೇಶಗಳಲ್ಲಿ ಸಾರ್ವಜನಿಕ ಸಭೆಗಳನ್ನು ಕೂಡಿಸಿ, ವೀರಶೈವ ಪ್ರತಿನಿಧಿಗಳನ್ನು ನೇಮಿಸಿ ಡಿಶಂಬರ ೧೫-ನೇ ತೇದಿಯೊಳಗಾಗಿ ತಮ್ಮ ತಮ್ಮ ಸಭೆಯ ಅಧ್ಯಕ್ಷರ ಅಥವಾ ಸೆಕ್ರಟರಿಗಳ ಸಹಿಯೊಡನೆ ಇದರ ಜೊತೆಯಲ್ಲಿರುವ ಫಾರಂಗಳಲ್ಲಿ ಬರೆಯಿಸಿ ಕಳುಹಿಸತಕ್ಕದ್ದು, ಪ್ರತಿನಿಧಿಗಳಾಗಿ ಬರಲಾಗದವರು ಪ್ರೇಕ್ಷಕರಾಗಿ ಸಭೆಗೆ ಅವಶ್ಯಬರಬೇಕೆಂದು ಕೋರುವದಲ್ಲದೆ ತಮ್ಮ ಪ್ರಾಂತದ ಸಣ್ಣ ಗ್ರಾಮಗಳಿಗೆ ಪ್ರಮುಖರು ಹೋಗಿ ಮಹಾಸಭೆಯ ಉದ್ದೇಶಗಳನ್ನು ಅದರಿಂದಾಗುವ ಲಾಭಗಳನ್ನು ಬೋಧಿಸಿ, ಸಭೆಗೆಬರುವಂತೆ ಪ್ರೋತ್ಸಾಹಿಸಬೇಕೆಂದು ನಮ್ಮಪ್ರಾರ್ಥನೆ ಇದೆ. ... *

(೬) ಈ ಐದನೆಯ ವೀರಶೈವ ಮಹಾ ಸಭಾಧ್ಯಕ್ಷಸ್ಥಾನವನ್ನು ಶ್ರೀಮಂತ ರಾವುಸಾಹೇಬ್ ಉರ್ಫ ಅಪ್ಪಾಸಾಹೇಬ್ ಮಲ್ಲಪ್ಪ, ಬಸಪ್ಪಂಣಾ, ವಾರದ ಸೋಲಾಪುರ ಇವರು ಸ್ವೀಕರಿಸಲು ಒಪ್ಪಿಕೊಂಡಿದ್ದಾರೆ. ... ... *

(೭) ಈ ಮಹಾಸಭಾ ಕಾಲಕ್ಕೆ ಪಂಚಪೀಠಗಳ ಮಹದಾಚಾರ್ಯರು ಸಂಪೂರ್ಣ ಕರುಣದಿಂದ ಬಿಜಯಂಗೊಳಿಸಲಾ ಮೋದಿಸಿರುವದರಿಂದ ತಕ್ಕಸುಪ್ರಯತ್ನಗಳನ್ನು ಮಾಡುತ್ತಲಿದ್ದೇವೆ. ... ... ... ... *

(೮) ಈ ಮಹಾಸಭೆಯ ಕಾಲಕ್ಕೆ ದ್ರವ್ಯವನ್ನು ಸೇಕರಿಸುವ ಕಾರ್ಯವಿರುವದಿಲ್ಲವು ಈ ಸಮಾಚಾರವನ್ನು ಸ್ಪಷ್ಟವಾಗಿ ಎಲ್ಲರಿಗು ತಿಳಿಯಪಡಿಸಬೇಕು. ... *

(೯) ಈ ಮಹಾಸಭೆಯಲ್ಲಿ ಉಪನ್ಯಾಸಮಾಡತಕ್ಕ ವಿಷಯಗಳನ್ನು ಅದಕ್ಕೆತಕ್ಕ ನಿಬಂಧನೆಗಳನ್ನು ಪ್ರತಿನಿಧಿಗಳ,, ಹಾಗು ಪ್ರೇಕ್ಷಕರಗೋಸ್ಕರ ಮಾಡಿರುವ ನಿಯಮಗಳ

ನ್ನು, ಕ್ರಮವಾಗಿ ಪ್ಯಾರಾ ೧, ೨, ೩, ಇವುಗಳಲ್ಲಿ ಸೂಚಿಸಿರುವ ಅಂಶಗಳನ್ನು ಅವಲೋಕಿಸಿ ಸಮಾಜೋನ್ನತಿಗಾಗಿ ನಮ್ಮಮೇಲೆ ತುಂಬಾ ಅಂತಃಕರುಣವಿಟ್ಟು ಈ ಮಹಾ ಸಭೆಗೆ ದಯಮಾಡಿಸಿ ಸಭೆಯಕಾರ್ಯವನ್ನು ತೃಪ್ತಿಕರವಾಗಿ ಪರ್ಯವಸಾನಗೊಳ್ಳುವಂತೆ ಮಾಡಬೇಕೆಂದು ವಿಶ್ವಾಸಪೂರ್ವಕ ವಿಜ್ಞಾಪಿಸುತ್ತೇವೆ. ... ... *

ತಮ್ಮ ಪ್ರೇಮಾಭಿಲಾಷಿಗಳಾದ,

ವ್ಯವಸ್ಥಾಪಕ ಸಂಘ.

೧ ಕೌತಾಳದ ಗುರುಶಾಂತಪ್ಪ ಅಧ್ಯಕ್ಷ.
೨ ಗಡಿಗಿ ವೀರಭದ್ರಪ್ಪ.
೩ ಕೋಡಕುಂದಿ ಚನ್ನಪ್ಪ.
೪ ಮುಂಡಾಸದ ವೀರಭದ್ರಪ್ಪ ಚಿ॥ದೊಡ್ಡಪ್ಪ
೫ ಹೆಚ್ಚರಡ್ಡಿ ಚಂಗಳಪ್ಪ.
೬ ಹೊಳಗುಂದಿ ಪೊಂಪನಗೌಡ.

ಸೆಕ್ರೆಟೆರಿಗಳು.

೫-ನೆ ವೀರಶೈವ ಮಹಾಸಭಾ ಆಫೀಸು.

ಸತ್ಕಾರಕ ಸಂಘ.

೧ ಅಲ್ಲಂ ಬಸಪ್ಪ ಅಧ್ಯಕ್ಷ.
೨ ಶಿಂದ್ಗಿ ಗವಿಯಪ್ಪ ಜನರಲ್ ಸೆಕ್ರೆಟರಿ.
೩ ಕೊ॥ ಮಿ॥ ಜಾ॥ ದೊಡ್ಡವೀರಪ್ಪಯ್ಯ
೪ ಕು॥ ನಾಡಗೌಡ ಮರೇಗೌಡ.
೫ ಶಿಂದ್ಗಿ ಉದ್ದಾನಪ್ಪ.
೬ ಹೀರದ ಕರಿಬಸಪ್ಪ.

ಸೆಕ್ರೆಟೆರಿಗಳು.

ಬ ಳ್ಳಾ ರಿ.
ತೇ॥ ೧೫—೧೧—೦೯.

---

ಪ್ಯಾರಾ ೧.

## ೫-ನೆಯ ಶ್ರೀಮದ್ವೀರಶೈವ ಮಹಾಸಭೆಯಲ್ಲಿ ಉಪನ್ಯಾಸ ಮಾಡತಕ್ಕ ವಿಷಯಗಳು.

ಕೈಲಾಸವಾಸಿಗಳಾದ ಶಿರಸಂಗಿ ದೇಶಾಯಿ ಸಕ್ಕರೆ ಕರಡೆಪ್ಪ, ಮತ್ತು ಮೈಸೂರು ಮೈ॥ ವೀರಸಂಗಪ್ಪ, ಈ ಮೂವರಿಂದ ಮತಕ್ಕಾದ ಮಹದುಪಕಾರ ಸ್ಮರಣೆ.

ಪ್ರತ್ಯೇಕ ಉಪನ್ಯಾಸ.

(೧) ವಿದ್ಯಾಭಿವೃದ್ಧಿಯ ಫಂಡಿನ ಅವಶ್ಯಕತೆ.
(೨) ಮತಸಿದ್ಧಾಂತವನ್ನು ರಾಜಕೀಯಭಾಷೆಯಲ್ಲಿ ಬರೆಯಿಸುವ ಅವಶ್ಯಕತೆ.

(೩) ಆಗ್ರಹದಿಂದುಂಟಾದ ಸಮುಯಭೇದಗಳನ್ನು ತಪ್ಪಿಸಿ ನಿರಂಜನ (ವಿರಕ್ತ) ಸ್ವಾಮಿಗಳಲ್ಲಿ ಏಕರೂಪತೆ ಯುಂಟಾಗುವಂತೆ ಪ್ರೋತ್ಸಾಹಿಸತಕ್ಕದ್ದು.

(೪) ವೀರಮಾಹೇಶ್ವರರಲ್ಲಿ ಅನಾಗರಿಕತೆಯಿಂದುಂಟಾಗಿರುವ ಕಾಯಕವೃತ್ತಿಯನ್ನು ಒತ್ತಾಯದಿಂದ ತಪ್ಪಿಸುವಿಕೆ.

(೫) ಮಹಾಸಭೆಯಲ್ಲಿ ಧಾರ್ಮಿಕವಿಷಯಗಳನ್ನು ಚರ್ಚಿಸಲು ಸಂಪೂರ್ಣ ಅವಕಾಶ ದೊರಿಯದಕಾರಣ ಸಿಂಹಾಸನಾಧ್ಯಕ್ಷ (ಮಹದಾಚಾರ್ಯ)ರಿಗೆ ಪ್ರತ್ಯೇಕ ಧಾರ್ಮಿಕಸಭೆಯನ್ನು ಕೂಡಿಸುವಂತೆ ವಿನಂತಿಮಾಡಿಕೊಳ್ಳುವದು.

(೬) ಮಹನೀಯರ ಮತ್ತು ಪ್ರೆಸಿಡೆಂಟರ ಆಭಾರಮನ್ನಣೆ.

(೭) ಸಾರ್ವಜನಿಕ (ಬ್ಯಾಂಕು) ದ್ರವ್ಯನಿಧಿ.

(೮) ಮಿಲ್ಲು (ಗಿರಣಿ) ಸ್ಥಾಪನೆ.

(೯) ಕೃಷಿ (ವ್ಯವಸಾಯ) ವಾಣಿಜ್ಯ (ವ್ಯಾಪಾರ) ಕಲಾಕೌಶಲ್ಯ (ಕೈಗಾರಿಕೆ) ಇವುಗಳ ಸುಧಾರಣೆಯ ಉಪಾಯಗಳು.

(೧೦) ವಿತಂತು (ವಿಧವೆ) ಗಳ ಯೋಗ್ಯವರ್ತನೆ.

(೧೧) ಸಮಾಜ ಸುಧಾರಣೆಗೆ ಕೈಕೊಳ್ಳಬೇಕಾದ ಮುಖ್ಯೋಪಾಯಗಳು.

## ಮಹಾಸಭೆಯಲ್ಲಿ ನಿರ್ಣಯಿಸತಕ್ಕ ವಿಷಯಗಳು.

(೧) ಪಟ್ಟಚರಾಧಿಕಾರಕ್ಕೆ ನಿಯಮಿಸುವ ವಟು (ಮರಿ)ಗಳು ಅವಶ್ಯ ಸದಾಚಾರ ಸಂಪನ್ನರಾಗಿಯು ವಿದ್ಯಾವಂತರಾಗಿಯು ಇರಬೇಕು.

(೨) ನಮ್ಮ ಸಮಾಜದ ಪ್ರಸಿದ್ಧಪುರುಷರ ಜೀವಿತ ಚರಿತ್ರೆಗಳನ್ನು ಬರೆಯಿಸತಕ್ಕದ್ದು.

(೩) ಉಪದೇಶಕರನ್ನು ನಿಯಮಿಸುವದು.

(೪) ಬಾಲವಿವಾಹ, ಮತ್ತು ವೃದ್ಧವಿವಾಹ ಖಂಡನೆ.

(ಎ) ಹತ್ತುವರುಷದೊಳಗಿನ ಕನ್ಯೆಯರಿಗೆ ವಿವಾಹ ಮಾಡಕೂಡದು. ಆದರೆ ಹತ್ತರಿಂದ ಹದಿನಾರು ವರುಷದೊಳಗಿರುವ ಕನ್ಯೆಯರಿಗೆ ವಿವಾಹವನ್ನು ಮಾಡತಕ್ಕದ್ದು.

(ಬಿ) ಐವತ್ತುವರ್ಷಕ್ಕೆ ಮಿಂಚಿದಪುರುಷರು ಲಗ್ನವಾಗಕೂಡದು. ನಲವತ್ತು ವರ್ಷಕ್ಕೆ ಮಿಂಚಿದವರು ಮಾತ್ರ ಪ್ರೌಢಕನ್ಯೆಯರನ್ನೇ ವಿವಾಹಮಾಡಿಕೊಳ್ಳತಕ್ಕದ್ದು.

(೫) ಸಭೆಯ ನಿರ್ಣಯಗಳನ್ನು ಆಚರಣೆಯಲ್ಲಿ ತರುವದಕ್ಕಾಗಿ ಪ್ರತಿಜಿಲ್ಲೆಯಲ್ಲಿಯು ಜಿಲ್ಲಾ ಕಮಿಟಿ, ತಾಲೂಕುಕಮಿಟಿ, ಗ್ರಾಮಕಮಿಟಿಗಳನ್ನು ನಿಯಮಿಸಬೇಕು

(೬) ಕಪಟವೇದಾಂತಿಗಳ ದುರಾಚಾರ ಖಂಡನೆ.

(೭) ಪುರಾಣ ಲಗ್ನ ಮುಂತಾದವುಗಳಲ್ಲಿ ದುಂದುವೆಚ್ಚವನ್ನು ಮಾಡಕೂಡದು.
(೮) ರಾಜದ್ರೋಹವನ್ನು ಮಾಡಕೂಡದು.
(೯) ಸ್ತ್ರೀವಿದ್ಯಾಭ್ಯಾಸ ಪ್ರೋತ್ಸಾಹ.

(೧೦) ಧಾರ್ಮಿಕ, ಸಂಸ್ಕೃತ, ಕರ್ನಾಟಕ, ಮುಂತಾದ ಪಾಠಶಾಲೆಗಳಲ್ಲಿ ಒಂದೇತೆರಹೆಯ ಅಭ್ಯಾಸ ನಡಿಯಬೇಕೆಂದು ಕ್ರಮಪತ್ರಿಕೆಯನ್ನು ಪ್ರಚುರಪಡಿಸಿ ಆದರಂತೆ ಜಾರಿಯಲ್ಲಿ ತರತಕ್ಕದ್ದು.

## ಪ್ಯಾರಾ ೨.

## ಮಹಾಸಭೆಯ ಕಾರ್ಯಕ್ರಮ.

(೧) ಈ ವರ್ಷ ಮಹತ್ವವಾದ ವಿಷಯಗಳನ್ನು ಕುರಿತು ಸಂಭಾಷಿಸಬೇಕಾದ್ದರಿಂದ ೨೬ ನೇ ತೇದಿ, ಸಾಯಂಕಾಲದಲ್ಲಿಯೇ ಸ್ಟ್ಯಾಂಡೀಂಗ್ ಕಮಿಟಿಯವರೇ ಸಬ್ಜೆಕ್ಟ ಕಮಿಟಿಯವರಾಗಿ ಕೂಡಿ ಭಾಷಣಮಾಡತಕ್ಕವರನ್ನು ಭಾಷಣಾಕಾಲ ನಿಯಮವನ್ನು ನಿರ್ಣಯಿಸಬೇಕಾದ ಪ್ರಯುಕ್ತ ಅಧ್ಯಕ್ಷರು, ಸ್ಟ್ಯಾಂಡೀಂಗ್ ಕಮಿಟಿಯವರು, ಭಾಷಣಮಾಡತಕ್ಕವರು, ನೂತನವಿಷಯಗಳನ್ನು ಸೂಚಿಸುವ ಮಹನೀಯರು, ಅದೇ ೨೬ ನೇ ತೇದಿಗೆ ಬಳ್ಳಾರಿಗೆ ದಯಮಾಡಿಸತಕ್ಕದ್ದು. ಸ್ಟ್ಯಾಂಡಿಂಗ್ ಕಮಿಟಿಯವರು ಅವಶ್ಯಕವಾದಲ್ಲಿ ವಿಷಯ ನಿಯಾಮಕ ಕಮಿಟಿಗಾಗಿ ಹೆಚ್ಚು ಜನರನ್ನು ಸೇರ್ಪಡೆಮಾಡಿಕೊಳ್ಳಬಹುದು. *

(೨) ಭಾಷಣಮಾಡತಕ್ಕವರು ಮತ್ತು ನಿರ್ಣಯಿಸುವ ವಿಷಯಗಳನ್ನು ಸೂಚಿಸುವವರು, ತಮ್ಮ ಸಂಪೂರ್ಣ ಭಾಷಣವನ್ನು ಸೂಚನೆಯನ್ನು ಬರೆದು ಡಿಶಂಬರ ೧೫ನೆ ತೇದಿಯೊಳಗಾಗಿ ಬಳ್ಳಾರಿ ಜನರಲ್ ಸೆಕ್ರೆಟರಿಯವರಿಗೆ ಕಳುಹಿಸುವದು. ೨೬ ನೇ ತೇದಿಯಲ್ಲಿ ನಡಿಯುವ ಸಬ್ಜೆಕ್ಟ ಕಮಿಟಿಗೆ ಭಾಷಣಮಾಡತಕ್ಕವರೆಲ್ಲರು ಹಾಜರಾಗತಕ್ಕದ್ದು.

(೩) ಸಬ್ಜೆಕ್ಟಕಮಿಟಿಯಲ್ಲಿ ನಿಯಮಿತರಾದವರುಮಾತ್ರ ಭಾಷಣಮಾಡತಕ್ಕದ್ದು.

(೪) ಸಬ್ಜೆಕ್ಟ ಕಮಿಟಿಯವರಿಂದ ನಿಯಮಿತರಾದ ಉಪನ್ಯಾಸಕರ ಹೆಸರುಗಳನ್ನು ಕಾಲವನ್ನು ಸೂಚಿಸುವದಕ್ಕೋಸ್ಕರ ಸಭಾಮಂಟಪದ ಮುಂಭಾಗದಲ್ಲಿ ಬೋರ್ಡು ಹಚ್ಚಲ್ಪಡುತ್ತಿದೆ, ಸಂಭಾಷಣೆಯಕಾಲವು ಬಹುಶಃ ೩೦ ನಿಮಿಷಕ್ಕಿಂತಲು ಹೆಚ್ಚು ದೊರಿಯಲಾರದು. ... ... ... ... *

(೫) ಭಾಷಣಮಾಡುವದಕ್ಕೆ ನಿಯಮಿತರಾದವರ ಸಂಭಾಷಣ ಕಾಲವನ್ನು ಹೆಚ್ಚುಕಡಿಮೆ ಮಾಡುವದಕ್ಕು ನಿಯಮಿಸಿರುವ ಉಪನ್ಯಾಸಕರ ಹೊರ್ತು ಅಕಸ್ಮಾತ್ತಾಗಿ ಬಂದ ತತ್ವಜ್ಞರ ಉಪನ್ಯಾಸಕ್ಕೆ ಅವಕಾಶಕೊಡುವದಕ್ಕು, ಅಧ್ಯಕ್ಷರಿಗಧಿಕಾರವಿರುತ್ತದೆ;

(೬) ಸಭಾಪ್ರಾರಂಭದ ದಿವಸ ಸ್ವಾಗತಕಮಿಟಿಯ ಅಧ್ಯಕ್ಷರು ಭಾಷಣಮಾಡಿ ಸಭಾಧ್ಯಕ್ಷರನ್ನು ನಿಯಮಿಸಿದ ನಂತರ ಸಭಾಧ್ಯಕ್ಷರ ಭಾಷಣೆಯು ನಡಿಯುವದು. ಕಾಲವು ಮಿಕ್ಕರೆ ವಿಷಯನಿಯಾಮಕ ಕಮಿಟಿಯಲ್ಲಿ ನಿಯಮಿತರಾದವರ ಭಾಷಣಗಳು ಸಹಾ ಪ್ರಾರಂಭವಾಗುವವು. ... ... ... ... *

(೭) ಮಹಾಸಭೆಯ ಕಾರ್ಯವು ೨೭, ೨೮, ೨೯, ಈ ಮೂರುದಿವಸಗಳಲ್ಲಿಯು ಮಧ್ಯಾಹ್ನ ೧೨ ಘಂಟೆಗೆ ಸರಿಯಾಗಿ ಪ್ರಾರಂಭವಾಗುವದು. ... *

## ಪ್ಯಾರಾ ೩.

## ಪ್ರತಿನಿಧಿ ಮತ್ತು ಪ್ರೇಕ್ಷಕರಿಗಾಗಿ ನಿಯಮಗಳು.

(೧) ಪ್ರತಿಗ್ರಾಮದವರು ತಮ್ಮಲ್ಲಿ ಸಭೆಗಳನ್ನು ಕೂಡಿಸಿ, ಮಹಾಸಭೆಗಾಗಿ ಪ್ರತಿನಿಧಿಗಳನ್ನು ಗೊತ್ತುಪಡಿಸಿ ಅವರ ಹೆಸರುಗಳನ್ನು ಡಿಶಂಬರ ೧೫ನೇ ತೇದಿಯೊಳಗಾಗಿ ಜನರಲ್ ಸೆಕ್ರೆಟರಿಯವರಿಗೆ ತಿಳುಹಿಸತಕ್ಕದ್ದು. ... ... *

(೨) ಸಭಾಪ್ರವೇಶ ಮಾಡುವದಕ್ಕಾಗಿ ಪ್ರತಿನಿಧಿಗಳು ೫ ರುಪಾಯಿ; ಪ್ರೇಕ್ಷಕರು ೨ ರುಪಾಯಿ, ಕೊಡಬೇಕಾಗುವದು. ಪ್ರತಿನಿಧಿಗಳು ತಮ್ಮನ್ನು ನೇಮಿಸಿದ ಸಭಾಧ್ಯಕ್ಷರ ಸರ್ಟಿಫಿಕೇಟು ತೋರಿಸಿ ಟಿಕೀಟುಗಳನ್ನು ಪಡಿಯತಕ್ಕದ್ದು, ಪ್ರತಿನಿಧಿಗಳಿಗೆ ಮಾತ್ರ ಇಳಕೊಳ್ಳುವ ಬಿಡದಿಗಳು, ಭೋಜನದವ್ಯವಸ್ಥೆಯು ಮಾಡಲ್ಪಡುವವು. *

(೩) ನಿರಂಜನ (ವಿರಕ್ತ) ಸ್ವಾಮಿಗಳು, ಪಟ್ಟಚರಮೂರ್ತಿಗಳು, ಶಾಸ್ತ್ರಿಗಳು ಮಹಾಸಭೆಯ ಸ್ಟ್ಯಾಂಡಿಂಗ್ ಕಮಿಟಿಯವರಿಗೆ ವರ್ಗಣಿಯನ್ನು ಕೊಟ್ಟಿರುವ ಪೋಷಕರು, ಆಜೀವ ಸಭಾಸದರು ಪ್ರವೇಶದ್ರವ್ಯವನ್ನು ಕೊಡಬೇಕಾಗುವದಿಲ್ಲವು. ಇವರಿಗೆ ಹಣವಿಲ್ಲದೇನೇ ಭೋಜನದಬಗ್ಯೆ ಸ್ಥಲದಬಗ್ಯೆ ವ್ಯವಸ್ಥೆಮಾಡಲ್ಪಡುವದು. ... *

(೪) ಯೋಗ್ಯಟಿಕೀಟುಗಳು ತೋರಿಸದವಿನಾ ಯಾರಿಗು ಮಹಾಸಭೆಯಲ್ಲಿ ಪ್ರವೇಶವು ದೊರಿಯಲಾರದು. ... ... ... ... *

(೫) ಮಹಾಸಭೆಗೆ ಬರುವವರೆಲ್ಲರು ದಯವಿಟ್ಟು ತಮ್ಮ ಹಾಸಿಗೆಗಳನ್ನು ತಂಬಿಗೆ ಮುಂತಾದ ಅವಶ್ಯಕಪಾತ್ರೆಗಳನ್ನು ತಮ್ಮಸಂಗಡ ತರತಕ್ಕದ್ದು. ... *

(೬) ಪ್ರತಿನಿಧಿಗಳು ತಮ್ಮೊಡನೆ ಅಡಿಗೆಯವರನ್ನು ಕರೆದುಕೊಂಡು ಬಂದು ಸ್ವತಂತ್ರವಾಗಿ ಭೋಜನದವ್ಯವಸ್ಥೆಯನ್ನು ಮಾಡಿಕೊಳ್ಳಲಪೇಕ್ಷಿಸುವಲ್ಲಿ ಅಂಥವರು ತಮ್ಮೊ

ದಿಗೆಬರುವ ಜನರಸಂಖ್ಯೆಯನ್ನು ೮ ದಿವಸ ಪೂರ್ವದಲ್ಲಿ ಜನರಲ್ ಸೆಕ್ರೆಟೆರಿಯವರಿಗೆ ತಿಳಿ ಹಿಸಿದರೆ ಅವರಿಗೆ ಪ್ರತ್ಯೇಕ ಬಿಡಾರವನ್ನೇರ್ಪಡಿಸುವದು. ... ... *

(೭) ಸಭಾಮಂಟಪದಲ್ಲಿ ಪ್ರತಿನಿಧಿಗಳಿಗು, ಪ್ರೇಕ್ಷಕರಿಗು, ಪ್ರತ್ಯೇಕ ಪ್ರತ್ಯೇಕ ಸ್ಥಳಗಳು ನಿಯಮಿಸಲ್ಪಡುವವು. ... ... ... ... *

(೮) ಸದ್ಯಕ್ಕೆ ಬಳ್ಳಾರಿಯಲ್ಲಿ ಪ್ಲೇಗ್ ಅಥವಾ ಬೇರೆ ಯಾವರೋಗಾದಿಗಳು ಇಲ್ಲವು ಹವೆಯು ಚನ್ನಾಗಿರುತ್ತದೆ. ... ... ... ... *

## ವಿ ಶೇ ಷ ಸೂ ಚ ನೆ.

ನಾವು ನೂತನವಾಗಿ ಏರ್ಪಡಿಸಿರುವ ಸ್ತ್ರೀಸಭೆಯ ಪ್ರೋತ್ಸಾಹಕ್ಕೋಸ್ಕರ ತಮ್ಮ ತಮ್ಮ ಕುಟುಂಬ ಸಮೇತವಾಗಿ ಬರಲಿಷ್ಟವುಳ್ಳವರು, ಮತ್ತು ಸ್ತ್ರೀಯರುಮಾತ್ರವೇ ಪ್ರತ್ಯೇಕವಾಗಿ ಬರಲಿಚ್ಛೆಯುಳ್ಳವರು ಡಿಶಂಬರ್ ೨೦ನೇ ತೇದಿಯೊಳಗಾಗಿ ಜನರಲ್ ಸೆಕ್ರೆಟರಿಯವರಿಗೆ ತಿಳುಹಿಸಿದಪಕ್ಷದಲ್ಲಿ ತಕ್ಕವ್ಯವಸ್ಥೆಯು ಮಾಡಲ್ಪಡುವದು. ಸ್ತ್ರೀಯರಿಗೆ ಸಭಾಪ್ರವೇಶದ ಮತ್ತು ಭೋಜನದ ಹಣವನ್ನು ತೆಗದುಕೊಳ್ಳುವದಿಲ್ಲ. ಸ್ತ್ರೀಸಭಾ ಕಾಲದಲ್ಲಿ ಸ್ತ್ರೀಯರಹೊರ್ತು ಮತ್ತಾರಿಗು ಮಂಟಪ ಪ್ರವೇಶಾಧಿಕಾರ ವಿರುವದಿಲ್ಲವು. ಸ್ತ್ರೀಸಭಾ ಸಂಬಂಧವಾದ ಅಧ್ಯಕ್ಷರ ನಿಯಮ ಮೊದಲಾದ ವಿಷಯಗಳನ್ನು ಸ್ಪುಟರಪತ್ರದಲ್ಲಿ ಪ್ರಸಿದ್ಧಿಗೊಳಿಸುತ್ತೇವೆ. ... ... ... ... ... ... *

## ಲೋಹಮಾರ್ಗ (ರೈಲ್ವೇ) ಕಾಲಸೂಚನೆ.

| | | | | | |
|---|---|---|---|---|---|
| | | | | | ಗ.—ನಿ. |
| (೧) | ಗದಗು ಜಂಕ್ಷನಿನಿಂದ | ... | ಹಗಲು | ... | ೩—೪೫ |
| | | ... | ರಾತ್ರಿ | ... | ೧೦—೩೦ |
| | ಬಳ್ಳಾರಿಗೆ | ... | ಡಿಟೋ | ... | ೩—೪೫ |
| | | | | | ಗ.—ನಿ. |
| (೨) | ಗುಂತಕಲ್ಲು ಜಂಕ್ಷನಿನಿಂದ | ... | ಉದಯ | ... | ೫—೩೦ |
| | | ... | ಡಿಟೋ | ... | ೯—೩೦ |
| | ಬಳ್ಳಾರಿಗೆ | ... | ರಾತ್ರಿ | ... | ೯—೩೦ |

೨೫ ನೇ ತೇದಿಯಿಂದ ಸ್ಟೇಷನ್ನಿನಲ್ಲಿ ಪ್ರತಿನಿಧಿಗಳನ್ನು ಬರಮಾಡಿಕೊಳ್ಳುವ ವ್ಯವಸ್ಥೆಯು ಇಡಲ್ಪಡುವದು. ಪ್ರತಿನಿಧಿಗಳು ಬರುವಗಾಡಿಯನ್ನು ಮೊದಲೇದಯವಿಟ್ಟು ತಿಳುಹಿಸತಕ್ಕದ್ದು. ... ... ... ... *

೨

# ೩ನೆಯ ಶ್ರೀಮದ್ವೀರಶೈವ ಮಹಾಸಭೆ ಬಳ್ಳಾರಿ.

(ಪ್ರತಿನಿಧಿಗಳ ಸರ್ಟಿಫಿಕೀಟು.)

| ಅನುಕ್ರಮ ನಂಬರು. | ಪ್ರತಿನಿಧಿಗಳ ಪೂರ್ಣ ಹೆಸರು. | ವಾಸಸ್ಥಳ. ಗ್ರಾಮ ತಾಲೂಕು. ಜಿಲ್ಲಾ | ಉದ್ಯೋಗ. | ಪ್ರತಿನಿಧಿಗಳಾಗಿ ನೇಮಿಸಿದ ತಾರೀಖು. | ಷರಾ. |
|---|---|---|---|---|---|
| | | | | | |

ತಾ॥ ತಿಂ॥ ಸಂ॥

ಸಹಿ ______________________

ಸಭಾಧ್ಯಕ್ಷ ಅಥವಾ ಸೆಕ್ರೆಟರಿ.

# ಓಂ.

## ಬಳ್ಳಾರಿಯಲ್ಲಿ

೧೯೦೯ ನೇ ಡಿಸೆಂಬರ ೨೭, ೨೮, ೨೯, ೩೦, ನೇ ತಾರೀಖುಗಳಲ್ಲಿ ನೆರೆದ

# ೫ನೆಯ ಶ್ರೀಮದ್ವೀರಶೈವಮಹಾಸಭೆಯಲ್ಲಿ

ನಡೆದ

## ಸತ್ಕಾರಕ ಸಂಘಾಧ್ಯಕ್ಷರ ಭಾಷಣವು.

## ಮೊದಲನೆಯ ದಿನದ ಕೆಲಸ.

೨೭ ನೇ ತೇದಿ ಮಧ್ಯಾಹ್ನಾತ್ಪರ ೪ ಘಂಟೆಗೆ ಪ್ರಾರಂಭ.

---

ಅಧ್ಯಕ್ಷರಾದ ಶ್ರೀಮಂತ ಅಪ್ಪಾಸಾಹೇಬ್ ಮಲ್ಲಪ್ಪ, ಬಸಪ್ಪ, ವಾರದ ಇವರು ರಥಾರೂಢರಾಗಿ ಸಭಾಮಂಟಪಕ್ಕೆ ಚಿತ್ತೈಸಲು ವಾದ್ಯಘೋಷವಾಗುತ್ತಿರಲಾಗಿ ಸ್ವಾಗತಸಂಘದ ಅಧ್ಯಕ್ಷರು ಬಾಗಿಲಿನಲ್ಲಿ ಇದಿರ್ಗೊಂಡು ಒಳಕ್ಕೆ ಕರೆತಂದರು. ಸಭಾಸ್ತರರೆಲ್ಲರೂ ಎದ್ದು ಕರಾಸ್ಫಾಲನವನ್ನು ಮಾಡಿ ತಮ್ಮ ಆನಂಧವನ್ನು ಪ್ರದರ್ಶನಮಾಡಿ ಅಪ್ಪಾಸಾಹೇಬರ ಹೆಸರಿನಮೇಲೆ ೩ ಸಾರಿ ಜಯಘೋಷವನ್ನು ಮಾಡಿ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತರು. ಅಧ್ಯಕ್ಷರು ಎಲ್ಲರಿಗೂ ಪ್ರತಿವಂದನೆ ಮಾಡಿ ಕುಳಿತರು. ಅವರ ಇಕ್ಕೆಲಗಳಲ್ಲೂ ಹಿಂಗಡೆಯೂ ಸಹ ಚಂದ್ರಾಕಾರವಾಗಿ ಉಚಿತಾಸನಗಳ ಮೇಲೆ ಶ್ರೀಮಂತ ಪುಂಗನೂರ ರಾಜರು, ಬಂಟಮುರಿಯ ದೇಸಾಯರು, ಮೊದಲಾದ ಪ್ರಮುಖಜನರು ಕುಳಿತಿದ್ದರು. ಅವರ ಹಿಂಗಡೆಯಲ್ಲಿ ಸರ್ಕಾರದಧಿಕಾರದಲ್ಲಿರುವ ವೀರಶೈವ ಪ್ರಮುಖರೂ, ಶಾಸ್ತ್ರಿ ಮಂಡಲವೂ ಕುಳಿತಿದ್ದಿತು. ಎಲ್ಲಕ್ಕೂ ಹಿಂದೆ ಎತ್ತರವಾದ ಪೀಠಗಳಲ್ಲಿ ಪೂಜ್ಯಪಾದರುಗಳ ತಿಂತಿಣಿಯು ಮೂರ್ತಿಗೊಂಡಿದ್ದಿತು. ಇವರುಗಳ ಇಕ್ಕೆಲಗಳಲ್ಲಿ ಆಜೀವಸಭಾಸದರೂ, ಆಶ್ರಯದಾತರುಗಳೂ, ಸಾಲುಸಾಲಾಗಿ ಆಸನಗಳನ್ನಲಂಕರಿಸಿದ್ದರು. ಇದಕ್ಕೆ ಇದಿರಾಗಿ ಮಧ್ಯಭಾಗದೊಳಗೆ ಪ್ರತಿನಿಧಿಗಳ ಸ್ತೋಮವೂ, ಅವರ ಇಕ್ಕೆಲಗಳಲ್ಲೂ ಪ್ರೇಕ್ಷಕರ ಸಮೂಹವೂ, ಒಂದು ಪಕ್ಕದಲ್ಲಿ ತೆರೆಯೊಳಗೆ ಸ್ತ್ರೀಯರ ಮಂಡಲಿಯೂ, ಕುಳಿತಿದ್ದಿತು ಈ ಮಹಾಸಭಾ ಕಾರ್ಯಾರಂಭದಲ್ಲಿ ೪ ಮಂದಿ ವಿದ್ಯಾರ್ಥಿಗಳು ವೇದಮಂತ್ರಗಳಿಂದ ಶಿವಸ್ತುತಿಯನ್ನು ಮಾಡಿದರು ಮೈಸೂರಿನ ವೇ|| ರಾಚಕೋಟಿ ಶಾಸ್ತ್ರಿಗಳು ೧-೨ ಪದ್ಯಗಳನ್ನು ಇಂಪಾಗಿ ಹಾಡಿ ಶಿವಸ್ತುತಿ ಮಾಡಿದರು. ... ... ... *

ಶ್ಲೋ॥ ಶ್ರೀಮರ್ಶ್ರೀಪತಿಪದ್ಮಜಾದಿದಿವಿಷತ್ಸಂದೋಹಮೌಳಿಸ್ಫುರ ।
ನ್ನಾನಾರತ್ನಮರೀಚಿದೀಪಕಲಿತಾನೀರೇಜಿ ಶಾಂಘ್ರಿದ್ವಯಃ ।
ವೇದ್ಯೈರ್ವೇದಶಿರೋಭಿರಾಗಮಗಣೈರ್ವೇದ್ಯಸ್ಸದಾದ್ವ್ಯಪ್ರಮಾ ।
ನಸ್ಮಾಕಂಶಿವಮಾತನೋತುನಿತರಾಮಾರ್ಯಾರ್ಧದೇಹಶ್ಶಿವಃ ॥೧॥

ಬಳಿಕ ಸತ್ಕಾರಕ ಸಂಘದ ಅಧ್ಯಕ್ಷರಾದ ಮ॥ ರಾ॥ ರಾ॥ ಅಲ್ಲಂ ಬಸವಪ್ಪನವರು ತಮ್ಮ ಭಾಷಣದಿಂದ ಸಭಾಕಾರ್ಯವನ್ನು ಪ್ರಾರಂಭಿಸಿದರು ಅದು ಹ್ಯಾಗಂದರೆ,—

೧. ಈ ಸಭಾಮಂಟಪದ ಉನ್ನತಾಸನಗಳನಲಂಕರಿಸಿರುವ ಸಕಲ ನಿರಂಜನ ಸ್ವಾಮಿಗಳಿಗು, ಸಿಹ್ಮಾಸನಾಧ್ಯಕ್ಷರಿಗು, ಪಟ್ಟಚರಮೂರ್ತಿಗಳಿಗು, ದೇಶೋತ್ತಮರಿಗು, ಮತ್ತು ಪಂಡಿತ ಮಂಡಲಿಗು, ಶ್ರೀಮಂತರಿಗು, ಪದವೀಧರರಿಗು, ರಾಜಕೀಯೋದ್ಯೋಗಿಗಳಿಗು, ಪ್ರತಿನಿಧಿಗಳಿಗು, ಪ್ರೇಕ್ಷಕಸಂಘಕ್ಕು, ಬಳ್ಳಾರಿ ಜಿಲ್ಲೆಯ ವೀರಶೈವರ ಪಕ್ಷದಿಂದಲು, ನನ್ನ ಪಕ್ಷದಿಂದಲು, ಮನಃ ಪೂರ್ವಕವಾಗಿ ನಿಮ್ಮ ಉಪಕಾರವನ್ನು ಸ್ಮರಿಸಿ ಪ್ರೀತಿ ಪುರಸ್ಸರವಾಗಿ ನಿಮ್ಮ ಸುಖಾಗಮನವನ್ನು ಬಯಸುತ್ತೇನೆ. ...

ಪೂಜ್ಯರಾದ ಮಹಾಸ್ವಾಮಿಗಳೇ ? ಸಭ್ಯಗೃಹಸ್ಥರೇ ?

೨. ತಾವೆಲ್ಲರು ಸ್ವಧರ್ಮೋನ್ನತಿಯಕಡೆಗೆ ಲಕ್ಷ್ಯವಿಟ್ಟು ಸ್ವಜನಹಿತಕ್ಕಾಗಿ ಅನುರಾಗಪಟ್ಟು ನಮ್ಮ ನಿಮಂತ್ರಣವನ್ನಾಮೋದಿಸಿ ಸ್ವಕಾರ್ಯ ಸ್ವಪ್ರಯೋಜನೋದ್ಯೋಗ ವ್ಯವಸಾಯಗಳನ್ನು ತ್ಯಜಿಸಿ, ಪಥಶ್ರಮವನ್ನು ಧನವ್ಯಯವನ್ನು ಲೆಕ್ಕಿಸದೆ, ತಮ್ಮ ಅಮೌಲ್ಯಸಮಯವನ್ನು ವೆಚ್ಚಮಾಡಿ ಈ ಧಾರ್ಮಿಕ ಸಾಮಾಜಕೋತ್ಕರ್ಷತೆಯ ರೂಪವಾದ ಮಹಾಸಭೆಗೆ ಭರತಖಂಡದ ದೂರದೂರ ಪ್ರಾಂತಗಳಿಂದ ಬಿಜಯಂಗೊಳಿಸಿರುವದನ್ನು ನೋಡಿ ನನಗುಂಟಾದ ಆಹ್ಲಾದವ ಪಾರವಾಗಿದೆ. ಇದಲ್ಲದೆ ಗುರುಸ್ಥಲಕ್ಕೆಲ್ಲ ಗೌರವವನ್ನು ಕೊಡುವ ಸಕಲಭಕ್ತ ಸಮುದಾಯಕ್ಕೆ ಜ್ಞಾನಪಥವನ್ನು ತೋರಿಸುವ ಮಹಾ ಮಹಾ ಶ್ರೀಗಳವರು ಪಾದಸಂದರ್ಶನಾನಂದವನ್ನು ಕೊಟ್ಟದ್ದರಿಂದ ನಮ್ಮ ಆನಂದಕ್ಕೆ ಬೆಲೆಯೇ ಇಲ್ಲದಂತಾಗಿದೆ, ಕಾರಣವೇನಂದರೆ ಧಾರವಾಡ, ಬೆಂಗಳೂರು, ಸೋಲಾಪುರ, ಮತ್ತು ಬಾಗಲಕೋಟೆ, ಈ ನಾಲ್ಕು ಪಟ್ಟಣಗಳು ಪ್ರತಿಯೊಂದು ವಿಷಯದಲ್ಲಿಯು ಮುಂದುವರಿದು ಊರ್ಜಿತಸ್ಥಿತಿಗೆ ಬರಲುಪಕ್ರಮಿಸಿರುವದಲ್ಲದೆ ವೀರಶೈವರ ಜನಸಂಖ್ಯೆಯು ಸಹಾ ಅಮಿತವಾಗಿರುವದರಿಂದ ಅಲ್ಲಿನೆರೆದ ಮಹಾಸಭೆಗೆ ವಿಶೇಷಜನರು ಕೂಡಿದ್ದು ಆಶ್ಚರ್ಯವೆನಿಸಲಾರದು ಈ ಪ್ರಾಂತವಾದರೋ ಪೂರ್ವದ ಉನ್ನತಸ್ಥಿತಿಯನ್ನು ಕಳೆದುಕೊಂಡು ಸುಧಾರಣಕಾರ್ಯಗಳು ಯುಕ್ತಿಂಚಿತ್ತಾದರು ಸ್ವಾರ್ಥತ್ಯಾಗಬುದ್ಧಿಯಿಂದ ಮಾಡುವ ಮಹನೀಯರ ಸೋಂಕಿಲ್ಲದೆ

ನವನಾಗರಿಕ ಕಾಲಕ್ಕನುಗುಣವಾದ ಕೃಷಿ, ವಾಣಿಜ್ಯ ಕಲಾಕೌಶಲ್ಯಾದಿಗಳಲ್ಲಿ ಮನವನ್ನಿಯದ ಸ್ವಾರ್ಥಪರರಿಂದಲೇ ನಿಬಿಡವಾಗಿ, ಇತರಪ್ರಾಂತದವರ ಮಾರ್ಗಪ್ರದರ್ಶಕತ್ವದಿಂದ ಕಣ್ತೆರೆದಿರದ ಮಹಾಸಭೆಯಿಂದಾಗುವ ಲಾಭಗಳನ್ನು ಮನಸಾಯೋಚಿಸಿ ಈಗೀಗ ಮತಸಂಧಾರಣಕಾರ್ಯಗಳಿಗೆ ಕೈಹಾಕಿರುವ ಈ ಬಳ್ಳಾರಿಪಟ್ಟಣಕ್ಕೆ ಇಷ್ಟುಜನರು ಹೊರಟುಬಂದದ್ದು ಯಾರಿಗಾದರು ಆಶ್ಚರ್ಯವಾಗದಿರದು. ಇಂತಿಷ್ಟು ಪ್ರಜಾಸಮುದಾಯವನ್ನು ನೋಡಿ ಮಹಾಸಭೆಯ ಉಗಮ ಭೂತರಿಗು, ಚಾಲಕರಿಗು, ಮತ್ತು ಸಕಲ ವೀರಶೈವ ಧರ್ಮಾಭಿಮಾನಿಗಳಿಗು ಅಮಿತಾನಂದ ವಾಗುವದಕ್ಕೆ ಸಂದೇಹವಿಲ್ಲವು. ... ... *

೩. ಮಹಾಶಯರೇ? ಪೂರ್ವದಲ್ಲಿ ಈ ಪ್ರಾಂತಕ್ಕೊದಗಿದ್ದ ಪ್ರಭಾವಾತಿಶಯವನ್ನು ಹೇಳುವದು ಅಪ್ರಸ್ತುತ ಪ್ರಶಂಸೆಯಾಗಿ ಕಂಡುಬಂದರು ಚರಿತ್ರರೂಪಕವಾದ ಬಳ್ಳಾರಿಯ ವರ್ಣನೆಯನ್ನು ಸಂಕ್ಷಿಪ್ತವಾಗಿ ತಿಳುಹಿಸುವದತ್ಯಂತಾವಶ್ಯಕವಾಗಿದೆ ಪೂರ್ವಕ್ಕೆ ಈ ಬಳ್ಳಾರಿ ಡಿಸ್ಟ್ರಿಕ್ಟಿನಲ್ಲಿಯೇ ರಾಮಚಂದ್ರನು ಸೀತಾವಿಯೋಗದಿಂದ ತೊಳಲುತ್ತ ಬಂದು ಕಿಷ್ಕಿಂಧಾದ್ರಿಯಲ್ಲಿ ಸುಗ್ರೀವನ ಮೈತ್ರಿಯನ್ನು ಸಂಪಾದಿಸಿದನೆಂದು ಪೌರಾಣಿಕ ಚರಿತ್ರೆಗಳಿಂದ ತಿಳಿಯಬರುತ್ತದೆ. ... ... ... *

೪. ಈ ಕಿಷ್ಕಿಂಧಾಪಟ್ಟಣವೇ ತಾತ್ಕಾಲಿಕ ಹಂಪಿ, ಎಂದು ನಿರ್ಣಯಿಸಲ್ಪಟ್ಟದೆ ಇನ್ನು ಈ ಬಳ್ಳಾರಿ ಡಿಸ್ಟ್ರಿಕ್ಟಿಗೆ ಸೇರಿದ ಕೂಡ್ಲಿಗಿ, ರಾಯದುರ್ಗ, ಈ ತಾಲೂಕುಗಳ ಮಧ್ಯಭಾಗದಲ್ಲಿ ಹರಿಯುವ ಚಿಕ್ಕಹಗರಿಯ ನದಿಯಮೇಲೆ ಕೆಲವು ಬೌದ್ಧನ ಉಪದೇಶ ವಾಕ್ಯಗಳುಳ್ಳ ಸ್ತೂಪಗಳನ್ನು ಮಿಸ್ಟರ್ ರೈಸ್‌ಸಾಹೇಬರು ಕಂಡು ಹಿಡಿದುದರಿಂದ ಕ್ರೀಸ್ತಪೂರ್ವ ೨೫೦ನೇ ವರ್ಷದಲ್ಲಿ ಅಶೋಕನಿಗೆ ಸೇರಿದ್ದಿತೆಂದು ತಿಳಿಯಬರುತ್ತಿದೆ. ಆನಂತರ ಈ ಕೆಳಗೆ ಕಾಣಿಸಿರುವ ರಾಜರು ಕ್ರಮವಾಗಿ ಪರಿಪಾಲಿಸಿದಂತೆ ತಿಳಿಯಬಂದಿದೆ.

| | | |
|---|---|---|
| ಬೌದ್ಧರಾದ ಆಂಧ್ರವಂಶೀಯರು ಹಾರೀತಪುತ್ರ ಶಾತಕರಣಿ. | | ೨ನೇ ಶತಮಾನದಲ್ಲಿ |
| ಜೈನರಾದ ಕದಂಬ ವಂಶೀಯರು. | ... ... | ೪ನೇ ಶತಮಾನದಲ್ಲಿ. |
| ನಲವಂಶೀಯರು. | ... ... ... | ೫ನೇ ಶತಮಾನದಲ್ಲಿ. |
| ಜೈನರಾದ ಚಳುಕ್ಯರು, ಪ್ರಥಮ ಕೀರ್ತಿವರ್ಮ. | ಕ್ರಿ॥ ಶ॥ | ೫೬೬—೫೯೭ ವರಿಗು |
| ೨ನೇ ಪುಲಿಕೇಶಿ. | ... ... ... | ೬೦೯—೬೪೨ ವರಿಗು |
| ಪಲ್ಲವರು. | ... ... ... ... | ೭ನೇ ಶತಮಾನದ ಮಧ್ಯ ಭಾಗದಲ್ಲಿ. |
| ಇವರ ಶಾಖಾಭೇದನಾದ ನೊಳಂಬರು | ... | ೭ನೇ ಶತಮಾನಾಂತ್ಯದಲ್ಲಿ |

ರಾಷ್ಟ್ರಕೂಟರು. ... ... ... ೮ನೇ ಶತಮಾನದಿಂದ ೧೦ನೇ ಶತಮಾನ ಪಾದಿಯುವರೆಗು.

೩ನೇ ಕೃಷ್ಣ. ... ... ಕ್ರಿ॥ ಶ॥ ೯೪೦—೯೫೦ ವರಿಗು.

ಕೊಟ್ಟಿಗನು. ... ... ... ೯೭೨ ರಲ್ಲಿ.

ಗಂಗವಂಶೀಯರು. ... ... ... ೧೦ನೇ ಶತಮಾನಾಂತ್ಯದವರಿಗು.

ಮಾರಸಿಂಹ ನೊಳಂಬ ಕುಲಾಂತಕ ಕ್ರಿ॥ ಶ॥ ೯೬೩—೯೭೪ ವರಿಗು.

ಗಂಗರಾಜ. ... ... ... ೯೯೬—೧೦೦೪ ವರಿಗು.

ಅನಂತರ ಗಂಗರಾಜನಿಂದ ಚೋಳರಿಗೆ ಕೈವಶ ಮಾಡಲ್ಪಟ್ಟಿತು.

ಈ ದೇಶದ ಕೆಲವುಭಾಗಗಳು ಪಾಶ್ಚಾತ್ಯ ಚಳುಕ್ಯರ ಆಳಿಕೆಗೆ ಒಳಪಟ್ಟಿದ್ದವು.

ಚಳುಕ್ಯನಾದ ೨ನೇ ತೈಲಪನು. ... ಕ್ರಿ॥ ಶ॥ ೧೦೧೦ ರಲ್ಲಿ.

೨ನೇ ಜಯಸಿಂಹ. ... ... ೧೦೧೮—೧೦೪೨ ವರಿಗು.

೧ನೇ ಸೋಮೇಶ್ವರ. ... ... ೧೦೪೪—೧೦೬೮ ವರಿಗು.

ವಿಷ್ಣುವರ್ಧನ ವಿಜಯಾದಿತ್ಯ. ... ೧೦೬೪ ರಲ್ಲಿ.

೩ನೇ ಜಯಸಿಂಹ ... ... ೧೦೭೨ ರಲ್ಲಿ.

ವಿಕ್ರಮಾದಿತ್ಯ. ... ... ೧೦೭೯—೧೧೨೬ ವರಿಗು.

೨ನೇ ಜಗದೇಕಮಲ್ಲ. ... ... ೧೧೪೩—೧೧೪೮ ವರಿಗು.

ಈ ಪಾಶ್ಚಾತ್ಯ ಚಳುಕ್ಯರ ಕಾಲದಲ್ಲಿಯೇ ಈ ದೇಶದಲ್ಲಿ ದೇವಾಲಯಾದಿ ಕಟ್ಟಡಗಳು ಪ್ರಬಲಿಸಿದಂತೆ ತಿಳಿಯಬರುತ್ತೆ. ... ... *

ಚೋಳವಂಶೀಯರು ೧ನೇ ರಾಜಾಧಿರಾಜ. ಕ್ರಿ॥ ಶ॥ ೧೦೧೮—೧೦೫೮ ವರಿಗು.

೧ನೇ ವೀರರಾಜೇಂದ್ರ ರಾಜ. ... ೧೦೬೨ ರಲ್ಲಿ.

ಕಲಚೂರ್ಯ ವಂಶೀಯರು ಇದರಲ್ಲಿ ಬಿಜ್ಜಳನು ಪ್ರಬಲನಾಗಿ ೧೧೫೬—೧೧೮೩ ವರಿಗು ಆಳಿದನು. ಇವನಯಶಸ್ಸು ದ್ವಿತೀಯಶಂಭುವಾದ ಬಸವೇಶ್ವರನಿಂದಲೇ ದಿಗಂತಗಳಲ್ಲಿ ಹರಡಿಕೊಂಡು ಪುಷ್ಪದೊಂದಿಗೆ ಕೂಡಿದದಾರವು ಉತ್ತಮಾಂಗವನ್ನು ಸೇರುವಂತೆ ಎಲ್ಲರ ಜಿಹ್ವಾಗ್ರದಲ್ಲಿಯೂ ಇವನ ಹೆಸರು ನರ್ತಿಸುವಂತಾಯಿತು. ಅನಂತರ,— ... *

ಹೊಯ್ಸಳ ವಂಶೀಯನಾದ ವೀರಬಲ್ಲಾಳನು. ಕ್ರಿ॥ ಶ॥ ೧೧೯೧—೧೨೧೮ ವರಿಗು.

ಆ ಬಳಿಕ ಯಾದವರು ೧೩ನೇ ಶತಮಾನದಲ್ಲಿ ಈ ದೇಶವನ್ನಾಕ್ರಮಿಸಿದರು ಇವರ ಯಾಜಮಾನ್ಯತೆಯಲ್ಲಿ ಹೊಯ್ಸಳನಾದ ಸಿಂಘಣನು. ಕ್ರಿ॥ಶ॥ ೧೨೧೦—೧೨೪೭ ರಲ್ಲಿ

ಯಾದವಕೃಷ್ಣ. ... ... ೧೨೫೦ ರಲ್ಲಿ.

ತುರುಷ್ಕನಾದ ಮಲಿಕ ಕಾಫರ್. ... ... ೧೩೧೦ ರಲ್ಲಿ.

ವಿಜಯನಗರದ ರಾಜರು. ... ... ೧೩೩೬—೧೫೬೫ ವರಿಗು

ಬಿಜಾಪೂರ್ ಸುಲ್ತಾನರು. ... ... ೧೫೬೮ ರಲ್ಲಿ.

ಇವರ ಅಧೀನದಲ್ಲಿಯೇ ಪಾಳ್ಯಗಾರರು ಪ್ರಸಿದ್ಧಿಗೆ ಬಂದರು.

ಮೊದಲನೇ ಬಾಲದ ಹನುಮಪ್ಪ ನಾಯಕನು, ವಿಜಯನಗರದ ರಾಜರ ಅಧೀನದಲ್ಲಿದ್ದು ತರ್‍ವಾಯ ಬಿಜಾಪೂರ ಸುಲ್ತಾನರಿಗೆ ಬಳಪಟ್ಟು ಪ್ರತಿವರ್ಷ ೫೦೦೦ ರುಪಾಯೀಗಳು, ಕಾಣಿಕೆಯನ್ನು ಕೊಡುತ್ತಲು, ೩೦೦೦ ಸೈನ್ಯವನ್ನು ಪೋಷಿಸುತ್ತ, ಇದ್ದನು. ಈತನೇ ಬಳ್ಳಾರಿ. ಬೆಟ್ಟವನ್ನು ಬಂದುತರಹೆಯ ರಕ್ಷಣಸ್ಥಾನವನ್ನಾಗಿ ಏರ್ಪಡಿಸಿಕೊಂಡನು. ಇವನು ಪೆನುಗೊಂಡೆಯಲ್ಲಿರತಕ್ಕ ಹಂಪಿಯ ರಾಜರಿಂದ ಕಳುಹಿಸಲ್ಪಟ್ಟ ಸೈನ್ಯವನ್ನು ಕಾಂಪಿಲ್ಯ ( ಕಂಪ್ಲಿ ) ಪುರದಹತ್ತರ ಜಯಿಸಿದಂತೆ ತಿಳಿಯಬರುತ್ತಿದೆ. ಇವನ ತರ್‍ವಾಯ ಇವನ ಮೂವರು ಮಕ್ಕಳು ಹೀರೆ ರಾಮಪ್ಪ, ಒಬ್ಬೊಬ್ಬರಾಗಿ ಕ್ರೀ॥ ಶ॥ ೧೬೩೦ ಇಸವಿಯ ವರಿವಿಗು ಆಳಿದರು.

ಇವರನಂತರ ೬೦ ವರ್ಷಗಳು ಮುಸಲ್ಮಾನರಾಳಿದರು.

ಕ್ರೀ॥ ಶ॥ ೧೬೯೨-ರಲ್ಲಿ ಪೂರ್ವಪಾಳ್ಯಗಾರರ ವಂಶೀಯರಾದ ಚಿಕ್ಕಮಲತಪ್ಪ. ಚಿಕ್ಕನಾಯಕ ಇವರು ಪಾಲಿಸಿದಂತೆ ತಿಳಿಯಬಂದಿದೆ.

ಈ ಮಧ್ಯದಲ್ಲಿ ಕೆಲವು ದಿವಸಗಳು ಕ್ರೀ॥ ಶ॥ ೧೬೭೮ ರಲ್ಲಿ ಶಿವಾಜಿ ಛತ್ರಪತಿ ಮಹಾರಾಜನು ಪಾಲಿಸಿದಂತೆ ತಿಳಿಯಬಂದಿರುತ್ತದೆ.

ಚಿಕ್ಕನಾಯಕನ ಮಗ ದೇವಪ್ಪ ನಾಯಕ. ಕ್ರೀ॥ ಶ॥ ೧೬೯೨—೧೭೦೭ ವರಿಗು.

ದೇವಪ್ಪನಮಗ ಹನುಮಪ್ಪ. ... ... ೧೭೦೮—೧೭೧೭ ವರಿಗು.

ಇವನ ತಮ್ಮ ಹಿರೇ ರಾಮಪ್ಪ. ... ... ೧೭೧೮—೧೭೨೪ ವರಿಗು.

ಇವನತಮ್ಮ ಚಿಕ್ಕ ರಾಮಪ್ಪ. ... ... ೧೭೨೫—೧೭೨೯ ವರಿಗು.

ಇವನತಾಯಿ ನೀಲಮ್ಮ ದೊಡ್ಡತಲೆ ರಾಮಪ್ಪನನ್ನು ದತ್ತುತೆಗದುಕೊಂಡಳು. ಈ ಮಧ್ಯದಲ್ಲಿ ನೀಲಮ್ಮನ ಅಸಂತುಷ್ಟಿ ಆಳಿಕೆಗೆ ಅಸಹ್ಯಪಟ್ಟು ಬೇರೆ ಒಬ್ಬ ರಾಮಪ್ಪನನ್ನು ಪಟ್ಟಕ್ಕೆಕುಳ್ಳಿರಿಸಿದರು. ... ... ... ... *

ಈ ರಾಮಪ್ಪ ನಾಯಕ ... ... ಕ್ರೀ॥ ಶ॥ ೧೭೬೪ ವರಿಗು

ಇವನ ತಮ್ಮ ಹನುಮಪ್ಪ. ... ... ... ೧೭೬೯ ವರಿಗು

ಈ ಹನುಮಪ್ಪ ಕ್ರೀ॥ ಶ॥ ೧೭೬೮ ರಲ್ಲಿ ಹೈದರಲ್ಲಿಯನ್ನು ಸೋಲಿಸಿದನು.

ಇವನ ದತ್ತುಮಗ ದೊಡ್ಡಪ್ಪ. ... ೧೭೬೯—೧೭೭೪ ವರಿಗು.

ಕ್ರೀ॥ ಶ॥ ೧೭೭೫ ರಲ್ಲಿ ಹೈದರಲ್ಲಿ ವಶವಾಯಿತು. ಹೈದರಲ್ಲಿಯೇ ಕೋಟೆಯನ್ನು ಕಟ್ಟಿಸಿ ಪ್ರಸಿದ್ಧಮಾಡಿದನು. ... ... ... *

ಕ್ರಿ॥ ಶ॥ ೧೫೬೮—೧೭೬೪ ವರಿವಿಗು ಪರಿಪಾಲಿಸಿದ ಹಂಡೇವಂಶಸ್ಥರಾದ ಪಾಳ್ಯಗಾರರು ವೀರಶೈವರಾಗಿಯು, ಗುರುಲಿಂಗ ಜಂಗಮ ಪೂಜಾಧುರಂಧರರಾಗಿಯು, ಕುಲದೈವವು, ಇಷ್ಟದೈವವು ಸೊನ್ನಲಾಪುರದ ಸಿದ್ಧರಾಮೇಶ್ವರನೇ ಆಗಿರಲು ಇತರದೈವಗಳಿಗೆ ನಮಸ್ಕರಿಸದೆ ಏಕದೈವವನ್ನೇ ನಂಬಿ ಸತ್ಯವ್ರತದಿಂದ ರಾಜ್ಯಪಾಲನ ಮಾಡಿದರೆಂದು ಮಿಸ್ಟರ್ ಸಿ. ಪಿ. ಬ್ರಾನುಸಾಹೇಬರ ಚರಿತ್ರದಿಂದ ತಿಳಿಯಬರುತ್ತಿದೆ. ... *

೬. ಕ್ರಿ॥ ಶ॥ ೧೮೦೦ ರಲ್ಲಿ ಇಂಗ್ಲೀಷು ಸಾರ್ವಭೌಮರು ತಮ್ಮ ವಶಪಡಿಸಿಕೊಂಡು ರಾಜ್ಯದಲ್ಲಿ ಶಾಂತತೆಯನ್ನು ನೆಲೆಗೊಳಿಸಿ ನಾಗರಿಕತೆಯನ್ನಭಿವೃದ್ಧಿಪಡಿಸಿ ನಿಷ್ಪಕ್ಷಪಾತದಿಂದ ವಿದ್ಯಾಪ್ರೋತ್ಸಾಹವನ್ನು ಕೊಟ್ಟು ನ್ಯಾಯಪರಿಪಾಲನಮಾಡುತ್ತಾ ಬಂದರು ಇವರ ಪಾಲನಾಕಾಲದಲ್ಲಿಯೇ ಕೈ॥ ಸಕ್ಕರೆ ಕರಡೆಪ್ಪನವರು ಬಸವೇಶ್ವರನ ಅಪರಾವತಾರಿಗಳಂತೆ ಜನಿಸಿ, ವೀರಮಾಹೇಶ್ವರರಿಗೆ ವಿದ್ಯಾಪ್ರದಾನಕ್ಕೋಸ್ಕರ ಸಂಸ್ಕೃತ ಪಾಠಶಾಲೆಯನ್ನು ನಿರ್ಮಿಸಿ, ಅನೇಕರನ್ನು ವಿದ್ಯಾವಂತರನ್ನಾಗಿ ಮಾಡಿ ಅನಾಥರಿಗೆ ಪ್ರತಿನಿತ್ಯದಲ್ಲಿಯು ಅನ್ನೋದಕಗಳನ್ನು ಕೊಟ್ಟು ಗವರ್ನಮೆಂಟನವರಿಂದಲು ಸನ್ಮಾನಿತರಾಗುತ್ತಿದ್ದರು ಅವರು ವೀರಶೈವಸಮಾಜದ ಧಾರ್ಮಿಕ ವಿದ್ಯಾಭಿವೃದ್ಧಿಗೆ ಪ್ರಥಮಮಾರ್ಗ ದರ್ಶಕರೆಂದು ಹೇಳುವದಕ್ಕಣುಮಾತ್ರವು ಸಂಶಯವಿಲ್ಲವು. ಗುರು ಲಿಂಗ ಜಂಗಮದ ನೈಷ್ಠಿಕತ್ವದಲ್ಲಿ ಅವರಂತಹ ಉದಾರಶೀಲರು, ವಿತರಣಖನಿಗಳು, ಪ್ರಕೃತದಲ್ಲಿ ಯಾರುಯಿಲ್ಲವೆಂದರು ಅತಿಶಯೋಕ್ತಿಯಾಗಲಾರದು. ಅವರುಮಾಡಿದ ಲೋಕೋಪಕಾರಕ ಕೃತಿಗಳು ದಿಗಂತವಿಶ್ರಾಂತಗಳಾಗಿವೆ ಅವರು ತಮ್ಮಯ ಯಾವಜ್ಜೀವಮಾನವನ್ನು ಸಮಾಜಕ್ಕೆ ಲಾಭದಾಯಕವಾದ ಕಾರ್ಯಗಳಲ್ಲೇ ವಿನಿಯೋಗಿಸಿ ಅಜರಾಮರವಾದ ಕೀರ್ತಿಯನ್ನು ಪಡೆದು ಕೈಲಾಸವಾಸಿಗಳಾದರು ಅವರ ಮೇಲ್ಪಂಕ್ತಿಯನ್ನನುಸರಿಸಿ ಮಿಕ್ಕ ವೀರಶೈವಪ್ರಮುಖರು ಸಹಾ ಧರ್ಮತತ್ಪರರಾಗಿ ಶಕ್ತ್ಯಾನುಸಾರ ಸ್ವಧರ್ಮವನ್ನು ಸ್ವಮತಸ್ಥರನ್ನು ಉನ್ನತಸ್ಥಿತಿಗೆತರಬೇಕೆಂಬುವ ಅಪೇಕ್ಷೆಯುಳ್ಳವರಾಗಿದ್ದರು. ಹಾಗು ಕಾಲಾನುಗುಣವಾದ ಸುಧಾರಣೆಯನ್ನು ಮಾಡುತ್ತಿದ್ದರು ಅಂತಹ ಮಹನೀಯರೆಲ್ಲರು ಗತಿಸಿದ ಬಳಿಕ ಈ ಪ್ರಾಂತದಲ್ಲಿ ನಮ್ಮಸಮಾಜಕ್ಕೆ ವಿದ್ಯಾಪ್ರೋತ್ಸಾಹವು ಕಡಿಮೆಯಾಗುತ್ತಾ ಬಂದು ಮಾತ್ಸರ್ಯಗುಣಗಳು ಪ್ರಬಲಿಸಿ ಧರ್ಮಶ್ರದ್ಧೆಯು ಸಾಮಾಜಿಕ ಸುಧಾರಣೆಯು ತೊಲಗಿಹೋಗಿ ಹೀನಸ್ಥಿತಿಗೆ ಬರುತ್ತಿರುವದನ್ನು ನೋಡಿ ಪುಣ್ಯಶಾಲಿಗಳಾದ ಕೊಟ್ಟೂರು ವೇ॥ ಮಿರುಳಂಗಟ್ಟದ ಮಠದ ಜಾಗಟಗೇರಿ ದೊಡ್ಡವೀರಪ್ಪಯ್ಯನವರು ಮದ್ರಾಸು ಪ್ರೆಸಿಡೆನ್ಸಿಯಲ್ಲಿ ಒಂದು ಸಭೆಯು ನಡೆದರೆ ತುಂಬಾಲಾಭವಾಗುವದೆಂದೆಣಿಸಿ, ಶ್ರೀಮದುಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಚಿರಪಟ್ಟಾಧ್ಯಕ್ಷ ಮರುಳ ಸಿದ್ಧರಾಜ ದೇಶಿಕೇಂದ್ರ ಮಹಾಸ್ವಾಮಿಗಳವರೊಡನಾಲೋಚಿಸಿ ಸ್ಟಾಂಡಿಂಗ್ ಕಮಿಟಿ ಛೇರ್ಮನ್‌ರಿಗೆ ಪತ್ರಗಳನ್ನು ಕಳುಹಿಸಿದರು. ಛೇರ್ಮನ್ ಸಾಹೇಬರು

ಸಂತೋಷಿಸಿ ಕೆಲವು ಸ್ಟ್ಯಾಂಡಿಂಗ್ ಕಮಿಟಿ ಮೆಂಬರುಗಳನ್ನು ಆಲೋಚನೆಗಾಗಿ ಕೊಟ್ಟೂರಿಗೆ ಕಳುಹಿಸಿದರು. ಅವರೆಲ್ಲರು ಬಂದು ಕೊಟ್ಟೂರಲ್ಲಿ ಆಲೋಚನಾಸಭೆಯನ್ನು ನಡೆಯಿಸಿದರು. ಆ ಸಭೆಯಲ್ಲಿ ಕೂಡಿದ ಸ್ಟ್ಯಾಂಡಿಂಗ್ ಕಮಿಟಿ ಮೆಂಬರುಗಳು ಸಿಹ್ಮಾಸನದಲ್ಲಿರುವ ಅಂತಃ ಕಲಹಗಳು ಹೋಗದಹೊರ್ತು ಸಭೆಯನ್ನು ಕೊಡುವದಕ್ಕಾಗುವದಿಲ್ಲವೆಂದು ಹೇಳಿದರು. ಅದಕ್ಕೆ ಸ್ಥಿರಪಟ್ಟಾಧ್ಯಕ್ಷ ಮಹಾಸ್ವಾಮಿಗಳು, ಚರ ಪಟ್ಟಾಧ್ಯಕ್ಷ ಮಹಾಸ್ವಾಮಿಗಳು, ನಮ್ಮಲ್ಲುಂಟಾಗಿರುವ ಅಂತಃ ಕಲಹಗಳನ್ನು ಪರಿಹರಿಸಿಕೊಳ್ಳುತ್ತೇವೆಂತಲು, ತಾವೆಲ್ಲರು ಮೇ, ತಿಂಗಳಲ್ಲಿ ಬರಬೇಕೆಂತಲು, ಸಹಿ ಮೊಹರೆನಿಸಿ ಆಶೀರ್ವಾದ ಪತ್ರಗಳನ್ನು ದಯಪಾಲಿಸಿದರು, ಆಜ್ಞಾ ಶಿರಸಾವಹಿಸಿ ಸ್ಟ್ಯಾಂಡಿಂಗ್ ಕಮಿಟಿಮೆಂಬರರು ಮತ್ತು ಮೇ, ತಿಂಗಳಲ್ಲಿ ಬಂದರು. ಸ್ಥಿರಪಟ್ಟದ ಸ್ವಾಮಿಗಳು ವಚನಾನುಸಾರ ಸ್ಟ್ಯಾಂಡಿಂಗ್ ಕಮಿಟಿಮೆಂಬರರ ಆಲೋಚನೆಗೆ ವಿರೋಧವಿಲ್ಲದಂತೆ ಕಡೆತನಕ ಅನುಕೂಲವಾಗಿದ್ದರು. ಚರಪಟ್ಟದ ಸ್ವಾಮಿಗಳು ಅಂತಃಕಲಹ ನಿವಾರಣೋಪಾಯಗಳನ್ನು ಪರಿಪರಿವಿಧದಿಂದ ಪ್ರಯತ್ನಮಾಡಿದಕಾಲಕ್ಕು ಸ್ವಹೃದಯ ಜನಿತವೈರವನ್ನು ಬಿಡಲಿಲ್ಲವು. ಅನಂತರ ಸ್ಟ್ಯಾಂಡಿಂಗ್ ಕಮಿಟಿ ಮೆಂಬರರು ನಮ್ಮಸಿಹ್ಮಾಸನದ ಅಂತರ್ವಿರೋಧವು ಪರಿಹರವಾಗಲಿಲ್ಲ ಮಹಾಸಭೆಯು ನಡೆಯಲಿಲ್ಲವೆಂದು ಕೇವಲ ವಿಷಾದಪಟ್ಟು ಕೊ॥ ವಿ॥ ಜಾ॥ ದೊಡ್ಡ ವೀರಪ್ಪಯ್ಯನವರನ್ನು ನೋಡಿ ಇಲ್ಲಿಯವಿಷಯ ಈರೀತಿಯಾಗಿ ಪರಿಣಮಿಸಿತು, ನಿಮ್ಮಕೋರಿಕೆಯು ಇಲ್ಲಿ ಫಲಿಸದಿದ್ದರು ಬಳ್ಳಾರಿಯಲ್ಲಿ ನಡೆಯಿಸಿದರೆ ಹೆಚ್ಚಾದ ಲಾಭವುಂಟಾಗುವದೆಂದು ಪ್ರೋತ್ಸಾಹಿಸಿದಕಾರಣ ಅವರು ಇಲ್ಲಿಗೆಬಂದು ಇಲ್ಲಿಯ ವೀರಶೈವಮಂಡಲಿಗೆ ಮಹಾಸಭೆಯಿಂದಾಗುವ ಲಾಭಗಳನ್ನು ಮನಸ್ಸಿನಲ್ಲಿ ಪ್ರತಿಬಿಂಬಿಸುವಂತೆ ಬೋಧಿಸಿ, ಸುಧಾರಣ ಕಾರ್ಯಗಳ ಕಡೆಗೆ ಲಕ್ಷ್ಯಪೂರೈಸುವಂತೆಯು ಮಹಾಸಭೆಯನ್ನು ಕೈಕೊಳ್ಳುವಂತೆಯು ಮಾಡಿ ಮಾನಸಿಕ, ಶಾರೀರಿಕ, ಸಾಂಪತ್ತಿಕ ಸಹಾಯಗಳನ್ನು ಬಪಗಿಸಿಕೊಟ್ಟು ಈದಿನ ತಮ್ಮೆಲ್ಲರನ್ನು ಈ ಸಭಾಮಂಟಪದಲ್ಲಿ ಸಂದರ್ಶಿಸುವ ಸುಸಂಧಿಯ ನ್ನುಂಟುಮಾಡಿದುದಕ್ಕಾಗಿ ಈ ಸ್ವಮತಾಭಿಮಾನಿಗಳ ಕರ್ತವ್ಯದಕ್ಷತೆಯನ್ನು ಸರ್ವರು ಅಭಿನಂದಿಸಬೇಕಾಗಿದೆ. ... *

೨. ನಾವು ಮಹಾಸಭೆಯನ್ನು ಕೈಕೊಂಡ ಬಳಕ ಮಹದಾನಂದದಿಂದ ಶ್ರೀಮದುಜ್ಜಯಿನಿ ಸದ್ಧರ್ಮ ಸಿಹ್ಮಾಸನಾಧೀಶ್ವರ ಜಗದ್ಗುರು ಪಟ್ಟಾಧ್ಯಕ್ಷ ಚೆನ್ನಬಸವರಾಜ ದೇಶಿಕೇಂದ್ರ ಮಹಾ ಸ್ವಾಮಿಗಳವರು ಜೂಲೈ ೧೬ನೇ ತೇದಿಯಲ್ಲಿ ಮಹಾಸಭಾ ಪ್ರೋತ್ಸಾಹಕ್ಕಾಗಿ ಸಮಾಜೋನ್ನತಿಯಮೇಲೆಲಕ್ಷ್ಯವಿಟ್ಟು ಪರಿವಾರಸಮೇತಬಳ್ಳಾರಿಗೆ ಬಿಜಯಂಗೊಳಿಸಿ ಪುರಜನರಿಗೆ ಉತ್ತೇಜನಕೊಟ್ಟು ಕಾರ್ಯನಿರ್ವಹತೆಯಲ್ಲಿ ಮನಸ್ಸು ಮಗ್ನವಾಗುವಂತೆ ಬೋಧಿಸಿ ಕೈಕೊಂಡಕಾರ್ಯವು ನಿರಾತಂಕವಾಗಿ ನಡಿಯಲೆಂದು ಅಮೋಘಾಶೀರ್ವಾದವನ್ನು ದಯಪಾಲಿಸುವದಲ್ಲದೆ ಮಹಾಸಭಾಕಾಲಕ್ಕೆ ಪರಿವಾರದೊಂದಿಗೆ ದಯಮಾಡಿಸುವೆವೆಂದು ಅಪ್ಪಣೆಕೊಡಿಸಿದ ಪ್ರಕಾರ ಸಮಾಜಹಿತಕ್ಕಾಗಿ ದಯಮಾಡಿಸಿ ಉನ್ನತಾಸನವನ್ನು ಸ್ವೀ-

ಕರಿಸುದುದಕ್ಕಾಗಿಯು, ಇತರ ಸಿಹ್ಮಾಸನಾಧ್ಯಕ್ಷರಿಗ್ಗೆ ಮಾರ್ಗದರ್ಶಕ ರಾಪುದಕ್ಕಾಗಿಯು, ನಾವೆಲ್ಲರು ಅವರಿಗೆ ಸಾಷ್ಟಾಂಗ ಪ್ರಣಾಮಗಳನ್ನಾಚರಿಸ ಬೇಕಾಗಿದೆ. ... *

೮. ನಮ್ಮ ಪ್ರಾಂತದಲ್ಲಿ ನಿರಂಜನ ಸ್ವಾಮಿಗಳು,ಸಿಹ್ಮಾಸನಾಧೀಶರು, ಶ್ರೀಮಂತರು, ಹಲ ಕೆಲವರಿದ್ದಾಗ್ಯು ವಿದ್ಯಾವಿಷಯಕ್ಕಾಗಿ ತಕ್ಕ ಪ್ರೋತ್ಸಾಹಕರಲ್ಲದ್ದರಿಂದ ಈ ಪ್ರಾಂತದ ಜನಾಂಗವು ಧಾರ್ಮಿಕ, ಸಾಮಾಜಿಕ, ರಾಜಕೀಯ, ವಿಷಯಗಳಲ್ಲಿ ನಾಗರೀಕತೆಯನ್ನು ಹೊಂದಿ ವರ್ತಿಸಲಿಕ್ಕಾಸ್ಪದ ವಿಲ್ಲದಂತಾಯಿತು. ಆದರೆ ಈ ವಳಗೆ ನಡೆದ ನಾಲ್ಕು ಮಹಾಸಭೆಗಳಿಂದ ಆಯಾಪ್ರಾಂತಗಳಲ್ಲಿರುವ ಜನಗಳು ಸ್ವೋನ್ನತಿಯ ಕಡೆಗೆ ಲಕ್ಷ್ಯಕೊಟ್ಟಂತೆ ನಮ್ಮಪ್ರಾಂತದವರುಸಹಾ ಧಾರ್ಮಿಕ, ಔದ್ಯೋಗಿಕ, ರಾಜಕೀಯ, ಮುಂತಾದ ವಿಷಯಗಳಲ್ಲಿ ಉಚ್ಚಸ್ಥಿತಿಗೆ ಬರುವಂತೆ ಪ್ರೋತ್ಸಾಹಿಸುವದಕ್ಕೋಸ್ಕರ ತಾವೆಲ್ಲರು ಕರುಣದಿಂದ ಆಗಮಿಸಿದುದಕ್ಕಾಗಿ ವಿನಯವಿನಮಿತ ಸ್ವಾಂತದಿಂದ ವಂದಿಸುವದಕ್ಕೆ ತುಂಬಾ ಹರ್ಷವಾಗುತ್ತಿದೆ. ಶ್ರೀಮನ್ನಿರಂಜನ ಅಲ್ಲಮಾಪ್ರಭು ಸ್ವಾಮ್ಯ ಪರಾವತಾರ ಶ್ರೀ ಹಾನಗಲ್ಲು ಕುಮಾರ ಮಹಾಸ್ವಾಮಿಗಳವರು ಮಹಾಸಭೆಯ ಉತ್ಪಾದಕರಾಗಿ ಶಿವಯೋಗ ಮಂದಿರವೆಂಬ ಗುರುಕುಲವಾಸವನ್ನು ನಿರ್ಮಿಸಿ, ಮುಷ್ಟಿಫಂಡು ಮುಂತಾದವುಗಳನ್ನು ನಿರ್ಣಯಿಸಿ ಜಿಲ್ಲಾ, ತಾಲೂಕು, ಗ್ರಾಮ, ಕಮಿಟಿಗಳನ್ನು ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಸೌಲಭ್ಯವನ್ನುಂಟುಮಾಡಿ ಸಮಾಜಕ್ಕೆ ಅತ್ಯಂತಲಾಭಪ್ರದವಾದ ಸೌಕರ್ಯಗಳನ್ನುಲ್ಲಾಸದಿಂದ ಮಾಡಿರುವದಕ್ಕಾಗಿಯು ಸರ್ವಷಟ್ಸ್ಥಲಬ್ರಹ್ಮಿಗಳ ಸತ್ಪಥೋದಾಹರಣೆಗೆ ಮೂಲಭೂತರಾಗಿ ಅವಿಶ್ರಾಂತ ಯತ್ನಗಳನ್ನು ಇತರರು ಅನುಕರಣಮಾಡುವಂತೆ ಶ್ರದ್ಧೆಯಿಂದ ಮಾಡುತ್ತಿರುವದಕ್ಕಾಗಿಯು ನಾವೆಲ್ಲರು ತ್ರಿಕರಣಪೂರ್ವಕ ಅವರ ಪಾದಧ್ಯಾನವನ್ನು ಮಾಡಬೇಕಾಗಿದೆ.

೯. ನಾವು ಮಹಾಸಭೆಯನ್ನು ಕೈಕೊಂಡನಂತರ ಅಪರಿಮಿತ ವಿಘ್ನಗಳು ಬಂದವು, ಅವುಗಳೆಲ್ಲವನ್ನು ಸವಿಸ್ತಾರವಾಗಿ ತಿಳುಹಿಸುವದ ನಾವಶ್ಯಕವೆಂದು ತೋರಿಬಂದಕಾರಣ ಸಂಕ್ಷೇಪಮಾಡಿ ಕೊಲ್ಹಾಪುರದವರ ವಿಷಯವನ್ನು ಸ್ವಲ್ಪ ಸೂಚಿಸುತ್ತೇನೆ; ಅವರು ಈ ವರ್ಷದ ಮಹಾಸಭೆಯನ್ನು ನಮಗೆ ಕೊಡಬೇಕೆಂತಲು ಅದರಿಂದ ಅನೇಕಲಾಭಗಳುಂಟಾಗುವವೆಂತಲು ಶ್ರೀ ಹಾನಗಲ್ಲು ಶ್ರೀಗಳವರಿಗೆ ಸೂಚಿಸಿದಕಾರಣ ಶ್ರೀಗಳವರು ಹುಬ್ಬಳ್ಳಿಯಲ್ಲಿ ಅಕ್ಟೋಬರ್ ೯ನೇ ತೇ॥ ದಿನ ಆಲೋಚನಾಸಭೆ ಕೂಡಿಸಿದರು. ಈಸಭೆಗೆ ನಾನು ವೇ॥ ಕಪ್ಪಕಲ್ಲು ಮಠದ ಕರಿಬಸವಯ್ಯನವರು, ಮ॥ ರಾ॥ ರಾ॥ ಸೌದ್ರಿ ಷಣ್ಮುಖಪ್ಪನವರು, ಮ॥ ರಾ॥ ರಾ॥ ಶಿಂದಿಗಿ ಸಿದ್ದಪ್ಪನವರು, ಹೋಗಿ ಶ್ರೀಗಳಸನ್ನಿಧಿಯಲ್ಲಿ ಆಲೋಚನೆ ನಡೆಯಿಸಿ ಕೊಲ್ಹಾಪುರದಲ್ಲಿ ಈ ವರ್ಷದ ಸಭೆಯನ್ನು ನಡೆಯಿಸುವದು ಯುಕ್ತಿಯುಕ್ತವಾಗಿದ್ದರು ತೀರ ಹಿಂದುಳಿದ ಮದ್ರಾಸುಪ್ರಾಂತದಲ್ಲಿ ಸಭೆಯು ನೆರೆಯುವದರಿಂದ ವಿಶೇ

ಷಲಾಭವಾಗುವದೆಂದು ವಿನ್ನವಿಸಿಕೊಂಡೆವು. ನಮ್ಮ ಅಭಿಪ್ರಾಯವನ್ನು ಕೊಲ್ಹಾಪುರದ ಮ|| ರಾ|| ರಾ|| ವೀರಬಸವ ಶ್ರೇಷ್ಠಿಯವರ ಅಭಿಪ್ರಾಯವನ್ನು ತೆಗದುಕೊಂಡು ಶ್ರೀಗಳವರು ಸ್ಟ್ಯಾಂಡಿಂಗ್ ಕಮಿಟಿ ಛೇರ್‌ಮೆರ್‌ರಾದ ಧಾರವಾಡದ ಮ|| ರಾ|| ರಾ|| ಮೆಣಸಿನಕಾಯಿ ಶಾಂತವೀರಪ್ಪ ನವರು ಯೋಚಿಸಿ ಕೊಲ್ಹಾಪುರದವರು ಪ್ರಾಂತಿಕ ಸಭೆಯನ್ನು ಕೂಡಿಸಬೇಕೆಂತಲು, ಮಹಾಸಭೆಯು ಬಳ್ಳಾರಿಯಲ್ಲಿಯೇ ನಡಿಯಬೇಕೆಂತಲು, ನಿಷ್ಕರ್ಷೆಮಾಡಿದುದಕ್ಕಾಗಿ ನಾನು ಅಭಿನಂದಿಸುತ್ತೇನೆ. ... ... ... *

೧೦. ಈ ಪಟ್ಟಣದಲ್ಲಿ ನವಂಬರ ೨೨ನೇ ತೇದಿ ದಿನ ಮ|| ರಾ|| ರಾ|| ಜಾಜಿಮಾರಯ್ಯನವರೆಂಬ ಮಹನೀಯರು ದತ್ತುಮಗನನ್ನು ತೆಗದುಕೊಳ್ಳುವ ಪ್ರಸಂಗದಲ್ಲಿ ವೀರಶೈವ ಪ್ರಮುಖರನ್ನು ಕರೆಯಿಸಿ ಈ ವೂರಲ್ಲಿ ಒಂದು ವಿದ್ಯಾವರ್ಧಕ ಫಂಡು ಸ್ಥಾಪನೆಮಾಡಿರಿ; ಅದಕ್ಕೆನಾನು ಒಂದುಸಾವಿರ ರುಪಾಯಿಗಳು ಕೊಡುತ್ತೇನೆ ಎಂದು ವಚನವನ್ನು ಕೊಟ್ಟರು. ಆ ಕೂಡಲೇ ಯಜಮಾನರಾದ ಮ|| ರಾ|| ರಾ|| ಕೊಂಡಕುಂದೆ ಚನ್ನಪ್ಪನವರು ನಾನುಸಾವಿರ ರುಪಾಯಿ ಕೊಡುತ್ತೇನೆ, ಇದಕ್ಕೆ ಎಲ್ಲರು ಸಹಾಯಮಾಡಿದಲ್ಲಿ ಮತ್ತೊಂದು ಸಾವಿರ ರುಪಾಯಿ ಕೊಡುವೆನೆಂದು ವಾಗ್ದತ್ತ ಮಾಡಿರುವರು. ಈ ಉಭಯರ ಮಾರ್ಗದರ್ಶಕತ್ವದಿಂದ ಈಸ್ಥಲದ ಪ್ರತಿಯೊಬ್ಬ ವೀರಶೈವರ ಮನಸ್ಸಿನಲ್ಲಿ ವಿದ್ಯಾವರ್ಧಕಫಂಡನ್ನು ಕೂಡಿಸಿ ಬಹುಬೇಗನೆ ಅಭಿವೃದ್ಧಿಪಡಿಸಬೇಕೆಂಬ ಯೋಚನೆ ಯುಂಟಾಗಿರುವದು. ಇದಲ್ಲದೆ ವೀರಶೈವರ ವ್ಯಾಪಾರಗಳಲ್ಲಿ ಬರುವ ಧರ್ಮಾದಾಯದ ಹಣದವಿನಿಯೋಗವು ಇದುವರೆಗು ಸರಿಯಾಗಿ ನಡಿಯುತ್ತಿರಲಿಲ್ಲವು, ಆ ಪದ್ಧತಿಯನ್ನು ತಪ್ಪಿಸಿ ಉತ್ತಮ ವ್ಯವಸ್ಥೆಯನ್ನು ನಡಿಯುವಂತೆ ಮಾಡಿ ಧರ್ಮಾದಾಯದ ಹಣವನ್ನು ವಿದ್ಯಾವರ್ಧಕಫಂಡಿಗೆ ಸೇರುವಂತೆ ಮಾಡಬೇಕೆಂದು ಇದೇ ಡಿಶಂಬರ್ ೧೯ನೇ ತೇದಿಯಲ್ಲಿ ಶ್ರೀ ಶಿವಾನುಭವ ಚರವರ್ಯರಾದ ಮುರಡಗಿರಿ ಅನ್ನದಾನಸ್ವಾಮಿಗಳ ಸನ್ನಿಧಿಯಲ್ಲಿ ಎಲ್ಲರು ಯೋಚಿಸಿ ಸಮ್ಮತಿಸಿರುವರು. ಇಂತಹ ಮಹತ್ಕಾರ್ಯಕ್ಕೆ ಈ ಜಿಲ್ಲೆಯ ವೀರಶೈವಮಹನೀಯರು ಹಸ್ತಾವಲಂಬನವನ್ನೀಯುವಂತೆ ಪ್ರೇರಣೆ ಮಾಡಬೇಕೆಂದು ಜಗದೀಶನನ್ನು ಅನನ್ಯ ಭಾವದಿಂದ ಬೇಡಿಕೊಳ್ಳುತ್ತೇನೆ. ... ... ... ... *

೧೧. ನಮ್ಮ ಮಹಾಸಭೆಯ ವಿಷಯವನ್ನು ವಿಜ್ಞಾಪನೆ ಮಾಡಿಕೊಳ್ಳುವದಕ್ಕಾಗಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಸಾಹೇಬರಾದ ಜೆ. ಏ. ಕಮಿಂಗ್ ಧೊರೆಗಳವರ ಲೇಡಿ, ಕಮಿಂಗ್ ಧೊರಸಾನಿಯವರ ಸನ್ನಿಧಿಗೆ ಹೋಗಿ ಉಚಿತ ಸತ್ಕಾರಗಳಿಂದ ಕಂಡು ಮಹಾ ಸಭೆಯ ವಿಷಯವನ್ನು ವಿನಂತಿಮಾಡಿಕೊಳ್ಳಲು, ಅವರು ಅಮಿತಾನಂದ ಹೊಂದಿ ನಿಮ್ಮ ಜನಾಂಗವು ತೀರ ಹೀನಸ್ಥಿತಿಯಲ್ಲಿದೆ; ಇಂತಹ ಸಭೆಗಳಮೂಲಕ ಸಮಾಜವನ್ನು ಚೇತರಿಸಿಕೊಳ್ಳುವಂತೆ ಮಾಡುವದೊಳ್ಳೆಯದು, ನಿಮಗೆ ಆದಷ್ಟುಸಹಾಯ ಮಾಡುತ್ತೇವೆ ಎಂದು ಸಂ

ತೋಷಭರಿತ ವಚನಗೆಳನ್ನು ದಯಪಾಲಿಸಿದುದಕ್ಕಾಗಿಯೂ, ನಮಗನುಕೂಲವಾದ ಸಹಾಯಗಳನ್ನೊದಗಿಸಿ ಕೊಟ್ಟುದಕ್ಕಾಗಿಯೂ, ನಾನು ಅವರಿಗೆ ಕೃತಜ್ಞನಾಗಿರುತ್ತೇನೆ.

೧೦. ಈ ಪುರದಲ್ಲಿ ಪ್ರಸಿದ್ಧ ವಕೀಲರಾಗಿಯೂ, ನವನಾಗರಿಕ ಕಾಲಪ್ರವರ್ತನಾಧೀಶರಾಗಿಯೂ, ಇರುವ ಮ॥ ರಾ॥ ರಾ॥ ಕೋಲಾಚಲಂ ವೇಂಕಟ್ರಾವು, ಇವರು ಮಹಾಸಭಾ ನೆರೆಯುವದಕ್ಕೆ ಉದಾರಮನಸ್ಸಿನಿಂದ ನಾವು ಈಗ ಕೂಡಿರುವ ಸ್ಥಲವನ್ನು ಕೊಟ್ಟು ನಮಗೆ ಬೇಕಾದ ಸಹಾಯವನ್ನು ಮಾಡಿದುದಕ್ಕಾಗಿಯೂ, ಹೈಕೋರ್ಟು ವಕೀಲು ಮ॥ ರಾ॥ ರಾ॥ ಗೋಪಾಲಸ್ವಾಮಿ ಮೊದಲಿಯಾರ್ ಬಿ. ಏ. ಬಿ ಎಲ್. ಇವರುನ್ನು ನಮ್ಮ ಮಹಾಸಭೆಯ ವಿಷಯದಲ್ಲಿ ಅತ್ಯಂತ ಸಾಹಸವನ್ನು ತೋರಿಸಿದುದಕ್ಕಾಗಿಯೂ, ಅವರ ಉಪಕಾರವನ್ನು ಪುನಃ ಪುನಃ ಸ್ಮರಿಸುತ್ತೇನೆ. ... ... ... *

೧೩. ಮಹಾಶಯರೇ ? ಈ ಸಭೆಯ ಕಾರ್ಯವು ನೆರವೇರಿದ ಕೂಡಲೇ ಸಭೆಯಲ್ಲಿ ನಿಷ್ಕರ್ಷೆಯಾದ ನಿಯಮಗಳನ್ನು ಆಚರಣೆಯಲ್ಲಿ ಬರುವಂತೆ ಮಾಡುವದಕ್ಕೆ ಜಿಲ್ಲಾ, ತಾಲೂಕು, ಗ್ರಾಮ, ಕಮಿಟಿಗಳನ್ನು ಸ್ಥಾಪಿಸಿ, ಸೂಕ್ತವಾದ ನಿಯಮಗಳನ್ನು ಮಾಡಿ ನಿರಾತಂಕವಾಗಿ ನಡಿಯುವಂತೆ ಅವಿಶ್ರಾಂತ ಸಾಹಸ ಮಾಡುವಿರೆಂದು ನಾನು ಮನಸಾ ನಂಬಿರುವೆನು. ಮಹಾಸಭೆಯ ವಿಷಯವನ್ನೇ ತಿಳಿಯದ ನಾವು ಕೈಕೊಂಡ ಕಾರ್ಯವನ್ನು ಕೊನೆಗಾಣಿಸುವದು ಅತ್ಯಂತ ದುಸ್ತರವೆಂಬ ವಿಷಯವು ಎಲ್ಲರ ಮನಸ್ಸಿಗೆ ಗೋಚರವಾಗಬಹುದು. ಆದರು ತಮ್ಮಂತಹ ಮಹನೀಯರ ದಯದಿಂದ ನಿರ್ವಿಘ್ನವಾಗಿ ಪೂರೈಸುವದೆಂದು ನಂಬಿದ್ದೇನೆ. ಆದರೆ ನೀವೆಲ್ಲರು ನಮ್ಮ ವ್ಯವಸ್ಥೆಗಳಲ್ಲಿ ಕಂಡುಬರುವ ಕುಂದು ಕೊರತೆಗಳನ್ನು ಲಕ್ಷಿಸದೆ ನಮ್ಮ ಅಲ್ಪಶಕ್ತಿಗನುಗುಣವಾಗಿ ಮಾಡುವ ಆದರೋಪಚಾರಗಳನ್ನು ಸ್ವೀಕರಿಸಿ ಈ ಮಹತ್ಕಾರ್ಯಕ್ಕೆ ನಿಮ್ಮ ಹಸ್ತಾವಲಂಬನವನ್ನು ಕೊಟ್ಟು ಏಕಮನಸ್ಸಿನಿಂದ ಈ ಕಾರ್ಯವನ್ನು ಸಾಂಗಗೊಳಿಸಿ ಕೀರ್ತಿಭಾಜನರಾಗಬೇಕೆಂದು ಪ್ರಾರ್ಥಿಸುತ್ತೇನೆ. *

೧೪. ನಾವು ಈಗ ಕೂಡಿಸಿರುವ ಪರಿಷತ್ತು ನಮ್ಮ ಸಾರ್ವಭೌಮರು, ನಿಷ್ಪಕ್ಷಪಾತಿಗಳು, ಉದಾರರು, ಆಗಿರುವ ಇಂಗ್ಲೀಷು ಚಕ್ರವರ್ತಿಗಳ ವಿದ್ಯಾವಿಷಯಿಕವಾದ ಸುಶಿಕ್ಷಣದ ಫಲಿತಾಂಶವಾಗಿದೆ. ಮತ್ತು ಅವರು ನಮ್ಮ ಸಮಾಜಕ್ಕೆ ಅತ್ಯಂತ ಹಿತವನ್ನುಂಟುಮಾಡಿಯೂ ಮಾಡುತ್ತಲು ಇರುವರು. ಅದುಕಾರಣ ನಾವು ರಾಜಭಕ್ತಿಯುಕ್ತರಾಗಿ ಪ್ರವರ್ತಿಸಿ ಅವರನ್ಯಾಯ ರಾಜ್ಯಪರಿಪಾಲನೆಯು ನಮ್ಮ ಭರತಖಂಡದಲ್ಲಿ ಚಿರಕಾಲವಿರುವಂತೆ ಮಾಡಬೇಕೆಂದು ನಾವೆಲ್ಲರು ಶ್ರೀ ಜಗದೀಶನನ್ನು ಕುರಿತು ಪ್ರಾರ್ಥಿಸತಕ್ಕದ್ದು. *

೧೫. ಪ್ರಿಯಬಾಂಧವರೇ ! ನನ್ನ ಭಾಷಣವನ್ನು ಸ್ವಸ್ಥಚಿತ್ತರಾಗಿ ಇಷ್ಟುಹೊತ್ತು ಆಲಿಸಿದುದಕ್ಕಾಗಿಯೂ, ಈ ಮಹಾಸಭೆಗೆ ನೀವೆಲ್ಲರು ಬಂದುದಕ್ಕಾಗಿಯೂ, ತಮ್ಮ

ಉಪಕಾರವನ್ನು ಪುನಃ ಪುನಃ ಸ್ಮರಿಸುತ್ತೇನೆ. ಇನ್ನುಮೇಲೆ ಮಹಾಸಭೆಯು ಅಧ್ಯಕ್ಷರ ನ್ನು ನಿಯಮಿಸಿಕೊಂಡು ಮುಂದಿನ ಕಾರ್ಯವನ್ನು ನೆರವೇರಿಸಬೇಕೆಂದು ಪ್ರಾರ್ಥಿಸಿ, ಮತ್ತು ನಮ್ಮಕಾರ್ಯದಲ್ಲಿ ಜಗತ್ಪಾಲಕನಾದ ಪರಶಿವನು ಯಶಸ್ಸನ್ನು ಕೊಡಲೆಂದು ಅತನನ್ನು ಏಕಮನಸ್ಸಿನಿಂದ ಬೇಡಿಕೊಂಡು ತಮ್ಮೆಲ್ಲರ ಅಪ್ಪಣೆಯನ್ನು ಪಡೆದು ನನ್ನ ಭಾಷಣಕ್ಕೆ ವಿರಾಮವನ್ನೀಯುತ್ತೇನೆ. ... ... ... *

ಅಲ್ಲಾಪುರ ಬಸವಪ್ಪ.
ಸತ್ಕಾರಕ ಸಂಘಾಧ್ಯಕ್ಷ
೫-ನೆಯ ವೀರಶೈವ ಮಹಾಸಭಾ

ಬಳ್ಳಾರಿ.
೨೭-೧೨-೧೯.

—(ಅಧ್ಯಕ್ಷರನ್ನು ಆರಿಸಿ ನಿಯಮಿಸಿದ್ದು.)—

ನಂತರ ಮಹಾಸಭೆಯು ನಿಯಮಗಳಿಗನುಸರಿಸಿ, ಶ್ರೀಮಂತ ರಾವುಸಾಹೇಬ್ ಮಲ್ಲಪ್ಪ, ಬಸಪ್ಪ, ಉರ್ಫ್ ಅಪ್ಪಾಸಾಹೇಬ್ ವಾರದ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿರುವದರಿಂದ (ಸ್ಟಾಂಡಿಗ್ ಕಮಿಟಿ ಛೇರ್ಮನ್)ರಾದ ರಾ॥ ಬ॥ ಮೆಣಸಿನಕಾಯಿ ಶಾಂತವೀರಪ್ಪ ಡೆ॥ ಕಲೆಕ್ಟರ್ ಧಾರವಾಡ ಇವರು ಅಧ್ಯಕ್ಷಪೀಠವನ್ನು ಅಲಂಕರಿಸುವದಾಗಿ ವಿನಂತಿಮಾಡಿಕೊಂಡರು. ಶ್ರೀಮಂತರು ಸಭಿಕರ ಮಹಾಕರಾಸ್ಫಾಲನ ವಾಗುತ್ತಿರಲು ತಮ್ಮ ಉನ್ನತಾಸನವನ್ನಲಂಕರಿಸಿದರು. ಕೂಡಲೇ ಸತ್ಕಾರಕಸಂಘದ ಅಧ್ಯಕ್ಷರು ಅವರನ್ನು ಪುಷ್ಪಮಾಲೆಯಿಂದಲಂಕರಿಸಿದರು. ಬಳಿಕ ಅಧ್ಯಕ್ಷರು ಎದ್ದು ನಿಂತು ಸಭೆಯು ನಿರ್ವಿಘ್ನವಾಗಿ ನಡೆಯಲೆಂಬುದಾಗಿ ಆಶೀರ್ವಾದ ಪತ್ರಗಳನ್ನು ಬರೆಯಿಸಿ, ತಮ್ಮಕಡೆಯಿಂದ ಪ್ರತಿನಿಧಿಗಳನ್ನು ಕಳುಹಿಸಿ ಸಂತೋಷವನ್ನು ಸೂಚಿಸಿರುವ ಶ್ರೀ ಶ್ರೀ ಸಂಸ್ಥಾನಗಳ ನಿರೂಪಗಳನ್ನು ಸಭೆಗೆ ಅನಿವಾರ್ಯವಾದ ಕಾರ್ಯಗಳಿಂದ ಬರಲಾಗದೆ ತಮ್ಮ ಸಹಾನುಭೂತಿಯನ್ನು ತಿಳುಹಿಸಿ ಬರೆದಿದ್ದ ರಾ॥ ಬ॥ ರುದ್ರಗೌಡ ಆರಟಾಳ, ಡೆ॥ ಕಲೆಕ್ಟರ್ ಬೆಳಗಾಂವಿ, ೧ನೇ ಕೌನ್ಸಿಲರ್ ಮೆ॥ ಪುಟ್ಟಣ್ಣಶೆಟ್ಟರು, ಮೆ. ಪಿ. ಮಹದೇವಯ್ಯನವರು, ಬಿ. ಏ. ಬಿ. ಎಲ್. ಮುನಸಿಫ್ ಸಿವಿಲ್‌ಸರ್ಜನ್ ಮೆ. ನಂಜಪ್ಪನವರೇ ಮೊದಲಾದ ಸಭ್ಯಗೃಹಸ್ಥರ ತಂತಿಯವಾರ್ತೆಗಳನ್ನು ಸಹ ಸಾಂಗವಾಗಿ ಓದಿ ಹೇಳುವದಕ್ಕೆ ಕಾಲವು ಸಾಲದುದರಿಂದ ಅವರುಗಳ ಹೆಸರುಗಳನ್ನು ಮಾತ್ರ ಹೇಳಿ ಸಭಿಕರನ್ನು ಸಂತೋಷಗೊಳಿಸಿ, ಮಹಾಶಯರೇ? ನಾವು ಮಹರಾಷ್ಟ್ರದೇಶೀಯರಾದುದರಿಂದ ನಮ್ಮ ಮಹರಾಷ್ಟ್ರಭಾಷಣದ ಭಾಷಾಂತರವನ್ನು ಕನ್ನಡದಲ್ಲಿ ಶ್ರೀ ಶಿವಮೂರ್ತಿಸ್ವಾಮಿ ಕಣಬುರ್ಗಿಮಠ ಬಿ. ಏ. ಇವರು ಓದುವರೆಂದು ಹೇಳಿ ಕುಳಿತುಕೊಂಡರು. ಶಿವಮೂರ್ತಿಗಳು ಅಧ್ಯಕ್ಷರ ಭಾಷಣವನ್ನು ಸುಶ್ರಾವ್ಯವಾಗಿ ಈ ಕೆಳಗೆ ಕಂಡಂತೆ ಓದಿ ಮುಗಿಸಿದರು. ... ... ... *

# ೫-ನೆಯ ಶ್ರೀಮದ್ವೀರಶೈವ ಮಹಾ ಸಭೆಯಲ್ಲಿ.

—(ಅಧ್ಯಕ್ಷರು ಮಾಡಿದ ಭಾಷಣವು.)—

ಸಸರ್ವಮಂಗಳಾಕಾಂತ ಶ್ರೇಯಸೇಭೂಯಸೇಸ್ತುನಃ।
ಯಸ್ಯಭಾಸಾತ್ರಯೋಭಾಸಾಂ ಭಾಸಯತ್ಯಖಿಲಂಜಗತ್ ॥

ಅಖಿಲ ಬ್ರಹ್ಮಾಂಡಪಾಲಕನಾದ ಮತ್ತೂ ಭಕ್ತವತ್ಸಲನಾದ ಶ್ರೀ ಶಿವಮೂರ್ತಿಗೆ ನಮಸ್ಕರಿಸಿ, ಆ ಮೂರ್ತಿಯ ಧ್ಯಾನವನ್ನು ಮಾಡಿ, ಈ ಮಹಾಸಭೆಯ ಮಂಗಲಕಾರ್ಯಕ್ಕೆ ಪೂರ್ಣ ಯಶಸ್ಸುಂಟಾಗಬೇಕೆಂದು ಅನನ್ಯಭಾವದಿಂದ ಆ ಮೂರ್ತಿಯ ಪ್ರಾರ್ಥನೆಯನ್ನು ಮಾಡಿ ನಾವು ನಮ್ಮ ಕಾರ್ಯಕ್ಕೆ ಪ್ರಾರಂಭಿಸುವ;— ... ... *

ಅತ್ಯಂತ ಪೂಜ್ಯರಾದ ಮಹಾಸ್ವಾಮಿಗಳೇ? ಮತ್ತೂ ಸಭ್ಯಗೃಹಸ್ಥರೇ!

ಯಾವುದೊಂದು ಕಾರ್ಯವೂ ಪರಮೇಶನ ಇಚ್ಛೆಯ ಹೊರತು ಈ ಜಗತ್ತಿನಲ್ಲಿ ಸಂಭವಿಸುವುದಿಲ್ಲ. ಈ ನಮ್ಮ ಮಹಾಸಭೆಯಾದರೂ ಅದೇರೀತಿಯಿಂದ ಈಶ್ವರೇಚ್ಛೆಗನುಸರಿಸಿಯೇ ಅಸ್ತಿತ್ವದಲ್ಲಿ ಬಂದಿರುತ್ತದೆ. ಈ ಮಹಾಸಭೆಯು ನಮ್ಮ ಸಮಾಜದ ಮುಖವಾಗಿದೆ. ಈ ಸಭೆಯು ನಮ್ಮ ಸಮಾಜದ ನಿಯಂತ್ರಿಯಾಗಿದೆ. ಈ ಸಭೆಯು ನಮ್ಮ ಸಮಾಜದ ಮಾರ್ಗದರ್ಶಕವಾಗಿದೆ. ಈ ಸಭೆಯು ನಮ್ಮಸಮಾಜದ ಮೂರ್ತಿಸ್ವರೂಪವಾಗಿದೆ ಮತ್ತು ಈ ಸಭಾಸಂದರ್ಶನವು ಯಾವತ್ತೂ ನಮ್ಮ ಸಮಾಜದ ಸಂದರ್ಶನವಾಗಿರುತ್ತದೆ. ಶ್ರೀ ಶಿವಸ್ಮರಣದಿಂದಲೂ, ಶಿವಪೂಜೆಯಿಂದಲೂ, ಮತ್ತೂ ಶಿವಭಕ್ತಿಯಿಂದಲೂ, ಅತ್ಯಂತ ಘನತೆಯನ್ನು ಹೊಂದಿದವರು, ಶಾರದೆಯ ಕೃಪಾಕಟಾಕ್ಷದಿಂದ ವಿದ್ಯೆಯುಳ್ಳವರು, ತಪಶ್ಚರ್ಯದಿಂದ ಅಧಿಕಾರಸಂಪನ್ನರಾದವರು, ಇಂಥ ಮಹಾತ್ಮರೆಲ್ಲರೂ ಸಭೆಗೆಬಂದಿರುವರು. ಇವರ ದರ್ಶನವೆಂದರೆ ಒಂದು ದೊಡ್ಡಸುಯೋಗವೇ ಸರಿ; ಇಂಥ ಸಭೆಯಸ್ಥಾನದಲ್ಲಿ ಅಧ್ಯಕ್ಷನಾಗಿ ನಿಂತು ಮಾತನಾಡುವುದು ಸುಲಭವಾದ ಕೆಲಸವಲ್ಲ. ಈ ಸಭೆಯ ಸ್ವಾಗತ ಕಮಿಟಿಯವರು ಈ ಸ್ಥಾನವನ್ನು ಸ್ವೀಕರಿಸುವ ಬಗ್ಗೆ ಯಾವಾಗ ನನ್ನನ್ನು ಕೇಳಿದರೋ ಆಗ್ಗೆ ಹಿಂದಿನ ನಾಲ್ಕು ಅಧಿವೇಶನಗಳ ಅಧ್ಯಕ್ಷರಯೋಗ್ಯತ ಮತ್ತೂ ಕಾರ್ಯದಮಹತ್ವ ಇವುಗಳಕಡೆಗೆ ನನ್ನ ಲಕ್ಷ್ಯವು ತಿರುಗಿ ಮನಸ್ಸು ಸಾಶಂಕವಾಗಲಾರಂಭಿಸಿತು. ಆದರೆ ಈ ಕೇಳುವಿಕೆಯನ್ನು ಸ

ಮಾಜದ ಆಜ್ಞೆಯೆಂದೇ ತಿಳಿದು ಅಂಗೀಕರಿಸಿದೆನು. ನನಗಿಂತಲೂ ವಿದ್ವತ್ತೆಯಿಂದಲೂ, ಯೋಗ್ಯತೆಯಿಂದಲೂ ಮಹನೀಯರಾದ ಅನೇಕ ಗೃಹಸ್ಥರು ಇರುತ್ತಿರಲಿಕ್ಕೆ ತಾವು ಈ ಆಜ್ಞೆಯನ್ನು ನನಗೇ ಮಾಡಿರುವುದು ನನ್ನ ಮೇಲಿನ ಅನುಗ್ರಹವೆಂದು ತಿಳಿಯುತ್ತೇನೆ. ಮತ್ತೂ ಈ ಭಾವನೆಯಿಂದಲೇ ನಾನು ತಮ್ಮ ಮುಂದೆ ಮಾತನಾಡಲಿಕ್ಕೆ ನಿಂತಿರುತ್ತೇನೆ ಈ ಕರ್ತವ್ಯವನ್ನು ನಾನು ಯಥಾಶಕ್ತಿಯಾಗಿ ಮಾಡುವೆನು. ಆದರೆ ಈ ಕರ್ತವ್ಯವನ್ನು ಮಾಡುವಾಗ್ಗೆ ನನ್ನ ಕಡೆಯಿಂದ ಏನಾದರೂ ನ್ಯೂನತೆಯುಂಟಾದರೆ ತಾವು ಅದರ ಬಗ್ಗೆ ಕ್ಷಮಿಸಬೇಕು. ... ... ... ... *

ಈ ಮಹಾಸಭೆಯ ಕಾರ್ಯವನ್ನು ಆರಂಭಿಸುವುದಕ್ಕಿಂತ ಮೊದಲು ಇತ್ತಿತ್ತಲಾಗಿ ಸಂಘಟಿಸಿದ ಮಹತ್ವವುಳ್ಳ ಎರಡುಸಂಗತಿಗಳವಿಷಯವಾಗಿ ಪ್ರಾಮುಖ್ಯದಿಂದ ಉಲ್ಲೇಖಿಸಿದ ಹೊರತು, ನಾನು ಮುಂದೆ ಸಾಗಲಾರೆನು. ಲೋಕಪ್ರಿಯರೂ, ಈಗ ಪ್ರಕಟವಾಗಿರುವ ನವೀನ ಕೌನ್ಸಿಲ್ ಸುಧಾರಣೆಯ ಉತ್ಪಾದಕರೂ ಆದ ನಮ್ಮ ನಾಮದಾರ ಗವರ್ನರ್‌ಜನರಲ್ ಇನ್ ಕೌನ್ಸಿಲ್ ಮತ್ತೂ ವೈಸರಾಯರೂ ಆದ ಹೆಚ್. ಇ. ಲಾರ್ಡ್ ಮಿಂಟೋಪ್ರಭುಗಳು, ಪ್ರಜಾಸ್ಥಿತಿಯನ್ನು ಪ್ರತ್ಯಕ್ಷತಃ ಅವಲೋಕಿಸುವುದರಸಲುವಾಗಿ ಪ್ರವಾಸಕ್ಕೆಹೊರಟಿರಲು ಅಹಮದಾ ಬಾದಿನಲ್ಲಿ ಅವರಮೇಲೆ ಬಂದ ಬಾಂಬಿನ ಗಂಡಾಂತರದ ಬಗ್ಗೆ ನನಗೆ ಅತ್ಯಂತ ದುಃಖವಾಗಿರುವುದು. ಈ ಕೃತ್ಯವನ್ನು ಮಾಡಿದ ಮಹಾದುಷ್ಟರ ವಿಷಯವಾಗಿ ಮನಃಪೂರ್ವಕವಾಗಿ ತಿರಸ್ಕರಿಸಿ, ಅವರನ್ನು ನಿಷೇಧಿಸುತ್ತೇನೆ. ಮತ್ತೂ ವೈಸರಾಯರ ಮೇಲೆ ಬಂದ ಗಂಡಾಂತರವು ಶ್ರೀಮತ್‌ಶಂಕರನ ಅನುಗ್ರಹದಿಂದ ದೂರವಾದಬಗ್ಗೆ ನಾನು ಅತ್ಯಾನಂದವನ್ನು ಪ್ರದರ್ಶನಗೈಯುತ್ತೇನೆ. ಅನಂತರದಲ್ಲಿ ಸ್ವಲ್ಪದಿವಸಗಳ ಕೆಳಗೆ ನಮ್ಮವೀರಶೈವ ಸಮಾಜದೊಳಗಿನ ಎಲ್ಲ ಆಬಾಲವೃದ್ಧರಿಗೆ ತಮ್ಮ ಸತ್ಕೃತ್ಯಗಳಿಂದ ವಿಶ್ರುತರಾದವರೂ ಜನ ಸಾಮಾನ್ಯವನ್ನು ಪ್ರೇಮದಿಂದ ಪಾಲಿಸುವವರೂ ಆದ ಮೆಹರ್ಬಾನ್ ಎ. ಎಂ. ಟಿ. ಜಾಕ್ಸನ್ ಸಾಹೇಬ ಎಂ. ಎ. ನಾಸಿಕಜಿಲ್ಲೆಯ ಕಲೆಕ್ಟರ್ ಇವರಕೊಲೆಯು ಪೂರ್ಣಭಯಂಕರ ರೀತಿಯಿಂದ ಆಗಿರುವುದು. ಇದರಿಂದ ನಮ್ಮೆಲ್ಲರ ಹೃದಯವು ಅತಿವ್ಯಾಕುಲವಾಗಿರುವುದು. ಈ ಉಭಯ ಕೃತ್ಯಗಳ ಬಗ್ಗೆ ನಮ್ಮ ಸರ್ವಸಮಾಜಕ್ಕೆ ಅತ್ಯಂತ ದುಃಖವಾಗಿದ್ದು ಅವರ ಹೃದಯದಲ್ಲಿ ಉಂಟಾದ ತಿರಸ್ಕಾರವನ್ನು ವ್ಯಕ್ತಪಡಿಸಲಿಕ್ಕೆ ನಾನು ಅಸಮರ್ಥನಿದ್ದೇನೆ. ದೇವರು ನಾಮದಾರ್ ಲಾರ್ಡ್ ಮಿಂಟೊ ಧೊರೆಗಳಿಗೆ ದೀರ್ಘಾಯುಷ್ಯವನ್ನೂ ಮೆಹರ್ಬಾನ್ ಜಾಕ್ಸನ್ ಸಾಹೇಬರ ಆತ್ಮಕ್ಕೆ ಶಾಂತಿಯನ್ನೂ ಅವರ ಕುಟುಂಬದವರಿಗೆ ದುಃಖವನ್ನು ಸಹನ ಮಾಡುವ ಶಕ್ತಿಯನ್ನೂ ಕೊಡಲಿ ಎಂದು ನಾನು ಪ್ರಾರ್ಥಿಸುತ್ತೇನೆ. ಇಂತಹ ದುರಾತ್ಮರು ಮಾಡುವ ಮತ್ತೂ ಮಾಡಿದ ಅತ್ಯಾಚಾರಗಳ ವಿಷಯದಲ್ಲಿ ನಾವೆಲ್ಲರೂ ನಿಷೇಧವನ್ನೂ, ತಿರಸ್ಕಾರವನ್ನೂ ಮಾಡುವುದು ನಮ್ಮ ಕರ್ತವ್ಯಕರ್ಮವಾಗಿರುವುದು. ಇಂತಹ ಕೃತ್ಯಗಳು

ಪುನರಪಿ ಆಗದಂತೆ ಕೈಲಾದಮಟ್ಟಿಗೆ ನಾವು ಪ್ರಯತ್ನಿಸಲೇಬೇಕು, ಇವರು ನಿಶ್ಚಯವಾಗಿ ನಮಗೆ ವೈರಿಗಳೇ ಎಂದು ನಾವೆಲ್ಲರೂ ತಿಳಿಯುತ್ತೇವೆ. ... ... *

## —(ಮಹಾಸಭೆಯ ಪ್ರಯೋಜನ ಮತ್ತು ಸ್ವರೂಪ.)—

೨. ವೀರಶೈವ ಸಮಾಜದ ಉನ್ನತಿಯು ಎಲ್ಲಮಾರ್ಗಗಳಿಂದಲೂ ಆಗುತ್ತಹೋಗಬೇಕೆಂಬುವ ಹೇತುವಿನಿಂದ ಈ ಮಹಾಸಭೆಯು ಸ್ಥಾಪಿಸಲ್ಪಟ್ಟಿತು. ಹಿಂದಿನ ನಾಲ್ಕು ವರ್ಷಗಳಲ್ಲಿ ಈ ಸಭೆಯೊಳಗೆ ನೆರವೇರಿರುವ ಕಾರ್ಯವು ಫಲನಿರೀಕ್ಷಣೆಯನ್ನು ಕುರಿತು, ನಿರಾಶೆಗೊಳಿಸುವಂತಾಗಿಲ್ಲ, ನಮ್ಮ ಸಮಾಜವು ದೇಶದ ಅನೇಕ ಭಾಗಗಳಲ್ಲಿ ಹರಡಿಕೊಂಡಿರುವುದರಿಂದ ಒಬ್ಬರೊಬ್ಬರ ಪರಿಚಯವು ಒಬ್ಬರಿಗೊಬ್ಬರಿಗಿರಲಿಲ್ಲ. ಈ ಸಭೆಯಿಂದ ಅಂಥ ಪರಿಚಯವು ಉಂಟಾಗಲವಕಾಶವಾಯಿತು. ನಮ್ಮ ನಮ್ಮೊಳಗೆ ಸಂಘಟನೆಯು ಹೆಚ್ಚಾಗಿ, ಪ್ರೇಮವು ಬೆಳೆಯುಹತ್ತಿತು. ಒಬ್ಬರಿಗೊಬ್ಬರಲ್ಲಿ ಬಂಧುತ್ವದ ಪ್ರೇಮವು ಅಂಕುರಿಸಲಾರಂಭಿಸಿತು, ಪ್ರತಿಯೊಬ್ಬರಿಗೂ ತಮ್ಮ ಕುಟುಂಬದ ಕೃತ್ಯವೇ ಅಲ್ಲದೆ ಸಮಾಜಕ್ಕಾಗಿಯೂ ಏನನ್ನಾದರೂ ಮಾಡಬೇಕಾದುದು ಅವಶ್ಯಕವೆಂಬ ಎಚ್ಚರಿಕೆಯುಂಟಾಯಿತು ಮತಸೇವೆಯನ್ನು ಮಾಡಬೇಕಾದುದು ತಮ್ಮಮೇಲೆ ಬಿದ್ದ ಭಾರವೆಂದು ಈಗ ತಿಳಿಯಹತ್ತಿತು, ಇಷ್ಟರಿಂದಲೇ ನಾವು ಮಾಡಬೇಕಾದ ಕೆಲಸವನ್ನು ಮಾಡಿ ಮುಗಿಸಿದಂತಾಗಲಿಲ್ಲ, ಅಥವಾ ಈ ಸಭೆಯ ಕಾರ್ಯವು ಪೂರೈಸಿದಂತಾಗಲಿಲ್ಲ, ಪ್ರತ್ಯಕ್ಷವಾಗಿ ಕಾರ್ಯಕ್ಕೆ ಆರಂಭವಾಯಿತೆಂದು ತಿಳಿಯಲಿಕ್ಕೆ ಇನ್ನೂ ಮಾರ್ಗವಿಲ್ಲ, ಮಹಾಸಭೆಯ ಮುಂದಣ ಕಾರ್ಯವು ಬಲು ದೊಡ್ಡದಿರುತ್ತದೆ. ಈ ಕಾರ್ಯದ ಹದಿಯುಮಾತ್ರ ಈಗ ಹಾಕಲ್ಪಟ್ಟಿದೆ ಎಂದು ಹೇಳಬಹುದು ನಮ್ಮ ಐಹಿಕೋನ್ನತಿಯು ಮತ್ತು ಪಾರಲೌಕಿಕೋನ್ನತಿಯು ಪರಿಪೂರ್ಣತೆಯೇ ಮಹಾಸಭೆಯ ಕಾರ್ಯದ ಪರಿಪೂರ್ಣತೆಯು; ಇದಾಗುವುದಕ್ಕೆ ನಮ್ಮಲ್ಲಿ ಪ್ರತಿಯೊಬ್ಬರೂ ಪ್ರಯತ್ನವನ್ನು ಮಾಡಬೇಕು. ತಮ್ಮ ತಮ್ಮ ಕರ್ತವ್ಯವನ್ನು ಪೂರ್ಣವನ್ನಾಗಿ ಮಾಡುವುದೇ ಈ ಸಿದ್ಧಿಯ ರಹಸ್ಯವಾಗಿದೆ, ಈ ವಿಷಯದಲ್ಲಿ ಮತ್ತೊಬ್ಬನು ಯಾವುದೊಂದು ಪ್ರಯತ್ನವನ್ನೂ ಮಾಡದಿರುವಾಗ ನಾನುಮಾತ್ರ ಏತಕ್ಕೆ ಮಾಡಬೇಕೆಂದು ಪ್ರಶ್ನೆಮಾಡುವುದು ಆತ್ಮವಂಚನೆಯು ಇತರರನ್ನು ನಿರ್ದೇಶಿಸದೆ ತನ್ನ ಕರ್ತವ್ಯವನ್ನು ತಾನು ಮಾಡಿ ಮುಗಿಸಿದರೆ ಸ್ವೋನ್ನತಿಯಾಗುವುದು. ಮಹಾಸಭೆಯ ಕಾರ್ಯವನ್ನು ಸಾಂಗಗೊಳಿಸುವುದೇ ಸ್ವೋನ್ನತಿಯ ಪರಿಪೂರ್ಣತೆಯಾಗಿರುವುದು. ವ್ಯಕ್ತಿಗಳಿಂದಲೇ ಸಮಾಜವಾಗುವುದು, ವ್ಯಕ್ತಿಯ ಉನ್ನತಿಯೂ ಸಮಾಜದ ಉನ್ನತಿಯೂ ಭಿನ್ನಭಿನ್ನವಾಗಿ ಅಥವಾ ಪರಸ್ಪರವಿರೋಧಿಗಳಾಗಿ ಇಲ್ಲ. ಸ್ವೋನ್ನತಿಯನ್ನು ಮಾಡದೆ, ಸಮಾಜದ ಉನ್ನತಿಯನ್ನು ಮಾಡುವುದು ಶಕ್ಯವಲ್ಲ. ಆದುದರಿಂದ ಎರಡನೆಯವರ ಕಡೆಗೆ ಲಕ್ಷ್ಯಕೊಡದೆ, ತಾನು ತನ್ನ ಕರ್ತವ್ಯವನ್ನು ಚೆನ್ನಾಗಿ

ತಿಳಿದು ಅದನ್ನು ಮಾಡುವ ವಿಷಯದಲ್ಲಿ ತತ್ಪರನಾಗಬೇಕು. ಈ ಕರ್ತವ್ಯದ ಜಾಗರೂಕತೆಯಾದರೂ ಇತ್ತಿತ್ತ ನಮ್ಮಲ್ಲಿ ಆಗಹತ್ತಿದೆ, ಇದು ಆನಂದಕರವಾದುದೇ ಸರಿ. ವಿಜಾಪೂರ ಜಿಲ್ಹೆಯೊಳಗಿನ ರಾ|| ರಾ|| ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಮತ್ತೂ ಶ್ರೀಮಂತ ದೇಸಾಯಿ ಆಲಮೇಲಕರ ಈ ಈರ್ವ ಗೃಹಸ್ಥರು ಹೋದವರ್ಷದಲ್ಲಿ ತಮ್ಮ ಕರ್ತ್ತವ್ಯವೆಂದು ತಿಳಿದು ಈ ಮಹಾಸಭೆಯ ಕಾರ್ಯವನ್ನು ಮಾಡಿದುದು ಕಂಡುಬರುತ್ತದೆ, ಆ ಜಿಲ್ಲೆಯಲ್ಲಿ ಕಂಡುಬಂದಿರುವ ಅವರ ಪ್ರಯತ್ನದ ಫಲವು ಅವರಿಗೆ ಭೂಷಣಕರವಾಗಿಯೂ, ನಮಗೆ ಅಭಿನಂದನೀಯವಾಗಿಯೂ ಇದೆ. ಒಬ್ಬನಿಂದಾದರೂ ಸ್ವಲ್ಪವೇ ಕಾರ್ಯವಾಗುತ್ತದೆಂಬುವ ಹಾಗಿಲ್ಲ. ನಮ್ಮ ವೀರಶೈವ ಬಂಧುಗಳಲ್ಲಿ ಕರ್ತವ್ಯ ಜಾಗರೂಕತೆಯು ಹೆಚ್ಚುತ್ತ ಹೋದಂತೆಯೇ ನಮ್ಮ ಉನ್ನತಿಯೂ ಹೆಚ್ಚುತ್ತ ಹೋಗುವುದು. ಅದರಂತೆಯೇ ನಾನಾಸ್ಥಲಗಳಲ್ಲಿಯ ಕಾರ್ಯಕಾರಿಮಂಡಳಿಯ ಪ್ರತಿಯೊಬ್ಬ ಸಭಾಸದನೂ ಈ ಪವಿತ್ರವಾದ ಕಾರ್ಯವನ್ನು ತಮ್ಮ ಮನೆಗೆಲಸವೆಂದು ತಿಳಿದು ಒಂದೇ ಭಾವದಿಂದಲೂ, ಉತ್ಸಾಹದಿಂದಲೂ, ಅದನ್ನು ಮಾಡಬೇಕು. ಈ ಮಹಾಸಭೆಯಲ್ಲಿ ನಿರ್ಣಯಿಸುವ ನಿರ್ಧಾರಗಳನ್ನು ಪ್ರಚುರಪಡಿಸಿ, ಅವುಗಳನ್ನು ಆಚರಣೆಯಲ್ಲಿ ತರಿಸುವುದಕ್ಕಾಗಿ ಬೇರೆ ಬೇರೆ ಸ್ಥಲಗಳಲ್ಲಿ ಉತ್ಸಾಹವುಳ್ಳ ಮತ್ತೂ ಸಂಬಳಗರಾದ ಉಪದೇಶಕರನ್ನು ಈ ಮಹಾಸಭೆಯವರು ನಿಯಮಿಸಿ ಕಳುಹಿಸಬೇಕು. ಈ ರೀತಿಯಿಂದ ಆಗುವಕಾರ್ಯದ ವರದಿಯನ್ನು ಪ್ರತಿಯೊಂದುಜಿಲ್ಲೆಯ ಕಾರ್ಯಕಾರಿಮಂಡಳಿಯವರೂ ಧಾರ್ವಾಡದ ಮುಖ್ಯ ಕಾರ್ಯಕಾರಿಮಂಡಳಿಯವರ ಕಡೆಗೆ ಪ್ರತಿವರ್ಷವೂ ಕಳುಹುತ್ತಿರಬೇಕು. ಮತ್ತೂ ಅವರು ಅದನ್ನು ಈ ಮಹಾಸಭೆಯ ಮುಂದಿಡಬೇಕು ಈ ರೀತಿ ವ್ಯವಸ್ಥೆಯಾದರೆ, ತಮ್ಮ ಕೆಲಸವು ಸಮಾಜದವರ ಕಣ್ಣೆದಿರಿಗೆ ಬಂದು ಮುಂದೆ ಕೆಲಸ ಮಾಡುವವರಿಗೆ ಉತ್ತೇಜನವಾದೀತು. ... ... *

ಮತ್ತೊಂದು ವಿಷಯವೇನೆಂದರೆ;—ಧರ್ಮಸಂಬಂಧವಾಗಿ ವಿಚಾರಮಾಡುವ ಮತ್ತೂ ಅದರಂತೆ ಜನರಕಡೆಯಿಂದ ಆಚರಣೆಯನ್ನು ಮಾಡಿಸುವ ಕೆಲಸವು ಧರ್ಮಗುರುಗಳದಾಗಿರುವುದರಿಂದ, ಧಾರ್ಮಿಕ ಸುಧಾರಣೆಯ ವಿಚಾರ ಮಾಡುವುದಕ್ಕಾಗಿ ಧರ್ಮಗುರುಗಳು ಪ್ರತಿವರ್ಷವೂ ಒಂದು ಸಭೆಯನ್ನು ಕೂಡಿಸಬೇಕೆಂದು ಬಹುಜನರ ಮತವುಂಟು. ಆದರೆ ಈ ದಿನದ ಈ ಮಹಾಸಭೆಗೆ ಧರ್ಮಗುರುಗಳ ಆಗಮನದಿಂದಲೇ ವಿಶೇಷ ಶೋಭೆಯಾಗಿರುವುದೆಂಬುದು ನಿರ್ವಿವಾದದ ಮಾತೇ ಸರಿ. ಎಲ್ಲ ವಿಷಯಗಳ ಸಾಂಗೋಪಾಂಗ ವಿಚಾರವನ್ನು ಮಾಡುವುದಕ್ಕೆ ಮಹಾಸಭೆಯ ಮೂರು ದಿವಸಗಳು ತೀರಸ್ವಲ್ಪವಾಗಿರುತ್ತವೆ. ಆದುದರಿಂದ ಈ ಸಭೆಯ ದಿವಸಗಳನ್ನು ತುಸುಹೆಚ್ಚಿಸಿ, ಆ ದಿವಸಗಳಲ್ಲಿ ಯೋಗ್ಯಧರ್ಮಾಧಿಕಾರಿಗಳ ಅಧ್ಯಕ್ಷತೆಯ ಕೆಳಗೆ ಧರ್ಮಗುರುಗಳ ಸ್ವತಂತ್ರ ಸಭೆಯನ್ನು ಕೂಡಿಸುತ್ತ ಹೋದರೆ, ಬಹಳ ಉತ್ತಮವಾಗುವುದು. ಮತ್ತೂ ಧಾರ್ಮಿಕ ಸುಧಾರಣೆಯಂಥ ಮಹತ್ತರವಾದ ಜವಾಬ್ದಾರಿ

ಯ ಕೆಲಸವು ನಮ್ಮ ಕಡೆಯಿಂದ ಪೂರ್ಣವಾಗುವುದು ಶಕ್ಯವಲ್ಲ. ಯಾಕೆಂದರೆ;—ಪ್ರಾಚೀನಕಾಲದಿಂದ ಧರ್ಮಗುರುಗಳೇ ಈ ವಿಷಯವಾಗಿ ವಿಚಾರವನ್ನೂ ಮತ್ತೂ ಪ್ರಸಾರವನ್ನೂ ಮಾಡುತ್ತ ಬಂದಿದ್ದಾರೆ. ಈಗಾದರೂ ಅವರೇ ಈ ಧಾರ್ಮಿಕ ಸುಧಾರಣೆಯ ಕೆಲಸವನ್ನು ಕೈಕೊಂಡರೆ, ಅವು ಬಹುತ್ವರೆಯಿಂದಲೂ, ಸುಲಭವಾಗಿಯೂ, ಪೂರ್ಣವಾಗುವುವು. ಧರ್ಮಗುರುಗಳ ಕಡೆಯಿಂದ ಈ ಮಹತ್ತರವಾದ ಕಾರ್ಯವು ಉತ್ತಮ ರೀತಿಯಿಂದ ಸಿದ್ಧಿಸುವ ಕಾರಣವೇನೆಂದರೆ;—ಅವರಮೇಲೆ ಜನರ ಒಂದುಪ್ರಕಾರವಾದ ಭಕ್ತಿಪುರಸ್ಸರವಾದ ಪ್ರೇಮವಿರುವುದು. ಆ ಪ್ರೇಮದಿಂದ ಜನರು ಅವರಿಗೆ ವಿಧೇಯರಾಗಿರುತ್ತಾರೆ. ಮತ್ತೂ ಸಮಾಜದಲ್ಲಿ ಅವರ ಗೌರವವಿದೆ. ನಮ್ಮ ಪೂರ್ವಜರು ಧಾರ್ಮಿಕ, ಮತ್ತೂ ಸಾಮಾಜಿಕ, ಸುಧಾರಣೆಯ ಸಲುವಾಗಿ ಮಾಡಿಟ್ಟ ವ್ಯವಸ್ಥೆಯು ಅತ್ಯಂತ ಪ್ರಶಸ್ತವಾಗಿರುತ್ತದೆ. ವೀರಶೈವರ ನಾಲ್ಕಾರು ಮನೆಗಳುಳ್ಳ ಊರಿನಲ್ಲಾದರೂ ಧರ್ಮಗುರುಗಳ ಮಠವು ಇದ್ದೇ ಇರುವುದು. ಇದೊಂದು ಮಾತಿನಿಂದಲೇ ನಮ್ಮ ಸಮಾಜವು ಪ್ರಾಚೀನಕಾಲದಲ್ಲಿ ಬಹು ಸುಧಾರಣೆಯಲ್ಲಿದ್ದಿತೆಂತಲೂ, ಮತ್ತೂ ಆ ವೇಳೆಯಲ್ಲಿ ಧಾರ್ಮಿಕ, ಸಾಮಾಜಿಕ, ಸುಧಾರಣೆಯ ಕಾರ್ಯವು ಧರ್ಮಗುರುಗಳ ಕಡೆಗೇ ಇದ್ದಿತೆಂತಲೂ ತಿಳಿದು ಬರುತ್ತದೆ. ಈ ನಮ್ಮ ಸಮಾಜವ್ಯವಸ್ಥೆಯನ್ನು ಕಂಡು, ದೊಡ್ಡದೊಡ್ಡ ಸುಧಾರಿಸಿದ ಜನರಾದರೂ ಆಶ್ಚರ್ಯಗೊಳ್ಳುವರು. ಆದರೆ ಶಿಕ್ಷಣದ ಅಭಾವದಿಂದಲೂ ಮತ್ತೂ ಅಜ್ಞಾನದಿಂದಲೂ ನಮ್ಮ ಧರ್ಮಗುರುಗಳು ಧಾರ್ಮಿಕ ಸಾಮಾಜಿಕ ಸುಧಾರಣೆಯ ಕಡೆಗೆ ಈ ವ್ಯವಸ್ಥೆಯ ಉಪಯೋಗವನ್ನು ಮಾಡದೆ ಇರುವುದರಿಂದ ನಮ್ಮಸಮಾಜವು ಪ್ರಸ್ತುತದ ನಿಕೃಷ್ಟಾವಸ್ಥೆಯಲ್ಲಿದೆ. ಧರ್ಮಗುರುಗಳು ಧಾರ್ಮಿಕ ಶಿಕ್ಷಣವನ್ನುಸಂಪಾದಿಸಿ ಪರಂಪರೆಯಿಂದ ನಡೆದುಬಂದಿರುವ ಧಾರ್ಮಿಕಸುಧಾರಣೆಯ ತಮ್ಮ ಪವಿತ್ರವಾದ ಕರ್ತವ್ಯವನ್ನು ಮಾಡಹತ್ತಿದರೆ, "ಸುಧಾರಣೆ ಸುಧಾರಣೆ" ಎಂದು ನಾವು ಬಾಯಿಂದ ಬಡಬಡಿಸುತ್ತಿರುವುದನ್ನು ಅವರು ಸ್ವಲ್ಪಕಾಲದಲ್ಲಿಯೇ ನಿಶ್ಚಯವಾಗಿ ಮಾಡಿ ತೋರಿಸುವರು. ಆದುದರಿಂದ ಧಾರ್ಮಿಕ ಮತ್ತೂ ಸಾಮಾಜಿಕ ಸುಧಾರಣೆಯ ಕಾರ್ಯವನ್ನು ಧರ್ಮಗುರುಗಳು ಪೂರ್ವದಂತೆ ತಮ್ಮಕೈಯಲ್ಲಿ ತೆಗೆದುಕೊಂಡು ನಮ್ಮ ಎಲ್ಲ ಸಮಾಜಕ್ಕೆ ಉಪಕಾರವನ್ನು ಮಾಡಬೇಕು. ... ... ... *

## —( ಧಾರ್ಮಿಕ ಶಿಕ್ಷಣ. )—

೩. ಧಾರ್ಮಿಕ, ಸಾಮಾಜಿಕ, ಸುಧಾರಣೆಯ, ಕಾರ್ಯವು ಧರ್ಮಗುರುಗಳ ಕಡೆಯಿಂದ ಹೇಗೆ ಉತ್ತಮವಾಗಿ ಆಗುವುದೋ ಹಾಗೆ ಎರಡನೆಯವರ ಕಡೆಯಿಂದ ಆಗದೆಂಬುವುದು ನಿರ್ವಿವಾದವಾದ ಮಾತಾಗಿದೆ. ನಮ್ಮ ಸಮಾಜದಲ್ಲಿ ಅವರನ್ನು ಪೂಜ್ಯರನ್ನಾಗಿ ಮನ್ನಿಸುವುದರಿಂದ ಅವರು ಧಾರ್ಮಿಕ ಶಿಕ್ಷಣವನ್ನು ಸಂಪಾದಿಸಿಯೇ ಇರಬೇಕು. ಗುರುಗಳು

ಜ್ಞಾನಹೀನರಾಗಿದ್ದರೆ ಅವರಕಡೆಯಿಂದ ಶಿಷ್ಯರಿಗೆ ಮುಕ್ತಿಯು ದೊರೆಯುವುದಿಲ್ಲ. ಈ ವಿಷಯವಾಗಿ ಸಿದ್ಧಾಂತ ಶಿಖಾಮಣಿಯಲ್ಲಿ ಕೆಳಗಿನ ವಾಕ್ಯವಿದೆ:— ... *

ಜ್ಞಾನಹೀನಂ ಗುರುಂಪ್ರಾಪ್ಯ ಕುತೋಮುಕ್ತಿಮವಾಪ್ನುಯಾತ್ ।
ಭಿನ್ನನೌಕಾಗತಸ್ಸಿಂಧೋರ್ಯಥಾಪಾರಂ ನ ಗಚ್ಛತಿ ॥

ಒಡೆದ ಹಡಗಿನಲ್ಲಿ ಕುಳಿತು ಹೊರಟವನು ಸಮುದ್ರವನ್ನು ಹೇಗೆದಾಂಟಿ ಹೋಗಲಾರನೋ ಅದರಂತೆ ಜ್ಞಾನಹೀನನಾದ ಗುರುವಿನ ಆಶ್ರಯದಿಂದ ಶಿಷ್ಯನು ಸಂಸಾರಸಾಗರವನ್ನು ದಾಂಟಿ ಮುಕ್ತಿಯನ್ನು ಹೊಂದುವುದು ಹೇಗೆ! ಸಮಾಜರೂಪ ಶರೀರದಲ್ಲಿ ಧರ್ಮವೇ ಆತ್ಮನು, ಆದುದರಿಂದ ಅದರ ವಿಷಯವಾಗಿ ವಿಶೇಷ ಶ್ರದ್ಧೆಯನ್ನು ವಹಿಸಬೇಕು. ಧರ್ಮಗ್ಲಾನಿಯು ಸಮಾಜದ ಅಸ್ವಸ್ಥತೆಯ ನಿದರ್ಶಕವಾಗಿದೆ. ಆದುದರಿಂದ ಸಮಾಜರೂಪಿ ದೇಹದ ಜೋಪಾನವನ್ನು ಮಾಡಿ, ಅದನ್ನು ವೃದ್ಧಿಗೊಳಿಸಬೇಕೆಂದು ಯಾರ ಇಚ್ಛೆ ಇರುತ್ತದೆಯೋ, ಅವರು ಈ ಧರ್ಮರೂಪಿ ಆತ್ಮದಕಡೆಗೆ ಯಾವರೀತಿಯಿಂದಲೂ ದುರ್ಲಕ್ಷಮಾಡಕೂಡದು. ಸಮಾಜದ ಕಲ್ಯಾಣವಾಗಲಿ, ಕೆಡಕಾಗಲಿ, ಸರ್ವಥಾ ಧರ್ಮದ ಅಧೀನವಾಗಿಯೇ ಇರುತ್ತದೆ. ನಮ್ಮ ಸಮಾಜವೆಂಬ ಹಡಗನ್ನು ಎತ್ತಕಡೆಗೆ ನಡೆಸಬೇಕೆಂಬುದನ್ನು ತೋರಿಸುವುದಕ್ಕೆ ಧರ್ಮವೆಂಬುವುದೇ ಧ್ರುವ ನಕ್ಷತ್ರವಾಗಿದೆ. ಈ ಧ್ರುವದ ಕಡೆಯ ಲಕ್ಷ್ಯವು ತಪ್ಪಿದರೆ, ಸಮಾಜದ ಸ್ಥಿತಿಯು ಕಂಡಕಡೆಗೆ ಹರಿದ ಹಡಗಿನಂತೆ ಅನಿಷ್ಟಕಾರಕವಾಗುವುದು. ಆದುದರಿಂದ ಧರ್ಮಶಾಸ್ತ್ರಗಳಲ್ಲಿ ನಿಷ್ಣಾತರಾದ ಧರ್ಮಗುರುಗಳನ್ನು ಅಣಿಮಾಡುವುದು ನಮ್ಮ ಮೊದಲನೆಯ ಕರ್ತವ್ಯವಾಗಿದೆ. ಧಾರ್ಮಿಕ ಶಿಕ್ಷಣವಿಲ್ಲದಿದ್ದರೆ ಲೌಕಿಕೋನ್ನತಿಯಾಗುವುದೂ ಅಶಕ್ಯವಾಗಿದೆ. ಧಾರ್ಮಿಕೋನ್ನತಿಯಾದರೊ ದೂರವೇ ಉಳಿಯಿತು. ಧರ್ಮಗುರುಗಳಿಗೆ ಧಾರ್ಮಿಕ ಶಿಕ್ಷಣವು ಸಿಕ್ಕದಿದ್ದರೆ ಲೌಕಿಕ ಶಿಕ್ಷಣದ ಶಾಲೆಗಳಲ್ಲಿ ಕಲಿತ ಅವರ ಧರ್ಮಶೂನ್ಯ ಶಿಷ್ಯರಿಗೆ ಧಾರ್ಮಿಕ ಶಿಕ್ಷಣವನ್ನು ಕೊಡುವುದು ಅವರಿಂದಾಗದು. ಈ ಸ್ಥಿತಿ ಬರಬಾರದೆಂಬುದಕ್ಕಾಗಿಯೇ ಮೊದಲು ಧರ್ಮಗುರುಗಳಿಗೆ ಧಾರ್ಮಿಕಶಿಕ್ಷಣವನ್ನು ಕೊಡುವುದಾವಶ್ಯಕವಾಗಿದೆ. ಬಾಲ್ಯದಲ್ಲಿ ವಿದ್ಯಾರ್ಥಿಗಳ ಕೋಮಲವಾದ ಅಂತಃಕರಣದಲ್ಲಿ ಸದಾಚಾರ, ಸ್ವಾಭಿಮಾನ ಮತ್ತೂ ಸ್ವಧರ್ಮನಿಷ್ಠೆ ಇವುಗಳ ಬೀಜಾರೋಪಣವಾದರೆ, ಅವರ ವರ್ತನೆಯಮೇಲೆ ಒಳ್ಳೆಯ ಪರಿಣಾಮವಾಗುವುದು. ಸ್ವಧರ್ಮದ ಅಭಿಮಾನವೂ, ಸ್ವದೇಶದ ಉತ್ಸಾಹವೂ, ಮತ್ತೂ ಸ್ವಭಾಷಾವಿಷಯಕ ಪ್ರೇಮವೂ, ಪ್ರತಿಯೊಬ್ಬರ ಮನಸ್ಸಿನಲ್ಲಿ ಧರ್ಮಶಿಕ್ಷಣದಿಂದಲೇ ಪ್ರತಿಬಿಂಬಿಸುತ್ತವೆ. ಸ್ವಧರ್ಮದಲ್ಲಿ ಶ್ರದ್ಧೆಯಿದ್ದರೆ ಮನುಷ್ಯನ ಶರೀರದಲ್ಲಿ ಸಾಮರ್ಥ್ಯವುಂಟಾಗುತ್ತದೆ. ಮನುಷ್ಯನು ಧರ್ಮನಿಷ್ಠನಾಗಿದ್ದರೆ, ಪ್ರಸಂಗದಲ್ಲಿ ಅವನು ಹಿಂಜರಿಯುವುದಿಲ್ಲ. ಧರ್ಮವೇ ಸಮಾಜದ ಉನ್ನತಿಯ ತಳಹದಿಯಾಗಿರು

ತ್ತದೆ. ಸಮಾಜದ ಜನರು ಸತ್ಯನಿಷ್ಠರೂ, ಪರೋಪಕಾರಿಗಳೂ, ಸದಾಚಾರಿಗಳೂ, ಆಗುವುದಕ್ಕೆ ಧಾರ್ಮಿಕ ಶಿಕ್ಷಣವೇ ಅತ್ಯವಶ್ಯಕವಾಗಿದೆ. ಯಾರ ಅಂತಃಕರಣವು ಉಜ್ವಲವಾದ ಮತ್ತೂ ಉದಾತ್ತವಾದ ಧಾರ್ಮಿಕತತ್ವಗಳಿಂದ ಶುದ್ಧವಾಗಿರುವುದಿಲ್ಲವೊ, ಅವರಿಗೆ ಲೌಕಿಕ ಶಿಕ್ಷಣವಾದರೂ ಬಹುಶಃ ಫಲದ್ರೂಪವಾಗುವುದಿಲ್ಲ. ನಾವು ಪರಂಪರೆಯಾಗಿ ಧರ್ಮಶಿಕ್ಷಣ ಮಾಡುವುದನ್ನು ಬಿಟ್ಟುಬಿಟ್ಟರೆ, ಇದು ನಮ್ಮದು ಎಂದು ಅಭಿಮಾನಪಡತಕ್ಕ ವಸ್ತುವಾವುದೂ ನಮಗೆ ಉಳಿಯುವುದೇ ಇಲ್ಲ. ಆದುದರಿಂದ ಧರ್ಮಗುರುಗಳು ಧರ್ಮಶಿಕ್ಷಣವನ್ನು ಅವಶ್ಯವಾಗಿ ಸಂಪಾದಿಸಿ, ತಮ್ಮ ತಮ್ಮ ಸಂಸ್ಥಾನದೊಳಗಿನ ಶಿಷ್ಯಶಾಖೆಯನ್ನು ಸುಧಾರಿಸುವ ಯತ್ನವನ್ನು ಮಾಡಬೇಕು. ಧರ್ಮಗುರುಗಳಿಗೆ ಶಿಕ್ಷಣವು ದೊರೆಯಬೇಕೆಂದು ಬಾದಾಮಿ ಹತ್ತಿರವಿರುವ ಮಹಾಕೂಟದಲ್ಲಿ ಶ್ರೀ ಶಿವಯೋಗಮಂದಿರವು ಸ್ಥಾಪಿಸಲ್ಪಟ್ಟದೆ. ಶ್ರೀ ಹಾನಗಲ್ಲು ಕುಮಾರ ಮಹಾಸ್ವಾಮಿಯವರು ಅರ್ಥಸಂಚಯವನ್ನು ಮಾಡಿ ಈ ಮಹಾಕಾರ್ಯದ ಆರಂಭ ಮಹೋತ್ಸವವನ್ನು ನೆರವೇರಿಸಿರುವರು. ಇದರ ಸಲುವಾಗಿ ಎಲ್ಲಾ ಸಮಾಜವೂ ಅವರ ವಿಷಯದಲ್ಲಿ ಅತ್ಯಂತ ಋಣಿಯಾಗಿದೆ. ಈ ಶಿವಯೋಗ ಮಂದಿರದಲ್ಲಿ ಧಾರ್ಮಿಕ ಶಿಕ್ಷಣವನ್ನು ಸಂಪಾದಿಸಿ, ಉತ್ತೀರ್ಣರಾದವರಿಗೆ ಧರ್ಮಾಧಿಕಾರಿಯೆಂಬ ಬಹುಮಾನದ ಪದವಿಯು ಕೊಡಲ್ಪಡಬೇಕು. ಇವರಿಗೇ ಸಂಸ್ಥಾನಗಳಲ್ಲಿನ ಗುರುಪರಂಪರೆಯ ಅಧಿಕಾರವಿರಬೇಕು. ಧರ್ಮಗುರುಗಳಿಗೆ ಧರ್ಮಶಿಕ್ಷಣವು ದೊರೆದಿದ್ದರೆ, ಧರ್ಮತತ್ವಗಳ ಬಗ್ಗೆ ಪ್ರಸ್ತುತದಲ್ಲಿ ಉಂಟಾಗಿರುವಂತಹ ಅವಸ್ಥೆಯು ದೂರವಾಗುವುದು. ಧರ್ಮಗ್ರಂಥಗಳು ಯಾವಭಾಷೆಯಲ್ಲಿರುವುವೊ ಆ ಭಾಷೆಯಲ್ಲಿಯ ವ್ಯಾಕರಣ ಮತ್ತೂ ಸಾಹಿತ್ಯ ಇವುಗಳ ಜ್ಞಾನವನ್ನು ಧರ್ಮಗುರುಗಳು ಅವಶ್ಯವಾಗಿ ಸಂಪಾದಿಸಬೇಕು. ಮತ್ತೂ ಇದುವರೆಗೂ ದೊರೆಯದಿರುವ ಧರ್ಮಗ್ರಂಥಗಳ ಶೋಧವನ್ನು ಮಾಡಿ, ಅವನ್ನು ಪ್ರಚಾರಪಡಿಸಬೇಕು. ಹೀಗಾದರೆ ಎಲ್ಲರಿಗೂ ಧಾರ್ಮಿಕಜ್ಞಾನ ಉಂಟಾಗುವುದು. ... ... *

## —( ವೀರಶೈವ ಧರ್ಮದ ಪ್ರಾಚೀನತ್ವವು. )—

೪. ವೀರಶೈವ ಮತವು ಕಲಚೂರಿ ವಂಶದ ಬಿಜ್ಜಲರಾಜನ ವೇಳೆಯಲ್ಲಿ, ಅವನ ಮಂತ್ರಿಗಳಾದ ಶ್ರೀ ಬಸವೇಶದೇವರಿಂದ ಸ್ಥಾಪಿಸಲ್ಪಟ್ಟತೆಂದು ಸಾಧಾರಣವಾಗಿ ನಮ್ಮ ಮತದಲ್ಲಿನ ಕೆಲವರೂ, ಪರಮತಸ್ಥರೂ ಸಹ ತಿಳಿದುಕೊಂಡಿದ್ದಾರೆ. ಆದರೆ ವಸ್ತುಸ್ಥಿತಿಯು ಹೀಗಿಲ್ಲ. ಶ್ರೀ ಬಸವೇಶನಿಗಿಂತ ಪೂರ್ವದಲ್ಲಿ ಸಾವಿರಾರು ವರ್ಷಗಳಿಂದ ಈ ಭರತಖಂಡದಲ್ಲಿ ನಮ್ಮ ಈ ವೀರಶೈವಮತವು ಊರ್ಜಿತವಾಗಿದ್ದಿತೆಂಬುವುದು ಈ ಮತದ ಅನೇಕ ಪ್ರಾಚೀನಗ್ರಂಥಗಳಿಂದಲೂ, ಅನ್ಯಗ್ರಂಥಗಳಿಂದಲೂ, ಕಂಡುಬರುತ್ತದೆ. ಬಸವೇಶ್ವರರು ಈ ಮತದ ಸಂಸ್ಥಾಪಕರಾಗಿರದೆ ಅವರಿಗಿಂತ ಸಾವಿರಾರು ವರ್ಷಕ್ಕೆ ಹಿಂದಣವರಾದ ಶ್ರೀ ರೇಣುಕ

ದ್ಧಾರುಕ, ಗಜಕರ್ಣ, ಘಂಟಾಕರ್ಣ, ವಿಶ್ವಕರ್ಣ ಮೊದಲಾದ ಆಚಾರ್ಯರು ಮತಸ್ಥಾಪಕರಾಗಿರುವರು. ಶ್ರೀರೇಣುಕಾಚಾರ್ಯರ ಸಂಬಂಧವಾದ ವಿಶೇಷಸಂಗತಿಗಳು ಸಿದ್ಧಾಂತಶಿಖಾಮಣಿ, ಚತುರಾಚಾರ್ಯ ಪುರಾಣ, ಮೊದಲಾದ ಗ್ರಂಥಗಳಲ್ಲಿ ದೊರೆಯುವುವು. ಅವುಗಳಲ್ಲಿ ಶ್ರೀ ರೇಣುಕಾಚಾರ್ಯರು ಮಹಾ ಸಿದ್ಧಪುರುಷರಾಗಿದ್ದರೆಂಬುದೂ, ಅವರು ಶ್ರೀರಾಮನಕಾಲದಲ್ಲಿ ಪ್ರಸಿದ್ಧರಾದ ಅಗಸ್ತ್ಯಋಷಿಗಳಿಗೆ ವೀರಶೈವ ಸಿದ್ಧಾಂತವನ್ನು ಬೋಧಿಸಿದರೆಂಬುದೂ, ಲಂಕಾಪತಿಯಾದ ವಿಭೀಷಣನ ಇಷ್ಟಾನುಸಾರ ಲಿಂಗಸ್ಥಾಪನೆಮಾಡುವುದರಲ್ಲಿ ಆಚಾರ್ಯರಾಗಿದ್ದರೆಂಬುದೂ ಸಹ ಸ್ಪಷ್ಟವಾಗಿರುತ್ತದೆ. ಇದರಮೇಲಿಂದ ಈ ರೇಣುಕಾಚಾರ್ಯರು ಅಗಸ್ತ್ಯಾದಿ ಮಹರ್ಷಿಗಳ ಸಮಕಾಲೀನರೆಂಬುವುದು ಕಂಡುಬರುತ್ತದೆ. ವೀರಶೈವಮತದಲ್ಲಿ ಪ್ರಸಿದ್ಧರಾಗಿರುವ ಶ್ರೀನೀಲಕಂಠ ಶಿವಾಚಾರ್ಯರು, ಶ್ರೀ ಶಂಕರಾಚಾರ್ಯರಿಗಿಂತ ಪೂರ್ವವೇ ಪ್ರಸಿದ್ಧರಾಗಿದ್ದು ಅವರಿಗೂ ಶ್ರೀ ಶಂಕರಾಚಾರ್ಯರಿಗೂ ದರ್ಶನಭಾಷಣಗಳು ನಡೆದಿದ್ದವೆಂಬುದು ಶಂಕರವಿಜಯದಲ್ಲಿ ವರ್ಣಿತವಾಗಿದೆ. ಇದಲ್ಲದೆ ಮೃಗೇಂದ್ರಸರ್ವಜ್ಞ, ಸೋಮಶಂಭು, ಅಘೋರಶಿವಾಚಾರ್ಯ, ರಾಮಾರಾಧ್ಯ, ಶ್ರೀ ಕಂಠಾಚಾರ್ಯ, ಲೋಕೇಶಾರಾಧ್ಯ ಇವರೇ ಮೊದಲಾದ ಅನೇಕ ಗ್ರಂಥಕಾರರು ನಮ್ಮಮತದಲ್ಲಿ ಪ್ರಸಿದ್ಧರಾಗಿ ಹೋದರು. ಇವರಲ್ಲಿಯ ಅನೇಕರು ಶಂಕರಾಚಾರ್ಯರಿಗಿಂತ ಪ್ರಾಚೀನರಾಗಿರುವರು. ಅದರಂತೆ ಈಮತದಲ್ಲಿ ಆಗಿಹೋದ ಹಲಾಯುಧ, ಸತ್ಯೇಂದ್ರಚೋಳ, ಕರಿಕಾಲಚೋಳ ಮುಂತಾದ ಅನೇಕಪ್ರಾಚೀನರಾಜರು ಪ್ರಸಿದ್ಧರಾಗಿದ್ದಾರೆ. ಈ ಪ್ರಕಾರವಾಗಿ ಈ ಮತದ ಆಚಾರ್ಯರು, ಕವಿಗಳು, ಗ್ರಂಥಕರ್ತರು, ಮತ್ತೂ ರಾಜರು, ಇವರ ಪರಂಪರೆಯು ಬಹು ಪ್ರಾಚೀನಕಾಲದಿಂದ ನಡೆದುಬಂದಿರುವುದೆಂಬುದು ಸರ್ವರಿಗೂ ಕಂಡುಬಂದಿರುವುದು. ಈ ವಿಷಯವಾಗಿ ನಮಗೆ ದೊರೆದಿರುವ ಆಧಾರಗಳನ್ನೆಲ್ಲಾ ಸವಿಸ್ತಾರವಾಗಿ ಹೇಳುವುದು ಇಲ್ಲಿ ಶಕ್ಯವಾಗಿಲ್ಲ. ಅದು ಸ್ವತಂತ್ರವಾಗಿಯೇ ಯಥಾಕಾಲದಲ್ಲಿ ಪ್ರಸಿದ್ಧಿಸಲ್ಪಡುವುದು. ಈ ಪ್ರಕಾರದ ನಮ್ಮ ಪರಂಪರೆಯನ್ನು ತಿಳಿದುಕೊಂಡು ಮತ್ತೂ ನಮ್ಮ ಧರ್ಮದೊಳಗಿನ ತತ್ವಗಳಂತೆ ನಡೆದು ನಾವು ನಮ್ಮಲ್ಲಿ ತೇಜವನ್ನು ಉಂಟುಮಾಡಲು ಪ್ರಯತ್ನಿಸಬೇಕು. ಹೀಗೆ ಮಾಡಿದರೆ ನಮ್ಮ ವಿಷಯದಲ್ಲಿ ವಿಪರೀತ ಭಾವನೆಯು ಯಾರಿಗೂ ಆಗಲಾರದು. ... ... *

## —(ಶಿಕ್ಷಣದ ಅವಶ್ಯಕತೆ.)—

೫. ಶಿಕ್ಷಣವು ಬೇಕೆಂದು ಸುಮ್ಮನೆ ಹಂಬಲಿಸಿದರೆ, ಅದು ಸಿಕ್ಕುವುದಿಲ್ಲ. ತಕ್ಕ ಯತ್ನವನ್ನು ಮಾಡಬೇಕು. ಸಮಾಜವನ್ನು ಸುಶಿಕ್ಷಿತವನ್ನಾಗಿ ಮಾಡುವ ಭಾರವು ಈ ಮಹಾಸಭೆಯ ಮೇಲಿರುವುದು. ಸುಶಿಕ್ಷಿತವನ್ನಾಗಿ ಹೇಗೆ ಮಾಡಬೇಕೆಂಬ ಪ್ರಶ್ನವನ್ನು ಕೇಳುವುದರಿಂದಲೇ ತನ್ನ ಭಾರವನ್ನು ಅದು ಕಳೆದುಕೊಳ್ಳುವುದಿಲ್ಲ. ಮಾಡಿ ತೋರಿಸುವುದರಿಂದಲೇ ಅದನ್ನು ನಿರ್ವಹಿಸಿದಂತಾಗುವುದು. ಶಿಕ್ಷಣಪ್ರಸಾರವನ್ನು ಮಾಡುವುದಕ್ಕಾಗಿ

ವೀರಶೈವರ ಸಂಖ್ಯೆಯು ವಿಶೇಷವಾಗಿರುವ ಸ್ಥಲಗಳಿಗೆ ಈ ಮಹಾಸಭೆಯು ದೆಸೆಯಿಂದ ಒಬ್ಬೊಬ್ಬ ಉಪನ್ಯಾಸಕನು ಹೋಗಿ ಮುಷ್ಟಿಫಂಡು, ಧಾನ್ಯದಫಂಡು, ವಾಚನಾಲಯು, ಮತ್ತೂ ವೈದಿಕಶಾಲಾ ಇವುಗಳನ್ನು ಸ್ಥಾಪಿಸಬೇಕು. ಪಾಶ್ಚಿಮಾತ್ಯ ಶಿಕ್ಷಣವನ್ನು ಸಂಪಾದಿಸಲಿಚ್ಛಿಸುವ ಅನಾಥವಿದ್ಯಾರ್ಥಿಗಳಿಗೆ ಮುಷ್ಟಿಫಂಡಿನಿಂದ ಸಹಾಯವನ್ನು ಮಾಡಬೇಕು. ಫಂಡು ಮೊದಲಾದವುಗಳ ಸ್ಥಾಪನೆಗಾಗಿ ಉತ್ತಮರಾದ ಉಪನ್ಯಾಸಕರನ್ನು ಪದೇಪದೆ ನಿಯಮಿಸಿ ಕಳುಹಬೇಕು. ಅವರ ಉಪಜೀವನದವ್ಯವಸ್ಥೆಯನ್ನು ಈ ಮಹಾಸಭೆಯವರು ಮಾಡಬೇಕು. ಸುಮಾರು ೬೫ ವರ್ಷಗಳ ಪೂರ್ವದಲ್ಲಿ ಧಾರ್ವಾಡದ ಕಡೆಗೆ ವಿದ್ವಾಂಸರಾದ ಮತ್ತೂ ಸಮಾಜಹಿತೈಷಿಗಳಾದ ಕೆಲವರು ಶಿಕ್ಷಣದಸಲುವಾಗಿ ಫಂಡನ್ನು ಸ್ಥಾಪನೆಮಾಡಿರುವುದರಿಂದ ಅನೇಕ ವಿದ್ಯಾರ್ಥಿಗಳು ವಿದ್ಯಾಸಂಪನ್ನರಾಗಿರುವರು. ಅವರಲ್ಲಿ ಕೆಲವರ ದೆಸೆಯಿಂದ ಸಮಾಜದ ಹಿತವಾಗುವಂತೆಯೇ ಉಳಿದವರ ಕಡೆಯಿಂದಲೂ ಆಗುವದೆಂದು ನಾನು ತುಂಬಾ ನಂಬಿರುವೆನು. ಸಮಾಜದ ಕೆಲಸವನ್ನು ಮಾಡುವಪ್ರಶ್ನೆಯು ಹೊರಟಾಗ್ಗೆ ಸುಶಿಕ್ಷಿತ ಜನರು ಕಾರ್ಯಮಾಡಲಿಕ್ಕೆ ಮುಂದಾಗದಿದ್ದರೆ ಸಮಾಜಕ್ಕೆ ಅವರಿಂದುಂಟಾಗುವ ಪ್ರಯೋಜನವೇನು? ಸುಶಿಕ್ಷಿತರಲ್ಲಿ ಅನೇಕರು ಸಮಾಜಹಿತವನ್ನು ಕೈಕೊಂಡರೇನೆಯೇ, ನಮ್ಮ ಸಮಾಜದ ಸುಧಾರಣೆಯಕಾಲವು ಸಮೀಪಿಸುವುದು. ಸುಶಿಕ್ಷಿತಜನರು ಸಮಾಜಸುಧಾರಣೆಯನ್ನು ಮಾಡದಿದ್ದರೆ ಮತ್ತಾರು ಮಾಡಬೇಕು? ವಿದ್ಯಾಸಂಪನ್ನ ಧನಸಂಪನ್ನರಾದ ಜನರ ಕಡೆಗೆ ಪರಮೇಶ್ವರನು ಈ ಕೆಲಸವನ್ನು ಕೊಟ್ಟಿರುವನೆಂಬುದನ್ನು ಅವರು ಮರೆಯಬಾರದು. „ ಈಶ್ವರಃ ಸರ್ವಭೂತಾನಾಂ „ ಈ ಧರ್ಮತತ್ವವನ್ನು ನೋಡಲಾಗಿ ಸಮಾಜಸೇವೆಯೆಂಬುವುದು ಈಶ್ವರಸೇವೆಯೇ ಆಗಿರುತ್ತದೆ. ಈ ಸೇವೆಯನ್ನು ಮಾಡುವುದರಿಂದಲೇ ನಿಜವಾಗಿಯೂ ಪುಣ್ಯವುಂಟು. ನಮ್ಮ ಸುಶಿಕ್ಷಿತರಾದ ಮತ್ತೂ ಧನಿಕರಾದ ಬಾಂಧವರು ಈ ಸಮಾಜಸೇವೆಯನ್ನು ಮರೆಯದೆ ಮಾಡಬೇಕೆಂದು ಅವರಿಗೆ ನನ್ನ ಸವಿನಯ ಸೂಚನೆಯದೆ. ಸಮಾಜಕ್ಕೆ ಶಿಕ್ಷಣವನ್ನು ಕೊಡುವುದರಿಂದಲೇ ಸುಶಿಕ್ಷಿತರ ವಿದ್ಯೆಗೂ, ಧನಿಕರಪ್ರವ್ಯಕ್ಕೂ ಸಾರ್ಥಕ್ಯವುಂಟಾಗುವುದು. ಸುಶಿಕ್ಷಿತರಲ್ಲಿ ಪ್ರತಿಯೊಬ್ಬರೂ ೫ಜನ ಅಶಿಕ್ಷಿತರನ್ನು ಬುದ್ಧಿವಂತರನ್ನಾಗಿ ಮಾಡಲು ಪ್ರಯತ್ನಿಸಿದರೆ ಎಷ್ಟೋ ನಮ್ಮಬಂಧುಗಳಿಗೆ ಓದುಬರಹವು ಬರುವುದು. ಇಂಥ ಸಂಕಲ್ಪವಿದ್ದರೆ ಶಿಕ್ಷಣದಕಾರ್ಯವು ಶೀಘ್ರವಾಗಿ ನೆರವೇರುವುದು. ನಮ್ಮ ಸಮಾಜದಲ್ಲಿ ನೂರಕ್ಕೊಬ್ಬನಾದರೂ ಶ್ರೀಮಂತನಿಲ್ಲದಕಾರಣ ಶ್ರೀಮಂತರಹುಡುಗರಿಗೆ ಬಹುಶಃ ಬಡವರ ಅನಾಥರಮಕ್ಕಳ ಸಹವಾಸವು ಹತ್ತಿ ಅವರು ಪಂಗಾಳಿ (ಉನಾಡ) ಗಳಾಗುತ್ತಾರೆ. ಆದುದರಿಂದ ಶ್ರೀಮಂತರ ಹುಡುಗರ ಪಾಲಕರು ಜತೆಯ ಹುಡುಗರ ಕೂಡಲೇ ಅವರಿಗೆ ಶಿಕ್ಷಣವನ್ನು ಕೊಡುವ ವ್ಯವಸ್ಥೆಯನ್ನು ಮಾಡಬೇಕು. ಹೀಗೆ ಮಾಡಿದರೆ ತಮ್ಮ ಮಕ್ಕಳು ಸುಶಿಕ್ಷಿತರಾಗಿ ಸನ್ಮಾರ್ಗಕ್ಕೆ ಹತ್ತುವರು. ಹೀಗೆ ಮಾಡದೆ ಒಬ್ಬ

ನಿಗೇ ಶಿಕ್ಷಣವನ್ನು ಕೊಡುವ ಯತ್ನಮಾಡಿದರೆ, ಜತೆಯ ಹುಡುಗರ ಕೂಡ ಅವರು ಕೆಟ್ಟುಹೋಗುವರು. ಯಾಕೆಂದರೆ—ಅವರಲ್ಲಿಯ ಅನೇಕ ಹುಡುಗರು ಶಾಲೆಗೆ ಹೋಗುವುದನ್ನು ತಪ್ಪಿಸಿಬಿಡುತ್ತಾರೆ. ಆದುದರಿಂದ ಶ್ರೀಮಂತರು ಮೇಲೆ ಹೇಳಿದ ವ್ಯವಸ್ಥೆಯನ್ನು ಮಾಡಿದರೆ, ತಮ್ಮಮಕ್ಕಳಿಗೆ ಶಿಕ್ಷಣವುದೊರೆದು ಸ್ವಾರ್ಥವು ಸಾಧಿಸುತ್ತದೆ. ಇದಲ್ಲದೆ ಅನಾಥಾಸದಿಂದ ಜ್ಞಾನದಾನದ ಪುಣ್ಯವೂ ಸಿಕ್ಕುತ್ತದೆ. ... ... *

ಶಿಕ್ಷಣಕ್ಕೆ ಎರಡನೆಯ ಉಪಾಯವೆಂದರೆ—ದಾನಧರ್ಮದ ರೀತಿಯು. ನಮ್ಮಲ್ಲಿ ಧರ್ಮಾಧಿಕಾರಿ ಜನರು ತಾವು ಶಿಕ್ಷಣವನ್ನು ಸಂಪಾದಿಸದಿದ್ದರೂ ತಾವು ಧರ್ಮಗುರುಗಳಾದುದರಿಂದ ದಕ್ಷಿಣೆಯನ್ನು ತೆಗೆದುಕೊಳ್ಳುವುದು ತಮ್ಮ ಹಕ್ಕೆಂದು ತಿಳಿದು ಆಚರಿಸುತ್ತಾರೆ. ಮತ್ತೂ ಅಶಿಕ್ಷಿತರೂ ಆಲಸ್ಯವುಳ್ಳವರೂ ಆಗುತ್ತಾರೆ. ಇಂಥ ಸುಶಿಕ್ಷಿತರಾಗದೆಯೂ, ಗಟ್ಟಿಮುಟ್ಟಾಗಿಯೂ ಇರುವ ಜನರಿಗೆ ಧರ್ಮವನ್ನುಮಾಡಿದರೆ ಅದರಿಂದ ನಾವು ಪುಣ್ಯವನ್ನು ಸಂಪಾದನಮಾಡದೆ, ಸಮಾಜಹಿತದ ವಿಘಾತಮಾಡಿದ ಪಾಪವನ್ನುಮಾತ್ರ ಕೈಕೊಳ್ಳುತ್ತೇವೆ. ಇದರಿಂದ ಸಮಾಜವು ಅತ್ಯಂತ ವಿಸ್ಖಲಿತವಾಗುತ್ತದೆ. ಆದುದರಿಂದ ಈ ಅನಿಷ್ಟರೀತಿಯನ್ನು ನಿಲ್ಲಿಸಬೇಕು. ವಿದ್ವಾಂಸರಾದ ಮತ್ತೂ ವೈದಿಕಕರ್ಮಗಳಲ್ಲಿ ನಿಷ್ಣಾತರಾದ ಜನರಿಗೆ ಧರ್ಮವನ್ನು ಮಾಡಿದರೆ ಅದರಲ್ಲಿ ಪುಣ್ಯವುಂಟು, ಇದರಿಂದ ಎರಡು ಲಾಭಗಳುಂಟು; ಏನೆಂದರೆ—ಧರ್ಮವೆಂಬ ಹೆಸರಿನಿಂದ ದುರ್ವ್ಯಯವಾಗುತ್ತಿರುವ ಆದೇಕಣವನ್ನು ಅನಾಥವಿದ್ಯಾರ್ಥಿಗಳ ಶಿಕ್ಷಣದಲ್ಲಿ ವೆಚ್ಚಮಾಡುವುದು, ಮೊದಲನೆಯ ಸದ್ವಿನಿಯೋಗರೂಪವಾದಲಾಭವು ಮತ್ತೂ ಅಶಿಕ್ಷಿತರಾಗಿದ್ದರೂ ದಕ್ಷಿಣೆಯೆಂದು ಹಣವನ್ನು ಸಂಪಾದಿಸುವ ಕೆಟ್ಟ ಪದ್ಧತಿಯನ್ನು ನಮ್ಮ ಧರ್ಮಗುರುಗಳಿಂದ ತೊಲಗಿಸಿ, ಶಿಕ್ಷಣ ಸಂಪಾದಿಸುವುದರ ಕಡೆಗೆ ಅವರ ಪ್ರವೃತ್ತಿಯನ್ನುಂಟುಮಾಡುವುದು ಎರಡನೆಯ ಲಾಭವು. ಆದುದರಿಂದ ಈ ದುರ್ವಿನಿಯೋಗದ ರೀತಿಯನ್ನು ನಾವು ತೆಗೆದುಹಾಕಿದರೆ ನಮ್ಮ ಸಮಾಜದ ಎಂಥ ಘನತರವಾದ ಕಾರ್ಯವೂ ತಾನಾಗಿ ಸಿದ್ಧಿಸುವುದು. ಇದರಿಂದ ಶಿಕ್ಷಣಕ್ಕೆ ಉತ್ತೇಜನವು ದೊರೆದು ಅದರ ಪ್ರಸಾರವಾಗುವುದು. ಮತ್ತೂ ನಮ್ಮ ಸಮಾಜವು ಶೀಘ್ರವೇ ಉನ್ನತಿಯನ್ನು ಹೊಂದುವುದು.

—( ಶಿಕ್ಷಣದಿಂದುಂಟಾಗುವ ಲಾಭ. )—

೬. ನಾವು ಯಾವ ದೇಶದಲ್ಲಿ ಉತ್ಪನ್ನರಾಗಿರುವೆವೊ ಆ ಈ ಭರತಖಂಡದ ಕಡೆಗೆ ಸೂಕ್ಷ್ಮದೃಷ್ಟಿಯಿಂದ ನೋಡಿದರೆ ನಮಗೆ ಹೀಗೆ ಕಂಡುಬರುವುದು; — ಎಲ್ಲ ಸಮಾಜಗಳೂ ಜಾಗರೂಕಗಳಾಗಿದ್ದು, ತಮ್ಮ ತಮ್ಮ ಪ್ರಗತಿಯನ್ನು ಮಾಡಿಕೊಳ್ಳುವುದರಲ್ಲಿ ತೊಡಗಿರುವುವು. ಈ ಪ್ರಗತಿಯ ಮಹತ್ವಾಕಾಂಕ್ಷೆಯು ಅವರಲ್ಲಿ ಶಿಕ್ಷಣದಿಂದಲೇ ಉಂಟಾಗಿರುವುದು ಸಮಾಜವು ಎಷ್ಟು ನಿಪ್ರಾಣಸ್ಥಿತಿಯಲ್ಲಿದ್ದಾಗ್ಯೂ ಶಿಕ್ಷಣದಿಂದಲೇ ಜಾಗರೂಕವಾಗುವುದು.

ಮತ್ತೂ ನಾವಾರು? ನಮ್ಮ ಕರ್ತವ್ಯವಾವುದು! ಎಂಬುದರ ಜ್ಞಾನವನ್ನು ಶಿಕ್ಷಣವು ಮಾಡಿಕೊಡುತ್ತದೆ. ಶಿಕ್ಷಣದಿಂದ ದೊಡ್ಡ ದೊಡ್ಡ ಪ್ರಮೇಯಗಳು ತಿಳಿದುಬರುತ್ತವೆ. ಶಿಕ್ಷಣದಿಂದ ಬುದ್ಧಿಯು ವಿಕಾಸವಾಗುತ್ತದೆ. ಶಿಕ್ಷಣದಿಂದ ಜ್ಞಾನವುಂಟಾಗುತ್ತದೆ. ಶಿಕ್ಷಣದಿಂದ ದೊಡ್ಡದೊಡ್ಡ ತತ್ವಗಳ ಶೋಧವನ್ನು ಮಾಡಲಿಕ್ಕೆ ಬರುತ್ತದೆ. ಪಾಶ್ಚಿಮಾತ್ಯ ರಾಷ್ಟ್ರಗಳು ಶಿಕ್ಷಣದಿಂದ ಉನ್ನತಿಯ ಮೇರೆಯನ್ನು ಹೊಂದಿರುವುವು. ಈ ಶಿಕ್ಷಣದ ಬಲದಿಂದಲೇ ಅವರು ಕಬ್ಬಿಣದಿಂದಲೂ, ಇದ್ದಲಿನಿಂದಲೂ, ಸುವರ್ಣವನ್ನು ಮಾಡುವರು. ಶಿಕ್ಷಣದ ಸಾಮರ್ಥ್ಯವುಳ್ಳವ ರಾದುದರಿಂದಲೇ ಅವರನ್ನು ಸರ್ವಜಗತ್ತೂ ವಂದ್ಯರನ್ನಾಗಣಿಸುತ್ತದೆ. ಶಿಕ್ಷಣದಿಂದಲೇ ಅವರು ದೊಡ್ಡ ದೊಡ್ಡ ಶೋಧಗಳನ್ನೂ ಮಾಡಿರುವರು. ಶಿಕ್ಷಣವು ದೊಡ್ಡ ದೊಡ್ಡ ತತ್ವಜ್ಞಾನಿಗಳನ್ನಾಗಿ ಮಾಡುತ್ತದೆ. ಆದುದರಿಂದ ಬಾಂಧವರೇ? ಶಿಕ್ಷಣದ ಸಲುವಾಗಿ ತಾವು ಯತ್ನಿಸಬೇಕು. ಶಿಕ್ಷಣವಿಲ್ಲದೆ ನಮ್ಮ ಉನ್ನತಿಯು ಯಾವ ರೀತಿಯಿಂದಲೂ ಆಗಲಾರದು. ಶಿಕ್ಷಣವು ಉನ್ನತಿಯ ಜನನಿಯಾಗಿರುವುದು. ಶಿಕ್ಷಣವೇ ಪ್ರತಿಯೊಂದು ಸಮಾಜದ ಮತ್ತೂ ರಾಷ್ಟ್ರದ ಜೀವನವಾಗಿರುತ್ತದೆ. ಯಾವ ಸಮಾಜವು ಸುಶಿಕ್ಷಿತವಾಗಿರುತ್ತದೆಯೋ ಅದು ಎಲ್ಲರಿಗೂ ವಂದ್ಯವಾಗಿರುವುದು. ಅಂಥ ಸಮಾಜವನ್ನು ಜರಿಯುವ ಸಾಮರ್ಥ್ಯವು ಯಾರಿಗೂ ಇರುವುದಿಲ್ಲ. ಶಿಕ್ಷಣದ ಹೊರತು ಯಾವ ಸಮಾಜದ ಇಲ್ಲವೇ ರಾಷ್ಟ್ರದ ಉನ್ನತಿಯಾದದ್ದೂ ಯಾವ ಇತಿಹಾಸದಲ್ಲಿಯೂ ಕಂಡುಬರುವುದಿಲ್ಲ. ಆದುದರಿಂದ ಬಾಂಧವರೇ! ಶಿಕ್ಷಣದಸಲುವಾಗಿ ಅತ್ಯಂತ ಪರಿಶ್ರಮವನ್ನು ಮಾಡಿರಿ. ಇದರಿಂದಲೇ ಸಮಾಜಕ್ಕೆ ಬಹುಳ ಲಾಭವುಂಟು. ಶಿಕ್ಷಣದಿಂದಲೇ ಸಮಾಜದ ಐಕ್ಯವಾಗುತ್ತದೆ ಮತ್ತು ಆ ಐಕ್ಯಶಕ್ತಿಯು ಅವನತಿಯನ್ನು ಹೋಗಲಾಡಿಸಿ, ಉನ್ನತಿಯ ಸಾಮ್ರಾಜ್ಯವನ್ನು ಸ್ಥಾಪಿಸುತ್ತದೆ. ... ... ... ... *

## —(ವೀರಶೈವ ಸಮಾಜವು ಮುಂದಕ್ಕೆ ಬರಲು ಉಪಾಯವು.)—

೭. ಇತರರಂತೆ ವೀರಶೈವ ಸಮಾಜದಲ್ಲಿಯೂ ಸುಶಿಕ್ಷಿತರು, ಶ್ರೀಮಂತರು, ಮಧ್ಯಮರು, ಬಡವರು ಎಂದು ನಾಲ್ಕು ವರ್ಗಗಳಿರುತ್ತವೆ. ಸುಶಿಕ್ಷಿತರು ಅರಿತವರಾಗಿರುವುದರಿಂದ ಅವರ ಪುರೋಭಿವೃದ್ಧಿಗಾಗಿ ಇತರರು ಉಪದೇಶಮಾಡಬೇಕಾದ ಅವಶ್ಯಕತೆ ಇರುವುದಿಲ್ಲ. ಶ್ರೀಮಂತರಲ್ಲಿ ಹಲವರು ತಾವು ಮಾಡಬೇಕಾದ ಕೆಲಸವು ಏನೂ ಉಳಿದಿಲ್ಲವೆಂದು ತಿಳಿಯುತ್ತಾರೆ. ಮಧ್ಯಮವರ್ಗದವರಾದರೊ ಬಹುಶಃ ತಾವು ಸಂಪಾದಿಸಿರುವ ಅಲ್ಪಸ್ವಲ್ಪ ಧನದ ಸಂರಕ್ಷಣದಲ್ಲಿಯೇ ನಿರತರಾಗಿರುತ್ತಾರೆ. ಆದುದರಿಂದ ಈ ಮೂರು ವರ್ಗದವರಿಗೂ ಶಿಕ್ಷಣವನ್ನು ಕೊಡುವ ಯತ್ನವನ್ನು ಮಾಡಿದರೆ ಅದು ಪ್ರಯೋಜಕವಾಗುವುದಿಲ್ಲ ಮತ್ತು ಸುಶಿಕ್ಷಿತರಲ್ಲಿ ಹಲವರು ಔದಾಸೀನ್ಯವುಳ್ಳವರು. ಶ್ರೀಮಂತರಾದರೊ ಬಹುಶಃ ಅಲ್ಪಸಂ

ತೋಷಿಗಳು. ಇತರ ಜಾತಿಯವರಲ್ಲಿರುವಂಥ ಶ್ರೀಮಂತರ ಸುಧಾರಿಸಿದ ಸ್ಥಿತಿಯಾದರೂ ಇವರಿಗಿರುವುದಿಲ್ಲ. ಅದುಕಾರಣ, ಮೇಲಿನ ತ್ರಿವರ್ಗದವರಿಗಾಗಿ ಯಾವ ಉಪಾಯವನ್ನು ಮಾಡಿದರೂ ಅವರು ಮುಂದೆ ಬರುವಂತಿಲ್ಲ. ಉಳಿದ ಬಡವರ ವರ್ಗಕ್ಕಾದರೊ ಅವರ ಉದರಪೋಷಣಕ್ಕಾಗಿಯೇ ಕಾಲವು ಕಳೆದುಹೋಗುತ್ತದೆ. ಇಂಥ ವರ್ಗದವರಿಗೆ ಉದರನಿರ್ವಾಹಕ್ಕೆ ತಕ್ಕ ಸಹಾಯವನ್ನು ಮಾಡಿಕೊಟ್ಟು, ಯಾವ ಶಿಕ್ಷಣವನ್ನು ಸಮಾಜಕ್ಕೆ ಕೊಡಬೇಕೆಂದು ಇಚ್ಛೆಯಿದೆಯೋ ಅಂತಹುದನ್ನು ಇವರಿಗೆ ಉಂಟುಮಾಡಿಕೊಟ್ಟರೆ ಅವರು ಆನಂದದಿಂದ ಸ್ವೀಕರಿಸುವುದಕ್ಕೆ ಸಿದ್ಧರಾಗಿರುತ್ತಾರೆ. ಪ್ರತಿಯೊಂದು ದೇಶದವರೂ, ಸಮಾಜದವರೂ, ಜಾತಿಯವರೂ ಸಹ ಇಂಥ ವರ್ಗದವರಿಗೆ ಶಿಕ್ಷಣವನ್ನು ಕೊಟ್ಟು, ತಮ್ಮ ತಮ್ಮ ಸಮಾಜವನ್ನು ಮುಂದಕ್ಕೆ ತಂದಿರುತ್ತಾರೆ. ಈ ಬಡವರವರ್ಗವೇ ಸುಶಿಕ್ಷಣದಿಂದ ಪುರೋವೃದ್ಧಿಯನ್ನು ಪಡೆದುಕೊಂಡರೆ ಸುಶಿಕ್ಷಿತರ ವರ್ಗದಲ್ಲಿಯೂ, ಶ್ರೀಮಂತರ ವರ್ಗದಲ್ಲಿಯೂ ಅದು ಗಣನೀಯವಾಗುತ್ತದೆ. ಮೊದಲು ಎಷ್ಟೋ ಹೀನಸ್ಥಿತಿಯಲ್ಲಿದ್ದ ಈ ನಾಲ್ಕನೇ ವರ್ಗಕ್ಕೆ ಉಂಟಾದ ಉತ್ತರೋತ್ತರ ವೃದ್ಧಿಯನ್ನು ಉಳಿದ ಸುಶಿಕ್ಷಿತಾದಿ ವರ್ಗತ್ರಯದವರೂ ನೋಡಿ, ನಾಚಿ ಸ್ವಾಭಿಮಾನದಿಂದ ಅವರೂ ಕೂಡ ಮುಂದಕ್ಕೆ ಬರಬೇಕೆಂದು ಕೃತ್ಯತಃ ಯತ್ನಿಸುತ್ತಾರೆ. ಸಮಾಜದ ಎಲ್ಲತರದ ವರ್ಗದವರೂ ಒಂದೇ ರೀತಿಯಾಗಿ ಮುಂದೆ ಬರುವಂತೆ ಮಾಡುವುದಕ್ಕೆ ಇದೇ ಮುಖ್ಯೋಪಾಯವು. ಇದಕ್ಕಿಂತ ಅನುಕೂಲವಾದ ಎರಡನೆಯ ಮಾರ್ಗವು ನನಗೆ ತೋರಲಿಲ್ಲ. ಬಡವರವರ್ಗಕ್ಕೆ ಶಿಕ್ಷಣವನ್ನುಕೊಡಲು ಮೊದಲು ಪ್ರಯತ್ನಿಸುವುದು ಅವಶ್ಯಕವೆಂದು ಮೇಲೆಹೇಳಿದ ಕಾರಣದಿಂದ ಸಿದ್ಧವಾದ ಬಳಿಕ ಆ ವರ್ಗದವರಿಗೆಲ್ಲಾ ಹೇಗೆ ಶಿಕ್ಷಣವನ್ನು ಕೊಡಬೇಕೆಂಬುದನ್ನು ಆಲೋಚಿಸುವ ಒಂದೇ ಕಾಲದಲ್ಲಿ ಆ ವರ್ಗದ ಹುಡುಗರಿಗೆಲ್ಲಾ ಶಿಕ್ಷಣವನ್ನು ಕೊಡುವುದಕ್ಕೆ ಸಾಕಾದಷ್ಟು ಹಣವನ್ನು ಒದಗಿಸುವುದು ಸುಲಭವಲ್ಲ. ಅದುಕಾರಣ, ಬಡವರ ಹುಡುಗರಲ್ಲಿ ಬುದ್ಧಿಶಾಲಿಗಳಾದವರನ್ನು ಮೊದಲು ಆರಿಸಿಕೊಂಡು, ಯಾವನಿಗೆ ಯಾವತರದ ವಿದ್ಯೆಯನ್ನು ಕೊಟ್ಟರೆ, ಅವನು ಪ್ರವೀಣನಾಗಬಹುದೆಂಬುದನ್ನು ಅವನ ಮನಃ ಪ್ರವೃತ್ತಿಯಿಂದಲೂ, ಲಕ್ಷಣದಿಂದಲೂ ತಿಳಿದು, ಅದಕ್ಕೆ ಉಚಿತವಾದ ವಿದ್ಯೆಯನ್ನು ಅವರಿಗೆ ಕೊಡುತ್ತ ಬರಬೇಕು. ಇದಕ್ಕಾಗಿಯೇ ಸುಶಿಕ್ಷಿತರಾದವರ ಕಮಿಟಿಯೊಂದು ಇರಬೇಕು. ಅಂಥ ಕಮಿಟಿಯವರಿಂದ ಯೋಗ್ಯತಾ ಪತ್ರಿಕೆಯನ್ನು ಪಡೆದುಬಂದ ಹುಡುಗನಿಗೆ ವೀರಶೈವ ವಿದ್ಯಾಭಿವೃದ್ಧಿ ಫಂಡಿನವರು ಸಹಾಯ ಮಾಡಬೇಕು. ಈ ರೀತಿಯಾದ ಸಹಾಯದಿಂದ ಅಭ್ಯಾಸಮಾಡಿ ಉತ್ತೀರ್ಣನಾಗಿ ಬಂದ ವಿದ್ಯಾರ್ಥಿಗೆ ಅವನಯೋಗ್ಯತೆಗೆ ತಕ್ಕ ಕೆಲಸವನ್ನು ಕೊಡಬೇಕು. ಇಲ್ಲವೆ ಎಲ್ಲಿ ಅಂಥ ಕೆಲಸವು ದೊರೆಯುತ್ತದೋ, ಅಲ್ಲಿ ಅದನ್ನು ಕೊಡಿಸುವುದಕ್ಕೆ ಸಹಾಯ ಮಾಡಬೇಕು. ನಮ್ಮ ದೇಶದಲ್ಲಿ ದೊರೆಯುವ ಶಿಕ್ಷಣದ ಪೂರ್ತಿಗೆ ಮೇಲೆ ಹೇಳಿದಷ್ಟು ಪ್ರಯತ್ನವನ್ನು ಮಾಡುವುದು ಸರಿಯಾಗಿರುತ್ತದೆ. ಜಗತ್ತಿನಲ್ಲಿ ದಿನದಿನಕ್ಕೆ ಜ್ಞಾನದ ಓಘವು, ಹೆ

ಚ್ಚಾಗುತ್ತಲಿದೆ. ಅದರ ಫಲವು ನಮ್ಮ ಈ ದೇಶೀಯರಿಗೆ ಸುಮ್ಮನೆ ದೊರೆಯಲಾರದು. ಅ ದನ್ನು ದೊರಕಿಸುವುದಕ್ಕೆ ತಕ್ಕ ಯತ್ನವನ್ನು ಮಾಡಬೇಕು. ಎಂದರೆ—ಜಗತ್ತಿನಲ್ಲಿ ಜ ನರು ನವೀನಕಲ್ಪನ ಚಾತುರ್ಯದಿಂದ ಯಾವ ಯಾವ ಫಲವನ್ನು ಹೊಂದುತ್ತಿರುವರೋ ಅದನ್ನು ಶೋಧಿಸಿ ತಿಳಿದುಕೊಂಡು ಬರುವುದಕ್ಕಾಗಿ ಸಂಬಳಗಾರರಾದವರನ್ನು ಕಳುಹಿಸಿ ಕೊಟ್ಟು, ಅವರು ಪರದೇಶಗಳಲ್ಲಿ ಶೋಧನಪೂರ್ವಕವಾಗಿ ಪಡೆದುಕೊಂಡ ನವೀನಪದಾರ್ಥ ಕಲ್ಪನೆಯ ಅನುಭವದ ವರದಿಯನ್ನು ಈ ಕಮಿಟಿಯವರು ಬರಮಾಡಿಕೊಳ್ಳುತ್ತಿರಬೇಕು ಅದನ್ನು ತಮ್ಮ ಸಮಾಜದಲ್ಲಿ ಪ್ರಕಟಿಸಿ ಅದರಂತೆ ಪ್ರಯತ್ನಿಸಿ, ಅದರ ಫಲವನ್ನು ಪಡೆ ದುಕೊಳ್ಳಲಿಕ್ಕೆ ತಿಳುಹಿಸಬೇಕು. ಹೀಗಾದರೆ ಮಾತ್ರ ಸದ್ಯಃಕಾಲದಲ್ಲಿ ಪ್ರಚಲಿತವಾಗುತ್ತಿ ರುವ ಉದ್ಯೋಗಗಳಲ್ಲಿ ಸಮಾಜದವರು ತೊಡಗಲಿಕ್ಕೆ ಅರ್ಹರಾಗುತ್ತಾರೆ. ಇದಲ್ಲದೆ ಇದು ವರೆಗೆ ಬಳಕೆಯಲ್ಲಿರುವ ಪದಾರ್ಥಗಳಲ್ಲಿ ಯಾವುದಾದರೊಂದು ತೆರದ ನವೀನಕಲ್ಪನೆಯ ಮೂಲಕ ಕಾಲೋಚಿತವಾದ ಬದಲಾವಣೆಯನ್ನುಂಟು ಮಾಡುವುದರಿಂದ, ಜನರ ಅಭಿರು ಚಿಯು ಅದರ ಕಡೆಗೆ ಹೆಚ್ಚಬಹುದೋ ಅಂತಹುದನ್ನು ತಿಳಿದುಕೊಂಡು, ಅಂಥ ನವೀನ ಕಲ್ಪನೆಯ ಪರಿಶೋಧನೆಯಲ್ಲೇ ಪ್ರವೃತ್ತನಾಗಿರುವ ಬುದ್ಧಿಶಾಲಿಗೆ ಸಂಬಳವನ್ನುಗೊತ್ತು ಮಾಡಿ, ಅವನನ್ನು ಆ ಕೆಲಸದ ನಿರ್ವಾಹಕ್ಕೆ ನಿಯಮಿಸಿ, ಅಂಥವನಿಂದ ಮಾಡಿಸಲ್ಪಡುವ ನವೀನತರದ ಕಲ್ಪನೆಯ ವಸ್ತುಗಳ ಉಪಯೋಗವನ್ನು ಕಮಿಟಿಯವರು ವಿಚಾರಮಾಡಿ ತಿಳಿದುಕೊಂಡು, ಬಳಿಕ ಪ್ರಚಾರದಲ್ಲಿ ತರುತ್ತಬಂದರೆ, ಕೆಲವುಕಾಲದೊಳಗಾಗಿ ಔದ್ಯೋ ಗಿಕ ವ್ಯವಹಾರಗಳಲ್ಲಿ ನಿಪುಣರಾದವರ ವರ್ಗದಲ್ಲಿ ಸೇರುವುದಕ್ಕೆ ನಮ್ಮ ಸಮಾಜದವರೂ ಯೋಗ್ಯರಾಗುತ್ತಾರೆ. ಇದಕ್ಕಾಗಿಯೇ ನಮ್ಮ ದಯಾಳು ಸರ್ಕಾರದವರು ಟೆಕ್ನಿಕಲ್ ಕಾ ಲೇಜು, ಇಂಜನಿಯರಿಂಗ್ ಕಾಲೇಜು, ಸೈನ್ಸ ಕಾಲೇಜು, ಅಗ್ರಿಕಲ್ಚರಲ್ ಕಾಲೇಜು, ಮೆಡಿ ಕಲ್ ಕಾಲೇಜು, ವೆಟರ್ನರಿ ಕಾಲೇಜು, ಮೊದಲಾದ ಸಂಸ್ಥೆಗಳನ್ನು ಸ್ಥಾಪಿಸಿರುತ್ತಾರೆ. ಇ ತ್ತಕಡೆಗೆ ನಮ್ಮವರು ಲಕ್ಷ್ಯಕೊಟ್ಟು ಸರ್ಕಾರದವರ ಪರಿಶ್ರಮದ ಸಾರ್ಥಕ್ಯವನ್ನು ಮಾ ಡಬೇಕು. ನಮ್ಮ ಸರ್ಕಾರದವರು ಪ್ರಜೆಗಳ ವಿಷಯದಲ್ಲಿ ದಯಾಪೂರ್ವಕವಾಗಿ ಮಾಡು ತ್ತಿರುವ ಪ್ರಯತ್ನಗಳನ್ನು ವರ್ಣಿಸಲಶಕ್ಯವಾಗಿದೆ. ಅನಾಯಾಸಸಿದ್ಧವಾಗಿರುವ ಅವರ ಪರಿಶ್ರಮದ ಫಲವನ್ನು ನಾವು ಅನುಭವಿಸದಿದ್ದರೆ, ನದಿಯಹತ್ತಿರ ಕುಳಿತು ನೀರಡಿಕೆಯಿಂ ದ ಬಾಯಿಬಿಡುವವರ ಸ್ಥಿತಿಗೆ ನಾವು ಪಾತ್ರರಾಗುತ್ತೇವೆ. ... ... *

## —( ಸ್ತ್ರೀ ಶಿಕ್ಷಣ. )—

೮. ಧಾರ್ಮಿಕ ಶಿಕ್ಷಣವೆಂಬ ತಳಹದಿಯನ್ನು ಸಮಾಜದ ಉನ್ನತಿಯೆಂಬ ಕ ಟ್ಟಡವು ಹೇಗೆ ಆಶ್ರಯಿಸಿಕೊಂಡಿರುವುದೊ, ಅದರಂತೆ ಬಾಲಕರನ್ನು ಕರ್ತೃತ್ವಶಾಲಿಗಳ ನ್ನಾಗಿ ಮಾಡುವುದಕ್ಕೆ ಸ್ತ್ರೀಶಿಕ್ಷಣವು ತಳಹದಿಯಾಗಿರುತ್ತದೆಂಬುದನ್ನು ಯಾರೂ ಮರೆ

ಯುಬಾರದು. ಸಧ್ಯಃಕಾಲವಲ್ಲಿ ನಮ್ಮ ಸಮಾಜದೊಳಗೆ ಸ್ತ್ರೀಶಿಕ್ಷಣದ ಆವಶ್ಯಕತೆಯು ಬಹುಳವಾಗಿರುವುದು. ಸ್ತ್ರೀಯರಿಗೆ ಶಿಕ್ಷಣವನ್ನು ಕೊಡಬೇಕೆಂಬುದರಲ್ಲಿ ಎಲ್ಲ ವಿಚಾರಶಾಲಿಗಳ ಮತೈಕ್ಯವುಂಟು. ಹೀಗಿದ್ದಾಗ್ಯೂ ನಮ್ಮಲ್ಲಿ ಕೆಲವರು ,, ಸ್ತ್ರೀಯರು ಅಕ್ಷರಶತ್ರುಗಳಾಗಿದ್ದರೆ ಏನಾಗುವುದು? ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲದಿದ್ದರೇನಾಗುವುದು! ಬಾಲ್ಯದಲ್ಲಿಯೇ ಲಗ್ನಗಳನ್ನು ಮಾಡಿದರೇನಾಗುವುದು? ಶಿಕ್ಷಣದಿಂದ ಸ್ತ್ರೀಯರು ನೀತಿಭ್ರಷ್ಟರಾಗುತ್ತಾರೆ ,, ಎಂಬುದು ಮೊದಲಾದ ನಿರರ್ಗಲ ಪ್ರಲಾಪಗಳನ್ನು ಮಾಡುವಂಥ ವಿಚಾರಶೂನ್ಯರಾಗಿ ಇರುವರು. ಇಂಥ ಸದ್ಗೃಹಸ್ಥರಿಗೆ ನಾನು ಹೀಗೆ ಹೇಳುತ್ತೇನೆ. ಏನೆಂದರೆ-ಮಹನೀಯರೆ! ತಾವು ಪುರಾಣಾದಿ ಗ್ರಂಥಗಳಲ್ಲಿ ವಿದ್ಯಾವತಿಯರಾದ ಸ್ತ್ರೀಯರ ಚರಿತ್ರಗಳನ್ನು ಓದಿರಬಹುದು. ನಮ್ಮಲ್ಲಾದರೂ ನಿಂಬಾಂಬಾ, ಉಡುತಡಿಮಹಾದೇವಿ, ಅಮೃತವತೀಮಹಾದೇವಿ, ಸರ್ವಮಂಗಲಾ, ನೀಲಾಂಬಾ, ನಾಗಲಾಂಬಾ, ಗಂಗಾಂಬಾ ಇತ್ಯಾದಿಗಳು ಸುಶಿಕ್ಷಿತ ಸ್ತ್ರೀಯರಾಗಿದ್ದರೆಂಬುದು ಸುಪ್ರಸಿದ್ಧವೇ ಆಗಿದೆ. ಸಧ್ಯದಲ್ಲಿ ನಾವು ಸ್ತ್ರೀಶಿಕ್ಷಣದ ವಿಷಯವಾಗಿ ತೀರ ಹಿಂದಿರುತ್ತೇವೆ. ಸ್ತ್ರೀಶಿಕ್ಷಣದ ವಿಷಯದಲ್ಲಿ ಲಕ್ಷ್ಯವನ್ನಿತ್ತು ನೋಡಿದರೆ ಕಂಡುಬರುವು ದೇನೆಂದರೆ:—ಎಲ್ಲಾ ಹಿಂದೂಸ್ಥಾನದಲ್ಲಿ ವಿದ್ಯಾವತಿಯರಾದ ವೀರಶೈವ ಸ್ತ್ರೀಯರು ಸಾವಿರದಲ್ಲಿ ಒಬ್ಬಿಬ್ಬರು ದೊರೆಯುವುದು ಸಹ ಕಠಿಣವಾಗಿದೆ. ಈ ಸ್ಥಿತಿಯು ಸ್ವಲ್ಪವೂ ಉಳಿಯದಂತೆ ಹೋಗದ ಹೊರತು ನಮ್ಮ ಪ್ರಗತಿಯಾಗುವುದು ಶಕ್ಯವಲ್ಲ. ಸ್ತ್ರೀಯು ಪುರುಷನ ಅರ್ಧಾಂಗಿಯಾಗಿರುವಳು. ಸ್ತ್ರೀಯರಿಗೆ ಧರ್ಮ, ಅರ್ಥ, ಕಾಮ, ಮುಂತಾದುವುಗಳಲ್ಲಿ ನಾವು ಸಹಕಾರಿತ್ವವನ್ನು ಕೊಡುತ್ತೇವೆ. ಆದರೆ ಅವರ ಶಿಕ್ಷಣದ ವ್ಯವಸ್ಥೆಯನ್ನುಮಾತ್ರ ಮಾಡದೆ, ಅವರನ್ನು ಅಜ್ಞಾನಾವಸ್ಥೆಯಲ್ಲಿಟ್ಟು ಮುಂದಿನ ಏಳಿಗೆಯ ಉನ್ನತಿಯ ಹಾನಿಯನ್ನು ಮಾಡುತ್ತೇವೆ. ಇದು ಬಹುಳ ಶೋಚನೀಯವಾದ ಮಾತಾಗಿದೆ. ಕೂಸುಗಳ ಸಂರಕ್ಷಣೆಯ ಭಾರವು ತಾಯಿಯ ಮೇಲಿರುವುದು. ತಾಯಿಯ ಪ್ರಕೃತಿಯ ವಿಚಾರದ ಮತ್ತೂ ಆಚಾರದ ಪರಿಣಾಮವು ಗರ್ಭಾಧಾನದ ಕಾಲದಿಂದಲೇ ಪಿಂಡದಲ್ಲಿ ಉಂಟಾಗಲಾರಂಭಿಸುತ್ತದೆ. ಆದುದರಿಂದ ಯಾವ ಸ್ತ್ರೀಯಮೇಲೆ ಕೂಸುಗಳನ್ನು ಸಾಕುವಭಾರದ ಕೆಲಸವನ್ನು ನಾವು ಹೊರಿಸುತ್ತೇವೊ ಅವಳನ್ನು ಅಕ್ಷರಶತ್ರುವನ್ನಾಗಿ ಮಾಡುವುದು ಅತ್ಯಂತ ಅಹಿತಕರವಾದುದೆಂದು ನಾನು ತಿಳಿಯುತ್ತೇನೆ. ಯಾವ ಕುಟುಂಬದ ಸ್ತ್ರೀಯರು ಅಶಿಕ್ಷಿತರಾಗಿರುವರೊ ಆ ಕುಟುಂಬದ ಪುರುಷರು ಜಗತ್ತಿನ ಅನೇಕ ವ್ಯವಹಾರಗಳನ್ನು ತಾವೇ ಮಾಡಬೇಕಾಗುತ್ತದೆ. ಆದರೆ ಸ್ತ್ರೀಯರು ಸುಶಿಕ್ಷಿತರಾಗಿದ್ದರೆ ಪುರುಷರಿಗೆ ಅನೇಕ ತರದ ಸಹಾಯವನ್ನು ಮಾಡಿ ಅವರ ಭಾರವನ್ನು ಕಡಿಮೆ ಮಾಡುತ್ತಾರೆ. ಸ್ತ್ರೀಶಿಕ್ಷಣದ ವಿಷಯವಾಗಿ ಇದಕ್ಕಿಂತ ಹೆಚ್ಚು ವರ್ಣನೆಯನ್ನುಮಾಡಿ ಹೇಳುವುದು ನನಗೆ ಆವಶ್ಯಕವಾಗಿ ಕಾಣುವುದಿಲ್ಲ. ಸ್ವಲ್ಪದರಲ್ಲಿ ಹೇಳುವುದೇನೆಂದರೆ—ಸ್ತ್ರೀಯರು ಕೌಮಾರ್ಯಾವಸ್ಥೆಯಲ್ಲಿ ಧಾರ್ಮಿಕ ಮತ್ತೂ ಲೌಕಿಕ ಶಿಕ್ಷಣವನ್ನು ಸಂಪಾದಿಸಬೇಕು. ತಾರುಣ್ಯಾವಸ್ಥೆಯಲ್ಲಿ ಪ

ತಿಸೇವೆ, ಗುರುಭಕ್ತಿ, ಹಿರಿಯರ ಆಜ್ಞಾನುವರ್ತನ, ರೋಗಿಗಳ ಶುಶ್ರೂಷೆ, ಇತರ ಗೃಹ ಕೃತ್ಯ—ಇವುಗಳನ್ನೂ ಮತ್ತೂ ಎಲ್ಲಕ್ಕೂ ಮುಖ್ಯವಾದ ಬಾಲಸಂಗೋಪನವನ್ನೂ ಸಹ ಮಾಡಬೇಕು, ಹೀಗಿದ್ದರೇನೆಯೋ ಆಕೆಗೆ ಗೃಹಿಣಿಯೆಂಬ ಪದವು ಶೋಭಿಸುವುದು. ಅದ ರಂತೆಯೇ ಸಂಸಾರದೊಳಗಿನ ಅವಶ್ಯಕವಾದ ಸರ್ವಕ್ರಿಯೆಗಳನ್ನು ಮಾಡಿ ಅವಕಾಶದೊರೆದ ವೇಳೆಯಲ್ಲಿ ಸತಿಯರ ಚರಿತ್ರಗಳನ್ನೂ, ಧಾರ್ಮಿಕ ಪುರಾಣ ಶಾಸ್ತ್ರಗಳನ್ನೂ ಮತ್ತೂ ವಿ ಚಾರಪರಿಪ್ಲುತವಾದ (ಸ್ತ್ರೀಯರಿಗಾಗಿಯೇ ಹೊರಡುವ) ಮಾಸಿಕ ಪತ್ರಗಳನ್ನೂ, ವರ್ತ ಮಾನಪತ್ರಗಳನ್ನೂ ಓದಿ ಸದ್ವ್ಯಸ್ಥಿತಿಯ ಜ್ಞಾನವನ್ನು ಮಾಡಿಕೊಳ್ಳಬೇಕು. ಮತ್ತೂ ಸ ಮಾಜದ ಯೋಗ್ಯಸೇವೆಯನ್ನು ಮಾಡಬೇಕು. ಸುಶಿಕ್ಷಿತಪತಿಯೂ ಸಹ ಯೋಗ್ಯವಾದ ಸಾಧನೆಗಳನ್ನು ಪತ್ನಿಯರಿಗೆ ಸಂಪಾದಿಸಿಕೊಟ್ಟು, ಅವರಲ್ಲಿ ವಿದ್ಯೆಯ ಅಭಿರುಚಿಯನ್ನುಂ ಟುಮಾಡಬೇಕು. ಈ ಪ್ರಕಾರವಾಗಿ ಹುಡುಗರನ್ನು ಯೋಗ್ಯವಾಗಿ ಸಂರಕ್ಷಿಸಿ, ತಮ್ಮ ಸ ದಾಚರಣೆಯಿಂದ ಅವರ ಮನಸ್ಸಿನಮೇಲೆ ಸದಾಚಾರ, ನೀತಿ, ಭೂತದಯಾ, ಧರ್ಮ ಪ್ರೀತಿ ಮುಂತಾದ ಉದಾತ್ತ ಸದ್ಗುಣಗಳ ಸಂಸ್ಕಾರವನ್ನು ಮಾಡಿ ಅವರು (ಹುಡುಗರು) ಧರ್ಮದಲ್ಲಿ ಸರಿಯಾದ ಭಕ್ತಿಯುಳ್ಳವರೂ, ನೀತಿವಂತರೂ ಆಗುವಂತೆ ಅವರಿಗೆ ಶಿಕ್ಷಣವನ್ನು ಕೊಡ ಬೇಕು. ಯಾಕೆಂದರೆ ೫ ವರ್ಷಗಳವರೆಗೂ ಮಕ್ಕಳು ಬಹುಶಃ ತಾಯಿಯ ಸ್ವಾಧೀನದಲ್ಲಿ ಯೇ ಇರುತ್ತವೆ. ಆವರೆಗೂ ಇವರು (ಸ್ತ್ರೀಯರು) ಮೇಲೆ ಹೇಳದಂತೆ ಶಿಕ್ಷಣವನ್ನು ಅವರಿಗೆ ಕೊಡಲಾರಂಭಿಸಬೇಕು. ದೊಡ್ಡದೊಡ್ಡ ವಿದ್ವಾಂಸರು, ವೀರಪುರುಷರು, ಕಾವ್ಯ ಶಾಸ್ತ್ರವಿಶಾರದರು ಇಂಥವರ ಜನನಿಯರು ಬಹುಶಃ ಸುಶಿಕ್ಷಿತ ಸ್ತ್ರೀಯರೇ ಇರುವರು. ಆದುದರಿಂದ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವುದು, ಸಮಾಜಕ್ಕೆ ಅತ್ಯಂತ ಹಿತಕರವಾ ಗಿರುವುದು. ಸ್ತ್ರೀಶಿಕ್ಷಣದ ವಿಷಯವಾಗಿ ಎಲ್ಲರೂ ಶ್ರದ್ಧೆಯನ್ನು ವಹಿಸಬೇಕು. ನಮ್ಮ ದ ಯಾಳುಗಳಾದ ರಾಜ್ಯಕರ್ತೃಗಳು ಸ್ತ್ರೀಶಿಕ್ಷಣದ ಪ್ರಸಾರಾರ್ಥವಾಗಿ, ಅಲ್ಲಲ್ಲಿ ಉಚಿತವಾಗಿ ವಿದ್ಯಾಭ್ಯಾಸ ಮಾಡಿಸುವ ಶಾಲೆಗಳನ್ನು ಸ್ಥಾಪಿಸಿರುವರು. ಆ ಶಾಲೆಗಳಿಗೆ ತಮ್ಮತಮ್ಮ ಮ ಕ್ಕಳುಗಳನ್ನು ಅವುಗಳ ಪಾಲಕರು ಅವಶ್ಯಕವಾಗಿ ಕಳುಹಿಸಬೇಕು. ಮತ್ತೂ ಅವರಿಗೆ ಸುಶಿಕ್ಷಿತರಾದ ಮುಂದಾಳುಗಳು ಈ ಕಾರ್ಯದಲ್ಲಿ ಅವಶ್ಯವಾಗಿ ಸಹಾಯವನ್ನು ಮಾಡಬೇಕು.

## —(ಗ್ರಾಮ ಪಂಚಾಯತಿ.)—

೯. ಪರಂಪರೆಯಿಂದ ನಡೆದುಬಂದ ಸಮಾಜೋತ್ಕರ್ಷಕಗಳಾದ ಕೆಲವು ರೂಢಿ ಗಳು ಈಗಿನಕಾಲಕ್ಕೆ ನಾಮಶೇಷಗಳಾಗಿವೆ. ಗ್ರಾಮಪಂಚಾಯತಿಯ ರೂಢಿಯೂ ಅಂಥವು ಗಳಿಗೇ ಸೇರಿದುದು. ನಮ್ಮ ಸಮಾಜದ ಧರ್ಮದ ಜಾಗರೂಕತೆಯಿದ್ದ ಕಾಲದಲ್ಲಿ, ಇತರ ಸಮಾಜದವರೂ ಸಹ ನಮ್ಮ ಧರ್ಮಗುರುಗಳನ್ನು ಶ್ರೇಷ್ಠರನ್ನಾಗಿ ಮಾನಿಸುತ್ತಿದ್ದರು.

ಅಗ್ಗೆ ಆ ಧರ್ಮಗುರುಗಳ ಮುಂದೆ ಯಾವನೊಬ್ಬನೂ ಪ್ರತಿಯಾಗಿ ,, ಬ್ರು ,, ಎಂಬ ಒಂದಕ್ಷರವನ್ನು ಕೂಡಾ ಉಚ್ಚರಿಸುತ್ತಿರಲಿಲ್ಲ. ಈಗಿನ ಅನೇಕ ಅಜ್ಞಾನಿ ಧರ್ಮಗುರುಗಳಲ್ಲಿ ಆ ತೇಜಸ್ಸು ಉಳಿಯದುದರಿಂದ, ನಮ್ಮ ಸಮಾಜದಲ್ಲಿ ಹಲವು ಪಂಗಡಗಳಾಗಿರುವುವು. ಇದರಿಂದ ಸಮಾಜದಲ್ಲೆಲ್ಲಾ ಅವ್ಯವಸ್ಥೆಯು ಪ್ರಬಲಿಸಿರುತ್ತದೆ. ಪ್ರತಿಯೊಬ್ಬನೂ ತನ್ನಿಷ್ಟಕ್ಕೆ ತಾನೇ ಶ್ರೇಷ್ಠನೆಂದು ತಿಳಿಯಹತ್ತಿರುವನು. ಇದರಿಂದ ಸಮಾಜದ ಸ್ಥಿತಿಯು ಅತ್ಯಂತ ಶೋಚನೀಯವಾಗಿದೆ. ಗ್ರಾಮಪಂಚಾಯತಿಗಳನ್ನು ಪುನಃ ಅಸ್ತಿತ್ವದಲ್ಲಿ ತರುವುದರಿಂದ ಸಮಾಜಕ್ಕೆ ಬಹಳ ಲಾಭವುಂಟಾಗುವಹಾಗಿದೆ. ದಯಾಳು ಬ್ರಿಟಿಷ್ ಸರ್ಕಾರದ ವಿಧಿಗಳಿಂದಲೂ ಈ ಗ್ರಾಮಪಂಚಾಯತಿಯ ಅನುಕೂಲತೆಯು ನಮಗೆ ದೊರೆಯುವಂತಿದೆ; ಆದರ ಲಾಭವನ್ನು ನಾವು ಪಡೆದುಕೊಳ್ಳಬೇಕು. ನಮ್ಮ ಸಮಾಜದ ಶೋಚನೀಯ ಸ್ಥಿತಿಯನ್ನು ನೋಡಿದರೆ ವಿಚಾರವುಳ್ಳವನ ಮನಸ್ಸು ನಿಶ್ಚಯವಾಗಿ ದ್ರವಿಸುವುದು. ಯಾಕೆಂದರೆ—ನೂರರಲ್ಲಿ ಐದುಜನರ ಸಾಂಪತ್ತಿಕಸ್ಥಿತಿಯಾದರೂ ಸಮಾಧಾನಕರವಾಗಿಲ್ಲದಿದ್ದರೂ ಕಲಹಗಳು ಮಾತ್ರ ಎಷ್ಟೋ ಉತ್ಪನ್ನಗಳಾಗುತ್ತಿವೆ. ಇದರಿಂದ ಎಷ್ಟೋ ದ್ರವ್ಯನಾಶವಾಗುತ್ತದೆ. ಇದರವಿಚಾರವನ್ನು ಮಾಡಿದರೆ ನಮ್ಮ ಮೂರ್ಖತನದ ಸೀಮೆಯು ಎಲ್ಲಿಯವರೆಗೂ ಹಬ್ಬಿರುವದೆಂಬುದು ನಮಗೆ ತಿಳಿದುಬರುವುದು. ನೂರರಲ್ಲಿ ತೊಂಬತ್ತೈದು ಜನರು ಅನ್ನವಿಲ್ಲದೆ ಸಾಯುತ್ತಿರುವಾಗ್ಗೆ, ೫ ಜನರು ತಮ್ಮ ತಮ್ಮಲ್ಲಿ ತಂಟೆಗಳನ್ನು ಮಾಡಿ ಹಣವನ್ನು ವ್ಯರ್ಥವಾಗಿ ವೆಚ್ಚಮಾಡುವುದಕ್ಕಿಂತಲೂ, ಅದೇ ಹಣವನ್ನು ಲೋಕಶಿಕ್ಷಣದ ಕಡೆಗೆ ವ್ಯಯಮಾಡಿದರೆ ಎಷ್ಟೋ ಪ್ರಯೋಜನವಾಗುವುದಲ್ಲವೆ? ಸಮಾಜದಲ್ಲಿ ಉಂಟಾಗುವ ಕಲಹಗಳ ನಿರ್ಣಯವನ್ನು ಪಂಚರ ಮುಖಾಂತರ ಮಾಡಿದರೆ, ಅದು ಒಳ್ಳೆಯ ನ್ಯಾಯವುಳ್ಳದ್ದಾಗುವುದು. ಮತ್ತೂ ಅದರಿಂದ ಸಮಾಜಕ್ಕೆ ಬಹು ಲಾಭಗಳುಂಟು. ವಕೀಲರ ಮತ್ತೂ ಸರ್ಕಾರದ ಮನೆಯಲ್ಲಿ ವ್ಯರ್ಥವಾಗಿ ದುಡ್ಡನ್ನು ಹಾಕುವುದಕ್ಕಿಂತ ತಮ್ಮ ಸಮಾಜದ ಶಿಕ್ಷಣದಕಡೆಗೆ ಹಾಕಿದರೆ ಎಷ್ಟೋ ಲಾಭವಲ್ಲವೆ? ಕಲಹಗಳು ಪಂಚರಮೂಲಕವಾಗಿ ತೀರ್ಮಾನಿಸಲ್ಪಡುವುದರಿಂದ, ಅದಕ್ಕಾಗಿ ಕೋರ್ಟುಗಳಲ್ಲಿ ವೆಚ್ಚಮಾಡಲ್ಪಡಬೇಕಾಗಿದ್ದ ಹಣವೆಲ್ಲಾ ಸಮಾಜದಲ್ಲೇ ಉಳಿದು ಅದರಿಂದ ಅನೇಕ ಲಾಭವುಂಟಾಗುವುದು. ನಮ್ಮ ಸಮಾಜದಲ್ಲಿ ವ್ಯಾಜ್ಯದ ನಿರ್ಣಯವು ನಮ್ಮಲ್ಲಿಯೇ ಆಗಬೇಕೆಂಬುದಕ್ಕಾಗಿಯೇ ಅಲ್ಲಲ್ಲಿ ಧರ್ಮಗುರುಗಳ ಮಠಸ್ಥಾಪನೆ, ಮಠಪತಿ, ಮಹಾಜನ, ಪಟ್ಟಣಶೆಟ್ಟಿ ಮುಂತಾದವರ ವ್ಯವಸ್ಥೆಯನ್ನು ಪೂರ್ವಿಕರು ಮಾಡಿದ್ದರೆಂಬುದು ಕಂಡುಬರುತ್ತಿದೆ. ಇದರಿಂದಲೇ ನಮ್ಮ ಮಹದಾಚಾರ್ಯರು ಈ ವಿಷಯವಾಗಿ ಎಷ್ಟು ವಿಚಾರವನ್ನು ಮಾಡಿದ್ದರೆಂಬುದು ತಿಳಿಯಬರುವುದು. ಆದುದರಿಂದ ಧರ್ಮಗುರುಗಳೂ, ಮತ್ತೂ ನಾಗರಿಕರೂ ಈ ಮಾತನ್ನು ಅವಶ್ಯವಾಗಿ ಮನಸ್ಸಿಗೆ ತೆಗೆದುಕೊಂಡು ತಮ್ಮತಮ್ಮೊಳಗೆ ವ್ಯಾಜ್ಯಗಳ ಇತ್ಯರ್ಥಮಾಡಲು ತೊಡಗಬೇಕು ಈಗಿನ ಚಿತ್ರಕಲ್ಲುದುರ್ಗದ ನಮ್ಮ ಶ್ರೀಮನ್ನಿರಂಜನ ಜಗದ್ಗುರು ಮುರಘರಾಜೇಂದ್ರ ಮಹಾಸ್ವಾ

ಚ್ಚಾಗುತ್ತಲಿದೆ. ಅದರ ಫಲವು ನಮ್ಮ ಈ ದೇಶೀಯರಿಗೆ ಸುಮ್ಮನೆ ದೊರೆಯಲಾರದು. ಅದನ್ನು ದೊರಕಿಸುವುದಕ್ಕೆ ತಕ್ಕ ಯತ್ನವನ್ನು ಮಾಡಬೇಕು. ಎಂದರೆ—ಜಗತ್ತಿನಲ್ಲಿ ಜನರು ನವೀನಕಲ್ಪನ ಚಾತುರ್ಯದಿಂದ ಯಾವ ಯಾವ ಫಲವನ್ನು ಹೊಂದುತ್ತಿರುವರೋ ಅವನ್ನು ಶೋಧಿಸಿ ತಿಳಿದುಕೊಂಡು ಬರುವುದಕ್ಕಾಗಿ ಸಂಬಳಗಾರರಾದವರನ್ನು ಕಳುಹಿಸಿ ಕೊಟ್ಟು, ಅವರು ಪರದೇಶಗಳಲ್ಲಿ ಶೋಧನಪೂರ್ವಕವಾಗಿ ಪಡೆದುಕೊಂಡ ನವೀನಪದಾರ್ಥ ಕಲ್ಪನೆಯ ಅನುಭವದ ವರದಿಯನ್ನು ಈ ಕಮಿಟಿಯವರು ಬರಮಾಡಿಕೊಳ್ಳುತ್ತಿರಬೇಕು ಅದನ್ನು ತಮ್ಮ ಸಮಾಜದಲ್ಲಿ ಪ್ರಕಟಿಸಿ ಅದರಂತೆ ಪ್ರಯತ್ನಿಸಿ, ಅದರ ಫಲವನ್ನು ಪಡೆದುಕೊಳ್ಳಲಿಕ್ಕೆ ತಿಳುಹಿಸಬೇಕು. ಹೀಗಾದರೆ ಮಾತ್ರ ಸದ್ಯಃಕಾಲದಲ್ಲಿ ಪ್ರಚಲಿತವಾಗುತ್ತಿರುವ ಉದ್ಯೋಗಗಳಲ್ಲಿ ಸಮಾಜದವರು ತೊಡಗಲಿಕ್ಕೆ ಅರ್ಹರಾಗುತ್ತಾರೆ. ಇದಲ್ಲದೆ ಇದುವರೆಗೆ ಬಳಕೆಯಲ್ಲಿರುವ ಪದಾರ್ಥಗಳಲ್ಲಿ ಯಾವುದಾದರೊಂದು ತೆರದ ನವೀನಕಲ್ಪನೆಯ ಮೂಲಕ ಕಾಲೋಚಿತವಾದ ಬದಲಾವಣೆಯನ್ನುಂಟು ಮಾಡುವುದರಿಂದ, ಜನರ ಅಭಿರುಚಿಯು ಅದರ ಕಡೆಗೆ ಹೆಚ್ಚಬಹುದೋ ಅಂತಹದನ್ನು ತಿಳಿದುಕೊಂಡು, ಅಂಥ ನವೀನ ಕಲ್ಪನೆಯ ಪರಿಶೋಧನೆಯಲ್ಲೇ ಪ್ರವೃತ್ತನಾಗಿರುವ ಬುದ್ಧಿಶಾಲಿಗೆ ಸಂಬಳವನ್ನುಗೊತ್ತು ಮಾಡಿ, ಅವನನ್ನು ಆ ಕೆಲಸದ ನಿರ್ವಾಹಕ್ಕೆ ನಿಯಮಿಸಿ, ಅಂಥವನಿಂದ ಮಾಡಿಸಲ್ಪಡುವ ನವೀನತರದ ಕಲ್ಪನೆಯ ವಸ್ತುಗಳ ಉಪಯೋಗವನ್ನು ಕಮಿಟಿಯವರು ವಿಚಾರಮಾಡಿ ತಿಳಿದುಕೊಂಡು, ಬಳಿಕ ಪ್ರಚಾರದಲ್ಲಿ ತರುತ್ತಬಂದರೆ, ಕೆಲವುಕಾಲದೊಳಗಾಗಿ ಔದ್ಯೋಗಿಕ ವ್ಯವಹಾರಗಳಲ್ಲಿ ನಿಪುಣರಾದವರ ವರ್ಗದಲ್ಲಿ ಸೇರುವುದಕ್ಕೆ ನಮ್ಮ ಸಮಾಜದವರೂ ಯೋಗ್ಯರಾಗುತ್ತಾರೆ. ಇದಕ್ಕಾಗಿಯೇ ನಮ್ಮ ದಯಾಳು ಸರ್ಕಾರದವರು ಟೆಕ್ನಿಕಲ್ ಕಾಲೇಜು, ಇಂಜನಿಯರಿಂಗ್ ಕಾಲೇಜು, ಸೈನ್ಸ ಕಾಲೇಜು, ಅಗ್ರಿಕಲ್ಚರಲ್ ಕಾಲೇಜು, ಮೆಡಿಕಲ್ ಕಾಲೇಜು, ವೆಟರ್ನರಿ ಕಾಲೇಜು, ಮೊದಲಾದ ಸಂಸ್ಥೆಗಳನ್ನು ಸ್ಥಾಪಿಸಿರುತ್ತಾರೆ. ಇತ್ತಕಡೆಗೆ ನಮ್ಮವರು ಲಕ್ಷ್ಯಕೊಟ್ಟು ಸರ್ಕಾರದವರ ಪರಿಶ್ರಮದ ಸಾರ್ಥಕ್ಯವನ್ನು ಮಾಡಬೇಕು. ನಮ್ಮ ಸರ್ಕಾರದವರು ಪ್ರಜೆಗಳ ವಿಷಯದಲ್ಲಿ ದಯಾಪೂರ್ವಕವಾಗಿ ಮಾಡುತ್ತಿರುವ ಪ್ರಯತ್ನಗಳನ್ನು ವರ್ಣಿಸಲಶಕ್ಯವಾಗಿದೆ. ಅನಾಯಾಸಸಿದ್ಧವಾಗಿರುವ ಅವರ ಪರಿಶ್ರಮದ ಫಲವನ್ನು ನಾವು ಅನುಭವಿಸದಿದ್ದರೆ, ನದಿಯಹತ್ತಿರ ಕುಳಿತು ನೀರಡಿಕೆಯಿಂದ ಬಾಯಿಬಿಡುವವರ ಸ್ಥಿತಿಗೆ ನಾವು ಪಾತ್ರರಾಗುತ್ತೇವೆ. ... ... *

## —( ಸ್ತ್ರೀ ಶಿಕ್ಷಣ. )—

೮. ಧಾರ್ಮಿಕ ಶಿಕ್ಷಣವೆಂಬ ತಳಪದಿಯನ್ನು ಸಮಾಜದ ಉನ್ನತಿಯೆಂಬ ಕಟ್ಟಡವು ಹೇಗೆ ಆಶ್ರಯಿಸಿಕೊಂಡಿರುವುದೊ, ಅದರಂತೆ ಬಾಲಕರನ್ನು ಕರ್ತೃತ್ವಶಾಲಿಗಳನ್ನಾಗಿ ಮಾಡುವುದಕ್ಕೆ ಸ್ತ್ರೀಶಿಕ್ಷಣವು ತಳಹದಿಯಾಗಿರುತ್ತದೆಂಬುದನ್ನು ಯಾರೂ ಮರೆ

ಯುಬಾರದು. ಸದ್ಯಃಕಾಲದಲ್ಲಿ ನಮ್ಮ ಸಮಾಜದೊಳಗೆ ಸ್ತ್ರೀಶಿಕ್ಷಣದ ಅವಶ್ಯಕತೆಯು ಬಹುಳವಾಗಿರುವುದು. ಸ್ತ್ರೀಯರಿಗೆ ಶಿಕ್ಷಣವನ್ನು ಕೊಡಬೇಕೆಂಬುದರಲ್ಲಿ ಎಲ್ಲ ವಿಚಾರಶಾಲಿಗಳ ಮತೈಕ್ಯವುಂಟು. ಹೀಗಿದ್ದಾಗ್ಯೂ ನಮ್ಮಲ್ಲಿ ಕೆಲವರು ,, ಸ್ತ್ರೀಯರು ಅಕ್ಷರಶತ್ರುಗಳಾಗಿದ್ದರೆ ಏನಾಗುವುದು ? ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲದಿದ್ದರೇನಾಗುವುದು ! ಬಾಲ್ಯದಲ್ಲಿಯೇ ಲಗ್ನಗಳನ್ನು ಮಾಡಿದರೇನಾಗುವುದು ? ಶಿಕ್ಷಣದಿಂದ ಸ್ತ್ರೀಯರು ನೀತಿಭ್ರಷ್ಟರಾಗುತ್ತಾರೆ ,, ಎಂಬುದು ಮೊದಲಾದ ನಿರರ್ಗಲ ಪ್ರಲಾಪಗಳನ್ನು ಮಾಡುವಂಥ ವಿಚಾರಶೂನ್ಯರಾಗಿ ಇರುವರು. ಇಂಥ ಸದ್ಗೃಹಸ್ಥರಿಗೆ ನಾನು ಹೀಗೆ ಹೇಳುತ್ತೇನೆ. ಏನೆಂಪರೆ-ಮಹನೀಯರೆ! ತಾವು ಪುರಾಣಾದಿ ಗ್ರಂಥಗಳಲ್ಲಿ ವಿದ್ಯಾವತಿಯರಾದ ಸ್ತ್ರೀಯರ ಚರಿತ್ರಗಳನ್ನು ಓದಿರಬಹುದು. ನಮ್ಮಲ್ಲಾಗಿದರೂ ನಿಂಬಾಂಬಾ, ಉಡುತಡಿಮಹಾದೇವಿ, ಅಮೃತವತೀಮಹಾದೇವಿ, ಸರ್ವಮಂಗಲಾ, ನೀಲಾಂಬಾ, ನಾಗಲಾಂಬಾ, ಗಂಗಾಂಬಾ ಇತ್ಯಾದಿಗಳು ಸುಶಿಕ್ಷಿತ ಸ್ತ್ರೀಯರಾಗಿದ್ದರೆಂಬುದು ಸುಪ್ರಸಿದ್ಧವೇ ಆಗಿದೆ. ಸದ್ಯದಲ್ಲಿ ನಾವು ಸ್ತ್ರೀಶಿಕ್ಷಣದ ವಿಷಯವಾಗಿ ತೀರ ಹಿಂದಿರುತ್ತೇವೆ. ಸ್ತ್ರೀಶಿಕ್ಷಣದ ವಿಷಯದಲ್ಲಿ ಲಕ್ಷ್ಯವನ್ನಿತ್ತು ನೋಡಿದರೆ ಕಂಡುಬರುವು ದೇನೆಂದರೆ:—ಎಲ್ಲಾ ಹಿಂದೂಸ್ಥಾನದಲ್ಲಿ ವಿದ್ಯಾವತಿಯರಾದ ವೀರಶೈವ ಸ್ತ್ರೀಯರು ಸಾವಿರದಲ್ಲಿ ಒಬ್ಬಿಬ್ಬರು ದೊರೆಯುವುದು ಸಹ ಕಠಿಣವಾಗಿದೆ. ಈ ಸ್ಥಿತಿಯು ಸ್ವಲ್ಪವೂ ಉಳಿಯದಂತೆ ಹೋಗದ ಹೊರತು ನಮ್ಮ ಪ್ರಗತಿಯಾಗುವುದು ಶಕ್ಯವಲ್ಲ. ಸ್ತ್ರೀಯು ಪುರುಷನ ಅರ್ಧಾಂಗಿಯಾಗಿರುವಳು. ಸ್ತ್ರೀಯರಿಗೆ ಧರ್ಮ, ಅರ್ಥ, ಕಾಮ, ಮುಂತಾದುವುಗಳಲ್ಲಿ ನಾವು ಸಹಕಾರಿತ್ವವನ್ನು ಕೊಡುತ್ತೇವೆ. ಆದರೆ ಅವರ ಶಿಕ್ಷಣದ ವ್ಯವಸ್ಥೆಯನ್ನು ಮಾತ್ರ ಮಾಡದೆ, ಅವರನ್ನು ಅಜ್ಞಾನಾವಸ್ಥೆಯಲ್ಲಿಟ್ಟು ಮುಂದಿನ ಪೀಳಿಗೆಯ ಉನ್ನತಿಯ ಹಾನಿಯನ್ನು ಮಾಡುತ್ತೇವೆ. ಇದು ಬಹುಳ ಶೋಚನೀಯವಾದ ಮಾತಾಗಿದೆ. ಕೂಸುಗಳ ಸಂರಕ್ಷಣೆಯ ಭಾರವು ತಾಯಿಯ ಮೇಲಿರುವುದು. ತಾಯಿಯ ಪ್ರಕೃತಿಯ ವಿಚಾರದ ಮತ್ತೂ ಆಚಾರದ ಪರಿಣಾಮವು ಗರ್ಭಾಧಾನದ ಕಾಲದಿಂದಲೇ ಪಿಂಡದಲ್ಲಿ ಉಂಟಾಗಲಾರಂಭಿಸುತ್ತದೆ. ಆದುದರಿಂದ ಯಾವ ಸ್ತ್ರೀಯಮೇಲೆ ಕೂಸುಗಳನ್ನು ಸಾಕುವಭಾರದ ಕೆಲಸವನ್ನು ನಾವು ಹೊರಿಸುತ್ತೇವೊ ಅವಳನ್ನು ಅಕ್ಷರಶತ್ರುವನ್ನಾಗಿ ಮಾಡುವುದು ಅತ್ಯಂತ ಅಹಿತಕರವಾದುದೆಂದು ನಾನು ತಿಳಿಯುತ್ತೇನೆ. ಯಾವ ಕುಟುಂಬದ ಸ್ತ್ರೀಯರು ಅಶಿಕ್ಷಿತರಾಗಿರುವರೊ ಆ ಕುಟುಂಬದ ಪುರುಷರು ಜಗತ್ತಿನ ಅನೇಕ ವ್ಯವಹಾರಗಳನ್ನು ತಾವೇ ಮಾಡಬೇಕಾಗುತ್ತದೆ. ಆದರೆ ಸ್ತ್ರೀಯರು ಸುಶಿಕ್ಷಿತರಾಗಿದ್ದರೆ ಪುರುಷರಿಗೆ ಅನೇಕ ತರದ ಸಹಾಯವನ್ನು ಮಾಡಿ ಅವರ ಭಾರವನ್ನು ಕಡಿಮೆ ಮಾಡುತ್ತಾರೆ. ಸ್ತ್ರೀಶಿಕ್ಷಣದ ವಿಷಯವಾಗಿ ಇದಕ್ಕಿಂತ ಹೆಚ್ಚು ವರ್ಣನೆಯನ್ನು ಮಾಡಿ ಹೇಳುವುದು ನನಗೆ ಅವಶ್ಯಕವಾಗಿ ಕಾಣುವುದಿಲ್ಲ. ಸ್ವಲ್ಪದರಲ್ಲಿ ಹೇಳುವುದೇನೆಂದರೆ—ಸ್ತ್ರೀಯರು ಕೌಮಾರ್ಯಾವಸ್ಥೆಯಲ್ಲಿ ಧಾರ್ಮಿಕ ಮತ್ತೂ ಲೌಕಿಕ ಶಿಕ್ಷಣವನ್ನು ಸಂಪಾದಿಸಬೇಕು. ತಾರುಣ್ಯಾವಸ್ಥೆಯಲ್ಲಿ ಪ

ತಿಸೇವೆ, ಗುರುಭಕ್ತಿ, ಹಿರಿಯರ ಆಜ್ಞಾನುವರ್ತನೆ, ರೋಗಿಗಳ ಶುಶ್ರೂಷೆ, ಇತರ ಗೃಹ ಕೃತ್ಯ—ಇವುಗಳನ್ನೂ ಮತ್ತೂ ಎಲ್ಲಕ್ಕೂ ಮುಖ್ಯವಾದ ಬಾಲಸಂಗೋಪನೆವನ್ನೂ ಸಹ ಮಾಡಬೇಕು, ಹೀಗಿದ್ದರೇನೆಯೇ ಆಕೆಗೆ ಗೃಹಿಣಿಯೆಂಬ ಪದವು ಶೋಭಿಸುವುದು. ಅನಂ ರಂತೆಯೇ ಸಂಸಾರದೊಳಗಿನ ಅವಶ್ಯಕವಾದ ಸರ್ವಕ್ರಿಯೆಗಳನ್ನು ಮಾಡಿ ಅವಕಾಶದೊರೆದ ವೇಳೆಯಲ್ಲಿ ಸತಿಯರ ಚರಿತ್ರೆಗಳನ್ನೂ, ಧಾರ್ಮಿಕ ಪುರಾಣ ಶಾಸ್ತ್ರಗಳನ್ನೂ ಮತ್ತೂ ವಿ ಚಾರಪರಿಪ್ಲುತವಾದ (ಸ್ತ್ರೀಯರಿಗಾಗಿಯೇ ಹೊರಡುವ) ಮಾಸಿಕ ಪತ್ರಗಳನ್ನೂ, ವರ್ತ ಮಾನಪತ್ರಗಳನ್ನೂ ಓದಿ ಸದ್ಯಸ್ಥಿತಿಯ ಜ್ಞಾನವನ್ನು ಮಾಡಿಕೊಳ್ಳಬೇಕು. ಮತ್ತೂ ಸ ಮಾಜದ ಯೋಗ್ಯಸೇವೆಯನ್ನು ಮಾಡಬೇಕು. ಸುಶಿಕ್ಷಿತಪತಿಯೂ ಸಹ ಯೋಗ್ಯವಾದ ಸಾಧನೆಗಳನ್ನು ಪತ್ನಿಯರಿಗೆ ಸಂಪಾದಿಸಿಕೊಟ್ಟು, ಅವರಲ್ಲಿ ವಿದ್ಯೆಯ ಅಭಿರುಚಿಯನ್ನುಂ ಟುಮಾಡಬೇಕು. ಈ ಪ್ರಕಾರವಾಗಿ ಹುಡುಗರನ್ನು ಯೋಗ್ಯವಾಗಿ ಸಂರಕ್ಷಿಸಿ, ತಮ್ಮ ಸ ದಾಚರಣೆಯಿಂದ ಅವರ ಮನಸ್ಸಿನಮೇಲೆ ಸದಾಚಾರ, ನೀತಿ, ಭೂತದಯಾ, ಧರ್ಮ ಪ್ರೀತಿ ಮುಂತಾದ ಉದಾತ್ತ ಸದ್ಗುಣಗಳ ಸಂಸ್ಕಾರವನ್ನು ಮಾಡಿ ಅವರು (ಹುಡುಗರು) ಧರ್ಮದಲ್ಲಿ ಸರಿಯಾದ ಭಕ್ತಿಯುಳ್ಳವರೂ, ನೀತಿವಂತರೂ ಆಗುವಂತೆ ಅವರಿಗೆ ಶಿಕ್ಷಣವನ್ನು ಕೊಡ ಬೇಕು. ಯಾಕೆಂದರೆ ೫ ವರ್ಷಗಳವರೆಗೂ ಮಕ್ಕಳು ಬಹುಶಃ ತಾಯಿಯ ಸ್ವಾಧೀನದಲ್ಲಿ ಯೇ ಇರುತ್ತವೆ. ಆವರೆಗೂ ಇವರು (ಸ್ತ್ರೀಯರು) ಮೇಲೆ ಹೇಳಿದಂತೆ ಶಿಕ್ಷಣವನ್ನು ಅವರಿಗೆ ಕೊಡಲಾರಂಭಿಸಬೇಕು. ದೊಡ್ಡದೊಡ್ಡ ವಿದ್ವಾಂಸರು, ವೀರಪುರುಷರು, ಕಾವ್ಯ ಶಾಸ್ತ್ರವಿಶಾರದರು ಇಂಥವರ ಜನನಿಯರು ಬಹುಶಃ ಸುಶಿಕ್ಷಿತ ಸ್ತ್ರೀಯರೇ ಇರುವರು. ಆದುದರಿಂದ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವುದು, ಸಮಾಜಕ್ಕೆ ಅತ್ಯಂತ ಹಿತಕರವಾ ಗಿರುವುದು. ಸ್ತ್ರೀಶಿಕ್ಷಣದ ವಿಷಯವಾಗಿ ಎಲ್ಲರೂ ಶ್ರದ್ಧೆಯನ್ನು ವಹಿಸಬೇಕು. ನಮ್ಮ ದ ಯಾಳುಗಳಾದ ರಾಜ್ಯಕರ್ತೃಗಳು ಸ್ತ್ರೀಶಿಕ್ಷಣದ ಪ್ರಸಾರಾರ್ಥವಾಗಿ, ಅಲ್ಲಲ್ಲಿ ಉಚಿತವಾಗಿ ವಿದ್ಯಾಭ್ಯಾಸ ಮಾಡಿಸುವ ಶಾಲೆಗಳನ್ನು ಸ್ಥಾಪಿಸಿರುವರು. ಆ ಶಾಲೆಗಳಿಗೆ ತಮ್ಮತಮ್ಮ ಮ ಕ್ಕಳುಗಳನ್ನು ಅವುಗಳ ಪಾಲಕರು ಅವಶ್ಯಕವಾಗಿ ಕಳುಹಿಸಬೇಕು. ಮತ್ತೂ ಅವರಿಗೆ ಸುಶಿಕ್ಷಿತರಾದ ಮುಂದಾಳುಗಳು ಈ ಕಾರ್ಯದಲ್ಲಿ ಅವಶ್ಯವಾಗಿ ಸಹಾಯವನ್ನು ಮಾಡಬೇಕು.

## —(ಗ್ರಾಮ ಪಂಚಾಯತಿ.)—

೯. ಪರಂಪರೆಯಿಂದ ನಡೆದುಬಂದ ಸಮಾಜೋತ್ಕರ್ಷಕಗಳಾದ ಕೆಲವು ರೂಢಿ ಗಳು ಈಗಿನಕಾಲಕ್ಕೆ ನಾಮಶೇಷಗಳಾಗಿವೆ. ಗ್ರಾಮಪಂಚಾಯತಿಯ ರೂಢಿಯೂ ಅಂಥವು ಗಳಿಗೇ ಸೇರಿದುದು. ನಮ್ಮ ಸಮಾಜದ ಧರ್ಮದ ಜಾಗರೂಕತೆಯಿದ್ದ ಕಾಲದಲ್ಲಿ, ಇತರ ಸಮಾಜದವರೂ ಸಹ ನಮ್ಮ ಧರ್ಮಗುರುಗಳನ್ನು ಶ್ರೇಷ್ಠರನ್ನಾಗಿ ಮಾನಿಸುತ್ತಿದ್ದರು;

ಆಗ್ಗೆ ಆ ಧರ್ಮಗುರುಗಳ ಮುಂದೆ ಯಾವನೊಬ್ಬನೂ ಪ್ರತಿಯಾಗಿ ,, ಬ್ರು ,, ಎಂಬ ಒಂದಕ್ಷರವನ್ನು ಕೂಡಾ ಉಚ್ಚರಿಸುತ್ತಿರಲಿಲ್ಲ. ಈಗಿನ ಅನೇಕ ಅಜ್ಞಾನಿ ಧರ್ಮಗುರುಗಳಲ್ಲಿ ಆ ತೇಜಸ್ಸು ಉಳಿಯದುದರಿಂದ, ನಮ್ಮ ಸಮಾಜದಲ್ಲಿ ಹಲವು ಪಂಗಡಗಳಾಗಿರುವುವು. ಇದರಿಂದ ಸಮಾಜದಲ್ಲೆಲ್ಲಾ ಅವ್ಯವಸ್ಥೆಯು ಪ್ರಬಲಿಸಿರುತ್ತದೆ. ಪ್ರತಿಯೊಬ್ಬನೂ ತನ್ನಿಷ್ಟಕ್ಕೆ ತಾನೇ ಶ್ರೇಷ್ಠನೆಂದು ತಿಳಿಯಹತ್ತಿರುವನು. ಇದರಿಂದ ಸಮಾಜದ ಸ್ಥಿತಿಯು ಅತ್ಯಂತ ಶೋಚನೀಯವಾಗಿದೆ. ಗ್ರಾಮಪಂಚಾಯತಿಗಳನ್ನು ಪುನಃ ಅಸ್ತಿತ್ವದಲ್ಲಿ ತರುವುದರಿಂದ ಸಮಾಜಕ್ಕೆ ಬಹುಳ ಲಾಭವುಂಟಾಗುವದಾಗಿದೆ. ದಯಾಳು ಬ್ರಿಟಿಷ್ ಸರ್ಕಾರದ ವಿಧಿಗಳಿಂದಲೂ ಈ ಗ್ರಾಮಪಂಚಾಯತಿಯ ಅನುಕೂಲತೆಯು ನಮಗೆ ದೊರೆಯುವಂತಿದೆ ; ಅದರ ಲಾಭವನ್ನು ನಾವು ಪಡೆದುಕೊಳ್ಳಬೇಕು. ನಮ್ಮ ಸಮಾಜದ ಶೋಚನೀಯ ಸ್ಥಿತಿಯನ್ನು ನೋಡಿದರೆ ವಿಚಾರವುಳ್ಳವನ ಮನಸ್ಸು ನಿಶ್ಚಯವಾಗಿ ದ್ರವಿಸುವುದು. ಯಾಕಂದರೆ—ನೂರರಲ್ಲಿ ಐದುಜನರ ಸಾಂಪತ್ತಿಕಸ್ಥಿತಿಯಾದರೂ ಸಮಾಧಾನಕರವಾಗಿಲ್ಲದಿದ್ದರೂ ಕಲಹಗಳು ಮಾತ್ರ ಎಷ್ಟೋ ಉತ್ಪನ್ನಗಳಾಗುತ್ತಿವೆ. ಇದರಿಂದ ಎಷ್ಟೋ ದ್ರವ್ಯನಾಶವಾಗುತ್ತದೆ. ಇದರವಿಚಾರವನ್ನು ಮಾಡಿದರೆ ನಮ್ಮ ಮೂರ್ಖತನದ ಸೀಮೆಯು ಎಲ್ಲಿಯವರೆಗೂ ಹಬ್ಬಿರುವದೆಂಬುದು ನಮಗೆ ತಿಳಿದುಬರುವುದು. ನೂರರಲ್ಲಿ ತೊಂಬತ್ತೈದು ಜನರು ಅನ್ನವಿಲ್ಲದೆ ಸಾಯುತ್ತಿರುವಾಗ್ಗೆ, ೫ ಜನರು ತಮ್ಮ ತಮ್ಮಲ್ಲಿ ತಂಟೆಗಳನ್ನು ಮಾಡಿ ಹಣವನ್ನು ವ್ಯರ್ಥವಾಗಿ ವೆಚ್ಚಮಾಡುವುದಕ್ಕಿಂತಲೂ, ಅದೇ ಹಣವನ್ನು ಲೋಕಶಿಕ್ಷಣದ ಕಡೆಗೆ ವ್ಯಯಮಾಡಿದರೆ ಎಷ್ಟೋ ಪ್ರಯೋಜನವಾಗುವುದಲ್ಲವೆ ? ಸಮಾಜದಲ್ಲಿ ಉಂಟಾಗುವ ಕಲಹಗಳ ನಿರ್ಣಯವನ್ನು ಪಂಚರ ಮುಖಾಂತರ ಮಾಡಿದರೆ, ಅದು ಒಳ್ಳೆಯ ನ್ಯಾಯವುಳ್ಳದ್ದಾಗುವುದು. ಮತ್ತೂ ಅದರಿಂದ ಸಮಾಜಕ್ಕೆ ಬಹು ಲಾಭಗಳುಂಟು. ವಕೀಲರ ಮತ್ತೂ ಸರ್ಕಾರದ ಮನೆಯಲ್ಲಿ ವ್ಯರ್ಥವಾಗಿ ದುಡ್ಡನ್ನು ಹಾಕುವುದಕ್ಕಿಂತ ತಮ್ಮ ಸಮಾಜದ ಶಿಕ್ಷಣದಕಡೆಗೆ ಹಾಕಿದರೆ ಎಷ್ಟೋ ಲಾಭವಲ್ಲವೆ ? ಕಲಹಗಳು ಪಂಚರಮೂಲಕವಾಗಿ ತೀರ್ಮಾನಿಸಲ್ಪಡುವುದರಿಂದ, ಅದಕ್ಕಾಗಿ ಕೋರ್ಟುಗಳಲ್ಲಿ ವೆಚ್ಚಮಾಡಲ್ಪಡಬೇಕಾಗಿದ್ದ ಹಣವೆಲ್ಲಾ ಸಮಾಜದಲ್ಲೇ ಉಳಿದು ಅದರಿಂದ ಅನೇಕ ಲಾಭವುಂಟಾಗುವುದು. ನಮ್ಮ ಸಮಾಜದಲ್ಲಿ ವ್ಯಾಜ್ಯದ ನಿರ್ಣಯವು ನಮ್ಮಲ್ಲಿಯೇ ಆಗಬೇಕೆಂಬುದಕ್ಕಾಗಿಯೇ ಅಲ್ಲಲ್ಲಿ ಧರ್ಮಗುರುಗಳ ಮಠಸ್ಥಾಪನೆ, ಮಠಪತಿ, ಮಹಾಜನ, ಪಟ್ಟಣಶೆಟ್ಟಿ ಮುಂತಾದವರ ವ್ಯವಸ್ಥೆಯನ್ನು ಪೂರ್ವಿಕರು ಮಾಡಿದ್ದರೆಂಬುದು ಕಂಡುಬರುತ್ತದೆ. ಇದರಿಂದಲೇ ನಮ್ಮ ಮಹದಾಚಾರ್ಯರು ಈ ವಿಷಯವಾಗಿ ಎಷ್ಟು ವಿಚಾರವನ್ನು ಮಾಡಿದ್ದರೆಂಬುದು ತಿಳಿಯಬರುವುದು. ಆದುದರಿಂದ ಧರ್ಮಗುರುಗಳೂ, ಮತ್ತೂ ನಾಗರಿಕರೂ ಈ ಮಾತನ್ನು ಅವಶ್ಯವಾಗಿ ಮನಸ್ಸಿಗೆ ತೆಗೆದುಕೊಂಡು ತಮ್ಮತಮ್ಮೊಳಗೆ ವ್ಯಾಜ್ಯಗಳ ಇತ್ಯರ್ಥಮಾಡಲು ತೊಡಗಬೇಕು ಈಗಿನ ಚಿತ್ರಕಲ್ಲುದುರ್ಗದ ನಮ್ಮ ಶ್ರೀಮನ್ನಿರಂಜನ ಜಗದ್ಗುರು ಮುರಘರಾಜೇಂದ್ರ ಮಹಾಸ್ವಾ

ಮಿಗಳು ವಿಶ್ವಾಸಪರರಾಗಿಯೂ, ಮಹಿಮರಾಗಿಯೂ ಇರುವುದರಿಂದ ಸಾಮಾಜಿಕ ಕಲಹಗಳನ್ನು ತಾವೇ ತೀರ್ಮಾನಮಾಡುತ್ತಾರೆ. ಇದರಿಂದ ಅವರ ಉಪಕಾರವು ನಮ್ಮ ಸಮಾಜಕ್ಕೆ ಎಷ್ಟೋ ಆಗಿರುತ್ತದೆ. ಇವರ ಅನುಕರಣವನ್ನು ಎಲ್ಲಾ ಧರ್ಮಾಧಿಕಾರಿಗಳೂ ಮಾಡಬೇಕೆಂದು ನನ್ನ ಸವಿನಯಪ್ರಾರ್ಥನೆಯಿದೆ. ಯಾಕೆಂದರೆ—ಅದೇ ವ್ಯಾಜ್ಯದ ಹಣವು ಉಳಿದ ಪಕ್ಷದಲ್ಲಿ ಲೌಕಿಕಶಿಕ್ಷಣದ ಅಥವಾ ವೈದಿಕಶಿಕ್ಷಣದ ಶಾಲೆಗಳನ್ನು ಸ್ಥಾಪಿಸುವುದಕ್ಕೆ ಉಪಯೋಗಿಸಿಕೊಳ್ಳಬಹುದು. ಮತ್ತೂ ಅನಾಥಬಾಲಕರ ಪೋಷಣವನ್ನು ಮಾಡುವುದಕ್ಕೂ ಉಪಯೋಗಿಸಿಕೊಳ್ಳಬಹುದು. ಮತ್ತೂ ಇತರ ಅನೇಕ ರೀತಿಗಳಿಂದಲೂ ಸಮಾಜದ ಹಿತವನ್ನು ಸಾಧಿಸಿಕೊಳ್ಳಲು ಉಪಯೋಗಿಸಬಹುದು. ಆದುದರಿಂದ ಸರ್ವರೂ ಆದಷ್ಟುಮಟ್ಟಿಗೆ ತಮ್ಮತಮ್ಮೊಳಗೇ ಕಲಹಗಳತೀರ್ಮಾನವನ್ನು ಮಾಡಿಕೊಳ್ಳಬೇಕೆಂದು ನನ್ನ ವಿನಂತಿಯಿದೆ ಈ ಪ್ರಕಾರದ ರೂಢಿಯು ಜನರಲ್ಲಿ ವರ್ತಿಸುವಂತೆ ಮಾಡುವುದಕ್ಕಾಗಿ, ಈ ಮಹಾಸಭೆಯವರು ಅಲ್ಲಲ್ಲಿಗೆ ಉಪದೇಶಕರ ಯೋಜನೆಯನ್ನು ಮಾಡಬೇಕು. ... *

## —( ಸಾಮಾಜಿಕ ಸುಧಾರಣೆ. )—

೧೦. ಮೇಲೆ ಹೇಳಿದಂತೆ ನಾಲ್ಕು ಕಡೆಯಿಂದಲೂ ಉನ್ನತಿಯಾಗುವುದಾದರೆ, ನಮ್ಮ ಸಮಾಜದ ಉನ್ನತಿಯಾಗುವುದು. ನಮ್ಮ ಸಮಾಜವು ಒಂದು ಶರೀರದಂತಿರುವುದು ಶರೀರಕ್ಕೆ ಯಾವಪ್ರಕಾರ ಬಾಲ ತಾರುಣ್ಯ ವಾರ್ಧಕ್ಯಗಳೆಂಬ ಮೂರವಸ್ಥೆಗಳಿರುವುವೋ, ಅದರಂತೆಯೇ ಸಮಾಜಕ್ಕೂ ಅವು ಇರುವುವು. ನಮ್ಮಸಮಾಜವು ಸದ್ಯಃಕಾಲದಲ್ಲಿ ಬಾಲ್ಯಾವಸ್ಥೆಯಲ್ಲಿರುತ್ತದೆ. ಮೆಲ್ಲಮೆಲ್ಲನೆ ಇದರವೃದ್ಧಿಯು ಆಗುತ್ತಲಿದೆ. ನಮ್ಮಸಮಾಜವು ಅಭಿವೃದ್ಧಿಗೊಳ್ಳಬೇಕು; ಅದಕ್ಕೆ ಶಿಕ್ಷಣವು ದೊರೆಯಬೇಕು; ತಮ್ಮ ಧರ್ಮಾಭಿಮಾನವು ಅದರಲ್ಲಿ ಉಂಟಾಗಬೇಕು ಇದೇ ಸಮಾಜಸುಧಾರಣೆಯೆಂಬುವುದು. ನಮ್ಮಲ್ಲಿ ನಮ್ಮಧರ್ಮದ ಅಭಿಮಾನವು ಉತ್ಪನ್ನವಾಗಬೇಕು. ಆದರೆ ನಾವು ಇತರಧರ್ಮದ ದ್ವೇಷವನ್ನು ಮಾಡುವುದನ್ನುಮಾತ್ರ ಕಲಿಯಬಾರದು. ಮತಪ್ರಕಾಶಾರ್ಥವಾಗಿ ನಮ್ಮಲ್ಲಿಯ ಮಹದಾಚಾರ್ಯರು ಎಲ್ಲಾ ಕಡೆಯಲ್ಲಿ ಉಪದೇಶವನ್ನುಮಾಡುತ್ತ ಸಂಚರಿಸಬೇಕೆಂದು ನಮ್ಮ ಧರ್ಮಶಾಸ್ತ್ರಗಳ ಅಭಿಪ್ರಾಯವುಂಟು. ವೀರಶೈವ ಸಮಾಜದ ಸುಧಾರಣೆಯನ್ನು ಮಾಡುವ ಉದ್ದೇಶದಿಂದ ಧರ್ಮಗುರುಗಳು ಸಂಚರಿಸಬಾರದೆಂಬುದಾಗಿ ಧರ್ಮಶಾಸ್ತ್ರದೆಲ್ಲೆಲ್ಲಿಯೂ ಹೇಳಲ್ಪಟ್ಟಿಲ್ಲ. ಆದುದರಿಂದ ನಮ್ಮ ಧರ್ಮಗುರುಗಳು ಧರ್ಮಜ್ಞಾನಪ್ರಸಾರದ ಸಲುವಾಗಿ ಎಲ್ಲಕಡೆಗೂ ಪರ್ಯಟನವನ್ನುಮಾಡಿ, ಧರ್ಮದ ಗ್ಲಾನಿಯನ್ನು ಹೋಗಲಾಡಿಸುವ ವ್ಯವಸ್ಥೆಯನ್ನು ಮಾಡಬೇಕು.

## —( ಸಮಯಭೇದದ ವಿಚಾರ. )—

೧೧. ಶ್ರೀಮನ್ನಿರಂಜನ (ವಿರಕ್ತ) ಇವರ ಅವತಾರವು ಪಂಚಾಚಾರ್ಯ ಮತ್ತೂ ಭಕ್ತರ ಉದ್ಧಾರಾರ್ಥವಾಗಿ ಆಯಿತು. ಯುಗಭೇದದಿಂದ ನಿರಂಜನ, ನಿರ್ಮಾಯ, ನಿಷ್ಕಲ,

ಮತ್ತೂ ಪ್ರಭುಯೆಂಬ ಹೆಸರುಗಳಿಂದ ಅವರು ಪ್ರಸಿದ್ಧರಾಗಿದ್ದಾರೆ. ಅದರಲ್ಲಿ ಕಲಿಯುಗ ದಲ್ಲಿ ಪ್ರಭುದೇವರೆಂಬ ಹೆಸರಿನಿಂದ ಇವರು ಪ್ರಸಿದ್ಧರಾಗಿರುವರು. ಯಾವ ಯುಗದಲ್ಲಾ ದರೂ ಇವರ ಶಾಖೆಗಳು ಅಥವಾ ಒಳಭೇದಗಳು ಯಾವಾಗ್ಗೂ ನೆಲಸಿದ್ದಂತೆ ಯಾವಶಾಸ್ತ್ರ ದಲ್ಲಿಯೂ ಕಾಣಬರುವುದಿಲ್ಲ. ಹೀಗಿದ್ದು ಇತ್ತಿತ್ತ ಅವರಲ್ಲಿ ನಾಲ್ಕು ಸಮಯಭೇದಗಳಾ ದಂತೆ ತೋರುತ್ತದೆ. ಗ್ರಂಥಗಳಲ್ಲಿ ಈ ಸಮಯಭೇದದ ವಿಷಯಕವಾದ ಪ್ರಮಾಣಗಳಿಲ್ಲ. ಮತ್ತೂ ಈ ಭೇದವು ಹುಟ್ಟುವುದಕ್ಕೆ ಯೋಗ್ಯಕಾರಣವಾವುದೂ ಗೋಚರಿಸದುದರಿಂದ ಅವು ಅರ್ವಾಚೀನಗಳಾಗಿವೆ. ಎಷ್ಟೋ ಸಮಂಜಸರಾದ ನಿರಂಜನ ಸ್ವಾಮಿಗಳು ಸಮಯ ಭೇದವನ್ನು ಲೆಕ್ಕಿಸದೆ ಪರಸ್ಪರ ಸಾಮರಸ್ಯವನ್ನು ಮಾಡುತ್ತಾರೆ. ಯಾವ ಭೇದವನ್ನೂ ಮನಸ್ಸಿನಲ್ಲಿ ತಾರದೆ, ನಮಸ್ಕಾರ ಪಾದೋದಕಪ್ರಸಾದ ಸ್ವೀಕಾರ ಇವುಗಳನ್ನು ಪರಸ್ಪ ರವಾಗಿ ಮಾಡುತ್ತಾರೆ. ಈ ಸಮಯಭೇದವು ಪ್ರಾಚೀನಕಾಲದುದಾಗಿದ್ದರೆ, ಈ ಸಮರಸ ಭಾವವು ಎಂದೂ ಸಂಭವಿಸುತ್ತಿರಲಿಲ್ಲವೆಂಬುದು ಇದರಿಂದಲೇ ಸ್ಪಷ್ಟವಾಗುವುದು. ಯದಾ ಕದಾಚಿತ್ ಈ ಸಾಮರಸ್ಯವುಂಟಾಗಿದ್ದರೆ, ತಮ್ಮತಮ್ಮ ಸಮಯಗಳಲ್ಲಿ ಅವರು ದೋಷಿಗ ಳಾಗುತ್ತಿದ್ದರು. ಮತ್ತೂ ಅವರ ಪಾದೋದಕ ಪ್ರಸಾದಾದಿಗಳನ್ನು ಆ ಆ ಸಮಯದ ಇತ ರರು ಸ್ವೀಕರಿಸುತ್ತಿರಲಿಲ್ಲ ಹೀಗೆ ಈವರೆಗೂ ನಡೆದುಬಂದಿರುತ್ತದೆ. ಎಲ್ಲ ಸಮಯಗಳೂ ಒಂದೇ ಆಗಿರುತ್ತವೆಂಬುದಕ್ಕೆ ಅನ್ಯಪ್ರಮಾಣವೇ ಬೇಕಾಗಿರುವುದಿಲ್ಲ. ಬಹುಕಾಲದಿಂದ ನಡೆದುಬಂದ ಈ ಸಮಯಭೇದವನ್ನು ಒಮ್ಮಿಂದೊಮ್ಮೆ ಮುರಿದುಬಿಡುವುದಕ್ಕೆ ಸಮಂಜ ಸರಾದ ನಿರಂಜನ ಮೂರ್ತಿಗಳೂ ಭಕ್ತ ಮಾಹೇಶ್ವರರೂ ಸಹ ಎಲ್ಲ ಸಮಯಗಳೂ ಒಂ ದೇ ಎಂಬುದಾಗಿ ತಿಳಿದು ನವೀನವಾದ ಈ ಭಿನ್ನ ಭಾವಗಳಿಗವಕಾಶಕೊಡದೆ, ಪ್ರಾಚೀನಾ ಚರಣೆಯನ್ನನುಸರಿಸುತ್ತ ಬರಬೇಕೆಂಬುದೇ ನನ್ನ ಪ್ರಾರ್ಥನೆ. ... *

## —( ಹಠವೃತ್ತಿಯ ವಿಚಾರ. )—

೧೨. ಕೆಲವರು ಮುಳ್ಳುಹಾವಿಗೆಯ ಮೇಲೆ ನಿಲ್ಲುವುದು, ಗಂಟೆಯನ್ನು ಬಾರಿ ಸುತ್ತ ಓಣಿಓಣಿ ತಿರುಗುವುದು, ಬಾಗಿಲುಗಳನ್ನು ಆರತಿಯಿಂದ ಬೆಳಗುವುದು ಇವೇ ಮೊ ದಲಾದ ಹಠವೃತ್ತಿಗಳನ್ನು ಕೇವಲ ಜೀವನೋಪಾಯದ ಸಲುವಾಗಿ ಸ್ವೀಕರಿಸಿ, ಅಂಥ ಕೆ ಟ್ಟ ಆಚಾರಗಳಿಗೆ ಕಾಯಿಕವೃತ್ತಿಯೆಂದು ಹೇಳಿಕೊಳ್ಳುತ್ತಲಿರುವುದು ಈಚೆಗೆ ರೂಢವಾಗಿ ದೆ. ಆದರೆ ನಮಗೆ ದೊರೆದ ಅಥವಾ ನಾವು ಅಚ್ಚುಹಾಕಿಸಿರುವ ಗ್ರಂಥಗಳಲ್ಲಿ ಇಂಥ ವೃತ್ತಿ ಯ ಅವಲಂಬನವು ಶಾಸ್ತ್ರಸಿದ್ಧವಾದುದೆಂದು ಕಂಡುಬರುವುದಿಲ್ಲ. ಒಂದುವೇಳೆ ಅದು ಸಶಾ ಸ್ತ್ರವೆಂದು ತಿಳಿದುಬಂದರೂ, ಅದು ಕೆಲವು ವಿಶೇಷಕಾರಣಗಳಿಂದ ಪ್ರಸಂಗವಿಶೇಷಗಳಲ್ಲಿ ಶಿ ವೋತ್ಕರ್ಷವನ್ನು ಸಿದ್ಧಪಡಿಸುವುದಕಾಗಿಸ್ವೀಕರಿಸಲ್ಪಟ್ಟಿರಬೇಕು ಶ್ರೀಬಸವೇಶ್ವರನ ಕಾಲ ದಲ್ಲಿ ಜಂಗಮರ ವಸ್ತ್ರಗಳನ್ನು ತೊಳೆದುಕೊಂಡು ಬರುವಾಗ್ಗೆ, ಮಡಿವಾಳ ಮಾಚಯ್ಯನ

ವರು ಜನರು ತಮ್ಮನ್ನು ಮುಟ್ಟಬಾರದೆಂದು ಗಂಟೆಯನ್ನು ಬಾರಿಸುತ್ತ ಮನೆಗೆ ಬರುತ್ತಿದ್ದರು. ಆ ವೇಳೆಗೆ ಅದು ಉಚಿತವಾಗಿದ್ದಾಗ್ಯೂ, ಈಗಿನ ಕಾಲದಲ್ಲಿ ಎಲ್ಲ ವೀರಶೈವರೂ ತಮ್ಮ ಬಟ್ಟೆಗಳನ್ನು ತೊಳೆದುಕೊಂಡು ಬರುವಾಗ್ಗೆ, ಗಂಟೆಗಳನ್ನು ಬಾರಿಸುತ್ತ ಹೋದರೆ ಅದು ಎಷ್ಟೋ ಹಾಸ್ಯಾಸ್ಪದವಾಗಿ ಕಾಣಿಸುವುದು. ಆ ದುದರಿಂದ ಪ್ರಸ್ತುತಕಾಲಕ್ಕನುಸರಿಸಿ, ಯೋಗ್ಯವಾದ ಮತ್ತು ಭೂಷಣಾಸ್ಪದವಾದ ವೃತ್ತಿಯನ್ನೇ ಸ್ವೀಕರಿಸಬೇಕು. ಸದ್ಯಃ ಕಾಲದಲ್ಲಿ ರೂಢಿಗೆ ಬಂದ ಈ ಹತವೃತ್ತಿಯನ್ನು ಹಾಸ್ಯಾಸ್ಪದವೆಂದು ತಿಳಿದು, ಅದಷ್ಟು ಶೀಘ್ರವಾಗಿ ಅದನ್ನು ಬಿಡಿಸಬೇಕೆಂದು ಎಲ್ಲರಿಗೂ ನನ್ನ ಪ್ರಾರ್ಥನೆಯುಂಟು. *

## —( ಅನಾಥರ ವ್ಯವಸ್ಥೆ. )—

೧೩. ನಮ್ಮ ಸಮಾಜದಲ್ಲಿರುವ ಮೂಕರು, ಕುರುಡರು, ಕುಂಟರು, ಮಹಾರೋಗಿಗಳು ಮುಂತಾದ ಅಂಗವಿಕಲರಿಗೂ, ವಾರ್ಧಕ್ಯದಿಂದಲೂ ಇತರ ಕಾರಣದಿಂದಲೂ ಹೊಟ್ಟೆ ಹೊರೆಯಲಸಮರ್ಥರಾದವರಿಗೂ ಏನಾದರೊಂದು ವ್ಯವಸ್ಥೆಯನ್ನು ತೀವ್ರವಾಗಿ ಮಾಡುವುದು ಅತ್ಯಂತ ಅವಶ್ಯಕವಾಗಿದೆ. ತೀವ್ರವಾಗಿ ಇವರ ವ್ಯವಸ್ಥೆಯಾಗದಿದ್ದರೆ ಇವರು ಕ್ರಿಶ್ಚಿಯನ್ ಮೊದಲಾದ ಮತಗಳಲ್ಲಿ ಸೇರಿಹೋಗುವ ಸಂಭವವಿದೆ. ಇಂಥ ಉದಾಹರಣೆಗಳು ಪ್ರತಿದಿನದಲ್ಲಿಯೂ ಕಂಡುಬರುತ್ತಿವೆ. ಆದುದರಿಂದ ಧನಿಕರ ವಸತಿಯುಳ್ಳ ಊರಿನಲ್ಲಿ ಅನಾಥಾಲಯಾದಿಗಳನ್ನು ಸ್ಥಾಪಿಸಿ, ಈ ಜನರ ವ್ಯವಸ್ಥೆಯನ್ನು ಮಾಡುವುದು ಅವಶ್ಯಕವಾಗಿದೆ. ಇದರಲ್ಲಿ ಪುಣ್ಯವೂ ಇರುವುದಲ್ಲದೆ ಧರ್ಮಬಂಧುಗಳಿಗೆ ಸಹಾಯವನ್ನು ಮಾಡಿದ ಶ್ರೇಯಸ್ಸೂ ದೊರೆಯುವುದು. ... ... ... ... *

ಅದರಂತೆ ಅನಾಥ ವಿದ್ಯಾರ್ಥಿಗಳಿಗೂ, ಅನಾಥ ವಿಧವೆಯರಿಗೂ ವಸತಿಯ ಮತ್ತು ಶಿಕ್ಷಣದ ವ್ಯವಸ್ಥೆಯನ್ನು ಮಾಡುವುದಕ್ಕಾಗಿ ಆ ಶ್ರಮಗಳನ್ನು ಬೇರೆಬೇರೆ ಸ್ಥಾಪಿಸುವುದು ಅವಶ್ಯಕವಾಗಿರುತ್ತದೆ. ಯಾಕೆಂದರೆ—ನಮ್ಮ ಸಮಾಜದಲ್ಲಿ ಬಡಜನರ ಸಂಖ್ಯೆಯು ಹೆಚ್ಚಿರುವುದರಿಂದ, ತಮ್ಮ ಹುಡುಗರಿಗೆ ಶಿಕ್ಷಣಕೊಡುವ ಇಚ್ಛೆಯು ಅವುಗಳ ಪಾಲಕರಿಗಿದ್ದಾಗ್ಯೂ ಬಡತನದ ಮೂಲಕ ಉಪಾಯವಿಲ್ಲದವರಾಗಿದ್ದಾರೆ. ಆದುದರಿಂದ ಈ ವ್ಯವಸ್ಥೆಯಾದರೆ, ನಮ್ಮಲ್ಲಿರುವ ಅಶಿಕ್ಷಿತಜನರ ಸಂಖ್ಯೆಯು ಕಡಿಮೆಯಾಗುತ್ತ ಹೋಗುವುದು. ಈ ಕಾರ್ಯದಲ್ಲಿ ಪ್ರತಿಯೊಂದು ಸ್ಥಳದಲ್ಲಿಯೂ ಇರುವ ಸಮಾಜಧುರೀಣರು ಲಕ್ಷ್ಯವನ್ನು ಕೊಡಬೇಕು. ... ... ... ... *

## —( ವ್ಯಾಪಾರ ಮತ್ತು ಒಕ್ಕಲತನ. )—

೧೪. ದೇಶಸಾಮಾನ್ಯದ ಸ್ಥಿತಿಯಂತೆಯೇ ನಮ್ಮ ಸಮಾಜದಸ್ಥಿತಿಯೂ ಇರುವುದು. ಸಹಜವಾದಾಗ್ಯೂ ಈಗ ನಮ್ಮ ಉದ್ಯೋಗಗಳ ನಾಶವು ಆಗಿರುವಷ್ಟು ಹಿಂದೆ

ಎಂದೂ ಆಗಿರಲಿಲ್ಲ ನಮ್ಮ ವೀರಶೈವವರ್ಗವು ವಿವಕ್ಷಿತವಾದ ಒಂದೇಪ್ರಕಾರದ ಉದ್ಯೋಗವನ್ನು ಮಾಡುವ ಜನರ ವರ್ಗವಲ್ಲ. ನಮ್ಮಲ್ಲಿ ನೆಯ್ಗೆಯುವರು, ನೂಲು ಹಂಜುವವರು, ಬಣಗಾರರು ಮೊದಲಾದ ಕೈಗಾರಿಕೆಯುವರೂ, ಜಲಪ್ರವಾಸಗಳಿಂದ ಪರದೇಶದಕೂಡ ವ್ಯಾಪಾರವನ್ನು ಮಾಡುವವರೂ, ದೂರದೂರ ಪ್ರದೇಶಗಳಿಂದ ಪದಾರ್ಥಗಳ ತರುವುದನ್ನು ಒಯ್ಯುವುದನ್ನು ಮಾಡುವವರೂ ಸಹ ಇದ್ದರು. ಈಚೆಗೆ ಯಂತ್ರಗಳ ಸಹಾಯದಿಂದ ನಿರ್ಮಿಸಲ್ಪಡುತ್ತಿರುವ ಪದಾರ್ಥಗಳಂತೆ ನಮ್ಮ ಕೈಮಗ್ಗಗಳಿಂದ ಹುಟ್ಟಿದಪದಾರ್ಥಗಳು ಲಾಭದಾಯಕವಾಗದೆ ಇರುವಕಾರಣ, ನಮ್ಮಪೂರ್ವದ ಉದ್ಯೋಗಗಳು ಉಳಿಯುವುದು ಅಶಕ್ಯವಾಯಿತು. ಉದಾಹರಣಾರ್ಥ:—ಸಿರಂಜಿ, ನೀಲಿ ಮೊದಲಾದ ಬಣ್ಣಗಳು ಹೊರಗಣಿಂದ ನಿರಾಯಾಸವಾಗಿ ಆಣಿಯಾಗಿ ಬರುತ್ತಿರುವುದರಿಂದ, ಅವುಗಳ ಮೂಲವಸ್ತುಗಳನ್ನು ಬಿತ್ತಿ ಬೆಳೆದು ಬಣ್ಣ ಮೊದಲಾದುದನ್ನು ಆಣಿಮಾಡುತ್ತಿದ್ದ ಪೂರ್ವದ ಕಾರ್ಯಾಲಯಗಳು ಈಗ ನಾಮಶೇಷವಾಗಿರುವುವು. ಈ ಪ್ರಕಾರ ನಮ್ಮ ಉದ್ಯೋಗಗಳು ಪೂರ್ಣ ನಷ್ಟವಾದಾಗ್ಯೂ ಇತರಪ್ರಕಾರದ ಕೆಲವುದ್ಯೋಗಗಳು ಸುಧಾರಣೆಯನ್ನು ಹೊಂದಿದವೆಂದು ಹೇಳುವುದಕ್ಕೆ ಆವ ಪ್ರತ್ಯವಾಯವೂ ತೋರುವುದಿಲ್ಲ. ಯಾಕೆಂದರೆ;—ಇದೇವೇಳೆಯಲ್ಲಿ ಲಕ್ಷಾವಧಿ ರೂಪಾಯಿಗಳನ್ನು ಸಂಪಾದಿಸಿ ಉದಯಕ್ಕೆ ಬಂದ ಎಷ್ಟೋ ಸಂಪನ್ನರ ಮನೆತನಗಳು ನಮ್ಮಲ್ಲಿ ಈಗ ಕಾಣಿಸುತ್ತವೆ. ಮೂಲಪದಾರ್ಥಗಳು (ಕಚ್ಚಾಮಾಲು) ನಮ್ಮ ದೇಶದಲ್ಲೆಲ್ಲಾ ಉತ್ಪನ್ನವಾಗುವುದು. ಇದಕ್ಕೆ ಪರದೇಶದ ವ್ಯಾಪಾರಗಾರಿಕೆಯು ಬೆಳೆಯುತ್ತ ಹೋದುದರಿಂದ, ಅವು ಮಾರಾಟವಾಗುವಸ್ಥಲಗಳಿಗೆ ದೂರದೂರ ದೇಶಗಳಿಂದ ಪದಾರ್ಥಗಳನ್ನು ತಂದು ಮಾರುವುದು, ಮತ್ತೂ ಅದರ ವ್ಯಾಪಾರವಾಗುವ ಇತರ ಸ್ಥಲಗಳಿಗೆ ಅದನ್ನು ನಮ್ಮಸ್ಥಲದಿಂದ ಸಾಗಿಸಿಕೊಂಡು ಹೋಗುವುದು, ಈ ಪ್ರಕಾರವಾದ ಉದ್ಯೋಗವು ಎಷ್ಟೋ ದಿವಸಗಳವರೆಗೆ ಬಹುಳ ಲಾಭಕರವಾಗಿ ನಡೆಯುತ್ತಿದ್ದಿತು. ಅದರ ಕಡೆಗೆ ನಮ್ಮ ಸಮಾಜದವರ ಲಕ್ಷ್ಯವು ಮೊದಲು ಪತ್ತಿದ್ದಿತು. ಈ ಭರಭರಾಟೆಯು ಸ್ಥಿತಿಯು ರೈಲ್ವೆ ಪ್ರಸಾರವಾಗುವವರೆಗೂ ಹೆಚ್ಚುಕಡಿಮೆ ಮಾನದಿಂದ ಅಸ್ತಿತ್ವದಲ್ಲಿದ್ದಿತು. ರೈಲ್ವೆ ಪ್ರಸಾರದಿಂದ ದೇಶಕ್ಕೆ ಅನೇಕಪ್ರಕಾರದ ಹಿತವಾಗಿರುವುದು ನಿರ್ವಿವಾದವಾದರೂ, ಉದ್ಯೋಗಗಳ ದೃಷ್ಟಿಯಿಂದ ಲಾಭದಮಾನವು ಮಾತ್ರ ಬಹುಕಡಿಮೆಯಾಗಿ ಹಿಂದಿನ ಉದ್ಯೋಗಗಳು ಅಷ್ಟುಲಾಭದಾಯಕಗಳಾಗಿ ಉಳಿಯಲಿಲ್ಲ. ಆದರೆ ಈ ರೈಲ್ವೆಯಿಂದಲೇ ಉಳಿದ ಎಷ್ಟೋ ಉದ್ಯೋಗಗಳು ಹೊಸದಾಗಿ ಹೊರಟವೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ದಿನೇದಿನೇ ಹೀಗೆ ಲಾಭದಮಾನವು ಕಡಿಮೆಯಾಗುತ್ತ ನಡೆದುದರಿಂದ, ನಾವು ಬೇರೆಬೇರೆ ಉದ್ಯೋಗಗಳನ್ನು ತೆಗೆದು ವ್ಯಾಪಾರವನ್ನು ಬೆಳಸಬೇಕು. ಮತ್ತೂ ಒಕ್ಕಲತನದ ಸುಧಾರಣೆಯನ್ನೂ ಮಾಡಬೇಕೆಂಬ ಇಚ್ಛೆಯಾದರೂ ಜನರಲ್ಲಿ ಉಂಟಾಗಿರುತ್ತದೆ. ಅದು ಕೊನೆಕಾಣಿಕ್ಕೆ ಬೇಕಾಗುವ ಸಾಧನಗಳು ಮಾತ್ರ ನಮ್ಮಲ್ಲಿ ಸಂಪೂರ್ಣವಾಗಿರುವುದಿಲ್ಲ. ಮತ್ತೂ ಅವುಗಳನ್ನು

ನಾವು ಸಂಪಾದಿಸಿಕೊಳ್ಳುವುದಕ್ಕಾಗಿ ಯಾವಪ್ರಕಾರವಾದ ಪ್ರಯತ್ನವನ್ನೂ ಮಾಡುವುದಿಲ್ಲ ಇದು ವಿಷಾದಜನಕವಾಗಿರುತ್ತದೆ. ಸಾಂಪ್ರತದಲ್ಲಿ ಅತ್ಯಂತ ಊರ್ಜಿತಾವಸ್ಥೆಯನ್ನು ಹೊಂದಿದ ಮತ್ತೂ ವಿದ್ಯಾ, ಕಲಾ, ಕೌಶಲ್ಯ ಮುಂತಾದುವುಗಳಲ್ಲಿ ಪರಮೋನ್ನತಿಯನ್ನು ಹೊಂದಿದ ಎಷ್ಟು ದೇಶಗಳಿವೆಯೋ ಅವುಗಳಲ್ಲೆಲ್ಲಾ ಜಿಜ್ಞಾಸ, ಉತ್ಸಾಹ, ಶೋಧಕತ್ವ, ಉದ್ಯೋಗ, ಧೈರ್ಯ ಮೊದಲಾದ ಗುಣಗಳು ವಿಶೇಷವಾಗಿ ಕಂಡುಬರುವುವು. ಇದರ ವಿಪರೀತಸ್ಥಿತಿಯು ನಮ್ಮ ದೇಶದಲ್ಲಿರುವುದು. ನಾವು ಯಾವಪ್ರಾಂತದಲ್ಲಿ ಅಥವಾ ದೇಶದಲ್ಲಿ ಇರುವೆವೊ ಅಲ್ಲಿಯ ಪೂರ್ಣಸ್ಥಿತಿಯ ಜ್ಞಾನವಾದರೂ ನಮಗಿರುವುದಿಲ್ಲ. ಮತ್ತೂ ಅದನ್ನು ಸಂಪಾದಿಸುವ ಇಚ್ಛೆಯಾದರೂ ನಮಗುಂಟಾಗುವುದಿಲ್ಲ. ಇದು ದುಃಖದಮಾತಾಗಿದೆ. ಎಲ್ಲಿಯವರೆಗೂ ಈ ವಿಷಯವಾಗಿ ಲಕ್ಷ್ಯವನ್ನು ಕೊಡುವುದಿಲ್ಲವೊ ಆವರೆಗೂ ನಮ್ಮ ಉದ್ಯೋಗಗಳಲ್ಲಿ ಸುಧಾರಣೆಯೂ, ಲಾಭವೂ ಆಗುವಸಂಭವವು ತೋರುವುದಿಲ್ಲ. ಈರೀತಿಯ ಜ್ಞಾನವಾಗಲಿಕ್ಕೆ ಈ ದೇಶದಲ್ಲಿಯೇ ಉತ್ತಮತರದ ವ್ಯಾಪಾರಶಿಕ್ಷಣವನ್ನು ಸಂಪಾದಿಸಿ, ಈದೇಶದಲ್ಲಿಯೂ ಪರದೇಶಗಳಲ್ಲಿಯೂ ಸಂಚರಿಸಬೇಕು. ಇದಕ್ಕೆ ಹಣವೂ ಮತ್ತೂ ವೇಳೆಯೂ ಬೇಕಾಗುವುದೆಂಬುದು ನಿಜವು. ಆದಾಗ್ಯೂ ನಮ್ಮಲ್ಲಿ ಇವುಗಳಕೊರತೆಯು ಸಂಪೂರ್ಣವಾಗಿದೆಯೆಂಬಂತಿಲ್ಲ. ಇಂಗ್ಲೆಂಡ, ಪ್ರಾನ್ಸ್, ಜರ್ಮನಿ, ಜಪಾನ, ಅಮೇರಿಕಾ ಮುಂತಾದ ಸುಧಾರಿಸಿದ ದೇಶಗಳಲ್ಲಿ ಐಶ್ವರ್ಯ ಸಂಪನ್ನರಾದ ಜನರು ಇಂಥ ವಿಷಯದಕಡೆಗೆ ಮನಗೊಟ್ಟು ತಮ್ಮ ವಿಪುಲಸಂಪತ್ತಿನಿಂದ ಏರುಹಾಕಿರುವರು ; ಇನ್ನೂ ಹಾಕುತ್ತಲೂ ಇರುವರು. ಇದನ್ನು ನಾವು ಲಕ್ಷ್ಯದಲ್ಲಿತಂದು ತದನುರೂಪವಾಗಿ ವರ್ತಿಸುವುದು ಆವಶ್ಯಕವು. ನಮ್ಮ ಶ್ರೀಮಂತರಹುಡುಗರಲ್ಲಿ ಆಲಸ್ಯವುಳ್ಳವರು ಮತ್ತೂ ಸ್ವಚ್ಛಂದಾಚಾರಿಗಳು ಇವರೇ ಹೆಚ್ಚಾಗಿರುವರು. ಉದ್ಯೋಗಗಳ ಮೂಲಸೂತ್ರಗಳು ಬಹುಶಃ ಇಂಥವರ ಕೈಯಲ್ಲಿ ಇರುವುದರಿಂದ ಅವರು ತೆಗೆದುಕೊಂಡ ಬೆಲೆಗಿಂತ ಸ್ವಲ್ಪ ಹೆಚ್ಚಿನ ಬೆಲೆಗೆ ಅಲ್ಲಿಂದಲ್ಲಿಯೇ ಪದಾರ್ಥಗಳನ್ನು ಮಾರಾಟಮಾಡುವುದು, ಬಹುಳ ವಿಪುಲವಾಗಿ ಪದಾರ್ಥಗಳು ದೊರೆಯುವ ಸ್ಥಳದಿಂದ ಅದನ್ನು ತರಿಸಿ, ಸ್ವಲ್ಪ ಹೆಚ್ಚಿನಲಾಭದಿಂದ ಮಾರುವುದು. ಇದಕ್ಕಿಂತಲೂ ಮುಂದೆ ಅವರ ಕರ್ತೃತ್ವಶಕ್ತಿಯು ಹೋಗುವುದಿಲ್ಲ. ಪೂರ್ವಕಾಲದಸ್ಥಿತಿಯು ಬಹುಳವಾಗಿ ಬೇರೆಯಾಗಿದ್ದಿತು. ಈಗಿನಂತೆ ಸರ್ವ ಸಾಧಾರಣ ಜನರು ಆಗ್ಗೆ ವ್ಯಾಪಾರದಲ್ಲಿ ಬೀಳುತ್ತಿರಲಿಲ್ಲ. ಮುಖ್ಯಮುಖ್ಯ ನಗರಗಳಿಂದಲೂ, ಬಂದರುಗಳಿಂದಲೂ ಎತ್ತಿನಮೇಲಿಂದಾಗಲಿ, ಬಂಡಿಗಳ ಮೇಲಿಂದಾಗಲಿ, ೩—೪ ವೇಳೆ ಹತ್ತೆಂಟುಸಾವಿರ ರೂಪಾಯಿಗಳ ಮಾಲನ್ನು ತರುವ-ಕೊಡುವುದನ್ನು ಮಾಡಿದರೆ ೧-೨ ತಿಂಗಳು ಕುಳಿತು ತಿನ್ನುವಷ್ಟುಲಾಭವು ವಿಪುಲವಾಗ ದೊರೆಯುತ್ತಿದ್ದಿತು. ಆ ಕಾಲವು ಈಗ ಉಳಿದಿಲ್ಲ. ಈಗ ಲಕ್ಷಾವಧಿ ರೂಪಾಯಿಗಳ ವ್ಯಾಪಾರವನ್ನು ಮಾಡಿದರೂ ಅಂಗಡಿಯ ವೆಚ್ಚವು ಹೊರಡುವುದು ಸಹ ಕಠಿಣವಾಗಿದೆ. ಆದರೆ ನಾವು ಸುಮ್ಮನೆ ಕುಳಿತಿರುವ ವೇಳೆಯಲ್ಲಿ ಹಿಂದಿನ ಮತ್ತೂ ಈಗಿನ ಉದ್ಯೋಗಗಳ ವಿಷಯದಲ್ಲಿ

ಹರಟೆಯನ್ನು ಕೊಚ್ಚುವುದನ್ನು ಬಿಟ್ಟು ಮತ್ತೇನನ್ನೂ ಮಾಡುವುದಿಲ್ಲ. ನಮ್ಮ ಕೈಯೊಳಗಿನ ಬಹುಭಾಗದ ವ್ಯಾಪಾರಗಳು ಹೋಗಿರುತ್ತವೆ. ಅನ್ಯ ವ್ಯಾಪಾರಿಗಳು ಬಂದು ಲಕ್ಷಾವಧಿ ರೂಪಾಯಿಗಳ ಲಾಭವನ್ನು ಮಾಡಿಕೊಳ್ಳುತ್ತಲಿರುವರು. ದಿನೇದಿನೆ ಸರ್ಕಾರದಧಿಕಾರಸ್ಥಾನಗಳು ದೊರೆಯುವುದು ಕಠಿಣವಾಗಿದೆ. ಪರಂಪರಯಾ ಸರ್ಕಾರದುದ್ಯೋಗವನ್ನು ಮಾಡುತ್ತ ಬಂದಿರುವವರ ಲಕ್ಷ್ಯವು ವ್ಯಾಪಾರದಕಡೆಗೆ ಬಿದ್ದು, ಅವರ ಸಂಖ್ಯೆಯು ವ್ಯಾಪಾರದಲ್ಲಿ ಬೆಳೆಯುತ್ತಲಿದೆ. ಇಂಥ ಸ್ಥಿತಿಯಲ್ಲಿಯೂ ಕೂಡ ನಾವು ಕಣ್ಣುತೆರೆಯದಿದ್ದರೆ, ನಮ್ಮ ವ್ಯಾಪಾರವು ನಾಮಾವಶೇಷವಾಗಿ ನಾವು ಕೇವಲ ಕೂಲಿಯಾಳುಗಳಾಗುವೆವು. ಮಧ್ಯಪ್ರಾಂತ ದಕ್ಷಿಣ ಮಹಾರಾಷ್ಟ್ರ ಮತ್ತೂ ಕರ್ಣಾಟಕ ಈ ಭಾಗಗಳಲ್ಲಿಯ ಪ್ರತಿಯೊಂದು ಪಟ್ಟಣದ ಬಹುಭಾಗದ ವ್ಯಾಪಾರಗಳು ಪೂರ್ವದಲ್ಲಿ ನಮ್ಮ ವೀರಶೈವ ಜನರದಾಗಿದ್ದಿತೆಂದರೆ ಅತಿಶಯೋಕ್ತಿಯಾಗಲಾರದು. ಇತ್ತಿತ್ತ ಈ ಸ್ಥಿತಿಯು ಬದಲಾಗುತ್ತಲಿದೆ. ನಮ್ಮ ಜನರಸಂಖ್ಯೆಯು ವ್ಯಾಪಾರೋದ್ಯೋಗಗಳಲ್ಲಿ ಕಡಿಮೆಯಾಗುತ್ತಿದ್ದು, ಅದರಲ್ಲಿ ಎರಡನೇ ಜಾತಿಯ ಜನರು ತುಂಬುತ್ತಿರುವರು. ಆದರೂ ಈಗಲೂ ನಮ್ಮ ವರ್ಗದ ವ್ಯಾಪಾರಿಗಳ ಸಂಖ್ಯೆಯೇ ದೊಡ್ಡದಾಗಿರುವುದು. ಇದರಮೇಲಿಂದ ನಮ್ಮ ಸಮಾಜದ ಜನರಿಗೂ, ವ್ಯಾಪಾರೋದ್ಯೋಗಗಳಿಗೂ ಎಷ್ಟು ನಿಕಟ ಸಂಬಂಧವಿದೆಯೆನ್ನುವುದು ಸಹಜವಾಗಿ ತಿಳಿದುಬರುವಂತಿದೆ. ನಮ್ಮ ಎಲ್ಲಾ ವ್ಯಾಪಾರಿಗಳನ್ನು ಮತ್ತೂ ಉದ್ಯೋಗಿಗಳನ್ನು ನಾಲ್ಕು ವರ್ಗಗಳನ್ನಾಗಿ ವಿಂಗಡಿಸಬಹುದು:— ... ... ... *

(೧) ಕ್ರಯವಿಕ್ರಯ, ದಳ್ಳಾಳಿ, ಸಾವಕಾರಿಯ ವ್ಯಾಪಾರ ಮಾಡುವವರು. (೨) ನೂಲು ನೆಯ್ಯುವುದು, ಬಣ್ಣಕೊಡುವುದು, ಶಿಲ್ಪಿ ಕೈಗಾರಿಕೆ ಮೊದಲಾದ ಕೆಲಸಗಳನ್ನು ಮಾಡುವವರು. (೩) ,, ಪಕ್ಕಾಮಾಲನ್ನು ,, ಮಾಡಿಸುವವರು, ಎಂದರೆ ಧನೋತ್ಪಾದಕ ಉದ್ಯೋಗವನ್ನು ಮಾಡುವವರು. (೪) ಕೃಷಿಕರ್ಮ ಮಾಡುವವರು. ... *

ಈ ಸಮಸ್ತ ಜನರ ಉದ್ಯೋಗಗಳು ಊರ್ಜಿತಾವಸ್ಥೆಗೆ ಬರುವುದಕ್ಕೆ ಈಗಿನ ಕಾಲಮಾನಕ್ಕನುಸರಿಸಿ, ಅವಶ್ಯಕವಾದ ಉಪಾಯಗಳನ್ನು ಯೋಜಿಸಬೇಕು. ಈ ಭಾಷಣದಲ್ಲಿ ಆ ಉಪಾಯಗಳ ದಿಗ್ದರ್ಶನವನ್ನು ಸ್ವಲ್ಪದರಲ್ಲಿಯೇ ಮಾಡುತ್ತೇನೆ. ಮೇಲಿನನಾಲ್ಕು ವರ್ಗಗಳ ವಿಷಯವಾಗಿ ವಿಚಾರಮಾಡುವಾಗ, ಅವುಗಳೆಲ್ಲಕ್ಕೂ ಸಂಬಂಧಿಸಿದ ಮಹತ್ತರವಾದ ಒಂದು ಸಂಗತಿಯನ್ನು ಮೊದಲು ತಮಗೆ ಹೇಳಬೇಕಾಗಿದೆ. ಅದು ಸಾಮುದಾಯಿಕವಾದ ಭಂಡವಲದ ವಿಷಯವಾಗಿದೆ. ಈ ಪದ್ಧತಿಯಿಂದ ಪಾರ್ಶಿ ಮತ್ತೂ ಭಾಟೆ ಜನರು, ಅರಳೆಯ ಗಿರಣಿಗಳನ್ನೂ ಇತರ ಕಾರ್ಖಾನೆಗಳನ್ನೂ ಸ್ಥಾಪಿಸಿ, ಲಕ್ಷಾವಧಿ ರೂಪಾಯಗಳನ್ನು ದೊರಕಿಸುತ್ತಿರುವರು. ನಮ್ಮ ಜನರಿಗೂ ಸಹ ಈ ಪದ್ಧತಿಯು ತೀರ ಹೊಸದಾಗಿಯೇನೂ ಇಲ್ಲ. ಆದರೆ ಈ ಪದ್ಧತಿಯ ಪ್ರಸಾರವು ಮಾತ್ರ ಬಹಳವಾಗಿರುವುದಿಲ್ಲ. ಮೊ

ದಲು ಈ ಸಂಗತಿಯ ಕಡೆಗೆ ಧಾರ್‍ವಾಡ ಜಿಲ್ಲೆಯೊಳಗಿನ ವೀರಶೈವರ ಲಕ್ಷ್ಯವು ಹತ್ತಿ ಅವರು ಜಿನ್ ಮತ್ತೂ ಪ್ರೆಸ್ ಈ ಕಾರಖಾನೆಗಳನ್ನು ಸ್ಥಾಪಿಸುವ ಮೊದಲನೇ ಶ್ರೇಯಸ್ಸು ಅವರ ಭಾಗಕ್ಕಿರುತ್ತದೆ. ಆದರೆ ಅವರಗತಿಯು ಜಿನ್ ಮತ್ತೂ ಪ್ರೆಸ್ ಇವುಗಳ ಮುಂದಕ್ಕೆ ಹೋಗಲಿಲ್ಲ. ಇದರ ಮುಂದಿನ ಕೆಲಸವೆಂದರೆ:—ಗಿರಣಿಯನ್ನು ಸ್ಥಾಪಿಸುವುದು. ಈ ವಿಷಯದಲ್ಲಿಯೂ ಕೂಡ ಇತ್ತಿತ್ತ ನಮ್ಮಲ್ಲಿ ಅಲ್ಪಸ್ವಲ್ಪ ಪ್ರಯತ್ನವು ನಡೆದಿರುತ್ತದೆ. ಇಂಥ ಕಾರಖಾನೆಗಳಲ್ಲಿ ವಿಶೇಷಲಾಭವಾಗುವುದೆಂದು ನಾನು ಸ್ವಾನುಭವದಿಂದ ಹೇಳುತ್ತೇನೆ. *

ಸಾಮುದಾಯಿಕ ಬಂಡವಲದ ಪದ್ಧತಿಯು ಅನೇಕದೃಷ್ಟಿಯಿಂದ ಸದ್ಯಃಕಾಲಕ್ಕೆ ಹಿತಕಾರಕವಾಗಿದೆ. ಈ ಪದ್ಧತಿಯಿಂದ ಯಾವನೊಬ್ಬನ ಮೇಲೆಯೂ ವಿಶೇಷಭಾರವು ಬೀಳುವುದಿಲ್ಲ. ಮತ್ತೂ ಸಹಜವಾಗಿ ದೊಡ್ಡ ಕೆಲಸಗಳಾಗುತ್ತವೆ. ಹತ್ತರ ಹುಲ್ಲಕಡ್ಡಿ ಒಬ್ಬರ ತಲೆ ಹೊರೆಯೆಂಬ ಗಾದೆಯು ಪ್ರತಿಯೊಬ್ಬರೂ ಯಾವಾಗಲೂ ಲಕ್ಷದಲ್ಲಿ ಇಡುವಂತಿದೆ. ಕಂಪನಿಗಳ ಆಕ್ಟಿನಪ್ರಕಾರ ಕಂಪನಿಯನ್ನು ರಿಜಿಷ್ಟರಮಾಡಿದ್ದರೆ ತಮ್ಮ ಭಾಗಕ್ಕಿಂತಲೂ ಹೆಚ್ಚಿನ ಜವಾಬದಾರಿಯು ಯಾರಮೇಲೂ ಉಳಿಯುವುದಿಲ್ಲ. ಆದುದರಿಂದ ಆಕಸ್ಮಾತ್ ಯಾವುದೋ ಒಂದು ನಿಮಿತ್ತದಿಂದ ದೊಡ್ಡನಷ್ಟವು ಸಂಭವಿಸಿದಾಗ್ಗೆ ಆ ಬಂಡವಾಳವು ಒಬ್ಬನದೇ ಆಗಿದ್ದರೆ, ಅವನು ಹೇಗೆ ಸಂಪೂರ್ಣವಾಗಿ ಮುಳುಗಿ ಹೋಗುವನೋ, ಹಾಗೇನೂ ಈ ಕಂಪನಿಯ ಸ್ಥಿತಿಯಿಂದ ಯಾವಾಗ್ಗೂ ಆಗಲಾರದು. ಸಾಮುದಾಯಕ ಬಂಡವಾಳದಿಂದ ವೆಚ್ಚವು ಕಡಿಮೆಯಾಗುತ್ತದೆ; ಲಾಭವು ಹೆಚ್ಚಾಗಿ ಉಳಿಯುತ್ತದೆ. ಆದರೆ ತಮ್ಮ ತಮ್ಮ ಬಂಡವಾಳದಿಂದ ವ್ಯಾಪಾರ ಮಾಡುವವರು ಸ್ವತಃ ಎಷ್ಟುಶ್ರದ್ಧೆಯಿಂದ ಕೆಲಸ ಮಾಡುವರೋ, ಆ ರೀತಿಯಿಂದ ಕಂಪನಿಯ ಏಜಂಟರು ಮಾಡುವುದಿಲ್ಲವೆಂಬ ಒಂದಾಕ್ಷೇಪವು ಹೊರಡುತ್ತದೆ. ಸಾಮುದಾಯಿಕ ಬಂಡವಾಳದ ಕಂಪನಿಯೊಳಗೆ ಏಜಂಟರುಗಳ ಮತ್ತೂ ಡೈರೆಕ್ಟರುಗಳ ಹಿತಾಹಿತವು ಪರಸ್ಪರ ಸಂಬಂಧಿಸಿರುವುದರಿಂದ, ಏಜಂಟರು ಪ್ರಾಮಾಣಿಕತನದಿಂದ ಕೆಲಸ ಮಾಡಲಾರರೆಂದು ಹೇಳಲಾಗದು. ಆದಾಗ್ಗೂ ಏಜಂಟರನ್ನು ನಿಯಮಿಸುವಾಗ್ಗೆ, ಕಂಪನಿಯವರು ವಿಚಾರಪೂರ್ವಕವಾಗಿ ನಿಯಮಿಸಬೇಕು. ಹಾಗಾದರೆ ಮೇಲೆ ಹೇಳಿದ ಶಂಕೆಗೆ ಅವಕಾಶವುಳಿಯುವುದಿಲ್ಲ. ಸಾಮುದಾಯಿಕ ಬಂಡವಾಲದ ಪದ್ಧತಿಯನ್ನು ಪಾಶ್ಚಿಮಾತ್ಯರ ಪದ್ಧತಿಗನುಸರಿಸಿ ಮೊದಲು ಪಾರಸಿ ಮತ್ತೂ ಭಾಟಿಯ ಜನರು ಇಲ್ಲಿ ಆರಂಭಿಸಿದರು. ಈ ಜನರು ವಿಶೇಷವಾಗಿ ಮುಂಬಾಯಿ ಪ್ರಾಂತದೊಳಗೆ ಇರುವುದರಿಂದ ಇತರ ಪ್ರಾಂತಗಳಿಗಿಂತ ಈ ಪ್ರಾಂತಗಳಲ್ಲಿಯೇ ಹೆಚ್ಚು ಕಾರ್ಯಾಲಯಗಳುಂಟು. *

ಈಗ ಸರ್ವತ್ರ ಪ್ರಚಾರದಲ್ಲಿರುವ ಅಂಗಡಿಯ ವ್ಯವಹಾರದಲ್ಲಿ ಬಹುಳಸುಧಾರಣೆಯನ್ನು ಮಾಡಬೇಕಾಗಿರುತ್ತದೆ. ಆ ಸುಧಾರಣೆ ಏನೆಂದರೆ:—ಒಂದೂರಿನಲ್ಲಿ ಒಂದೇತರದ ಪದಾರ್ಥಗಳ ಕ್ರಯವಿಕ್ರಯವನ್ನು ಮಾಡುವ ಮತ್ತೂ ದಲ್ಲಾಳಿಯ ಅಂಗಡಿಗಳು ನಮ್ಮ

ಜನಗಳಲ್ಲಿ ಬಹುಳವಾಗುಂಟು. ಈ ಪ್ರಕಾರದ ಹಲವು ಅಂಗಡಿಗಳು ಒಂದೇ ಊರಲ್ಲಿರುವು ದು ಇಷ್ಟವಾದುದಲ್ಲ. ಉದಾಹರಣಾರ್ಥವಾಗಿ—ಸರ್ವಸಾಧಾರಣಗಳಾದ ಇಪ್ಪತ್ತು ಅಂಗ ಡಿಗಳ ಬಾಡಿಗೆ, ಗುಮಾಸ್ತರ ಆಳುಗಳ ಸಂಬಳ ಇವೇ ಮೊದಲಾದ ವೆಚ್ಚಗಳನ್ನು ನೋ ಡಿದರೆ ಅವು ವರ್ಷಕ್ಕೆ ೩೦-೪೦ ಸಾವಿರ ರೂಪಾಯಿಗಳಾಗುವುವು. ಈ ಎಲ್ಲ ಅಂಗಡಿಗಳ ವ್ಯ ವಹಾರವನ್ನು ಒಂದೇ ಅಂಗಡಿಯಲ್ಲಿ ನಡಿಸಿದರೆ, ೧೦-೧೫ ಸಾವಿರ ರೂಪಾಯಿಗಳ ವೆಚ್ಚವು ಮಾತ್ರ ಬೀಳುವುದು. ಅಂದರೆ ಒಟ್ಟು ವೆಚ್ಚದಲ್ಲಿ ೨೦-೨೫ ಸಾವಿರ ರೂಪಾಯಿಗಳು ಉ ಳಿದಂತಾಗಿ ಅದು ಲಾಭದಲ್ಲಿಯೇ ಗಣಿಸಲ್ಪಡುವುದು. ಈ ಪ್ರಕಾರ ಒಂದೇರೀತಿಯ ಅಂಗಡಿ ಯನ್ನು ಮಾಡುವುದರಿಂದ, ಮೇಲೆತೋರಿಸಿದ ಲಾಭದ ಹೊರತು ಎರಡನೆಯತರದಿಂದಲೂ ವಿಶೇಷ ಲಾಭವುಂಟು. ಅದು ಹೇಗೆಂದರೆ:—ತನ್ನ ಸ್ವಂತದ ಅಂಗಡಿಯನ್ನು ನಡಿಸುವವನು ಹೊರಟುಹೋದರೆ, ಆ ಅಂಗಡಿಯು ವ್ಯವಹಾರವು ನಿಂತುಹೋಗುವುದು. ಮೇಲೆಹೇಳಿದಂತೆ ಕಂಪನಿಯನ್ನು ಮಾಡಿ ವ್ಯವಹಾರ ನಡೆಸಿದರೆ, ಹೀಗಾಗುವ ಸಂಭವವಿರುವುದಿಲ್ಲ. ಅದರ ಮೇಲೆ ಪ್ರತಿಯೊಬ್ಬ ಭಾಗದಾರರ ದೃಷ್ಟಿಯೂ ಇರುತ್ತದೆ. ಒಬ್ಬನುಹೋದರೆ ಮತ್ತೊ ಬ್ಬನು ಸಿದ್ಧನಾಗಿರುತ್ತಾನೆ. ಎಲ್ಲರಿಗೂ ಒಂದೇತರದ ಅಂಗಡಿಯ ಅಭಿಮಾನವೂ, ಲಾಭದ ಇಚ್ಛೆಯೂ ಇರುವಕಾರಣ ನಿರಾತಂಕವಾಗಿ ಇಂಥ ಕಂಪನಿಯ ಅಂಗಡಿಗಳು ನಡೆಯುವ ಸಂಭವವಿರುತ್ತದೆ. ... ... ... ... *

ಒಕ್ಕಲತನಕ್ಕೂ, ನೂಲಿಗೆ ಬಣ್ಣವನ್ನು ಕೊಡುವ ಕಾರ್ಯಾಲಯಗಳ ಸ್ಥಾಪ ನೆಗೂ ಸಹ ಸಾಮುದಾಯಿಕ ಬಂಡವಾಳದ ಅವಶ್ಯಕತೆ ಇದೆ. ಸದ್ಯದಲ್ಲಿ ಒಕ್ಕಲ ತನಕ್ಕೆ ದುಡ್ಡಿನ ಅವಶ್ಯಕತೆಯು ಬಹುಳವಾಗುಂಟು. ನೂಲಿನ ಮತ್ತು ಬಣ್ಣಕೊಡುವ ಕಾರ್ಯಾ ಲಯಗಳು ನಡೆಯುವುದಕ್ಕೆ, ಗಿರಣಿಗಳ ಮತ್ತು ದೊಡ್ಡದೊಡ್ಡ ಕಾರ್ಯಾಲಯಗಳ ಅವ ಶ್ಯಕತೆಯುಂಟು. ಸಣ್ಣಸಣ್ಣ ಉದ್ಯೋಗಗಳನ್ನು ಸ್ವಲ್ಪ ಬಂಡವಾಳದಿಂದ ನಡೆಸಿ, ಲಾಭ ವನ್ನು ಮಾಡಿಕೊಳ್ಳುವುದು ಉತ್ತರೋತ್ತರ ಅತ್ಯಂತ ಕಠಿಣವಾಗುತ್ತ ಬರುವುದು. ಆದುದರಿಂದ ಸಣ್ಣ ದೊಡ್ಡ ಕಾರ್ಯಾಲಯಗಳನ್ನು ಸ್ಥಾಪಿಸುವ ವಿಷಯದಲ್ಲಿ ನಮ್ಮ ಜನರು ಹೆಚ್ಚು ಲಕ್ಷ್ಯ ವನ್ನು ಕೊಡಬೇಕು. ... ... ... ... *

ಇನ್ನು ಧನೋತ್ಪಾದಕಗಳಾದ ಉದ್ಯೋಗಗಳ ಸಂಬಂಧವಾಗಿ ಎರಡು ಮಾತು ಗಳನ್ನು ಹೇಳುವುದವಶ್ಯವಾಗಿದೆ. ನಾವು ವ್ಯಾಪಾರ ಮಾಡುತ್ತೇವೆ. ಆದರೆ ಧನೋತ್ಪಾದ ಕವಾದ ಉದ್ಯೋಗಗಳನ್ನು ಬಹುಶಃ ಮಾಡುವುದಿಲ್ಲ. ನಾವು ಅರಳೆ, ನೆಲಗಡಲೆ, ಹತ್ತಿಕಾ ಳು, ಅಗಸೆ ಮೊದಲಾದುವುಗಳ ವ್ಯಾಪಾರವನ್ನು ಮಾಡುತ್ತೇವೆ. ಆದರೆ ಇದೆಲ್ಲಾ ಮೂಲ ಪದಾರ್ಥಗಳ ವ್ಯಾಪಾರವೇ ಸರಿ. ನಮ್ಮ ವ್ಯಾಪಾರವೆಂದರೆ, ಒಕ್ಕಲತನದ ಪದಾರ್ಥಗಳ ವ್ಯಾಪಾರವಾಗಿದೆ. ಆದರೆ ಯಂತ್ರಗಳ ಸಹಾಯದಿಂದ ಅರಳೆ ನೂಲನ್ನೂ, ಬಟ್ಟೆಯನ್ನೂ

ಮತ್ತೂ ಇತರ ಪದಾರ್ಥಗಳ ಸಹಾಯುಗಳಿಂದ ಎಣ್ಣೆ ಮೊದಲಾದುವುಗಳನ್ನೂ ನಿರ್ಮಿಸಿ ಅವುಗಳನ್ನು ಮಾರಾಟಮಾಡುವುದು ,, ಪಕ್ಕಾಮಾಲಿನ ,, ವ್ಯಾಪಾರವಾಗಿರುತ್ತದೆ. ಇಂಥ ವ್ಯಾಪಾರ ಮಾಡುವುದನ್ನು ಸದ್ಯಃಕಾಲದಲ್ಲಿ ನಾವು ಕಲಿಯಬೇಕು. ನಾವು ಒಕ್ಕಲಿಗರಜೀವನದ ಮೇಲೆ ಸ್ವಚ್ಛಂದವಾಗಿ ವಿಹರಿಸುವವರು ಮತ್ತೂ ಒಕ್ಕಲಿಗರ ,, ಕಚ್ಚಾ ಮಾಲಿನ ,, ಮತ್ತೂ ಪರದೇಶದ ಸಾವಕಾರರ ,, ಪಕ್ಕಾಮಾಲಿನ ,, ದಲ್ಲಾಳಿಗಳಾಗಿರುತ್ತೇವೆ. ಈ ಸ್ಥಿತಿಯು ದೇಶದ ಊರ್ಜಿತಾವಸ್ಥೆಗೆ ಅತ್ಯಂತ ಘಾತುಕವಾಗಿದೆ. ನಮ್ಮ ಈ ವ್ಯಾಪಾರವು ಕೆಲವು ಕಾಲದವರೆಗೆ ಬಹುಶಃ ನಡೆದೀತು. ಆದರೆ ಅದು ಲಾಭದಾಯಕವಾಗುವುದಿಲ್ಲ. ಕೇವಲ ಒಕ್ಕಲತನದ ಮೇಲೆ ಮತ್ತೂ ಆ ವ್ಯಾಪಾರದ ಮೇಲೆಯೇ ಅವಲಂಬಿಸಿರುವ ಯಾವ ದೇಶವೂ ಊರ್ಜಿತಾವಸ್ಥೆಗೆ ಬಂದಿರುವುದಿಲ್ಲ. ಇಂಗ್ಲೆಂಡ್, ಅಮೇರಿಕಾ, ಜರ್ಮನ್ ಈ ದೇಶಗಳ ಸುಸ್ಥಿತಿಯು ,, ಪಕ್ಕಾಮಾಲ ,, ನಿರ್ಮಿಸುವುದರ ಮೇಲೆಯೇ ಅವಲಂಬಿಸಿರುತ್ತದೆ. ನಾವು ಕೇವಲ ದಲ್ಲಾಳಿಯ ವ್ಯಾಪಾರವನ್ನು ಮಾಡುತ್ತಿರುವುದಕ್ಕಿಂತಲೂ ,ಪಕ್ಕಾಮಾಲಿನ, ಕಾರ್ಯಾಲಯಗಳ ಅಧಿಪತಿಗಳಾಗುವುದು ಅತ್ಯಂತ ಇಷ್ಟವಾಗಿದೆ. ಆದರೆ ಮಹತ್ತ್ವವುಳ್ಳದ್ದಾಗಿ ಲಾಭದಾಯಕವಾಗಿರುವ ಈ ಸಂಗತಿಯ ಕಡೆಗೆ ನಮ್ಮ ವ್ಯಾಪಾರಿಗಳು ಲಕ್ಷವನ್ನು ಕೊಡುವುದಿಲ್ಲ. ನಾವು ಸದ್ಯಃಕಾಲದಲ್ಲಿ ಸಂಕ್ರಮಣಾವಸ್ಥೆಯಲ್ಲಿ ಇರುವೆವೆಂಬುದನ್ನು ಅವರು ಮರೆಯುತ್ತಾರೆ. ಆದರೆ ಇದು ಸರಿಯಾದುದಲ್ಲ. ಇಂಥ ಉದ್ಯೋಗಗಳಿಂದಲೇ ತಮ್ಮ ಹಿತವೂ, ಸಮಾಜದ ಹಿತವೂ, ದೇಶದ ಹಿತವೂ ಸಹ ಆಗುವುದು. ಆದುದರಿಂದ ಇದರ ಕಡೆಗೆ ನಾವು ಅವಶ್ಯವಾಗಿ ಲಕ್ಷವನ್ನು ಕೊಡಬೇಕು. ಸಾಮುದಾಯಿಕ ಬಂಡವಾಲದ ತತ್ವದ ಮೇಲೆ ಅಲ್ಲಲ್ಲಿಗೆ ತಾವು ಕಾರ್ಯಾಲಯಗಳನ್ನು ಸ್ಥಾಪಿಸಬೇಕೆಂದು ತಮ್ಮೆಲ್ಲರಿಗೂ ನನ್ನ ಅತ್ಯಾಗ್ರಹದ ಸೂಚನೆಯಿದೆ. ಸಾರಾಂಶ:—ನಮ್ಮ ಸಮಾಜದ ಉತ್ಕರ್ಷವಾಗಬೇಕಾದರೆ, ನೂತನವಾದ ಪರಿಸ್ಥಿತಿಯನ್ನು ತಿಳಿದು ಅದಕ್ಕನುಸರಿಸಿದ ಪ್ರಯತ್ನಗಳನ್ನು ಒತ್ತಾಯದಿಂದ ನಾವುಗಳು ಮಾಡಬೇಕು. ... ... ... *

ವ್ಯಾಪಾರದ ಪದ್ಧತಿಗಳು ಎರಡು. ಒಂದನೆಯದು ಯೋಗ್ಯವಾದವ್ಯಾಪಾರ ; ಎರಡನೆಯದು ,, ಸಟ್ಟೇದವ್ಯಾಪಾರ ,, ಎಂದರೆ ಬಹುಶಃಮುಂದೆ ಇಂತಹ ಕಾಲಕ್ಕೆ ಇಂತಹ ಬೆಲೆಯು ಬಂದೀತೆಂಬ ನಿರೀಕ್ಷೆಯಿಂದ ಯಾವುದಾದರೊಂದು ಪದಾರ್ಥವನ್ನು ಒಂದು ಕ್ಲಪ್ತವಾದ ಬೆಲೆಗೆಕೊಡುವ ಅಥವಾ ತೆಗೆದುಕೊಳ್ಳುವ ಒಪ್ಪಂದವನ್ನು ಮಾಡಿಕೊಂಡು ಅದರಂತೆ ವ್ಯವಹಾರವನ್ನು ಮಾಡುವುದು. ಇದಕ್ಕೆ ಜೂಜಿನ ವ್ಯಾಪಾರವೆಂತಲೂ ಎನ್ನುವರು. ಜೂಜಿನ ವ್ಯಾಪಾರವು ಪ್ರಾಮಾಣಿಕತನದ ಉದ್ಯೋಗವಲ್ಲ. ಶ್ರಮವಾಗದೆ ಪ್ರಾಮಾಣಿಕತನವಿಲ್ಲದೆ ಸಂಪಾದಿಸಿದ ಹಣವು ಬಹುದಿವಸ ನಿಲ್ಲುವುದಿಲ್ಲ. ಇದನ್ನು ಈಗ ತಿಳಿದೂ ತಿಳಿದು ಕೆಲವು ವ್ಯಾಪಾರಿಗಳು ಇದರಲ್ಲಿ ಇಷ್ಟೇಕೆ ತೊಡಗುವರೆಂಬುದು ತಿಳಿಯುವುದಿಲ್ಲ ನಮ್ಮಲ್ಲಿ

ಈ ವ್ಯಾಪಾರವು ಬಹುಶಃ ಇರುವುದಿಲ್ಲ. ಆದರೆ ಆ ಸಟ್ಟೇಪಕಡೆಗೆ ಇತ್ತಿತ್ತ ಜನರ ಪ್ರವೃತ್ತಿಯು ಉಂಟಾಗಹತ್ತಿದೆ. ಇಂಥ ವ್ಯಾಪಾರದಿಂದ ಒಮ್ಮಿಂದೊಮ್ಮೆ ಶ್ರೀಮಂತರಾಗುವ ಅಪೇಕ್ಷೆಯು ಕೆಲವರಿಗಿರುತ್ತದೆ. ಆದರೆ ಬಹುಜನರು ಈ ವ್ಯಾಪಾರದಿಂದ ನಾಶವನ್ನೆ ಹೊಂದಿರುವರು. ಆ ದುದರಿಂದ ಇಂಥ ವ್ಯಾಪಾರವನ್ನು ಮಾಡಬಾರದೆಂಬುದಾಗಿ ನಮ್ಮ ಸಮಾಜದ ವ್ಯಾಪಾರಿಬಂಧುಗಳಿಗೆ ನನ್ನ ಸವಿನಯ ಸೂಚನೆಯದೆ. ... *

ವ್ಯಾಪಾರದಂತೆಯೆ ಒಕ್ಕಲತನದ ಸ್ಥಿತಿಯೂದರೂ ಶೋಚನೀಯ ವಾಗಿರುತ್ತದೆ. ದೇಶಕಾಲವರ್ತಮಾನಕ್ಕನುಸರಿಸಿ ಯಾವ ವ್ಯತ್ಯಾಸವನ್ನು ಮಾಡಬೇಕಾಗುವುದೋ ಅದನ್ನು ನಾವು ಮಾಡದೆ ಪೂರ್ವಪರಂಪರೆಯಂತೆಯೇ ನಡೆಯುತ್ತಿರುವೆವು. ಭೂಮಿಯ ಸಾರವು ಹೋದರೂ ಅಥವಾ ಬೀಜವು ನಿಸ್ಸತ್ವವಾದರೂ ಅವನ್ನು ಸುಧಾರಿಸುವಯತ್ನವನ್ನು ನಾವು ಮಾಡುವುದಿಲ್ಲ. ಹೊಸಬೀಜವನ್ನು ತಂದು ಬಿತ್ತಿದರೆ ಅದರ ಉಪಯೋಗವು ನೆಟ್ಟಗಾಗುವುದೆಂಬುದರ ಬಗ್ಗೆ ನಾನು ಸ್ವತಃ ಅನುಭವವನ್ನು ಪಡೆದುಕೊಂಡಿರುವೆನು. ಇದರಂತೆಯೇ ಗೊಬ್ಬರ ಮೊದಲಾದುದರ ವಿಷಯವೂ ಇರುವುದು. ಈ ವಿಷಯವಾಗಿ ಶಿಕ್ಷಣದ ಅಭಾವವೇ ನಮಗೆ ಅಡ್ಡಬರುತ್ತದೆ. ಸ್ವತಃ ಪ್ರಯತ್ನಪಡುವುದು ದೂರವೇ ಉಳಿಯಿತು ಅದರೆ ಈ ವಿಷಯದಲ್ಲಿ ಸರ್ಕಾರದವರು ಮಾಡುವಂಥ ಪ್ರಯತ್ನಗಳ ವರ್ಣನೆಯನ್ನು ಸಹ ನಾವು ಓದುವುದಿಲ್ಲ. ನಮ್ಮ ಒಕ್ಕಲತನದವಿಷಯವು ಕೇವಲ ನಿಕೃಷ್ಟಸ್ಥಿತಿಯನ್ನು ಹೊಂದಿರುವುದು. ಆದರೆ ಈ ಅನಾಸ್ಥೆಯನ್ನು ನಾವು ತೆಗೆದುಹಾಕಿ ಒಕ್ಕಲತನದ ವಿಷಯದಲ್ಲಿ ಸುಧಾರಣೆಯನ್ನು ಮಾಡಲು ಯತ್ನಿಸಬೇಕು. ... ... *

ಪ್ರಪಂಚದಲ್ಲಿ ಸಂಪತ್ತಿಯೇ ಸುಖದಮೂಲವಾಗಿದೆ. ಮತ್ತೂ ವ್ಯಾಪಾರ, ಕಲಾಕೌಶಲ್ಯ, ಕೃಷಿಗಳೇ ಸಂಪತ್ತಿಯನ್ನು ಗಳಿಸುವುದಕ್ಕೆ ಉತ್ಕೃಷ್ಟವಾದ ಸಾಧನೆಗಳಾಗಿವೆ ಈ ಸಾಧನಗಳು ಸ್ವಾಧೀನವಾಗದ ಹೊರತು ನಮ್ಮ ಸಮಾಜದ ಉನ್ನತಿಯಾಗಲಾರದೆಂದು ನನ್ನ ನಿಶ್ಚಿತವಾದ ಮತವುಂಟು. ... ... ... *

## —( ಉಪಸಂಹಾರ. )—

೧೫. ಮಹಾಸ್ವಾಮಿಗಳೇ? ಮತ್ತೂ ಸಭ್ಯಗೃಹಸ್ಥರೇ? ಮೇಲೆ ನಾನು ಮಾಡಿರುವ ಭಾಷಣವನ್ನು ತಾವು ಶಾಂತಮನಸ್ಸಿನಿಂದ ವಿಚಾರಮಾಡಬೇಕು. ಮತ್ತೂ ಅದನ್ನು ಪ್ರತ್ಯಕ್ಷಕೃತಿಯಲ್ಲಿ ತರುವಂತೆ ಪ್ರಯತ್ನಮಾಡಬೇಕು. ಹಾಗಾದರೆ ಈ ತಮ್ಮ ಸಭೆಯು ಕಾರ್ಯದಕ್ಷವಾದೀತು. ಇದ್ದುದನ್ನು ಬೇರೆಹೇಳಬೇಕೆಂಬ ಅವಶ್ಯಕತೆಯು ತೋರುವುದಿಲ್ಲ ಸಭೆಯಲ್ಲಿ ನಿರ್ಣಯಮಾಡಿದ ನಿರ್ಧಾರಗಳನ್ನು ವ್ಯವಹಾರಕ್ಕೆ ತರಬೇಕೆಂಬ ಜಾಗರೂಕತೆ

ಯನ್ನು ಉಂಟುಮಾಡಿ ಅವರಿಂದ ಅವುಗಳ ಆಚರಣೆಯನ್ನು ಮಾಡಿಸಬೇಕು. ಆದುದರಿಂದ ಈ ಮಹಾಸಭೆಯವರು ಸದುತ್ಸಾಹವುಳ್ಳ ಕೆಲವು ಜನರನ್ನು ಆರಿಸಿ ನಿಯೋಜಿಸಬೇಕೆಂದು ನನಗೆ ತೋರುತ್ತದೆ. ಹೀಗಾಗದಿದ್ದರೆ ನಾವು ವರ್ಷಕ್ಕೆ ಮೂರುದಿವಸ ಒತ್ತಟ್ಟಿಗೆ ಕೂಡಿ ಯಾವ ವಿಚಾರವನ್ನು ಮಾಡುತ್ತೇವೋ, ಮತ್ತೂ ಯಾವ ನಿರ್ಧಾರಗಳನ್ನು ಮಾಡುತ್ತೇವೋ ಅವುಗಳಿಗೆ ಪ್ರಯೋಜನವೇನು? ಯಾವ ಉದ್ದೇಶದಿಂದ ಮಹಾಸಭೆಯು ಸ್ಥಾಪಿಸಲ್ಪಟ್ಟಿತೋ ಆ ಉದ್ದೇಶವು ಸಫಲವಾಗುವುದಕ್ಕಾಗಿ ಈ ಮಹಾಸಭೆಯವರ ಕಡೆಯಿಂದ ಯತ್ನವಾಗದಿದ್ದರೆ ನಮ್ಮ ಸಮಾಜಕ್ಕೆ ಈ ಸಭೆಯಿಂದ ಏನೂ ಉಪಯೋಗವಾಗುವುದಿಲ್ಲವೆಂದು ಬಹು ಕಷ್ಟದಿಂದ ಹೇಳಬೇಕಾಗುತ್ತದೆ. ಆದುದರಿಂದ ಮಹಾಸಭೆಯ ಚಾಲಕರೂ ಮತ್ತೂ ಅಲ್ಲಲ್ಲಿಯ ಪ್ರಮುಖರೂ ಈ ಸಭೆಯನ್ನು ಕರ್ತೃತ್ವಶಾಲಿಯನ್ನಾಗಿ ಮಾಡುವುದಕ್ಕೆ] ಈಗಿನಿಂದಲೇ ಆರಂಭಿಸಬೇಕೆಂದು ನನ್ನ ಸವಿನಯ ಸೂಚನೆಯಿರುತ್ತದೆ. *

ಇಷ್ಟುವೇಳೆಯವರೆಗೂ ತಾವೆಲ್ಲರೂ ಶಾಂತಚಿತ್ತದಿಂದ ನನ್ನ ಭಾಷಣವನ್ನು ಕೇಳಿದುದಕ್ಕಾಗಿ ನಾನು ತಮ್ಮಗಳ ಆಭಾರವನ್ನು ಮಾನಿಸಿ ಸ್ಥಾನಾಪನ್ನನಾಗುವೆನು. *

—(ಕೈಚಪ್ಪಾಳೆ.)—

ಇತಿ ಶಂ

ಬಳ್ಳಾರಿ.
ತಾ॥ ೨೨ ನೇ ಡಿಶೆಂಬರ್
೧೯೧೯.

ಮಲ್ಲಪ್ಪ ಬಸಪ್ಪ, ವಾರದ
ಅಧ್ಯಕ್ಷ ೫ ನೆ ವೀರಶೈವ ಮಹಾಸಭಾ

ಬಳಿಕ ಸ್ಟ್ಯಾಂಡಿಂಗ್ ಕಮಿಟಿ ಮೆಂಬರುಗಳೇ ಸಬ್ಜೆಕ್ಟ್ಸ ಕಮಿಟಿಯವರಾಗಿ ನೆರೆದು ವಿಷಯಗಳನ್ನು ವ್ಯಾಖ್ಯಾನಕಾರರನ್ನು ಗೊತ್ತುಪಡಿಸಿದರು. ಆ ಸ್ಟ್ಯಾಂಡಿಂಗ್ ಕಮಿಟಿ ಮೆಂಬರುಗಳ ಹೆಸರುಗಳನ್ನು ಈ ರಿಪೋರ್ಟಿನ ಕಡೆಯಭಾಗದಲ್ಲಿ ("ಪ್ರತಿನಿಧಿಗಳ ಲೀಸ್ಟಿನಲ್ಲಿ) ಕೊಟ್ಟಿರುತ್ತದೆ. ... ... ... ... *

ಈ ರೀತಿಯಾಗಿ ನಿಯಮಿಸುವದರೊಳಗೆ ೭ ಘಂಟೆ ಹೊತ್ತಾಗುತ್ತ ಬರಲು, ಅಂದಿನ ಕೆಲಸವು ಮುಗಿದು ಸಭೆಯು ವಿಸರ್ಜಿಸಲ್ಪಟ್ಟಿತು. ... ... *

## ಎರಡನೆಯ ದಿವಸ.

ಮಧ್ಯಾಹ್ನ ೧೧-೩೦-ರ ಲಿಂದ, ೩-೩೦-ರ ವರೆಗು.

ಸಭೆಯಲ್ಲಿ ಮಹರಾಷ್ಟ್ರ ದೇಶದ ಜನರು ಹಲಬರಿದ್ದುದರಿಂದ ಅವರ ತಿಳವಿಕೆಗಾಗಿ ಅಧ್ಯಕ್ಷರ ಭಾಷಣವನ್ನು ಮರಾಠಿಯಲ್ಲಿ ಮ॥ ರಾ॥ ರಾ॥ ವೀರಬಸವಪ್ಪ ಶ್ರೇಷ್ಠಿ ಬಿ. ಏ. (ಕೊಲ್ಹಾಪುರ) ಇವರು ಕಿವಿಗಿಂಪಾಗಿ ಓದಿ ಹೇಳಿದರು. ... *

ತರುವಾಯ ವೇ॥ ಗದಿಗೆಯ್ಯ ಹೊನ್ನಾಪುರ ಮಠ ವಕೀಲ ಧಾರವಾಡ, ಇವರು ಎದ್ದು ನಿಂತು, ಸಭಿಕರೇ? ಲೋಕಪ್ರಿಯರಾದ ನಮ್ಮ ನಾಮದಾರ ಗವರ್ನರ್ ಜನರಲ್ ಇನ್‌ಕೌನ್ಸಿಲ್ ಮತ್ತು ವೈಸರಾಯರು ಆದ ಹೆಚ್. ಇ. ಲಾರ್ಡು ಮಿಂಟೋ ಪ್ರಭುಗಳು ದೇಶದ ಸ್ಥಿತಿಯನ್ನು ತಿಳಿದುಕೊಳ್ಳುವದಕ್ಕೆ ಪ್ರವಾಸಕ್ಕೆ ಹೊರಟಿರಲು, ಅಹಮ್ಮದಾಬಾದಿನಲ್ಲಿ ಯಾರೋ ದುರ್ಮಾರ್ಗರು ಸಿಡಿಮದ್ದನ್ನು ಪ್ರಯೋಗಿಸಿದರು, ದೈವಾನುಗ್ರಹದಿಂದ ಆ ಅಪಾಯದಿಂದ ವೈಸ್ರಾಯರವರು ಬಿಡುಗಡೆಯನ್ನು ಹೊಂದಿದುಕ್ಕಾಗಿ ನಾವೆಲ್ಲರು ಜಗದೀಶನನ್ನು ಕುರಿತು, ಅಭಿನಂದಿಸತಕ್ಕದ್ದು. ಇದಲ್ಲದೆ ಇಂತಹ ರಾಜದ್ರೋಹಿಗಳ ವಿಷಯದಲ್ಲಿ ನಾವು ಅತ್ಯಗತ್ಯವಾಗಿ ನಿಷೇಧವನ್ನು ಪ್ರದರ್ಶನ ಮಾಡಬೇಕು. ನಾಶಿಕ ಜಿಲ್ಲೆಯ ಕಲೆಕ್ಟರಾಗಿದ್ದ ಮೆಹರ್ಬಾನ್ ಎ. ಯಂ. ಟಿ. ಜಾಕ್ಸನ್ ಸಾಹೇಬ್ ಎಂ. ಏ. ಇವರನ್ನು ಒಬ್ಬ ಕ್ರೂರನಾದ ತರುಣನು ತುಪಾಕಿಯನ್ನು ಹಾರಿಸಿ ಪ್ರಾಣವನ್ನು ತೆಗೆದಿರುವನು. ಈ ಘಾತುಕನ ವಿಷಯದಲ್ಲಿ ನಾವು ಐಕ್ಯಕಂಠದಿಂದ ನಿಗ್ರಹವನ್ನು ಪ್ರದರ್ಶಿಸಬೇಕಾದದ್ದು ಅತ್ಯವಶ್ಯಕ. ಇಂಥಾ ಕೊಲೆಪಾತಕರು ನಮ್ಮ ದೇಶದಲ್ಲಿ ಹುಟ್ಟದಂತೆ ಎಲ್ಲರು ಜಾಗರೂಕತೆಯಿಂದಿದ್ದು ರಾಜಭಕ್ತಿಯುಕ್ತರಾಗಿರಬೇಕು. ... ... *

ಇದೇ ವಿಷಯವನ್ನು ಮಹರಾಷ್ಟ್ರದಲ್ಲಿ ಮೆ॥ ವೀರಬಸವಪ್ಪಶ್ರೇಷ್ಠಿ ಬಿ. ಏ. ಯವರು ಆಂಧ್ರದಲ್ಲಿ ವೇ॥ ಕೇ. ಯಂ. ಕರಿಬಸವಯ್ಯ ಬಳ್ಳಾರಿ, ಇವರು ಓದಿಹೇಳಿದರು ಈ ಮಹತ್ವವಾದ ವಿಷಯವನ್ನು ಕುರಿತು, ಸಭಿಕರ ಅನುಮೋದನವು ತೆಗದುಕೊಳ್ಳ

ಲ್ಪಟ್ಟಿತು. ಈ ವಿಷಯಕವಾದ ಅನುತಾಪ ಸೂಚಕ ಮತ್ತು ನಿಷೇಧ ಪ್ರದರ್ಶಕ ವಾರ್ತೆ ಗಳು ತಂತ್ರಿಮೂಲಕವಾಗಿ ಕಳುಹಿಸಲ್ಪಟ್ಟವು. ... ... *

ತರುವಾಯ ರಾಯಚೂರು ಸಂಸ್ಕೃತ ಪಾಠಶಾಲಾಧ್ಯಾಪಕರಾದ ವೇ॥ ಬಸವರಾಜ ಶಾಸ್ತ್ರಿಗಳು, ಕೈ॥ ಸಕ್ಕರೆ ಕರಡೆಪ್ಪನವರ ಜೀವಿತಚರಿತ್ರೆಯನ್ನು ಪದ್ಯರೂಪಕವಾಗಿಯು ವಚನರೂಪಕವಾಗಿಯು ಬರೆದು ಪ್ರಕಟಿಸಿ ಆ ಶಿವಶರಣರ ಸದ್ವರ್ತನೆಯನ್ನು ಸಮಸ್ತ ರಿಗೆ ತಿಳಿಯುವಂತೆ ಮಾಡಿದುದಕ್ಕಾಗಿ ನಾವೆಲ್ಲರು ಕೃತಜ್ಞರಾಗಬೇಕಾಗಿದೆ ಎಂದು ವೇ॥ ಗದಿಗೆಯ್ಯ ಹೊನ್ನಾಪುರ ಮಠ ವಕೀಲ ಇವರು ಹೇಳಿ ಆಭಾರ ಮನ್ನಿಸಿದರು. *

೧ನೇ—ವಿಷಯ ವಿದ್ಯಾಭಿವೃದ್ಧಿಯ ಫಂಡಿನ ಆವಶ್ಯಕತೆ.

ಈ ವಿಷಯದಮೇಲೆ ವೇ॥ ಗುಬ್ಬಿಕೋಟೆ ವಡೆಯರ್ ರುದ್ರಾರ್ರ್ಯರಿಂದ ಮಾಡಲ್ಪಟ್ಟ ಭಾಷಣವು.

## (೧) ವಿದ್ಯಾಭಿವೃದ್ಧಿಯ ಫಂಡಿನ ಅವಶ್ಯಕತೆ.

ಮಹಾಸ್ವಾಮಿಗಳೇ ? ಸಭಾಧ್ಯಕ್ಷರೇ ! ಸಭಿಕ ಮಹನೀಯರೇ !

ವಿದ್ಯಾಭಿವೃದ್ಧಿ ಫಂಡು ವೃದ್ಧಿಗೊಳಸದಿದ್ದರೆ ವೀರಶೈವ ಸಮಾಜದಲ್ಲಿ ಅನೇಕ ಬಡ ವಿದ್ಯಾರ್ಥಿಗಳು ವಿದ್ಯಾಭ್ಯಾಸವಂ ಹೊಂದಿ ಮುಂದೆಬರಲು, ದಾರಿಯಿರುವದಿಲ್ಲ. ನಮ್ಮ ಸಮಾಜದಲ್ಲಿ ಬಡವರೇ ವಿಶೇಷವಾಗಿ ವಿದ್ಯಾಕಾಂಕ್ಷಿಯಾಗಿರತಕ್ಕವರೇ ಹೊರ್ತು ಧನವಂತ ರು ಧನಮದದಿಂಚ ಅದಕ್ಕೆ ವಿಶೇಷಗಮನ ಕೊಡುವದಿಲ್ಲ; ಮತ್ತು ಆವರ ತಂದೆತಾಯಿಗಳು ತಮ್ಮಮಗನು ವಿದ್ಯಾಓದಿ ದಣಿದು ಕೃಶವಾಗುತ್ತಾನೆಂದು ಸೂರ್‍ಯೋದಯಕ್ಕೆ ಮುಂಚೆಯೇ ಏಳಬೇಡ ಮಗುವೇ ಮತ್ತು ರಾತ್ರಿಕಾಲ ವಿಶೇಷ ನಿದ್ರೆಕೆಡಬ್ಯಾಡ ಅಪ್ಪಾಜಿ ಎಂದು ಮು ದ್ದಿಸುತ್ತಿರುವರು. ಮತ್ತು ಮಗನೇ ವಳ್ಳೇ ಉಡಪನ್ನು ಧರಿಸಿಕೊಳ್ಳೊ ನಿನ್ನ ಅತ್ತೆಮಾ ವಂದಿರು ಆಡಿಕೊಳ್ಳುತ್ತಾರೋ ಎಂದು ಬೋಧಿಸುತ್ತಿರುವರು. ಇದರಿಂದ ವಿದ್ಯಾಗಮನ ತಪ್ಪಿ, ಮದೋನ್ಮತ್ತ ತನದಲ್ಲಿಯೇ ವರ್ತಿಸುವದಕ್ಕಾಸ್ಪದ ವಾಗುವದು. ಈರೀತಿ ವಿದ್ಯಾ ಭ್ಯಾಸಕಾಲ ಕಳಿಯೋಣ ಯೌವ್ವನಾವಸ್ಥೆಯಲ್ಲಿ ವಿದ್ಯಾಹತ್ತೀತೆ ಯೋಚಿಸಿ, ಆದಪ್ರಯು ಕ್ತ ವಿದ್ಯಾಭಿವೃದ್ಧಿ ಫಂಡಿನ ಸಹಾಯದಿಂದ ಬಡ ವಿದ್ಯಾರ್ಥಿಗಳೇ ವಿಶೇಷವಾಗಿ ಅಭಿವೃದ್ಧಿ ಸ್ಥಿತಿಗೆ ಬರತಕ್ಕವರಾದ ಕಾರಣ ವಿದ್ಯಾಭ್ಯಾಸಕ್ಕೆ ನಿಯಾಮಕ ಕಾಲವನ್ನು ಸಂಕ್ಷಿಪ್ತವಾಗಿ ವಿವರಿಸುವೆನು. ಈಗಿನಕಾಲದಲ್ಲಿ ಮನುಷ್ಯನ ಆಯುಷ್ಯ ೧೦೦ ವರುಷವೆಂದು ತಿಳಿಯ ಲಾಗದು. ಆಯುಃ ಪ್ರಮಾಣವೇ ೬೦ ವರುಷವೆಂದು ಭಾವಿಸಬೇಕಾಗಿದೆ. ಹ್ಯಾಗಂದರೆ

ಗೌರ್ನಮೆಂಟಿನವರು ೫೫ ವರುಷಕ್ಕೇನೆ ಪೆನ್ಷನ್‌ಕೊಟ್ಟು ಮನೆಗೆ ಕಳುಹಿಸುತ್ತಿರುತ್ತಾರೆ ಮತ್ತು ಲೈಫ್ ಅನ್ಶೂರೆನ್ಸ ಕಂಪನಿಯವರೂ ಸಹಾ ೬೦ ವರುಷದಮೇಲೆ ಗಣಿಸುವದಿಲ್ಲ. ಹೀಗಿರುವ ಈಸ್ಥಿತಿಯಲ್ಲಿ ಬಾಲ್ಯ, ಯೌವ್ವನ, ಕೌಮಾರ, ವೃದ್ಧಾಪ್ಯವೆಂದು ೪ ಅವಸ್ಥೆಗಳು ಮನುಷ್ಯನಿಗೆ ಸಂಭವಿಸತಕ್ಕವುಗಳು ತಮಗೆ ಗೊತ್ತೆಯಿದೆ. ವೃದ್ಧಾಪ್ಯದಲ್ಲಿ ಮುಂದಿನ ಸದ್ಗತಿಯನ್ನು ಪಡೆಯುವದರಲ್ಲಿಯೂ, ಶಿವಧ್ಯಾನದಲ್ಲಿಯೂ ವಿಶೇಷ ಆಸಕ್ತಿಯೇ ಹೊರ್ತು ಇಹಲೋಕದ ವೃತ್ತಿಯಲ್ಲಿ ಅಷ್ಟು ಅಭಿರುಚಿ ಇರುವದಿಲ್ಲ. ಕೌಮಾರಾವಸ್ಥೆಯಲ್ಲಿ ತನ್ನ ಮಕ್ಕಳುಗಳನ್ನು ಅಭಿವೃದ್ಧಿ ಸ್ಥಿತಿಗೆ ತರಬೇಕೆಂಬ ಕುತೂಹಲವೇ ವಿಶೇಷವಾಗಿರುತ್ತದೆ. ಯೌವ್ವನಾವಸ್ಥೆಯಲ್ಲಿ ವಿಶೇಷವಾಗಿ ಧನಾರ್ಜನೆಮಾಡಿ ಕೀರ್ತಿಯನ್ನು ಸಂಪಾದಿಸಿ, ಹೆಂಡತಿ ಮಕ್ಕಳೊಂದಿಗೆ ಸುಖವಾಗಿರೋಣ ವೆಂಬುದೇ, ವಿಶೇಷಾಲೋಚನೆಯು. ಮಿಕ್ಕ ಬಾಲ್ಯಾವಸ್ಥೆಯಲ್ಲಿ ಏನನ್ನು ಮಾಡಬೇಕೆಂಬುದರ ವಿಷಯವಾಗಿಯೇ, ವಿಶೇಷ ಗಮನಿಸತಕ್ಕದ್ದಾಗಿದೆ. ಅದಕ್ಕಾಗಿಯೇ ಫಂಡನ್ನು ಶೇಖರಿಸಬೇಕೆಂದು ಪ್ರಯತ್ನಿಸುತ್ತಿರುವದು. ಬಾಲ್ಯಾವಸ್ಥೆಯೇ ವಿದ್ಯಾಶೇಖರಕ್ಕೆ ಸಕಾಲವಾದ್ದರಿಂದ ಇಂಥಾ ಬಾಲ್ಯಾವಸ್ಥೆಗೆ ಅನುಕೂಲತೆಗಳು ಸರಿಯಾಗಿ ದೊರಿಯದಿದ್ದರೆ ವಿದ್ಯಾಭಿವೃದ್ಧಿ ಹ್ಯಾಗಾದೀತು. ನಮ್ಮ ಸಮಾಜದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಪ್ರೋತ್ಸಾಹವಿಲ್ಲದೆ ಸಮಾಜವೇ ! ಇತರ ಮತಸ್ಥರಿಗಿಂತಲೂ ಹಿಂದುಳದಿರುವದರಿಂದ ಇದಕ್ಕೆ ಮೊದಲು ಸಹಾಯಕೊಟ್ಟರೆ ಪ್ರೌಢಶಿಕ್ಷಣಕ್ಕೆ ಅನೇಕ ಅನುಕೂಲತೆಗಳು ತನ್ನಷ್ಟಕ್ಕೆ ತಾನೆ ದೊರಿಯುವವು. ಹ್ಯಾಗಂದರೆ ವಿದ್ಯಾರ್ಥಿಯು ಪರೀಕ್ಷೆಯಲ್ಲಿ ೧ನೇ ತರಗತಿಯಲ್ಲಿ ೧-ರಿಂದ ೫-ರ ಸಂಖ್ಯೆಯೊಳಗೆ ಬಂದರೆ ಗೌರ್ನಮೆಂಟ್ ಸ್ಕಾಲರ್‌ಷಿಪ್‌ಗಳು ದೊರಿಯುವವು. ಮತ್ತು ಈಗಿನಕಾಲದಲ್ಲಿ ವಿದ್ಯಾವಂತರಿಗೆ ತಮ್ಮ ಹೆಣ್ಣುಮಕ್ಕಳನ್ನು ವಿವಾಹಮಾಡಿ ಕೊಡಬೇಕೆಂಬ ಭ್ರಾಂತಿಯು ಅನೇಕರಲ್ಲಿ ಹುಟ್ಟಿರುವಪ್ರಯುಕ್ತ, ಬಾಲ್ಯದಲ್ಲಿಯೇ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ ವಿದ್ಯಾರ್ಥಿಗಳಿಗೆ ಸ್ವಕೀಯ ಬಂಧುವರ್ಗದವರಿಂದಲೂ, ಇತರರಿಂದಲೂ ಸಂಪೂರ್ಣ ಸಹಾಯ ದೊರಿಯುವದು. ಅಲ್ಲಲ್ಲಿ ಸ್ತ್ರೀವಿದ್ಯಾಭ್ಯಾಸ ತಕ್ಕಮಟ್ಟಿಗೆ ನಡಿಯುತ್ತಲಿದೆ. ಇದಕ್ಕೆ ಇನ್ನೂ ವಿಶೇಷವಾಗಿ ಪ್ರತಿಮಬ್ಬರೂ ಗಮನಿಸತಕ್ಕದ್ದಾಗಿದೆ. ವಿದ್ಯಾವಂತ ನಾದವನು ವಿದ್ಯಾವಂತೆಯಾದ ಕನ್ಯೆಯನ್ನೇ ವರಿಸಬೇಕೆಂಬ ಕುತೂಹಲ ಹ್ಯಾಗಿರುವದೊ ಅದರಂತೆಯೇ ವಿದ್ಯಾವಂತೆಯಾದ ಕನ್ಯೆಯು, ವಿದ್ಯಾವಂತ ನಾದವರನನ್ನೆ ವರಿಸಬೇಕೆಂಬ ಆಶೆಯೂ ಇರುವದು. ಸ್ತ್ರೀವಿದ್ಯಾಭ್ಯಾಸ ಅಭಿವೃದ್ಧಿ ಸ್ಥಿತಿಗೆ ಬರುವದರಿಂದ ಅವರವರ ಮಕ್ಕಳು ಬಾಲ್ಯದಲ್ಲಿಯೇ ವಿದ್ಯದ ದಾರಿಯನ್ನು ಹಿಡಿದು ಹೋಗುವದಕ್ಕೆಕಾರಣವಾಗುತ್ತೆ. ಮತ್ತು ಬಾಲಕರು ವಿದ್ಯಾಭಿರುಚಿಯಂ ಹೊಂದಿ ಪೂರ್ಣ ಪ್ರಬಲಸ್ಥಿತಿಗೆ ಬರುವರು. ಅನೇಕರು ಪ್ರಾರಬ್ಧದಂತೆ ( ಹಣೆ ಬರಹ ) ನಡಿಯುತ್ತೆ ಯಾತಕ್ಕೆ ಪ್ರಯತ್ನಮಾಡಬೇಕೆಂಬ ಮೂರ್ಖ ತಿಳವಳಿಕೆ ಯುಳ್ಳವರಾಗಿರುವರು ಆಗಾಮಿ, ಸಂಚಿತ, ಪ್ರಾರಬ್ಧವೆಂಬ ೩ ಕರ್ಮಗಳು ಸೇರಿಯೇ ಮನುಷ್ಯನ ಸಾಧನೆ

ಸಂಪತ್ತಿಗಳೆಲ್ಲಾ ನಡಿಯುವವು. ಆದಪ್ರಯುಕ್ತ, ಮನುಷ್ಯ ಪ್ರಯತ್ನವೇ ಮುಕ್ಕಾಲು ಭಾಗ ಶೇರಿರುತ್ತೆ. ಈರೀತಿಯಿರುವಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಆಗಬೇಕಾದ ಎಲ್ಲಾ ಪ್ರೋತ್ಸಾಹಗಳನ್ನು ಮಹಾ ಸಭೆಯವರು ಪರ್ಯಾಲೋಚಿಸುತ್ತೀರೆಂದು ನಂಬಿರುತ್ತೆನೆ. ಇದಕ್ಕೆ ಫಂಡನ್ನು ಕೂಡಿಸುವ ಸುಲಭೋಪಾಯವನ್ನು ಸೂಚಿಸದಿದ್ದರೆ ಪ್ರಯೋಜನವಿಲ್ಲ. ಎಲ್ಲರೂ ವಿದ್ಯಾ ಅಭ್ಯಾಸಮಾಡಬೇಕು. ಅದು ಶ್ರೇಷ್ಠವಾದದ್ದು ಎಂಬುದನ್ನು ತಿಳಿದೆ ಇರುತ್ತಾರೆ. ಅದರ ಅಭಿವೃದ್ಧಿಸ್ಥಿತಿಗೆ ಸುಲಭೋಪಾಯವನ್ನು ಸೂಚಿಸುವದೇ ಮುಖ್ಯವಾದದ್ದು ಅದ್ಯಾವದಂದರೆ ,, ಮುಷ್ಟಿ ಧಾನ್ಯ ಫಂಡ್ ,, ಕ್ರಮದಿಂಪ ರಾಜಾದಾಯದಂತೆ ಕೊರತೆಯಿಲ್ಲದೆ ವೃದ್ಧಿಹೊಂದುವದು. ಇಂಡಿಯಾ ದೇಶದ ೩೫ ಲಕ್ಷ, ವೀರಶೈವ ಪ್ರಜೆಯಲ್ಲಿ ೧೦ ಜನಕ್ಕೆ ೧-ಮನೆ ಯಂದು ಗ್ರಹಿಸಿ, ಮನೆ ೧-ಕ್ಕೆ ದಿನ ೧-ಕ್ಕೆ ಒಂದು ಮುಷ್ಟಿ ಧಾನ್ಯವೆಂದು ಲೆಕ್ಕಿಸಿ, ೧೬ ಶೇರಿಗೆ ೧-ರೂಪಾಯಿ, ಎಂದು ಪರಿಶೋಧಿಸಿದಾಗ್ಯು ಸುಮಾರು ೪೦೦೦೦, ರೂಪಾಯಿ ತಿಂಗಳೊಂದಕ್ಕೆ ಉತ್ಪತ್ತಿಯಾಯ್ತು. ಇದರಲ್ಲಿ ಕೆಲವು ಪ್ರದೇಶದಲ್ಲಿ ಪ್ರಚಾರಕ್ಕೆ ಬಾರದೆ ಮತ್ತು ಅದರವ್ಯವಸ್ಥೆಯ ಖರ್ಚು ಬಾಬುಗಳಿಗೂ ಅರ್ಧಭಾಗವೆಂದರೆ ೨೦೦೦೦ ರೂಪಾಯಿ ಖರ್ಚು ಮಾಡಿದಾಗ್ಯೂ ಬಾಕಿ ೨೦೦೦೦, ರೂಪಾಯಿ ನಿರಾಯಾಸವಾಗಿ ನಿವಳವಾಗಿ ವುಳಿಯುವದು. ತಿಂಗಳೊಂದಕ್ಕೆ ೨೦೦೦೦ ರೂಪಾಯಿಗಳು ಉತ್ಪತ್ತಿ ಆಕ್ಕರೆ ಎಷ್ಟು ಜನ ವಿದ್ಯಾಭ್ಯಾಸಿಗಳಾಗುವರು ಯೋಚಿಸಿ, ಇದು ಬಹಳ ಮಹತ್ವವಾದ ಕೆಲಸವಾದ್ದರಿಂದ ಮಹಾ ಸಭೆಯವರು ಈ ವಿಷಯದಲ್ಲಿ ರೆಜುಲೂಷನ್ ಮಾಡಿದರೆ ಬಹಳ ಉತ್ತಮವಾಗಿರುತ್ತೆ ಮತ್ತು ಎಲ್ಲಾ ಸ್ಥಳಗಳಲ್ಲಿಯೂ ಜಿಲ್ಲಾ, ತಾಲ್ಲೂಕ, ಕಮಿಟಿಗಳೆಂಬುದನ್ನು ಸ್ಥಾಪಿಸತಕ್ಕದ್ದು. ಅವರುಗಳು ಇದಕ್ಕೆ ವಿಶೇಷಗಮನ ಕೊಡತಕ್ಕದ್ದು. ಸಿಂಹಾಸನಾಧೀಶ್ವರರು ಮತಸ್ಥಾಪನಾಚಾರ್ಯ ರಾಗಿರುವದರಿಂಡ ಇದಕ್ಕೆ ಅವರು ವಿಶೇಷವಾಗಿ ಕೈಹಾಕಿ ಅಭಿವೃದ್ಧಿಸ್ಥಿತಿಗೆ ತರತಕ್ಕದ್ದಾಗಿದೆ. ಅನೇಕ ಸ್ಥಳಗಳಲ್ಲಿ ಅವರು ಇಲಾಖದಾರರನ್ನು ನೇಮಿಸಿರುವರು. ಅವರ ಮುಖಾಂತ್ರವಾಗಿಯೂ, ಮಠಸ್ಥರ ಮುಖಾಂತ್ರವಾಗಿಯೂ ಕ್ರಮಸ್ಥಿತಿಯಲ್ಲಿ ಇಡಬೇಕಾಗಿ ಸಿಂಹಾಸನಾಧೀಶ್ವರರನ್ನು ಪ್ರಾರ್ಥಿಸಿಕೊಳ್ಳುವದು. ಮತ್ತು ಧರ್ಮೋಪದೇಶಕ ಕಮಿಟಿಯಂದು ಈಗಿನ ಮಹಾಸಭೆ ಕಾಲದಲ್ಲಿಯೇ ಏರ್ಪಡಿಸುವದು, ಉತ್ತಮವಾದದ್ದು. ಈ ವಿಷಯವಾಗಿ ಹಿಂದಿನ ಸಭೆಗಳಲ್ಲಿ ಕೂಗುತ್ತಿದ್ದಾಗ್ಯೂ ವಿಶೇಷವಾಗಿ ಇನ್ನೂ ಪ್ರಚಾರಕ್ಕೆ ಬಂದಿಲ್ಲ. ಧರ್ಮೋಪದೇಶಕರನ್ನು ಈಗಲೇ ನೇಮಿಸಿ, ದೇಶಗಳ ಮೇಲೆ ಕಳುಹಿಸುವದರಿಂದ ಅದು ಕ್ರಮಕ್ಕೆ ಬರುವದೇ ಹೊರ್ತು ತಮ್ಮತಮ್ಮ ಪಟ್ಟಣಗಳಿಗೆ ಹೋದಾಗ ಯೋಚಿಸೋಣವೆಂದು ವಿಳಂಬಿಸಿದರೆ ಬರೆಮಾತಿನ ಮಲ್ಲಣ್ಣಗಳೆಂಬ ಶಬ್ದಕ್ಕೆ ಅನ್ವಯಿಸುತ್ತೆ. ವಿದ್ಯಾಫಂಡ್ ಚಂದಾ ಹಣರೂಪದಿಂದ ಮೂಲಧನವಾಗಿ ಮೊದಲು ಶೇಖರಿಸಬೇಕು ಅದಕ್ಕೆ ಮುಷ್ಟಿಧಾನ್ಯ ಫಂಡಿನಿಂದ ಬಂದ ಮೊಬಲಗನ್ನು ವ್ಯಾಪಾರಸ್ಥಳಗಳಲ್ಲಿನ ರುಸುಂ ತೆಗಿಯುವದರಿಂದ ಬರುವಮೊಬಲಗನ್ನು ವ್ಯವಸಾಯದಲ್ಲಿನ ಕೂರಿಗೆಧಾನ್ಯವೆಂದು ಕೂಡಿಸಿ

ಬಂದ ಮೊಬಲಗನ್ನು ವಿದ್ಯಾಫಂಡಿಗೇನೆ ಶೇಖರಿಸಬೇಕಾದ್ದು. ಈ ಕ್ರಮಗಳೆಲ್ಲಾ ಧರ್ಮೋಪದೇಶಕ್ಕ ಕಮಿಟಿ, ಜಿಲ್ಲಾ ತಾಲ್ಲೂಕ ಕಮಿಟಿಗಳನ್ನು ಸ್ಥಾಪಿಸುವದರಿಂದಲೂ, ಸಿಂಹಾಸನಾಧೀಶ್ವರರು ಈ ವಿಷಯಕ್ಕೆ ಬದ್ಧಕಂಕಣರಾಗಿ ನಿಲ್ಲುವದರಿಂದಲೂ ಪೂರ್ಣಾಭಿವೃದ್ಧಿಸ್ಥಿತಿಗೆ ಬರುತ್ತವೆಯಂದು ಪೂರ್ಣ ನಂಬಿಕೆಯಿಂದ ಹೇಳುತ್ತೇನೆ. ... *

ಆದರೆ ನಾನು ಮೇಲೆಹೇಳಿದ ೬೦ ವರ್ಷವನ್ನು ಬಾಲ್ಯ, ಯೌವನ, ಕೌಮಾರ ವೃದ್ಧಾಪ್ಯಗಳಲ್ಲಿ ವಿಭಾಗಿಸಲಾಗಿ ಬಾಲ್ಯಾವಸ್ಥೆಗೆ ೧೫ವರುಷ ಸೂಚಿಸಿದಂತಾಯ್ತು. ಜನ್ಮಾರಭ್ಯ ೧೫ ವರುಷದೊಳಗೆ ವಿದ್ಯದ ಪಾವಟಿಗೆಯನ್ನು ಹತ್ತಿದ್ದರೆ ಮುಂದಿನ ಯೌವನಾವಸ್ಥೆಯಲ್ಲಿನ ಪೂರ್ವಾರ್ಧಕಾಲದಲ್ಲಿ ವಿದ್ಯದ ಮೇಲುಪ್ಪರಿಗೆಯನ್ನು ಏರಿ, ಯುವ್ವನಾವಸ್ಥೆಯ ಉತ್ತರಾರ್ಧ ಕಾಲದಲ್ಲಿಯೂ, ಕೌಮಾರ ವೃದ್ಧಾಪ್ಯಗಳಲ್ಲಿಯೂ ವಿದ್ಯಾ ಸ್ತ್ರೀಭೋಗವಂ ಹೊಂದುತ್ತಾನೆಂದು ಹೇಳಬಹುದು. ಹೀಗಿರುವಲ್ಲಿ ಸಣ್ಣ ಪುಟ್ಟಗ್ರಾಮಗಳಲ್ಲಿರುವ ವಿದ್ಯಾರ್ಥಿಗಳಿಗೆ ಇಂಗ್ಲೀಷ್, ಅಥವಾ ಸಂಸ್ಕೃತ, ಅಭ್ಯಾಸ ದೊರಿಯುವಹಾಗಿಲ್ಲ. ಪರಸ್ಥಳದ ದೊಡ್ಡ ಪಟ್ಟಣಗಳಿಗೆ ಹೋಗಿ ಅಭ್ಯಾಸಮಾಡುವದಕ್ಕೆ ಅನ್ನ ಪುಸ್ತಕಾದಿಗಳಿಗೆ ಅಭಾವವಾಗಿರುತ್ತದೆ. ಕೆಲವು ಪ್ರಾಂತಗಳಲ್ಲಿ ಸ್ಟುಡೆಂಟ್ಸ್ ಹೋಮ್ ಬೋರ್ಡಿಂಗ್ ಲಾಡ್ಜ್ ಇಲ್ಲದಿರುವದರಿಂದ ಧನವಂತರ ಮಕ್ಕಳಿಗೂ ಅಭಾವವಾಗಿರುತ್ತದೆ. ಇಂಥಾದ್ದರಲ್ಲಿಯೂ ಅವರಲ್ಲಿ ಸೂಕ್ಷ್ಮಬುದ್ಧಿಯುಳ್ಳ ವಿದ್ಯಾರ್ಥಿಯು ೧೫, ೧೬ನೇ ವಯಸ್ಸಿನಮೇಲೆ ಕೆಲವರ ಸಹಾಯದಿಂದ ವಿದ್ಯಾಭ್ಯಾಸಕ್ಕೆ ದೊಡ್ಡಪಟ್ಟಣವಂ ಸೇರುವನು. ಇವನು ೫, ೬, ವರುಷ ಅಭ್ಯಾಸ ಮಾಡುವವರಲ್ಲಿಯೇ ಯೌವನಾಂಗನೆಯು ಕಾದುಕೊಂಡಿರುವಳು. ಆ ೫, ೬, ವರುಷಕ್ಕೆ ಮೆಟ್ರಿಕ್ಯುಲೇಷನ್ ಪರೀಕ್ಷೆಯಾಗುವದು ಕಷ್ಟಸಾಧ್ಯವಾಗಿರುತ್ತೆ. ಇದೇರೀತಿಯೇ ಅನೇಕ ವಿದ್ಯಾರ್ಥಿಗಳು ಪರಿಣಮಿಸಿರುವದನ್ನು ಕಣ್ಣಿಂದ ನೋಡಿರುತ್ತೇನೆ, ತಮ್ಮಗಳಿಗೂ ದೃಷ್ಟಾಂತವಾಗಿರಬಹುದು. ಯಾವ ವಿದ್ಯಾರ್ಥಿಯು ೧೫, ೧೬, ವರುಷದೊಳಗೆ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ದಾಟಿಹೋಗುತ್ತಾನೋ ಅವನು ವಿದ್ಯಾವಂತನಾಗಿ ಬರುತ್ತಾನೆಂದು ಊಹಿಸಬಹುದು. ರಾಜಕೀಯ ವಿದ್ಯದಲ್ಲಿ ಪ್ರವೇಶಿಸದಿದ್ದರೆ ಎಂದಿಗೂ ನಾವುಗಳು ಮುಂದರಿಯಲಾಗುವದಿಲ್ಲ. ಮತ್ತು ಸಂಸ್ಕೃತ ವಿದ್ಯೆಗೋಸ್ಕರ ಕಾಲೇಜುಗಳನ್ನು ಮುಖ್ಯ ಮುಖ್ಯ ಸ್ಥಳಗಳಲ್ಲಿ ಅವಶ್ಯಕವಾಗಿ ಸ್ಥಾಪಿಸಬೇಕಾದ್ದು. ಇದರಿಂದ ಮತದ ವಿಷಯಗಳೆಲ್ಲ ಪ್ರಸಿದ್ಧಿಗೆ ಬರುವವು. ಇವುಗಳಿಗೆಲ್ಲಾ ಬಾಲ್ಯಾವಸ್ಥೆಯಾದ ೧೫ವರುಷದೊಳಗೆ ವಿದ್ಯಾರ್ಥಿಗಳಿಗೆ ವಿದ್ಯಾಪ್ರೋತ್ಸಾಹ, ಅಂದರೆ ಪ್ರಾಥಮಿಕ ಶಿಕ್ಷಣಕ್ಕೆ ಫಂಡ್ ದೊರಿಯುವಂತೆ ಮಾಡಿ ಅನೇಕ ದೊಡ್ಡದೊಡ್ಡ ಪಟ್ಟಣಗಳಲ್ಲಿ ಬೋರ್ಡಿಂಗ್ ಲಾಡ್ಜ್ ಗಳೆಂಬ ಏರ್ಪಡಿಸಿದರೆ ಅನೇಕರು ವಿದ್ಯಾವಂತರಾಗಿ ಮತವುನಾಗರೀಕ ಸ್ಥಿತಿಗೂ, ಅಭಿವೃದ್ಧಿಸ್ಥಿತಿಗೂ ಬರುವದಕ್ಕೆ ಕಾರಣವಾಗುತ್ತದೆ. ಹಿಂದುಳಿದಿರುವ ನಮ್ಮ ಸಮಾಜದವೃತ್ತಿ ಯಾವರೀತಿಯಿದೆ, ಎಂದರೆ ೨

ಎತ್ತುಯಿದ್ದರೆ ಮಲ್ಲೆಗೌಡ, ೧ ಎತ್ತುಯಿದ್ದರೆ ಮಲ್ಲಶೆಟ್ಟಿ, ಅದೂ ಇಲ್ಲದಿದ್ದರೆ ಮಲ್ಲ ವಡೇರು ಎಂಬ ಜೀವನಾಂಶದಲ್ಲಿಯೇ ವರ್ತಿಸುತ್ತಿರುವ ಸ್ಥಿತಿಯನ್ನು ನೋಡಿ ವಿಷಾದಿಸ ಬೇಕಾಗಿದೆ. ವಿದ್ಯಾವಂತನಾಗಿ ಯಾವ ವೃತ್ತಿಯಲ್ಲಾದರೂ ಪರಿಣಮಿಸಿದಾಗ್ಯೂ ಅದರಲ್ಲಿ ಪ್ರಕಾಶ, ಮತ್ತು ಭೂಷಣ, ಚಾತುರ್ಯ, ಉತ್ಪನ್ನವಾಗುವದರಿಂದ ನಮ್ಮ ಸಮಾಜದವರೆಲ್ಲರೂ ವಿದ್ಯಕ್ಕೆ ವಿಶೇಷ ಪ್ರೋತ್ಸಾಹಗಮನ ಕೊಡಬೇಕಾಗಿ ನನ್ನ ಪ್ರಾರ್ಥನೆ. *

ಧಾರ್ವಾಡದ ಮಹನೀಯರು ವಿದ್ಯಾಭಿವೃದ್ಧಿ ಫಂಡ್ ಪೀಠಿಕೆಯನ್ನು ಮಾರ್ಗದರ್ಶಿಗಳಾಗಿ ಹಾಕಿದರು. ಈಚಿಗೆ ಮೈಸೂರು, ಕೊಲ್ಲಾಪುರ, ಸೊಲ್ಲಾಪುರ, ಪ್ರಾಂತ್ಯಗಳಲ್ಲಿಯೂ ವಿದ್ಯಾಭಿವೃದ್ಧಿ ಫಂಡ್ ಕೂಡಿಸುವ ಕೆಲಸ ನಡೆದಿರುತ್ತೆ. ವಿದ್ಯಾ ಫಂಡ್ ನಾಮವೇ ಇಲ್ಲದಿರುವ ಈ ಬಳ್ಳಾರಿ ಪ್ರಾಂತದಲ್ಲಿ ಈಗ ವಿದ್ಯಾಭಿವೃದ್ಧಿ ಫಂಡ್ ಬೀಜಾಂಕುರಮಾಡಿಸಿ ನಾನಾವಿಧದಿಂದ ವೃದ್ಧಿಗೊಳಿಸಿ ಎಲ್ಲಾ ಪ್ರಾಂತ್ಯದ ಫಂಡನ್ನು ವಂದೆ ಮಾಡಿದರೆ ಐಕ್ಯಮತ್ಯದಿಂದ ಸಮಾಜೋನ್ನತಿಗೆ ಕಾರಣಭೂತವಾಗುತ್ತೆ. ... ... *

ವಿದ್ಯಾವಿಷಯಕ್ಕಾಗಿ ತಮ್ಮ ತನುಮನ ಧನವನ್ನೆಲ್ಲಾ ತ್ಯಾಗಮಾಡಿದ ಪುಣ್ಯಾತ್ಮರಾದ ಕೈ॥ ಶಿರಸಂಗಿ ದೇಸಾಯಿ, ಶ್ರೀಮಂತ ಲಿಂಗಪ್ಪ, ಜಾಯಪ್ಪ, ಇವರ ಸ್ಮರಣೆಯನ್ನು ನಾವುಗಳು ಇಲ್ಲಿ ಸ್ಮರಿಸಬೇಕಾಗಿದೆ. ಕಡೆಗೆ ವಂದು ವಿಷಯವನ್ನು ಮಹಾ ಸಭೆಯವರಿಗೆ ಸೂಚಿಸುವೆನು. ಮಹಾಸಭೆಗೆ (ಕಾನ್ಫರೆನ್ಸಿಗೆ) ಬರುವ ಪ್ರತಿನಿಧಿ ಪ್ರೇಕ್ಷಕರಿಗೆ ರೈಲ್ವೆ ಪ್ರಯಾಣದಲ್ಲಿ ಕನ್ಸೆಷನ್ ಟಿಕಿಟ್ ದೊರಿಯುವಂತೆ ಇಂಡಿಯಾ ಗೌರ್ನಮೇಂಟನವರನ್ನು ಎಲ್ಲಾ ರೈಲ್ವೆ ಡಿಪಾರ್ಟಮೆಂಟಗೂ ಆರ್ಡರ್ ಕೊಡುವಂತೆ ಪ್ರಾರ್ಥಿಸಿಕೊಳ್ಳುವದರಿಂದ ನಮ್ಮ ಸಮಾಜಕ್ಕೆ ಅನೇಕ ಸೌಲಭ್ಯಗಳು ದೊರೆತಂತಾಗುವದು. ಈಗ ಕೂಡುವ ಮಹಾಜನರಿಗಿಂತಲೂ ಜಾಸ್ತಿ ಕೂಡುವದಕ್ಕೆ ಕಾರಣವಾಗುತ್ತೆ. ... ... *

ಈ ಮೇಲಿನ ಸುಲಭೋಪಾಯಗಳನ್ನು ತಮ್ಮಗಳ ಮೊಡಲಿಗೆ ಕೊಟ್ಟು ನನ್ನ ಭಾಷಣವನ್ನು ವಿರಮಿಸುವೆನು. ... ... ... *

ವೇ॥ ಜಿ. ಕೆ. ರುದ್ರಾರ್ಯ.

## ವೈದಿಕ ವಿದ್ಯಾಪ್ರಸಾರದ ಉಪಾಯಗಳು.

ರಾಯಚೂರು ಸಂಸ್ಕೃತ ಪಾಠಶಾಲಾಧ್ಯಾಪಕರಾದ ವೇ॥ ಬಸವರಾಜ ಶಾಸ್ತ್ರಿಗಳು ಮಾಡಿದ ಉಪನ್ಯಾಸವು.

ಶ್ಲೋ॥ ಸಕಲನಿಗಮಮೃಗ್ಯಂ ಸರ್ಪಭೂಷಾಕಲಾಪಂ ।
ಜಿತಮದನಸುಶೌರ್ಯಂ ಜಾಹ್ನವೀಹಾರಮೌಲಿಮ್ ॥
ಗಿರಿವರತನುಜಾತಾಗಂಡದತ್ತಸ್ವದೃಷ್ಟಿಂ ।
ಹೃದಯಕಮಲಮಧ್ಯೇಹೃದ್ಯಪದ್ಯೈಃಪ್ರಪದ್ಯೇ ॥೧॥
ಭುವನಜನನಮಸ್ಯಾಂಭುಕ್ತಿಮುಕ್ತಿಪ್ರದಾತ್ರೀಂ ।
ಶಮಿತದನುಜಬಾಧಾಂಶಂಕರಾರ್ಧಾಂಗನಾರೀಮ್ ॥
ಸರಸವಚನಸಿಂಧುಂಸರ್ವಲೋಕೈಕಮಾನ್ಯಾಂ ।
ಹೃದಯಕಮಲಮಧ್ಯೇಹೃದ್ಯಪದ್ಯೈಃಪ್ರಪದ್ಯೇ ॥ ೨ ॥

ಸಕಲ ಸದ್ಗುಣ ಭರಿತರಾದ ಸಭ್ಯ ಮಹಾಶಯರಿಗೆ ವಿನಯ ಪೂರ್ವಕವಾಗಿ ಸೂಚಿಸುವುದೇನಂದರೆ:—ಶ್ಲೋ॥ ಸಂತಃಪ್ರಗೃಹ್ಯಗುರುಣಾಕರುಣಾರಸೇನ ವಾಣೀಮ್ಮಮಚ್ಯುತಗುಣಾಮಭಿಜಾತಯಂತು ॥ ಸಾರಸ್ವತಃಪರಿಚಯೇನಮಹಾಘನಾನಾಂ ಕ್ಷಾರಸ್ಸ್ವತಃಕಿಮುನಮಂಜುರಪಾಂಪ್ರಪಂಚಃ ॥೧॥ ಸಮುದ್ರ ಸಂಬಂಧಿಯಾದ ಲವಣೋದಕವನ್ನು ಮೇಘಗಳು ಗ್ರಹಿಸಿ, ಮಧುರೋದಕವನ್ನು ಮಾಡುವಹಾಗೆ, ನನ್ನ ಗುಣರಹಿತವಾದ ವಾಣಿಯನ್ನು ಸತ್ಪುರುಷರು ಅಧಿಕವಾದ ಕರುಣಾರಸದಿಂದೆ ಗ್ರಹಿಸಿ, ಗುಣವುಳ್ಳದ್ದನ್ನಾಗಿ ಮಾಡಲೆಂದು ವಿಜ್ಞಾಪಿಸಿ, ಪ್ರಕೃತ ವಿಷಯವನ್ನು ಯಥಾಮತಿ ಸೂಚಿಸಲು ಪ್ರಾರಂಭಿಸುತ್ತೇನೆ:— ... ... ... ... ... ... *

ಸಂಸ್ಕೃತವಿದ್ಯೆ ಮತ್ತು ಅದರಲ್ಲಿ ವಿಶೇಷವಾಗಿ ವೈದಿಕವಿದ್ಯೆಯ ಪ್ರಸಾರ.

ಶ್ಲೋ॥ ವಿದ್ಯಾನಾಮನರಸ್ಯಕೀರ್ತಿರತುಲಾಭಾಗ್ಯಕ್ಷಯೇಚಾಶ್ರಯೋ ।
ಧೇನುಃಕಾಮದುಘಾರತಿಶ್ಚವಿರಹೇನೇತ್ರಂತೃತೀಯಂಚಸಾ ॥
ಸತ್ಕಾರಾಯತನಂಕುಲಸ್ಯಮಹಿಮಾರತ್ನೈರ್ವಿನಾಭೂಷಣಂ ।
ತಸ್ಮಾದನ್ಯಮುಪೇಕ್ಷ್ಯಸರ್ವವಿಷಯಂವಿದ್ಯಾಧಿಕಾರಂಕುರು ॥೨॥

ವಿದ್ಯೆಯು ಮನುಷ್ಯನಿಗೆ ಸಾದೃಶ್ಯವಿಲ್ಲದ ಕೀರ್ತಿಯು, ಭಾಗ್ಯಕ್ಷಯವಾಗಲಾಗಿ ಆಶ್ರಯವು, ಮತ್ತು ಕಾಮಿತ ಪದಾರ್ಥಗಳನ್ನು ಕೊಡುವ ಕಾಮಧೇನುವು, ವಿರಹದಲ್ಲಿ ರತಿಸದೃಶವಾದಂಥಾದ್ದು. ಆ ವಿದ್ಯೆಯು ಮೂರನೆಯ ಕಣ್ಣು, ಸತ್ಕಾರಗಳಿಗೆ ಸ್ಥಾನವು,

ಕುಲಕ್ಕೆ ಮಹತ್ತ್ವವು, ರತ್ನಗಳಿಂದೆ ಹೊರ್ತಾಗಿಯೂ, ಭೂಷಣವು ಆಗುತ್ತದೆ. ತತಃ ಉಳಿದ ಸರ್ವವಿಷಯಗಳನ್ನು ದೂರೀಕರಿಸಿ ವಿದ್ಯಾಧಿಕಾರವನ್ನು ಸಂಪಾದಿಸಬೇಕೆಂದು ನೀತಿಕಾರರು ಹೇಳಿರುತ್ತಾರೆ. ಮತ್ತು ಸಂಸ್ಕೃತ ವಿದ್ಯೆಯು ಸರ್ವಭಾಷೆಗಳಿಗೂ ಮಾತೃಸ್ವರೂಪವಾಗಿರುತ್ತದೆ. ಚತುರ್ವೇದಗಳು, ಅಷ್ಟಾವಿಂಶತ್ಯಾಗಮಗಳು, ಅಷ್ಟಾದಶ ಪುರಾಣಗಳು, ವೇದಾಂತ, ಇತಿಹಾಸ, ಧರ್ಮಶಾಸ್ತ್ರ, ಮುಂತಾದ ಧರ್ಮವಿಷಯಗಳು, ನ್ಯಾಯವ್ಯಾಕರಣಾದಿ ಶಾಸ್ತ್ರಷಟ್ಕವು, ಕವಿಕಲ್ಪಿತಕಾವ್ಯ ಚಂಪೂ ನಾಟಕಾದಿ ಮನೋಹರಗ್ರಂಥಗಳು ಅನೇಕವಾಗಿರುತ್ತವೆ. ಹಾಗೂ ಸರ್ವಮತಗಳಿಗೂ ಅವಶ್ಯವಾಗಿ ಬೇಕಾದ ಧರ್ಮನಿರ್ಣಯಗಳನ್ನು ಸಪ್ರಮಾಣವಾಗಿ ಹೇಳತಕ್ಕ ಗ್ರಂಥಗಳೂ, ಈ ಸಂಸ್ಕೃತದಲ್ಲಿಯೇ ಇದ್ದಾವೆ. ವಿದ್ಯಾಶಬ್ದ ನಿರ್ವಚನವಾದರೂ ಹೀಗಿರುತ್ತದೆ. ವಿದಂತ್ಯನಯೇತಿವಿದ್ಯಾ ವ್ಯಾಕರಣಾದಿಭಿಸ್ಸಂಸ್ಕೃತಾಶೋಧಿತಾಸಾಚಾಸೌವಿದ್ಯಾಚ ಸಂಸ್ಕೃತವಿದ್ಯಾ ಅಂದರೆ ವ್ಯಾಕರಣಾದಿಗಳಿಂದೆ ಚನ್ನಾಗಿಶೋಧಿತವಾದ ಇದರಿಂದೆ ತಿಳಿಯುತ್ತಾರೆಂದು ತಾತ್ಪರ್ಯವು ಈ ಪ್ರಕಾರವಾಗಿ ಪ್ರಸಿದ್ಧವಾದ ವಿದ್ಯೆಯಲ್ಲಿ ವೈದಿಕವಿದ್ಯಾ ಪ್ರಸಾರವದೆ. ಅಂದರೆ ಕ್ರಿಯಾಸಾರ, ಲಿಂಗಧಾರಣ ಚಂದ್ರಿಕಾ, ವೀರಶೈವ ಧರ್ಮಶಿರೋಮಣಿ, ವೀರಶೈವಾಚಾರಕೌಸ್ತುಭ, ಸಿದ್ಧಾಂತ ಶಿಖಾಮಣಿ, ಮೊದಲಾದ ನಮ್ಮ ಅತಿನಿರ್ಮಲವಾದ ವೀರಶೈವ ಮತೋಪಯುಕ್ತ ಸಿದ್ಧಾಂತ ಗ್ರಂಥಗಳು, ಮತಾಚಾರವನ್ನು ಬೋಧಿಸುವುದಕ್ಕೋಸ್ಕರ ಅಸಂಖ್ಯಾತಗಳಾಗಿರುತ್ತವೆ. ಹಾಗೂ ಗರ್ಭಾಧಾನಾದಿ ಷೋಡಶ ಸಂಸ್ಕಾರವಿಧಿಯು, ಶಿವಪೂಜಾವಿಧಿಯು, ಶಿವಾಧಿಕ್ಯ ಬೋಧಕ ಗ್ರಂಥಗಳು ಬಹುಶಃ ಇರುತ್ತವೆ. ಈಗ್ರಂಥಗಳ ವೈಪುಲ್ಯಸ್ಥಿತಿಯನ್ನು ವಿಚಾರಿಸುವಲ್ಲಿ ವೈದಿಕವಿದ್ಯಾ ಪ್ರಸಾರವಾದರೂ ಯಥೇಚ್ಛವಾಗಿರುವುದೆಂದು ಸರ್ವರಿಗೂ ವಿದಿತವಾಗುತ್ತದೆ. ಆದರೂ ನಮ್ಮ ಮತೀಯರಲ್ಲಿ ಸಂಸ್ಕೃತ ಮತ್ತು ವೈದಿಕವಿದ್ಯೆಯನ್ನು ಅಭ್ಯಾಸಮಾಡತಕ್ಕ ಜನರು ಬಹು ವಿರಳರಾಗಿರುವುದರಿಂದೆ ಪೂರ್ವೋಕ್ತ ವಿದ್ಯಾವ್ಯಾಪ್ತಿಯು ನಮ್ಮವರಲ್ಲಿ ಕಡಿಮೆಯಾಗಿರುತ್ತದೆಂದರೂ ದೋಷಾಸ್ಪದ ವಾಗಲಾರದು. ಮತ್ತು ಈಗ ಆಯಾ ದೇಶಗಳಲ್ಲಿ ಮತವಿದ್ಯಾಭಿಮಾನಿಗಳಾದ ಮಹನೀಯರಿಂದೆ ಸಂಸ್ಕೃತ ಪಾಠಶಾಲೆಗಳು ಸ್ಥಾಪಿಸಲ್ಪಟ್ಟಿರುತ್ತವೆ. ಅಲ್ಲಿ ಅಧ್ಯಯನಮಾಡತಕ್ಕ ವಿದ್ಯಾರ್ಥಿಗಳಿಗೆ ವೈದಿಕ ವಿದ್ಯಾಭ್ಯಾಸಕ್ರಮವು ಬಹುಶಃ ಪ್ರಾರಂಭಿಸಲ್ಪಟ್ಟಿಲ್ಲವೆಂದು ಊಹಿಸಬೇಕಾಗುತ್ತದೆ. ಅತಃ ಮತಾಂತರದವರಂತೆ ವಿದ್ಯಾರ್ಥಿಗಳ ವ್ಯುತ್ಪತ್ತಿಗೂ, ಮತಸಿದ್ಧಾಂತ ಜ್ಞಾನಲಾಭಕ್ಕೂ, ಉಪಯೋಗ ವಾಗುವಂಥಾ ಕಾವ್ಯ ಚಂಪೂ ಸದೃಶಗಳಾದ ಮತಗ್ರಂಥಗಳನ್ನು ಏರ್ಪಡಿಸಿ, ಅವಕ್ಕೆ ಪ್ರಬಲ ಪಂಡಿತರಿಂದೆ ಪಾಠೋಪಯುಕ್ತ ವ್ಯಾಖ್ಯಾನಗಳನ್ನು ಮಾಡಿಸಿ, ಅವುಗಳ ಅಭ್ಯಾಸವು ಪ್ರತಿಯೊಂದು ಪಾಠಶಾಲೆಯಲ್ಲಿಯೂ ನಡೆಯುವಂತೆ ಮಾಡುವುದರಿಂದೆ ವೀರಶೈವರಲ್ಲಿ ವೈದಿಕ ವಿದ್ಯಾಪ್ರಸಾರವು ಶೀಘ್ರವಾಗಿ ಉಂಟಾಗುವುದಕ್ಕೆ ಇದು ಮೂಲಕಾರಣವಾಗುತ್ತದೆ. ಮತ್ತು ನಿರಾಭಾರ ವೀರಶೈವರು ಪಂಚಸಿಂಹಾಸನಾ ಧೀಶ್ವರರೆಂಬ ಪಂಚಾಚಾರ್ಯರು, ಗುರುಸ್ಥಲ ಮಠಾದಿಕಾರಿಗ

ಳೆಂಬ ಪಟ್ಟಾಧಿಕಾರಿ ಚರಮೂರ್ತಿ ಗೃಹಸ್ಥರು ನಮ್ಮ ಮತದಲ್ಲಿರುತ್ತಾರೆ; ಈ ಪೂಜ್ಯರಲ್ಲಿ ವಿದ್ಯಾರಾಹಿತ್ಯವು ಸಮಗ್ರವಾಗಿರುವುದರಿಂದೆ ವೈದಿಕ ವಿದ್ಯಾಪ್ರಸಾರ ವಾಗುವುದಕ್ಕೆ ದೊಡ್ಡ ಪ್ರತಿಬಂಧಕವಾಗಿರುತ್ತದೆ. ಶ್ಲೋ॥ ಆಚಿನೋತಿಚಶಾಸ್ತ್ರಾರ್ಥ ಮಾಚಾರೇಗ್ರಾಹಯತ್ಯಪಿ ॥ ಸ್ವಯಮಾಚರತಿಯಸ್ಮಾತ್ತಸ್ಮಾದಾಚಾರ್ಯಉಚ್ಯತೇ ॥ ೩ ॥ ಯಾವಕಾರಣದಿಂದೆ ಮತಶಾಸ್ತ್ರಾರ್ಥವನ್ನು ವಿಚಾರಿಸುತ್ತಾನೋ, ತದುಕ್ತಾಚಾರವನ್ನು ಭಕ್ತರಿಗೆ ಬೋಧಿಸಿ ಗ್ರಹಣಮಾಡಿಸುತ್ತಾನೋ, ತಾನೂ ಆಚರಿಸುತ್ತಾನೋ ಆ ಕಾರಣದಿಂದೆ ತಾನು ಆಚಾರ್ಯನೆಂದು ಹೇಳಲ್ಪಡುತ್ತಾನೆ. ಆಚಾರ್ಯ ನಾಮವು ಈ ಪ್ರಕಾರವಾಗಿ ಬಂದಿದ್ದರೂ ಈಗ ಅದಕ್ಕೆ ಪ್ರತಿಕೂಲವಾಗಿರುವುದರಿಂದೆ ಮತಾಂತರದವರು ನೋಡಿ ಕರತ ಲತಾಡನದೊಡನೆ ಹಾಸ್ಯಮಾಡುವುದಕ್ಕೆ ಆಸ್ಪದವಾಗಿರುತ್ತದೆ. ಇದರಲ್ಲಿ ಶ್ರೀಮನ್ನಿರಂಜನ ಪರಬ್ರಹ್ಮಪಾವನ ಪದಾರೂಢರಾದ ಚಿತ್ರಕಲ್ಲು ದುರ್ಗ್ಗದ ಮುರಘ ಮತದ ಜಯದೇವ ಮಹಾಸ್ವಾಮಿಗಳವರು ಡಂಬಳ ಸಂಸ್ಥಾನಾಧೀಶ್ವರರಾದ ಗದಗಿನ ತೋಂಟದ ಮಹಾಸ್ವಾಮಿಗಳವರು, ಹುಬ್ಬಳ್ಳಿ ತ್ರಿಸಹಸ್ರ ಮಠಾಧ್ಯಕ್ಷ ಗಂಗಾಧರ ಮಹಾಸ್ವಾಮಿಗಳವರು, ಧಾರವಾಡದಲ್ಲಿ ನಡೆದ ಮೊದಲನೆಯ ಮಹಾಸಭಾಕಾರ್ಯಕ್ಕು ಇತರ ಮಹಾಸಭಾಕಾರ್ಯಗಳಿಗೂ, ಶಿವಯೋಗ ಮಂದಿರಕ್ಕೂ ಪೂರ್ಣ ಸಹಾಯಕಾರಿಗಳಾದ ಹಾನಗಲ್ಲು ಕುಮಾರಸ್ವಾಮಿಗಳವರು, ಇವರು ಮಾತ್ರ ಮತವಿದ್ಯಾಭಿವೃದ್ಧಿ ಕಾರ್ಯಗಳಲ್ಲಿ ಯಾವಾಗಲೂ ತತ್ಪರರಾಗಿರುತ್ತಾರೆ. ಇವರಂತೆ ಉಳಿದ ನಿರಾಭಾರಿ ದೇಶಿಕೋತ್ತಮರು, ಮತೀಯ ಕಾರ್ಯಗಳಲ್ಲಿ ಪ್ರವರ್ತಿಸುವಂತೆ ಮಹಾಸಭೆಯವರು ನಿರ್ಣ್ಣಯವನ್ನು ಪ್ರಕಟಿಸತಕ್ಕದ್ದು. ಮತ್ತು ಸಿಂಹಾಸನಾಧೀಶ್ವರರಲ್ಲಿ ಕಾಶೀ ಸಿಂಹಾಸನಾಧ್ಯಕ್ಷ ಕೈ॥ ವಾ॥ ರಾಜೇಶ್ವರ ಮಹಾಸ್ವಾಮಿಗಳವರು, ಮತ್ತು ಶಿವಲಿಂಗ ಸ್ವಾಮಿಗಳವರು ತಮ್ಮಲ್ಲಿ ವಿದ್ಯಾಭ್ಯಾಸಕ್ಕೋಸ್ಕರ ಬಂದ ವೀರಶೈವ ವಿದ್ಯಾರ್ಥಿಗಳಿಗೆ ಅನ್ನಪಾನಾದಿಗಳಿಂದೆ ಸಹಾಯಮಾಡುತ್ತಿರುವುದು ಜಗತ್ಪ್ರಸಿದ್ಧವಾಗಿರುತ್ತದೆ. ಶ್ರೀಮದ್ರಂಭಾಪುರಿ ವೀರ ಸಿಂಹಾಸನಾಧ್ಯಕ್ಷ ಪಂಚಾಕ್ಷರೀ ರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು, ಬೀರೂರಲ್ಲಿ ನಡೆಯತಕ್ಕ ಮತ ವಿದ್ಯಾಭಿವೃದ್ಧಿ ಕಾರ್ಯಗಳಿಗೆ ಅನುಕೂಲ್ಯವನ್ನು ಕಲ್ಪಿಸಿ ಕೊಡುತ್ತಿರುವರೆಂಬವಿಷಯವು ಸರ್ವಶ್ರುತವಾಗಿರುವುದು. ಇವರಂತೆ ಇತರ ಸಿಂಹಾಸನಾಧೀಶ್ವರರು ಏತಾದೃಶಕಾರ್ಯಗಳಲ್ಲಿ ಕೇವಲಾಸಕ್ತರಾಗುವಂತೆ ಮಹಾಸಭೆಯವರು ಬಿನ್ನೈಸಬೇಕು. ಹಾಗೂ ಪ್ರತಿಯೊಂದು ವರ್ಷಕ್ಕೆ ನಿಯತವಾಗಿ ಬರತಕ್ಕ ೨, ೩, ಸಾವಿರ ರೂಪಾಯಿಗಳ ಆಯವುಳ್ಳ ಪಟ್ಟಾಧಿಕಾರಿಗಳು, ಇಲಾಖಾದಾರರು ಮೊದಲಾದ ಗುರುಸ್ಥಲದವರು, ನಮ್ಮ ಮತದಲ್ಲಿ ಅಸಂಖ್ಯಾತರಾಗಿದ್ದರೂ ಈ ವಿಧವಾದ ಕಾರ್ಯಗಳಲ್ಲಿ ಕೇವಲ ಪರಾಙ್ಮುಖರಾಗಿರುತ್ತಾರೆ. ಇವರು ಮತವಿದ್ಯಾಭಿವೃದ್ಧಿ ಕಾರ್ಯಗಳನ್ನು ಅವಶ್ಯವಾಗಿ ಕೈಕೊಳ್ಳುವಂತೆ, ಅಂದರೆ ತಮ್ಮ ತಮ್ಮ ಪ್ರಸಿದ್ಧಸ್ಥಾನಗಳಲ್ಲಿ ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿ, ತಮ್ಮ ವಟುಗಳನ್ನು ಅನಾಥ ಬಾಲಕರನ್ನು, ವಿದ್ಯಾವಂತರನ್ನಾಗಿ ಮಾಡುವುದಕ್ಕೆ ಪ್ರಾರಂಭಿಸಬೇಕೆಂಬ ನಿರ್ಣ

ಯವನ್ನು ಮಹಾಸಭೆಯವರು ಪ್ರಕಾಶಪಡಿಸಬೇಕು. ಮತ್ತು ಸಂಸ್ಕೃತ ಪಾಠಶಾಲೆಗಳ ವಾರ್ಷಿಕ ಪರೀಕ್ಷೆಗೋಸ್ಕರ ಒಂದು ಪರೀಕ್ಷಕ ಸಂಘವನ್ನು ಸ್ಥಾಪಿಸಿ, ತನ್ಮೂಲಕ ಎಲ್ಲಾ ಪಾಠಶಾಲೆಗಳ ಪರೀಕ್ಷೆಯನ್ನು ತೆಗೆದುಕೊಳ್ಳುತ್ತಾ ಉತ್ತೀರ್ಣ್ಣರಾದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹವುಂಟಾಗುವಂತೆ ಪಾರಿತೋಷಿಕಾದಿಗಳನ್ನು ಕೊಡುತ್ತಾ, ಅನುತ್ತೀರ್ಣ್ಣರಾದ ವಿದ್ಯಾರ್ಥಿಗಳನ್ನು ಚೆನ್ನಾಗಿ ಅಭ್ಯಾಸಮಾಡುವಂತೆ ಬೋಧಿಸುತ್ತಾ, ಅಧ್ಯಾಪನದಲ್ಲಿ ಉದಾಸೀನರಾದ ಅಧ್ಯಾಪಕರಿಗೆ ಕೇವಲ ಜಾಗರೂಕತೆ ಯುಂಟಾಗುವಂತೆ ನಿಯಮಗಳನ್ನು ಕಲ್ಪಿಸುತ್ತಾ, ಜಾಗರೂಕರಾಗಿರುವ ಅಧ್ಯಾಪಕರಿಗೆ ಪ್ರಶಸ್ತಿಗಳನ್ನು ಕೊಡುತ್ತಾ ಬರುವುದರಿಂದ ಸಂಸ್ಕೃತ, ಮತ್ತು ವೈದಿಕ ವಿದ್ಯಾಪ್ರಸಾರ ವುಂಟಾಗುವದಾದ ಪ್ರಯುಕ್ತ ಮಹಾಸಭೆಯವರು ಈ ವಿಷಯಲ್ಲಿ ಪೂರ್ಣ್ಣದೃಷ್ಟಿಯನ್ನಿಟ್ಟು ಪರೀಕ್ಷಕ ಸಂಘವನ್ನು ಅವಶ್ಯವಾಗಿ ಸ್ಥಾಪಿಸಬೇಕೆಂದು ಪ್ರಾರ್ಥನೆಯದೆ. ... ... ...

## ಬಡವಿದ್ಯಾರ್ಥಿಗಳ ಶಿಕ್ಷಣಕ್ಕಾಗಿ ಬೇರೆಬೇರೇ ಕಡೆಯಲ್ಲಿ ಫಂಡುಗಳನ್ನು ಸ್ಥಾಪಿಸುವುದು.

ಆರ್ಯ ಶಿರೋಮಣಿಗಳೇ! ಪೂರ್ವದಲ್ಲಿ ನಮ್ಮ ವೀರಶೈವರು ವಿದ್ಯಾವಂತರಾಗಿ ಕೇವಲ ಪ್ರಬಲಸ್ಥಿತಿಯಲ್ಲಿದ್ದರೆಂಬ ವಿಷಯವು ಅವರು ರಚಿಸಿರುವ ಗ್ರಂಥಗಳ ಪರ್ಯಾಲೋಚನೆಯಿಂದೆ ವಿಶದವಾಗಿ ಗೊತ್ತಾಗುತ್ತದೆ. ಅದೇ ವೀರಶೈವರಲ್ಲಿ ಈಗ ಕಾಲಸ್ಥಿತಿಯಿಂದ ಕೇವಲ ವಿದ್ಯಾಹೀನತ್ವವು ವ್ಯಾಪಿಸಿರುವುದರಿಂದೆ ಇವರನ್ನು ದಾರಿದ್ರ್ಯವು ವಿಶೇಷವಾಗಿ ಆಕ್ರಮಿಸಿರುತ್ತದೆ. ದರಿದ್ರರಾದ ಇವರು ತಮ್ಮತಮ್ಮ ಬಾಲಕರನ್ನು ಬಾಲ್ಯದಲ್ಲಿ ಗೃಹಕೃತ್ಯಗಳಿಗೆ ನಿಯೋಗಿಸಿಕೊಳ್ಳುವುದರಿಂದೆ ಅವರು ವಿದ್ಯಾಹೀನರಾಗಿ ದರಿದ್ರರಾಗುತ್ತಾರೆ. ಆ ಇಂತಹ ದರಿದ್ರರು ತಮ್ಮಮಕ್ಕಳಿಗ ವಿದ್ಯಾಭ್ಯಾಸಮಾಡಿಸುವುದಕ್ಕೆ ಅನುಕೂಲವಾಗುವಂತೆ ಬೇರೆಬೇರೆ ಕಡಯಲ್ಲಿ ಕಾಯಂ ಫಂಡುಗಳನ್ನು ಹೆಚ್ಚಿಸಿ, ತದ್ದ್ವಾರಾ ಲೌಕಿಕ, ವೈದಿಕ ಪಾಠಶಾಲೆಗಳನ್ನು ಸ್ಥಾಪಿಸುವುದು ನಮ್ಮ ಮುಖ್ಯಕರ್ತವ್ಯವಾಗಿರುತ್ತದೆ. ಫಂಡುಗಳನ್ನು ಕಲ್ಪಿಸದೇ ಪಾಠಶಾಲೆಗಳನ್ನು ಸ್ಥಾಪಿಸಿದರೂ ಅವು ಕೆಲವುದಿನಗಳವರೆಗೂ ನಡೆದು ತದನಂತರ ಶ್ರೇಯಾಂಸಿಬಹುವಿಘ್ನಾನಿ ಎಂಬ ಆಭಾಣಕ ವಚನರೀತ್ಯಾ ಯಾವ ವಿಘ್ನದಿಂದಲೋ ಪ್ರತಿಬಂಧಕವುಂಟಾಗಿ ಬಿಡಲ್ಪಡುತ್ತವೆ- ಇತಿಹಾಸ ಕೋವಿದರೇ ವಿಚಾರಮಾಡಿ ನೋಡಿರಿ, ಕೈ॥ ವಾ॥ ಶ್ರೀ ಸಾಕ್ಷಾದ್ಬಸವೇಶ್ವರಾ ಪರಾವತಾರ ಮೂರ್ತಿಗಳೆನಿಸಿದ ಈ ಬಳ್ಳಾರಿ ಸಕ್ಕರ ಕರಡೆಪ್ಪ ನವರು ತಾವು ಇರುವವರೆಗೂ ನಿತ್ಯಾನ್ನದಾನಾದಿ ವ್ರತಗಳನ್ನು ಅದ್ಭುತವಾಗಿ ನಡೆಸುವುದರೊಡನೆ ಮಾಪೇಶ್ವರ ವಿದ್ಯಾರ್ಥಿಗಳಿಗೆ ನ್ಯಾಯವ್ಯಾಕರಣ ಸಂಗೀತಸಾಹಿತ್ಯ ಮೊದಲಾದ ಶಾಸ್ತ್ರಗಳ ಅಧ್ಯಯನವು ನಿರಾತಂಕವಾಗಿ ನಡೆಯುವಂತೆ ಅಮಿತವಾದ ದ್ರವ್ಯ ವ್ಯಯದಿಂದೆ ವಿದ್ಯಾಭಿವೃದ್ಧಿಕಾರ್ಯವನ್ನು ಬಹುಶ್ಲಾಘ್ಯರೀತಿಯಿಂದೆ ನಡೆಯಿಸಿದ ವಿಷಯವು ಸರ್ವರಿಗೂ ಶ್ರುತವಾದದ್ದೇ ಇದೆ. ಆದರೂ ಇವರು ಈ ಕಾರ್ಯವು ಚಿರಸ್ಥಾಯಿಯಾಗಿ

ನಡೆಯುವಂತೆ ಫಂಡನ್ನು ಸ್ಥಾಪಿಸಲಿಲ್ಲ ವಾದಕಾರಣ ಆ ಮಹನೀಯರ ಸಂಸರ್ಗವಶದಿಂದೆ ಕೆಲವು ದಿನಗಳವರೆಗು ನಡೆದು ಈಗ ಇಲ್ಲಿ ವಿದ್ಯಾಭಿವೃದ್ಧಿ ಕಾರ್ಯವು ಸಂಪೂರ್ಣವಾಗಿ ತಡೆಯಲ್ಪಟ್ಟಿರುತ್ತವೆ. ಅಲ್ಲಲ್ಲಿ ಪ್ರಾರಂಭಿಸಲ್ಪಟ್ಟ ವಿದ್ಯಾಭಿವೃದ್ಧಿ ಕಾರ್ಯಗಳು ಈ ಪ್ರಕಾರವಾಗಿ ನಿರೋಧಿಸಲ್ಪಟ್ಟಿರುವ ವಿಷಯವು ಮಹಾ ಸಭಾಸದರಾದ ತಮಗೂ ಬಹುಶಃ ಗೋಚರವಾದದ್ದೇ ಇರುವುದು. ಧಾರವಾಡ ಪ್ರಾಂತದಲ್ಲಿ ಲೋಕಪ್ರಸಿದ್ಧ ಲೌಕಿಕವಿದ್ಯಾವಂತರಾದ ಕೈ॥ ವಾ॥ ರಾ॥ ಬ॥ ಡಿಸ್ಟ್ರಿಕಲೆಕ್ಟರ್ ಗುರುಸಿದ್ದಪ್ಪ, ಗಿಲಗಿಂಚಿ ಇವರು ಮತ್ತು, ಪರೋಪಕಾರ ಕಲಾವಿಶಾರದತ್ವದಿಂದೆ ನಮ್ಮೆಲ್ಲರ ಹೃದಯಕ್ಕೆ ಪರಮಾನಂದವನ್ನುಂಟು ಮಾಡುತ್ತಿರುವ ರಾ॥ ಬ॥ ಡಿಸ್ಟ್ರಿಕಲೆಕ್ಟರ್ ರುದ್ರಗೌಡ, ಚನ್ನವೀರಗೌಡ ಅರಟಾಳ ಈ ಉಭಯರು ಲಿಂಗಾಯತ ಎಜ್ಯೂಕೇಷನಲ್ ಫಂಡನ್ನು ಸ್ಥಾಪಿಸಿ ಅದನ್ನು ಈಗ ಮೂರುಲಕ್ಷ ರೂಪಾಯಿಗಳವರೆಗೂ ಕೂಡಿಸಿರುತ್ತಾರೆ. ಇನ್ನೂ ಈ ಮಹನೀಯರು ಫಂಡಿಗೆ ಹಣವನ್ನು ಕೂಡಿಸುವುದರಲ್ಲಿಯೇ ಬದ್ಧಕಂಕಣರಾಗಿರುತ್ತಾರೆ. ಧಾರವಾಡ, ಮತ್ತು ಬೆಂಗಳೂರಲ್ಲಿ ನಡೆದ ಪೂರ್ವದ ಎರಡು ಮಹಾಸಭೆಗಳಿಗೆ ಅಧ್ಯಕ್ಷರಾದ ಶೌರ್ಯೋದಾರ್ಯ ಗಾಂಭೀರ್ಯ ಸೌಕುಮಾರ್ಯಾದಿ ಸದ್ಗುಣ ಪುಂಜರಂಜಿತರಾದ ಕೈ॥ ವಾ॥ ಶ್ರೀಮಂತ ಲಿಂಗಪ್ಪ ಜಾಯಪ್ಪ ಸರದೇಶಾಯಿ, ಸಿರಸಂಗಿ ಸಂಸ್ಥಾನ ನವಲಗುಂದ, ಈ ಪುಣ್ಯಪುರುಷರು ತಮ್ಮ ಸಂಸ್ಥಾನದ ಪ್ರತಿವರ್ಷದ ಆಯುವನ್ನು ಅದೇ ಫಂಡಿಗೆ ಸಮರ್ಪಿಸುವಂತೆ ಮರಣಶಾಸನದಲ್ಲಿ ಬರೆದು ಮತೀಯರಿಗೆ ಮಹೋಪಕಾರವನ್ನು ಮಾಡಿರುತ್ತಾರೆ. ಈ ಫಂಡಿನಿಂದೆ ಆ ಪ್ರಾಂತದ ವೀರಶೈವರಲ್ಲಿ ವಿದ್ಯಾಭಿವೃದ್ಧಿಯು ಅವಿಚ್ಛಿನ್ನವಾಗಿ ನಡೆಯುತ್ತಾ ಬಂದುದರಿಂದೆ ಅವರ ಊರ್ಜಿತ ಸ್ಥಿತಿಯು ಕೇವಲಾನಂದಕರವಾಗಿರುತ್ತದೆ. ಮತ್ತು ಗದಗಿನ ಶ್ರೀಮತ್ತೋಂಟದಾರ್ಯ ಮಹಾಸ್ವಾಮಿಗಳವರು ಏಕಕಾಲದಲ್ಲಿ ಹತ್ತುಸಾವಿರ ರೂಪಾಯಿಗಳನ್ನು ಎಜ್ಯೂಕೇಷನಲ್ ಫಂಡಿಗೆ ಕೊಟ್ಟು ಅದರ ಸಹಾಯದಿಂದೆ ಪಾಠಶಾಲಾಕಾರ್ಯವು ಶಾಶ್ವತವಾಗಿ ನಡೆಯುವಂತೆಮಾಡಿ ಉಳಿದ ವೀರಶೈವರಿಗೆ ಮಾರ್ಗದರ್ಶಕರಾಗಿರುತ್ತಾರೆ. ಹಾಗೂ ಹಾವೇರಿ ವೀರಶೈವ ಮಹನೀಯರು ಶಿ॥ ರಾ॥ ರಾ॥ ಶ್ರೀ ರೇವಣ ಸಿದ್ದಪ್ಪ, ಕಿತ್ತೂರು ಮಾಮಲೇದಾರ ಇವರ ಸದುಪದೇಶದಿಂದ ತಮ್ಮಲ್ಲಿ ವ್ಯವಹಾರದಮೇಲೆ ತೆಗಿಯತಕ್ಕ ಧರ್ಮದ್ರವ್ಯದ ಪೈಕಿ ಕೆಲವು ಹಣವನ್ನು ಪಾಠಶಾಲೆಗೋಸ್ಕರ ನಿಯತವಾಗಿ ತೆಗೆಯುವಂತೆ ನಿಯಮಿಸಿ, ಬಹು ಸದ್ವ್ಯವಸ್ಥೆಯಿಂದೆ ವಿದ್ಯಾಭಿವೃದ್ಧಿ ಫಂಡನ್ನು ಸ್ಥಾಪಿಸಿರುತ್ತಾರೆ. ಹುಬ್ಬಳ್ಳಿ, ಧಾರವಾಡ, ಹಾನಗಲ್ಲು ಅಬ್ಬಿಗೇರಿ, ಹುನಗುಂದ, ಬಾಗಲಕೋಟೆ, ಕಲ್ಬುರಿಗಿ, ರಾಯಚೂರು, ಮುಂತಾದ ಸ್ಥಲಗಳಲ್ಲಿ ಸಂಸ್ಕೃತ ಪಾಠಶಾಲೆಗಳು, ಸ್ಥಾಪಿಸಲ್ಪಟ್ಟಿರುತ್ತವೆ. ಆದರೆ ಇವುಗಳಲ್ಲಿ ಕೆಲವು ಪಾಠಶಾಲೆಗಳಿಗೆ ಮಾತ್ರ ಫಂಡುಗಳು ಇದ್ದಂತೆಯೂ, ಕೆಲವುಗಳಿಗೆ ಇಲ್ಲದಂತೆಯೂ ಗೋಚರವಾಗುತ್ತದೆ. ಸರ್ವರೂ ಫಂಡುಗಳನ್ನು ಸ್ಥಾಪಿಸಿ, ಕಾರ್ಯವು ನಿರಾತಂಕವಾಗಿ ನಡೆಯುವಂತೆ ಮಾಡುವುದು ಮತವಿದ್ಯಾಭಿವೃದ್ಧಿಗೂ, ಶ್ರೇಯಸ್ಸಿಗೂ, ಕೀರ್ತಿಗೂ, ಪರ ಪ್ರೇರಣೆಗೂ,

ಬಹುಶ್ಲಾಘ್ಯವಾದ ಕಾರಣವಾಗಿರುವುದು. ಧಾರವಾಡ ಪ್ರಾಂತದಲ್ಲಿ ಫಂಡಿನ ಸಹಾಯದಿಂದ ನೂರಾರುಜನ ರಾಜಕೀಯ ವಿದ್ಯಾವಂತರು, ಕೆಲವುಜನ ಶಾಸ್ತ್ರಿಗಳೂ, ಪ್ರಬಲಸ್ಥಿತಿಗೆ ಬಂದಿರುವುದರಿಂದ ತದ್ದೇಶೀಯ ಜನರಿಗೆ ಫಂಡಿನಿಂದ ಆಗತಕ್ಕ ಉಪಕಾರವಿಶೇಷವು ಪ್ರತ್ಯಕ್ಷ ಗೊತ್ತಾಗುತ್ತಾ ಬಂದು ಏತಾದೃಶ ಕಾರ್ಯಗಳಲ್ಲಿ ಅವರು ಸರ್ವರೂ ಪೂರ್ಣಾಭಿಮಾನವನ್ನು ವಹಿಸುವವರಾಗಿರುತ್ತಾರೆ. ಮತ್ತು ಮಹಾರಾಷ್ಟ್ರ ದೇಶದಲ್ಲಿ ಮತವಿದ್ಯಾಭಿವೃದ್ಧಿ ಕಾರ್ಯಗಳು, ಪ್ರಸಿದ್ಧಿಗೆ ಬರಬೇಕೆಂಬ ಕುತೂಹಲದಿಂದ ರಾವಸಾಹೇಬ ಶ್ರೀಮಂತ ಮಲ್ಲಪ್ಪ, ಬಸಪ್ಪ ಉರ್ಫ ಅಪ್ಪಾಸಾಹೇಬವಾರದ ಸೋಲಾಪುರ, ಬಳ್ಳಾರಿ ಈ ಐದನೆಯ ಶ್ರೀಮದ್ವೀರಶೈವ ಮಹಾಸಭಾಧ್ಯಕ್ಷ ಇವರು ಮೂವತ್ತು ವರ್ಷಗಳಿಂದಲೂ ಸಂಸ್ಕೃತಪಾಠಶಾಲಾ ಕಾರ್ಯವನ್ನು ಅವಿಚ್ಛಿನ್ನವಾಗಿ ನಡೆಸಿರುತ್ತಾರೆ. ಮತ್ತು ಹತ್ತುವರ್ಷಗಳಿಂದ ಸಂಸ್ಕೃತ ಮತ ಗ್ರಂಥಗಳನ್ನು ಮಹಾರಾಷ್ಟ್ರ ತಾತ್ಪರ್ಯದೊಡನೆ ಅತಿಮನೋಹರ ರೀತಿಯಿಂದ ಪ್ರಿಂಟು ಮಾಡಿಸುತ್ತಾ ಇರುತ್ತಾರೆ. ಅಲ್ಲದೇ ಶಾಲಿವಾಹನಶಕ ೧೮೪೬ ನೆಯ ಕ್ರೋಧಿ ಸಂ॥ ಅಧಿಕ ಜ್ಯೇಷ್ಠಮಾಸದಲ್ಲಿ ತಮ್ಮ ಮನೆಯಲ್ಲಿ ಸಭೆಯನ್ನು ಕೂಡಿಸಿ, ವೀರಶೈವರ ವಿದ್ಯಾಭಿವೃದ್ಧಿ ಗೋಸ್ಕರ ಫಂಡನ್ನು ಕೂಡಿಸಬೇಕೆಂಬ ವಿಷಯದಲ್ಲಿ "ಸರಸವಾದ ಭಾಷಣವನ್ನು ಮಾಡಿ, ೪೫ ಸಾವಿರ ರೂಪಾಯಿ ಕ್ರಯ, ಬಾಳತಕ್ಕ ಹದಿನಾಲ್ಕು ನೂರೆಕರೆ ಭೂಮಿಯನ್ನು ೧೦ ಸಹಸ್ರ ರೂಪಾಯಿಗಳನ್ನು, ಫಂಡಿಗೆ ಕೊಟ್ಟಿರುತ್ತಾರೆ. ಉಳಿದ ಮತಾಭಿಮಾನಿಗಳಾದ ಸೋಲಾಪುರದ ವೀರಶೈವ ಸದ್ಗೃಹಸ್ಥರು ೧೦ ಸಾವಿರ, ೮ ಸಾವಿರ, ೫ ಸಾವಿರ, ಇತ್ಯಾದಿ ಧನಸಹಾಯವನ್ನು ಮಾಡಿದಕಾರಣ ಆ ಫಂಡು ೬೦ ಸಹಸ್ರಗಳ ವರೆಗೂ ಕೂಡಿರುತ್ತದೆ. ಆದರೂ ಕಾರ್ಯಾರಂಭವಾಗಿಲ್ಲ. ಇದು ಶೋಚನೀಯವಾದ ಮಾತಾಗಿರುತ್ತದೆ. ಆದರಿಂದ ಸೋಲಾಪುರದ ವೀರಶೈವ ಮಹಾಜನರು ಕಾರ್ಯಾರಂಭವನ್ನು ಬಹು ಶೀಘ್ರವಾಗಿ ಮಾಡಬೇಕೆಂದು ಪ್ರಾರ್ಥಿಸುವೆನು. ಇದರಿಂದ ಮಹಾರಾಷ್ಟ್ರ ದೇಶೀಯ ಜನರಿಗೂ ವೀರಶೈವರ ಅಭಿವೃದ್ಧಿಸ್ಥಿತಿಯು ನಿದರ್ಶನಕ್ಕೆ ಬಂದು ಸರ್ವರೂ ಇಂತಹ ಕಾರ್ಯಗಳಲ್ಲಿ ಉದ್ಯುಕ್ತರಾಗಲು ಸುಸಮಯ ಪ್ರಾಪ್ತವಾಗಿರುತ್ತದೆ. ಮತ್ತು, ಬೆಂಗಳೂರಲ್ಲಿ ೪-ನೆಯ ಮಹಾಸಭೆಯನ್ನು ಬಹು ವಿಚಕ್ಷಣತೆಯಿಂದ ನಡೆಸಿದ ಮೆ॥ ಕೆ॥ ಪಿ. ಪುಟ್ಟಣ್ಣಶೆಟ್ಟರು, ಮ॥ ರಾ॥ ಶ್ರೀ ಪಿ. ಮಹಾದೇವಯ್ಯ ನವರು, ರಾ॥ ರಾ॥ ಟಿ. ಯಸ್. ಡಾಕ್ಟರ ನಂಜಪ್ಪನವರು, ಮುಂತಾದ ಮಹಾಜನರು ತಮ್ಮ ಪ್ರಾಂತದಲ್ಲಿಯೂ ವೀರಶೈವ ವಿದ್ಯಾಭಿವೃದ್ಧಿ ಫಂಡನ್ನು ೧೬ ಸಾವಿರ ರೂಪಾಯಿಗಳ ವರೆಗೂ ಕೂಡಿಸಿರುವುದರಿಂದ ಇತರರು ಫಂಡಿಗೆ ಯಥಾಶಕ್ತಿ ಧನಸಹಾಯ ಮಾಡಲೇಬೇಕೆಂಬ ವಿಷಯವು ತದ್ದೇಶೀಯ ಜನರಿಗೂ ಗೊತ್ತಾಗುತ್ತಾ ಬಂದಿರುತ್ತದೆ. ಮತ್ತು ನಿಜಾಮ ಇಲಾಖಾ ಹೈದರಾಬಾದ ಚೋಟಾ, ಮಹಾರಾಜ ಗಂಜಿನಲ್ಲಿರುವ ಮೌ॥ ಮೌಲ್ವಿ ಬಾಪೂರಾವ ವಕೀಲ, ಹೈಕೋರ್ಟ ವ ನಿರ್ಮಲದೇಶಮುಖ ಇವರು ಉಮದಾ ಬಜಾರದಲ್ಲಿರುವ ಮ॥ ರಾ॥ ಜಡಲ ಬಸವಯ್ಯ ನವರು, ಮಠಂ ಸಿದ್ಧಯ್ಯ ನವರು, ಕೆ

ಕೋದ ಮಹಾರುದ್ರಪ್ಪ ನವರು, ವೈದ್ಯ ನಾಗಲಿಂಗಪ್ಪ ನವರು, ಮೊದಲಾದ ವೀರಶೈವ ಜನೆ ಸಹಾಯದಿಂದ ಒಂದು ಸಂಘವನ್ನು ಸ್ಥಾಪಿಸಿ ಕೆಲವು ನಿಯಮಗಳನ್ನು ಕಲ್ಪಿಸಿ, ವಿದ್ಯಾಭಿವೃದ್ಧಿ ಫಂಡನ್ನು ಕೂಡಿಸುವುದಕ್ಕೆ ಪ್ರಾರಂಭಿಸಿ ಮೂರು ವರ್ಷಗಳಾದವು ಇವರಿಗೆ ಸಹಾಯಕಾರಿಗಳಾದ ಮತೀಯ ಜನರು ಬಹುವಿರಳರಾಗಿರುವುದರಿಂದ ಇವರ ಕಾರ್ಯವು ಇನ್ನೂ ಪೂರ್ಣಿತಸ್ಥಿತಿಗೆ ಬಂದಿಲ್ಲವೆಂದು ಗೊತ್ತಾಗುತ್ತದೆ. ಆದರೂ ಮೆ|| ಬಾಪುರಾವು ವಕೀಲರು ವೈದ್ಯ ನಾಗಲಿಂಗಪ್ಪನವರು, ಇತ್ಯಾದಿ ಮಹನೀಯರು ಸಂಪೂರ್ಣವಾದ ಅಭಿಮಾನವನ್ನು ವಹಿಸಿ, ಅವಿಶ್ರಾಂತ ಪ್ರಯತ್ನದಿಂದ ಫಂಡನ್ನು ಕೂಡಿಸುವವರಾಗಬೇಕೆಂದು ಅಪೇಕ್ಷಿಸುವೆನು. ಹೀಗೆ ಸೋಲಾಪುರ, ಬೆಂಗಳೂರು, ಧಾರವಾಡ, ಹೈದರಾಬಾದು, ಬಳ್ಳಾರಿ, ಪ್ರಾಂತಗಳಲ್ಲಿ ವಿದ್ಯಾಭಿವೃದ್ಧಿ ಫಂಡಿನ ಫಲವು, ವೀರಶೈವರಲ್ಲಿ ಅಭಿವೃದ್ಧಿಗೆ ಬಂದಿರುವ ವಿಷಯವನ್ನು ಸ್ಟಾರ್‌ಪತ್ರಿಕಾ ಮುಖದಿಂದಲೂ, ಮಹಾಸಭಾ ರಿಪೋರ್ಟುಗಳಿಂದಲೂ ಅಥವಾ ಕಿಂವದಂತಿಯಿಂದಲೂ, ಕೇಳುತ್ತಿರುವ ಇನ್ನು ಅನೇಕ ಸ್ಥಲಗಳಲ್ಲಿರುವ ವೀರಶೈವ ಧನವಂತರು ಏತಾದೃಶ ಕಾರ್ಯಕ್ಕೆ ಲಕ್ಷ್ಯಕೊಡದೆ ಗಾಢನಿದ್ರಾಂಗನಾಲಿಂಗಿತ ವಿಗ್ರಹರಾಗಿರುವ ವಿಷಯವನ್ನು ನೋಡಿದರೆ ಮತಾಭಿಮಾನಿಗಳಿಗೆ ಕೇವಲ ಖೇದವುಂಟಾಗುತ್ತದೆ. ಅತಃ ಮಹಾಸಭೆಯವರು ಅಲ್ಲಲ್ಲಿರುವ ಪ್ರಮುಖ ವೀರಶೈವರಿಗೆ ಮತವಿದ್ಯಾಭಿವೃದ್ಧಿ ಕಾರ್ಯವನ್ನು ಕೈಕೊಳ್ಳುವಂತೆ ಪ್ರೇರಣೆಯನ್ನು ಅವಶ್ಯವಾಗಿ ಮಾಡಬೇಕೆಂದು ಪ್ರಾರ್ಥನೆಯದೆ.

## ವಿದ್ಯಾರ್ಥಿಗಳಲ್ಲಿ ಧರ್ಮಶ್ರದ್ಧೆಯನ್ನು ಹುಟ್ಟಿಸುವದು.

ಕುಶಲವರೇಣ್ಯರೇ? ವಿದ್ಯಾರ್ಥಿಗಳಲ್ಲಿ ಧರ್ಮಶ್ರದ್ಧೆಯನ್ನು ಹುಟ್ಟಿಸುವುದು, ಅಲ್ಲಲ್ಲಿರುವ ಲೌಕಿಕ ವೈದಿಕ, ಪಾಠಶಾಲಾಧ್ಯಾಪಕರ ಕರ್ತವ್ಯವಾಗಿದೆ. ಅಂದರೆ ಆ ಅಧ್ಯಾಪಕರು ತಮ್ಮತಮ್ಮ ವಿದ್ಯಾರ್ಥಿಗಳಿಗೆ ಮತಧರ್ಮದ ಔನ್ನತ್ಯವನ್ನು ಯಾವಾಗಲೂ ಬೋಧಿಸುತ್ತಾ, ಸ್ಟಾರ್ ವ ಗ್ರಂಥಪ್ರಕಾಶಿಕಾ ಎಂಬ ವೀರಶೈವ ವಾರ, ಮಾಸ, ಪತ್ರಿಕೆಗಳನ್ನು ತರಿಸುತ್ತಾ, ಅದರಲ್ಲಿ ಬರುವ ಮತೀಯ ವಿಷಯಗಳನ್ನು ಅವರಿಗೆ ಪುನಃಪುನಃ ತೋರಿಸುತ್ತಾ, ಮತ್ತು ಮಹಾಸಭೆಗಳ ರಿಪೋರ್ಟುಗಳನ್ನು ತರಿಸಿ, ಸಮಗ್ರವಾಗಿ ಓದಿಸಿ, ತತ್ರತ್ಯ ಸಾರಾಂಶವನ್ನು ತಿಳುಹಿಸುತ್ತಾ ಕ್ರಮೇಣ ಅವರಹೃದಯದಲ್ಲಿ ಧರ್ಮಶ್ರದ್ಧೆಯ ಅಂಕುರವು ತೋರಿ, ಅದು ಮುಂದೆ ಫಲಿಸುವಂತೆ ಯತ್ನಿಸುವುದರಿಂದ ಸಿದ್ಧಿಸುವುದಾದ ಪ್ರಯುಕ್ತ ಅವರವರು ಈ ವಿಷಯವನ್ನು ಅವಶ್ಯವಾಗಿ ಕೈಕೊಳ್ಳುವಂತೆ ಮಹಾ ಸಭೆಯವರು ನಿರ್ಣಯವನ್ನು ಮಾಡಿ ಅದನ್ನು ಪ್ರಚಾರಕ್ಕೆ ತರಬೇಕೆಂದು ವಿಜ್ಞಪ್ತಿಯದೆ. ... *

## ನಮ್ಮ ಸಮಾಜದಲ್ಲಿ ಪ್ರಾಥಮಿಕ ಶಿಕ್ಷಣವನ್ನಾದರೂ ಬೆಳಸಲಿಕ್ಕೆ ಮಾಡತಕ್ಕುಪಾಯಗಳು.

ಸಹೃದಯ ಪರಿವೃಢರಾದ ಸಭಾಸದರೇ? ಕೆಲವು ಪ್ರಾಂತಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಕನ್ನಡ ಶಾಲೆಗಳು, ಸರಕಾರದವರಿಂದ ಸ್ಥಾಪಿಸಲ್ಪಟ್ಟಿರುವುದರಿಂದ ಅಲ್ಲಿ ಪ್ರಾಥ

ಮಿಕ ಶಿಕ್ಷಣವು ಚೆನ್ನಾಗಾಗಿ ಅವರು ಮಧ್ಯಮ ಶಿಕ್ಷಣಕ್ಕೂ, ಉತ್ತಮ ಶಿಕ್ಷಣಕ್ಕೂ ಅರ್ಹರಾಗಲು ಮಾರ್ಗವಾಗಿರುತ್ತದೆ. ಇತರ ಪ್ರಾಂತಗಳಲ್ಲಿ, ದೊಡ್ಡ ದೊಡ್ಡ ಊರುಗಳಲ್ಲಿ, ಸರಕಾರದ ಸಾಲೆಗಳಿದ್ದರೂ ಇತರ ಸಣ್ಣಸಣ್ಣ ಹಳ್ಳಿಗಳಲ್ಲಿ ಆ ಸಾಲೆಗಳಿಲ್ಲದಿರುವುದರಿಂದ ಅಲ್ಲಲ್ಲಿಯ ಪ್ರಮುಖ ವೀರಶೈವ ಧನಿಕರು ತಮ್ಮ ಬಾಲಕರ ವ ಅನಾಥಬಾಲಕರ ಅಭ್ಯಾಸಕ್ಕನುಕೂಲ ವಾಗುವಂತೆ ಸಾಲೆಗಳನ್ನು ಸ್ಥಾಪಿಸಿ, ಸುಶಿಕ್ಷಿತರಾದ ಅಧ್ಯಾಪಕರನ್ನು ನಿಯಮಿಸಿ ಅವರಿಂದ ಪ್ರಾಥಮಿಕ ಶಿಕ್ಷಣವನ್ನು ಬಹು ವಿಚಕ್ಷಣತೆಯಿಂದೆ ನಡೆಸುವಂತೆ ವ್ಯವಸ್ಥೆಯನ್ನು ಮಾಡಿ, ಮತ್ತೀಯಬಾಲಕರನ್ನು ಪ್ರಾಥಮಿಕ ಶಿಕ್ಷಣ ಸಂಪನ್ನರನ್ನಾಗಿ ಮಾಡುವುದು ಮುಖ್ಯೋದ್ಯೋಗವಾಗಿದೆ. ಯಾಕೆಂದರೆ; — ಮೂಲಾಭಾವೇಕುತಶ್ಶಾಖಾ ಎಂಬ ನಾಣ್ಣುಡಿಯಂತೆ ಪ್ರಾಥಮಿಕ ಶಿಕ್ಷಣವು ಚೆನ್ನಾಗಾಗದ ಹೊರ್ತು ಮಧ್ಯಮೋತ್ತಮ ಶಿಕ್ಷಣಗಳು ದೊರೆಯುವುದಕ್ಕೆ ಯತ್ನವಿಲ್ಲ. ಆದಕಾರಣ ಪ್ರಾಥಮಿಕ ಶಿಕ್ಷಣದ ಕಡೆಗೆ ಸರ್ವರೂ ಲಕ್ಷ್ಯಕೊಡಬೇಕೆಂದು ನನ್ನ ಸೂಚನೆಯದೆ. ... ... *

## ಮಾಹೇಶ್ವರ (ಜಂಗಮ)ರಿಗೆ ಯಾವ ವಿಧವಾದ ಶಿಕ್ಷಣವನ್ನು ಕೊಡಬೇಕು.

ಆರ್ಯರೇ ? ನಮ್ಮ ಮತದಲ್ಲಿ ಅನ್ನದಾನಮಾಡಿದರೆ ಪುಣ್ಯದೊರಕುವುದೆಂಬ ವಿಷಯವು ಪ್ರಸಿದ್ಧಿಗೆಬಂದು ಅಲ್ಲಲ್ಲಿ ಗಣ್ಯರಾದಜನರು ಗಣಾರಾಧನೆಗಳನ್ನು ಮೇಲಿಂದಮೇಲೆ ಮಾಡುತ್ತಿರುವುದರಿಂದೆ ಅಲ್ಲಿ ಮೃಷ್ಟಾನ್ನಭೋಜನವನ್ನು, ಯಥೋಚಿತ ದಕ್ಷಿಣೆಗಳನ್ನು ಪ್ರಯಾಸವಿಲ್ಲದೇ ಪಡೆಯುತ್ತಾ ಯಾಚನಾ ಮಾತ್ರದಿಂದೆ ಧನಧಾನ್ಯ ವಸ್ತ್ರಾದಿಗಳನ್ನು ಜಂಗಮರು ದೊರಕಿಸುತ್ತಿರುವುದರಿಂದೆ ಇವರಿಗೆ ವಿದ್ಯಾಭಿರುಚಿ ಯುಂಟಾಗವೇ ಇರುವುದಕ್ಕೆ ಆದಿಕಾರಣ ವಾಗಿರುತ್ತದೆ. ಮತ್ತು ಉಪಾಚಾರ್ಯರಲ್ಲಿ ವೃತ್ತಿಗಳ ಲಾಭವು ವಿಶೇಷವಾಗಿರುವುದರಿಂದೆ ಅವರು ಶ್ಲೋ॥ ಅರ್ಕೇಚೆನ್ಮಧುವಿಂದೇತಕಿಮರ್ಥಂಪರ್ವತಂವ್ರಜೇತ್ ॥ ಇಷ್ಟಸ್ಯಾರ್ಥಸ್ಯಸಂಸಿದ್ಧೌಕೋವಿದ್ವಾನ್ಯತ್ನಮಾಚರೇತ್ ॥ ೪ ॥ ಅಂದರೆ ಮನೆಯ ಕೊಟ್ಟಡಿಯಲ್ಲಿ ಜೇನತುಪ್ಪವು ದೊರಕಿದ್ದಾದರೆ ಯಾವಕಾರಣದಿಂದೆ ಪರ್ವತವನ್ನು ಹೊಂದುವನು. ಇಷ್ಟಾರ್ಥಸಿದ್ಧಿ ಯಾಗಲಾಗಿ ಯಾವ ಪಂಡಿತನು ಯತ್ನವನ್ನು ಮಾಡುವನು. ಎಂಬಂತೆ ಇದರಿಂದಲೇ ಉಪಜೀವನವು ನಿರಾಯಾಸವಾಗಿ ನಡೆಯುವಾಗ ಅಪರಿಮಿತ ಪ್ರಯಾಸದಿಂದೆ ವಿದ್ಯಾಭ್ಯಾಸಮಾಡುವುದು ವ್ಯರ್ಥವೆಂದು ತಿಳಿದು, ವಿದ್ಯಾಕಲಿತವರು ಎರಡುಕೈಗಳಿಂದೆ ಉಂಡರೆ ನಾವು ಒಂದುಕೈಯಿಂದೆ ಉಂಡರಾಯಿತ್ತು, ಎಂಬ ಹಾಸ್ಯೋಕ್ತಿಯನ್ನು ಇತರರಿಗೆ ಬೋಧಿಸುತ್ತಾ ಇರುವುದರಿಂದೆ ನಮ್ಮ ಜನರಲ್ಲಿ ಅಜ್ಞಾನವು, ಅದರಿಂದೆ ಹೀನಸ್ಥಿತಿಯೂ, ದುರಾಚಾರ ಪ್ರಚಾರವು, ಸಂಭವಿಸುತ್ತವೆ. ಮತ್ತು ದ್ವಿತೀಯಶಂಭು ವೆನಿಸಿದ ಬಸವೇಶ್ವರನ ಕಾಲದಲ್ಲಿ ಶಿವಶರಣರಾದ ಮಹನೀಯರು, ತಮ್ಮ ಕಾಯಶ್ರಮದಿಂದೆ ಕಾಯಿಕಧನವನ್ನು

ಸಂಪಾದಿಸಿ, ಅದರಿಂದೆ ನಿತ್ಯ ಗಣತೃಪ್ತಿಯನ್ನು ಮಾಡುತ್ತಿದ್ದ ವಿಷಯವನ್ನು ಈಗಿನ ಜಂಗಮರು ಕೇಳಿ ಅವರಂತೆ ಕಾಯಿಕವೇಷವನ್ನು ಮಾತ್ರ ಧರಿಸಿ, ಬಹುಪ್ರಯತ್ನದಿಂದೆ ಧನವನ್ನು ಸಂಪಾದಿಸಿ, ಅದರಿಂದೆ ಕುಟುಂಬ ಭರಣವನ್ನು ಮಾಡುತ್ತಾರೆ. ಈ ಕಾಯಿಕವೃತ್ತಿಯು ತಪ್ಪದ ಹೊರ್ತು ಇವರದೃಷ್ಟಿಯು ವಿದ್ಯಾಭ್ಯಾಸದ ಕಡೆಗೆ ಬೀಳುವುದಿಲ್ಲ. ಅತಃ ಮಹಾಸಭೆಯವರು ಅಲ್ಲಲ್ಲಿರುವ ಪ್ರಮುಖಜನರಿಗೆ ಈ ವಿಷಯವನ್ನು ತಿಳುಹಿಸಿ, ಅವರು ಬರುವ ಕಾಯಕದ ಜನರಿಗೆ ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವಂತೆ ಸದುಪದೇಶಗಳನ್ನು ಬೋಧಿಸುತ್ತಿರಬೇಕೆಂಬ ನಿರ್ಣಯವನ್ನು ಪ್ರಕಾಶಕ್ಕೆ ತರಬೇಕು. ಮತ್ತು ಇವರು ಕಾಯಿಕ ಮಾಡುವಂತೆ ಸಿಂಹಾಸನಾಧಿಪತಿಗಳು ನಿರೂಪವನ್ನು ಕೊಡುತ್ತಾರೆ. ಕೊಡದಂತೆ ಅವರಿಗೂ ಬಿನ್ನೈಸಬೇಕು. ಅಲ್ಲದೇ ವಿದ್ಯಾಮಹತ್ತ್ವವು ನಮ್ಮ ಮತದಲ್ಲಿ ಬಹುಜನರಿಗೆ ಗೊತ್ತಿಲ್ಲವಾದಕಾರಣ ಅದನ್ನು ಮೇಲಿಂದ ಮೇಲೆ ಬೋಧಿಸುವುದಕ್ಕೋಸ್ಕರ ಅಲ್ಲಲ್ಲಿ ಬೋಧಕ ಸಂಘಗಳನ್ನು ಕಲ್ಪಿಸಿ, ತನ್ಮೂಲಕ ಸದುಪದೇಶಗಳು ನಡೆಯುವಂತೆ ಮಾಡುವುದು ಅತ್ಯವಶ್ಯಕ ಕಾರ್ಯವಾಗಿರುತ್ತದೆ. ಈ ವಿಷಯದಲ್ಲಿಯೂ ಮಹಾಸಭೆಯವರು ಉದಾರ ವಿಚಾರವನ್ನು ಪ್ರಕಟಿಸಬೇಕೆಂದು ವಿನಯ ಪೂರ್ವಕವಾಗಿ ಸೂಚಿಸುವೆನು. ಸಾರಾಂಶ ॥ ನಮ್ಮ ವೀರಶೈವರಲ್ಲಿ ಒಂದೊಂದುದಿನದ ಆರಾಧನೆಯನ್ನು ಲಕ್ಷಾವಧಿ ದ್ರವ್ಯವ್ಯಯದಿಂದೆ ಮಾಡುವುದು, ಪುರಾಣಗಳನ್ನು ಪ್ರಾರಂಭಿಸಿ ತತ್ಕಾರ್ಯಕ್ಕೆ ಅಮಿತವಾಗಿ ಧನವನ್ನು ಖರ್ಚುಮಾಡುವುದು, ಮಠಗಳನ್ನು ಸಮಾಧಿಗಳನ್ನು ಕಟ್ಟಿಸುವುದಕ್ಕೆ ಬಹು ಧನವನ್ನು ಉಪಯೋಗಿಸುವುದು, ಈ ರೂಢಿಯು ಬಹಳವಾಗಿರುತ್ತದೆ. ಅವುಗಳನ್ನು ಮಿತವ್ಯಯದಿಂದೆ ಪೂರೈಸುತ್ತಾ ಅಮಿತ ದ್ರವ್ಯವನ್ನು ವಿದ್ಯಾಭಿವೃದ್ಧಿ ಫಂಡಿಗೆ ಕೊಡುತ್ತಾ ಬರುವಂತೆ ನಿರ್ಣಯಗಳನ್ನು ಪ್ರಕಟಿಸಿ, ಅವುಗಳನ್ನು ನಾವು ಸರ್ವರೂ ನಮ್ಮ ನಮ್ಮ ಮುಖ್ಯ ಕರ್ತವ್ಯಗಳೆಂದು ತಿಳಿದು, ಆಚರಿಸುವುದರಿಂದೆ ಮತೀಯರಿಗೆ ಊರ್ಜಿತಸ್ಥಿತಿಯುಂಟಾಗುತ್ತದೆ. ಅತಃ ಸರ್ವಾಂತರ್ಯಾಮಿಯಾದ ಪರಮೇಶ್ವರನು ಸಕಲ ವೀರಶೈವರ ಹೃದಯದಲ್ಲಿ ಈ ವಿಷಯವನ್ನು ಪ್ರೇರಿಸಲೆಂದು ಪ್ರಾರ್ಥಿಸಿ, ಸರ್ವಜ್ಞರಾದ ತಾವು ಸಾವಧಾನಮನಸ್ಸಿನಿಂದೆ ನನ್ನ ಭಾಷಣವನ್ನು ಕೇಳಿದುದಕ್ಕೆ ತಮ್ಮ ಉಪಕಾರವನ್ನು ವಾರಂವಾರಂ ಸ್ಮರಿಸಿ, ಜಯ ಶ್ರೀಮತ್ಪಾರ್ವತೀ ಪತಯೇನಮಃ ಎಂಬ ಮಂಗಲ ಧ್ವನಿಯೊಡನೆ ಪ್ರಕೃತ ಭಾಷಣವನ್ನು ಪೂರೈಸುತ್ತೇನೆ. ... ... ... *

( ಕೈಚಪ್ಪಾಳೆ. )

ಬಸವರಾಜ ಶಾಸ್ತ್ರಿ, ಬಿನ್ ವಿರೂಪಾಕ್ಷ ಶಾಸ್ತ್ರಿಗಳು.
ಉಂತಗಲ್ಲು ಶಿಖಾಮಣಿ ಮಠ ರಾಯಚೂರು
ಸಂಸ್ಕೃತ ಪಾಠಶಾಲಾಧ್ಯಾಪಕ.

## ಶ್ರೀಯುತ ಮಲ್ಲಪ್ಪ, ಬಸವಪ್ಪ, ಅಪ್ಪಾಸಾಹೇಬ ವಾರದ ಸೋಲಾಪುರ ಇವರ ವಿಷಯದಲ್ಲಿ ರಚಿಸಿದ ಶ್ಲೋಕಗಳು.

ಶಂಕರಸ್ತ್ವಾಪುನಾತ್ವೀಶಶ್ಯಶಾಂಕಕಲಯಾಂಚಿತಃ ॥
ತತವಿಶ್ವಾವನೇಜಾಗ್ರುದ್ದಯೋಸಿಂಧುರಹರ್ನಿಶವಮ್ ॥೧॥

ಶಾ॥ ವಿ॥ ವೃ॥

ಶ್ರೀ—ಮ—ತ್ಪಾವನವೀರಶೈವಮತಸದ್ಭಾನೂದಯಾದ್ರಿರ ಬ—ಲೀ ।
ಫು—ಲ್ಲ— ನ್ನಿರ್ಮಲಮಾನಸೇಂನಸತತಂವಿದ್ವತ್ಸುಸದ್ವತ್ ಸ—ಲಃ ॥
ಅ—ಪ್ಪಾ—ಸಾಹೆಬನಾಮಮಲ್ಲಪಧನೀಸೊಲ್ಲಾಪುರೇಸಂ ವ—ಸನ್ ।
ಶ್ರೀ—ವಾ—ಗ್ಮೀಸುಕೃತೀವಿರಾಜತುತರಾಂಸದ್ಧರ್ಮಸಂಪತ್ ಪ—ತಿಃ ॥೨॥
ವ—ರ— ವಾರದವಂಶಾಬ್ಧಿಜನ್ಮಾಧೀಮಾನ್‌ದಯಾ ಕ—ರಃ ॥
ದ—ದ— ತ್ಕುವಲಯಾವೋದಂರಾಜತಾಂನಿತರಾಂ ವಿ—ಧುಃ ॥೩॥
ಅ—ಸ್ತು—ಭೋಮತಸಿದ್ಧಾಂತವರ್ಧನಾಯಧೃತಾ ಕೃ—ತ ॥
ಪ—ತಿ— ರಿಂದ್ರಾದಿದೇವಾನಾಂಶಂಕರಸ್ತೇದ್ಯಭೂ ತಿ—ದಃ ॥೪॥

ಮಾ॥ ವೃ॥ ಗುಣಗಣಮಣಿಮಾಲಾಲಂಕೃತೋಮಲ್ಲಪಾಖ್ಯೋ ।
ಜಿತಸುರತರುದಾನಃಪಾರ್ವತೀಜಾನಿಭಕ್ತಃ ॥
ಪರಹಿತನಿರತಾತ್ಮಾಸತ್ಯವೃತ್ತಿರ್ಗರೀಯಾನ್ ।
ಜಯತುಭವತುತಸ್ಮೈಶ್ಲೋಕವಿತ್ತಾಯಭದ್ರಮ್ ॥೫॥
ಇದಮನಘಪದಾಢ್ಯಂಪಂಚರತ್ನಂವಿನೋದಾತ್ ।
ವ್ಯರಚಿಸಹೃದಯಾನಾಂತೋಷಹೇತೋರ್ನಿತಾಂತಮ್ ॥
ಕುಧರವರತನೂಜಾರಾಟ್ಪ್ರಸಾದಾಹ್ವಚಂದ್ರಾತ್ ।
ಭವತುತತಸಮೃದ್ಧಿರ್ವಿದ್ವದಾನಂದವಾರ್ಧಿಃ ॥ ೬ ॥ ಇತಿ ಶಿವಮ್ ॥

( ಕೈಚಪ್ಪಾಳೆ. )

ಉಂತಗಲ್ಲು ಶಿಖಾಮಣಿಮಠೀಯಃ
ಬಸವರಾಜ ಶಾಸ್ತ್ರೀ, ಸಂಸ್ಕೃತ ಶಾಲಾ
ಧ್ಯಾಪಕಃ ರಾಯಚೂರು.

ಶ್ರೀಮನ್ನಿರಂಜನ ಹುಬ್ಬಳ್ಳಿ, ತ್ರಿಸಹಸ್ರ ಮಠಾಧ್ಯಕ್ಷ ಗಂಗಾಧರ ಮಹಾಸ್ವಾಮಿಗಳವರ ಸಂಸ್ಕೃತ ಪಾಠಶಾಲಾಧ್ಯಾಪಕರಾದ ಶ್ರೀಯುತ ಗುರುಮೂರ್ತಿ ಶಾಸ್ತ್ರಿಗಳವರು ಕೈ॥ ವಾ॥ ಶ್ರೀಮಂತ ಲಿಂಗಪ್ಪ, ಜಾಯ್ಪಪ, ಸರದೇಶಾಯಿ ಸಂಸ್ಥಾನ ನವಲಗುಂದ ಇವರ ಪರವಾಗಿ ರಚಿಸಿದ ಶ್ಲೋಕಗಳು. ... ... ... *

ಶಾ॥ ವಿ॥ ವೃ॥

ಶ್ರೀಭೂಮೀಧರಸಾರ್ವಭೌಮತನಯಾವಕ್ತ್ರಾಂಬುಜಾರ್ಕಸ್ಸ್ಫುರ ।
ಲ್ಲಾಲಾಟಾನಲದಗ್ಧಮಾನ್ಮಥವಪುರ್ಮಾತಂಗಚರ್ಮಾಂಬರಃ ॥
ದೇವೇಂದ್ರಾದಿಸುರೇಶದೇವತಟಿನೀಕಲ್ಲೋಲಮಾಲಾಲಸನ್ ।
ಮೂರ್ಧಾಪಾತುಮಹೇಶ್ವರಸ್ಸಭಗವಾನ್ಶ್ರೀಲಿಂಗಭೂಮೀಪತಿಮ್॥೧॥
ಉತ್ತಂಸೀಕೃತಯಾಮಿನೀಪತಿಕಲಸ್ತೂಣೀಕೃತಾಂಭೋನಿಧಿಃ ।
ಕೋದಂಡೀಕೃತರತ್ನಸಾನುವಿಲಸದ್ಧಾರೀಕೃತಾಹೀಶ್ವರಃ ॥
ವಾಮಾಂಗೀಕೃತವಾಮಲೋಚನಮಹಾಬಾಣೀಕೃತಾಂಭೋರುಹ ।
ನೇತ್ರಂಪಾತುಮಹೇಶ್ವರಸ್ಸಭಗವಾನ್ಶ್ರೀಲಿಂಗಭೂಮೀಪತಿಮ್॥೨॥
ಸ್ಥಾಣೂರುದ್ರಉಪೇಂದ್ರಪೂಜಿತಪದಾಂಭೋಜಃಪಶೂನಾಂಪತಿಃ।
ಕಾರುಣ್ಯಾಂಬುನಿಧಿಃಕಲಂಕಮಥನಃಕರ್ಪೂರಗೌರಚ್ಛವಿಃ ॥
ಕಲ್ಯಾಣಾಕರಕಾಲಕಂಧರಹರಶ್ಶೂಲೀಕಪಾಲೀಶಿರೋ ।
ಮಾಲೀಪಾತುಮಹೇಶ್ವರಸ್ಸಭಗವಾನ್ ಶ್ರೀಲಿಂಗಭೂಮೀಪತಿಮ್ ॥೩॥
ಸೋಮಾಹಸ್ಕರವಹ್ನಿದೃಕ್ಶ್ವಶಿಹೃತ್ಕಂಜಾತಹಂಸೋಭಜ ।
ಲ್ಲೋಕಾಜ್ಞಾನತಮೋಪನೋದನಮಹಾಹಂಸೋ ಮಿತಾಂಶೂಜ್ಜ್ವಲಃ ॥
ಕೈಲಾಸಾಚಲಗೇಹದೇವರಮಣೀಗೇಯಃಪರಂಪ್ರತ್ಯಹಂ ।
ವೀರಂಪಾತುಮಹೇಶ್ವರಸ್ಸಭಗವಾನ್ ಶ್ರೀಲಿಂಗಭೂಮೀಪತಿಮ್ ॥೪॥
ಭರ್ಗೋಭಾರ್ಗವಪೂಜಿತೋಂತಕಹರಸ್ತ್ರೈಲೋಕ್ಯಪಾಪಾಪಹೋ ।
ಗ್ರಾಸಾನ್ನೀಕೃತಕಾಲಕೂಟಗರಲೋವ್ಯಾಲೇಶಕರ್ಣೋಜ್ಜ್ವಲಃ ॥
ಸಿದ್ಧೇಶೋಽಮಿತಸಿದ್ಧಸೇವಿತಪದಸ್ಸಿದ್ಧಾಬಲೋದ್ಗೀತಸ ।
ತ್ಕೀರ್ತಿಂಪಾತುಮಹೇಶ್ವರಸ್ಸಭಗವಾನ್ ಶ್ರೀಲಿಂಗಭೂಮೀಪತಿಮ್ ॥ ೫ ॥
ಕೀರ್ತಿರ್ಯಸ್ಯದಿಶಃಕರೋತಿಧವಲಾಬಾಹುಪ್ರತಾಪಾನಲ ।
ಜ್ವಾಲಾಲೀಢಶರೀರಿಣೋಽಹಿತಜನಾಮಗ್ನಾಶ್ಚಯಸ್ಯೋದಧೌ ॥
ಯದ್ದಾನಾಂಬುನಿಧಿಸ್ತಟಾಗಮಿಷಜುಟ್ಪಾಸ್ಸನ್ನಿಧೌರಾಜತೇ ।
ಯದ್ರಾಜ್ಯಾವನಕೌಶಲೀಪರಿಹಸತ್ಯನ್ಯಾನ್ನೃಪಾಲಾನ್ಸದಾ ॥ ೬ ॥

ತಸ್ಯಶ್ರೀಸಿರಸಂಗಿಲಿಂಗನೃಪತೆರಾಪಾಲನಾಶೀಃಪರೆ ।
ಸ್ಯೈತೆನಾತಿವಿನಿರ್ಮಲೇನಮಹತಾಸ್ತೋತ್ರೇಣಪದ್ಯಾತ್ಮನಾ ॥
ಸಂತುಷ್ಟಃಪ್ರಿಯಮಾತನೋತುಪತತಾಂಪಾಪೋತ್ಕರಂದೂರಯು ।
ನ್ನಂತೆನಿತ್ಯಸುಖಂಕರೋತುಸತತಂಸಿದ್ಧೇಶ್ವರಾತ್ಮಾಹರಃ ॥ ೭ ॥

॥ ಇತಿ ಶಿವಮ್ ॥

ಇದನ್ನು ವೇ॥ ಬಸವರಾಜ ಶಾಸ್ತ್ರಿಗಳು ಓದಿ ಹೇಳಿದರು.

( ಕೈಚಪ್ಪಾಳಿ )

ಬಳಿಕ ಕೊಪ್ಪಳದ ಪಂಪಣ್ಣ, ಸಂಗಪ್ಪ ಮುದಗಲ್ ಎಂಬ ೫-ನೇ ತರಗತಿ ಇಂಗ್ಲೀಷ್ ವಿದ್ಯಾರ್ಥಿಯಾದ ೧೦ವರ್ಷ ವಯಸ್ಸಿನ ಬಾಲಕನು ಆಂಗ್ಲ ಭಾಷೆಯಲ್ಲಿ ಬರೆ ತಂದಿದ್ದ ಭಾಷಣವನ್ನು ಸ್ಫುಟವಾಗಿಯು, ಶ್ರಾವ್ಯವಾಗಿಯು ಉನ್ನತಾಸನದಮೇಲೆ ನಿಂ ಓದಿ ಹೇಳಿದನು. ಅದನ್ನೇ ಕನ್ನಡದಲ್ಲಿಯು ಓದಿ ಹೇಳಿದನು ಸಭಿಕರುಸಂತೋಷಪಟ್ಟ ವಿಶೇಷವಾಗಿ ಕರತಾಡನಗಳನ್ನು ಮಾಡಿದರು. ಈ ಸಣ್ಣ ಹುಡುಗನು ಸಭಾಕಂಪನ ವಿಲ್ಲ ಸ್ಫುಟವಾಗಿ ಓದಿದುದನ್ನು ಕಂಡು ಸಭಾಧ್ಯಕ್ಷರು ಆನಂದಿಸಿ, ಸಣ್ಣ ಬಾಲಕರಿಗೆಲ್ಲಾ ದೊಂದು ತರದ ಪ್ರೋತ್ಸಾಹಕರ ವಾಗಿರಲೆಂಬ ಭಾವದಿಂದ ಆತನಿಗೆ ಒಂದು ಭಂಗಾ ಪದಕವನ್ನು ಮಾಡಿಸಿ ಕೊಡುವುದಾಗಿ ತಾವು ಕೂಡಲೇ ವಾಗ್ದಾನಮಾಡಿದರು.

ಈ ಬಾಲಕನ ಇಂಗ್ಲೀಷು ಭಾಷಣವನ್ನು ರಿಪೋರ್ಟಿನ ಕಡೆಯ ಭಾಗದಲ್ಲಿ ಕೆ ಟ್ಟಿರುತ್ತೇವೆ. ... ... ... ...

---

## ಅನಂತರ ೧-ನೇ ವಿಷಯವಾದ ಶಿಕ್ಷಣಪ್ರಸಾರದ ಅವಶ್ಯಕತೆ.

ಇದನ್ನು ಕುರಿತು ಗದಗಿನ ಶ್ರೀ ಪ್ರಭುದೇವರ ಪಟ್ಟದದೇವರು
ಮಾಡಿದ ಭಾಷಣವು.

೧. ಪರಮ ಕಾರುಣಿಕ ಪರಮಾತ್ಮನಿಂದ ಲೋಕಹಿತಾರ್ಥವಾಗಿ ನಿರ್ಮಿಸಲ್ಪ ಅನೇಕ ವಿಧ ಮತಗಳಲ್ಲಿ ವೀರಶೈವ ಮತವು ದುಷ್ಪ್ರಾಪಗಳಾದ ಭೋಗ ಮೋಕ್ಷಗಳ ಅಸಾಧಾರಣೋಪಾಯ ವಾದ್ದರಿಂದ ಹಿಂದೆ ಎಲ್ಲಾ ಮತಗಳಲ್ಲಿಯೂ ಶ್ರೇಷ್ಠವಾದದ್ದೆ

ವೇದಾಗಮ ಪುರಾಣೇತಿಹಾಸಗಳಿಂದ ಸಮ್ಮತಿಸಲ್ಪಟ್ಟಿರುವ ದೆಂಬುವದು ವೀರಶೈವ ಧರ್ಮಾಭಿಮಾನಿಗಳಾದ ನಿಮ್ಮಗಳಿಗೆ ಸುವೇದ್ಯವಾಗಿರುವದು. ಇಂತಹ ವೀರಶೈವಮತಕ್ಕೆ ಈ ಕಾಲದಲ್ಲಿ ಉಂಟಾಗಿರುವ ಅವನತಿಯನ್ನು ಸಹಿಸಲಾರದೆ ಸಾಕ್ಷಾತ್ಪರಶಿವನೇ ನಿಮ್ಮೆಲ್ಲರ ಹೃತ್ಕಮಲದಲ್ಲಿ ವಾಸಮಾಡಿ ನಿಮ್ಮಗಳದ್ವಾರ ಈ ಕಾಲದಲ್ಲಿ ವೀರಶೈವಮತದ ನೈಸರ್ಗಿಕೋನ್ನತಿಯನ್ನು ಈ ನಮ್ಮ ಸಮಾಜದಲ್ಲಿ ಪ್ರತಿಷ್ಠಗೊಳಿಸಲು ಯತ್ನಿಸಿದ್ದರಿಂದ ಆಯಾಯ ಪ್ರಾಂತಗಳಲ್ಲಿ ಧರ್ಮಾಭಿವರ್ಧಕ, ಮತ್ತು ಐಕಮತ್ಯ ಜನಕ ವೀರಶೈವ ಮಹಾ ಸಭೆಗಳು ನಿರ್ವಿಘ್ನವಾಗಿ ಜರಗುವವು. ಇಲ್ಲವಾದರೆ ಈ ವಿಧವಾದ ಜನಸಂಘವನ್ನು ಸ್ವಮತ ಶಿದ್ಧಾಂತ ಶ್ರವಣಕ್ಕಾಗಿ ಕೂಡಿಸುವದು ಯಾರಿಂದಲೂ ಆಗದು. ಆದ್ದರಿಂದ ವೀರಶೈವಮತಸ್ಥರು ತದ್ಧರ್ಮಾಭಿಮಾನಿಗಳಾದ ನೀವುಗಳು ರಾಜಕೀಯ ಲೌಕಿಕ ವಿದ್ಯೆಗಳನ್ನು ಮನಮುಟ್ಟ ಯತ್ನದಿಂದ ವ್ಯವಹಾರದಲ್ಲಿ ತರುವಂತೆ ಸದ್ಧರ್ಮಗಳನ್ನು ಸಾಂಗವಾಗಿ ಸಮರ್ಥಿಸುವ ಸಂಸ್ಕೃತ ವಿದ್ಯೆಯನ್ನು ವಿಶೇಷ ಯತ್ನದಿಂದ ವೃದ್ಧಿಗೊಳಿಸುವದೇ ನಿಮ್ಮ ಮುಖ್ಯ ಕರ್ತವ್ಯವು.

೨. ವಿದ್ಯಾ ಅಂದರೆ ಎಲ್ಲಾ ಪ್ರಾಣಿಗಳಕಿಂತಲೂ ಹೆಚ್ಚಾಗಿ ಮನುಷ್ಯನಲ್ಲಿ ಈಶ್ವರನಿಂದ ಇಡಲ್ಪಟ್ಟಿರುವ ಜ್ಞಾನವೆಂಬ ರತ್ನಕ್ಕೆ ಕಾಂತಿಯನ್ನು ಹೆಚ್ಚಿಸುವ ಸಂಸ್ಕಾರ ವಿಶೇಷವು ಇಂಥಾ ವಿದ್ಯೆಯನ್ನು ಸಂಗ್ರಹಿಸಿ, ಇಟ್ಟುಕೊಳ್ಳುವದು ಲೋಕದಲ್ಲಿ ಪ್ರತಿಯಬ್ಬ ಮನುಷ್ಯನ ಅವಶ್ಯ ಕರ್ತವ್ಯವಾಗಿಧೆ ಆದ್ದರಿಂದ ವಿದ್ಯೆಯನ್ನು ಸಂಪಾದನಮಾಡಲಿಕ್ಕೆ ಬೇಕು.

೩. ಇಂಥಾ ವಿದ್ಯೆಯಲ್ಲಿ ನಮ್ಮ ವೀರಶೈವ ಮಹಾಜನಗಳು ಸುಮಾರ ನೂರಾರು ವರ್ಷಗಳ ಕೆಳಗೆ ಪರಮತೀಯ ರಾಜರಭೀತಿಯಿಂದ ಹಿಂದುಳಿದವರಾಗಿದ್ದರಿಂದ ವೀರಶೈವ ಮತವೆಂಬ ಚಂದ್ರನಕಾಂತಿಗೆ ಅಜ್ಞಾನವೆಂಬ ಮೋಡವು ಆಚ್ಛಾದನವಾಗಿತ್ತು, ಆದ್ದರಿಂದ ನಮ್ಮಮತ ತತ್ವವನ್ನು ತಿಳಿಯುವದಕ್ಕೆ ಅವಕಾಶ ದೊರಿಯದಕಾರಣ ಈ ಮತವು ಹೀನ ಸ್ಥಿತಿಗೆ ಈಡಾಗಿತ್ತು. ಅಷ್ಟರಲ್ಲಿಯೇ ಬ್ರಿಟಿಷ್‌ಮಹಾರಾಜರ ಆಳುವಿಕೆಯಲ್ಲಿ ಈ ಬಳ್ಳಾರಿ ನಿವಾಸಿಗಳಾದ ಕೈ॥ ಸಕ್ಕರೆ ಕರಡೆಪ್ಪನವರೆಂಬ ಮಹಾಪುರುಷರು ಒಂದು ಸಂಸ್ಕೃತಪಾಠಶಾಲೆಯನ್ನು ಸ್ಥಾಪನಗೊಳಿಸಿ, ಅನೇಕ ಜನ ವಿದ್ಯಾರ್ಥಿಗಳಿಗೆ ಅನ್ನೋದಕವಗೈರೆ ಕೊಟ್ಟು ಚನ್ನಾಗಿ ಅಭ್ಯಾಸಮಾಡಿಸಿದರು. ಅವರಿಂದ ಎಷ್ಟೋಜನ ವಿದ್ಯಾರ್ಥಿಗಳು ನಾಟಕಾಂತ್ಯ ಸಾಹಿತ್ಯದಲ್ಲೂ, ಅಲ್ಪಸ್ವಲ್ಪ ಮಟ್ಟಿಗೆ ಶಾಸ್ತ್ರದಲ್ಲೂ, ಜ್ಞಾನವುಳ್ಳವರಾದ್ದರಿಂದ ನಮ್ಮಲ್ಲಿ ವಿದ್ಯೆಯೆಂಬ ವೃಕ್ಷವು ಅಂಕುರಿಸಿತು. ... ... ...

೪. ಅದೇಪ್ರಕಾರ ಮೈಸೂರು ನಿವಾಸಿಗಳಾದ ಕೈಲಾಸವಾಸಿ ವೈ॥ ವೀರಸಂಗಪ್ಪನವರು ನಮ್ಮ ಮತದ ಗ್ರಂಥಗಳನ್ನು ಪ್ರಚಾರದಲ್ಲಿ ತಂದು ಎಷ್ಟೋ ಗ್ರಂಥಗಳನ್ನು ಪ್ರಿಂಟುಮಾಡಿಸಿ, ನಮ್ಮ ಮತದ ವಿಷಯವಾಗಿ ಪರಮತೀಯರಕೂಡ ಅನೇಕ ವಿಧವಾ

ವೇದಾಗಮ ಪುರಾಣೇತಿಹಾಸ ಪ್ರಮಾಣಗಳಿಂದ ಪುಷ್ಕಳ ಕರೆಸ್ಪಾಂಡೆನ್ಸ ಜರುಗಿಸಿ ನಮ್ಮ ಮತದ ಸ್ವರೂಪವನ್ನು ತಿಳವಳಿಕೆಯಲ್ಲಿ ತಂದರು. ... ...

೫. ಕೈಲಾಸವಾಸಿ ಡಿ॥ ಎಜುಕೇಷನಲ್ ಇನ್‌ಸ್ಪೆಕ್ಟರಾದ ಚನಬಸಪ್ಪ, ಧಾರವಾ ಇವರು ನಮ್ಮ ವೀರಶೈವ ಜನಗಳಿಗೆ ವಿದ್ಯಾದಾನ ಮಾಡುವದಲ್ಲದೆ ಅವರವರ ಪರೀಕ್ಷೆ ಮೇಲಿಂದಾ ಶ್ಯಾಲಾಖಾತೇಕ್ಕೆನೇಮಿಸಿ ನಮ್ಮಮತದಲ್ಲಿ ವಿದ್ಯಾವರ್ಧನವಾಗುವಂತೆಮಾಡಿದ

೬. ಇತ್ತೀಚಿಗೆ ವೇದಮೂರ್ತಿಗಳಾದ ನೀಲಕಂಠ ಶಾಸ್ತ್ರಿಗಳು, ವ ಮಲ್ಲಿಕಾ ರ್ಜುನ ಶಾಸ್ತ್ರಿಗಳು, ವ ಸೋಮನಾಥ ಶಾಸ್ತ್ರಿಗಳು, ವಗೈರೆರು ಕಾಶಿಗೆ ಹೋಗಿ ೮, ೧ ವರ್ಷಪರ್ಯಂತ ಅಭ್ಯಾಸಮಾಡಿ ಬಹ್ಟೊಬ್ಬರು ಒಂದೊಂದು ಶಾಸ್ತ್ರದಲ್ಲಿ ಅದ್ವೀತಿಯ ಪಾ ಡಿತ್ಯವನ್ನು ಪಡೆದುಕೊಂಡುಬಂದರು ಅವರಲ್ಲಿವೈಯ್ಯಾಕರಣಿಗಳಾದ ನೀಲಕಂಠಪಂಡಿತ ಗದಗ ಸಂಸ್ಥಾನದಲ್ಲಿ ವಾಸಮಾಡಿದರು. ಅವರಿಂದ ಕೆಲ ವಿದ್ಯಾರ್ಥಿಗಳು ಶಾಸ್ತ್ರದಲ್ಲಿ ಪಂ ರಾದ್ದರಿಂದ ಶಾಸ್ತ್ರದ ಪರಿಚಯವು ನಮ್ಮಗಳಿಗೆ ಉಂಟಾಯಿತು. ...

೭. ಇದರಿಂದ ಅನೇಕ ಕಡಿಗೆ ಪಾಠಶಾಲೆಗಳು ಸ್ಥಾಪನ ಆಗಿರೋಣವರಿಂದ ನ ಮ್ಮ ಮತದ ಸ್ವರೂಪವು ತಿಳವಳಿಕಿಗೆ ಬರಲಿಕ್ಕೆ ಹತ್ತಿರುತ್ತದೆ. ಇದಲ್ಲದೆ ನಮ್ಮ ಮ ಸುಧಾರಣೆಗೆ ಮೂಲಕಾರಣರಾದ ಕೈಲಾಸವಾಸಿ ರಾ॥ ಬ॥ ಗುರುಸಿದ್ದಪ್ಪ ಗಿಲಗಂಚಿ, ರಾ॥ ಬ॥ ಡಿ॥ ಡಿ॥ ಕಲೆಕ್ಟರ್ ರುದ್ರಗೌಡ, ಅರಟಾಳ ಇವರು ಬಹಳೇ ಮೆಹನತ್ತಿನಿಂ ಲಿಂಗಾಯತ ಫಂಡನ್ನು ಕೂಡಿಸಿ, ನಮ್ಮಜನಗಳನ್ನು ವಿದ್ವಚ್ಛ್ರೇಣಿಯಲ್ಲಿ ಗಣ್ಯರನ್ನಾ ಮಾಡಿ, ಮುಂದಕ್ಕೆ ತಂದರು. ಇದಕ್ಕೆ ಅನುಕೂಲವಾಗಿ ಆನರೆಬಲ್ ನಾಮದಾರ ಶ್ರೀಮಂತ ಲಕಮನಗೌಡ ಸರದೇಸಾಯಿ ವಂಟಮುರಿಕರ ಇವರು ಯೇಕಕಾಲದಲ್ಲಿ ನಿರಾತಂಕವಾ ಈ ಫಂಡಿಗೆ ೫೦೦೦೦, ರೂಪಾಯಿಗಳನ್ನು ಕೊಡುವದಲ್ಲದೆ ಮತ ಸುಧಾರಣೆಗೋಸುಗ ಕ ವತ್ತಿಗೂ ಪುಷ್ಕಳ ಲಕ್ಷ್ಯಕೊಟ್ಟರುತ್ತಾರೆ. ಮತ್ತು ಕೈಲಾಸವಾಸಿಗಳಾದ ನವಲಗುಂ ಸಂಸ್ಥಾನದ ಶ್ರೀಮಂತ ಲಿಂಗಪ್ಪ, ಜಾಯಪ್ಪ, ಸರದೇಸಾಯಿ ಶಿರಸಂಗಿ, ಇವರು ನಮ್ಮ ಮತದ ಅಭಿವೃದ್ಧಿಗೋಸ್ಕರ ಈ ಲಿಂಗಾಯತಫಂಡಿಗೆ ಇತಃಪೂರ್ವ ಪುಷ್ಕಳದ್ರವ್ಯ ಸಹಾಯ ಮಾಡಿರುವದಲ್ಲದೆ ತಮ್ಮ ಸಂಸ್ಥಾನವನ್ನೇ ದಾನವಾಗಿ ಸಮರ್ಪಣೆಮಾಡಿ ಆಚಂದ್ರಾರ್ಕವಾ ಲೋಕತ್ರಯದಲ್ಲಿ ಸುಸ್ಥಿರವಾದ ಕೀರ್ತ್ಯಾಸ್ಪದರಾಗಿ ವೇದಾಂತ ವೇದ್ಯವಾದ ಪರಶಿವ ಪ ವಿಯನ್ನು ಹೊಂದಿದರು. ... ... ...

೮. ಪ್ರಕೃತ ಮಹಾಸಭೆಯ ಅಧ್ಯಕ್ಷರಾದ ರಾವಸಾಹೇಬ ಮಲ್ಲಪ್ಪ, ಅಪ್ಪಾಸಾ ಹೇಬ, ವಾರದ ಇವರು ನಮ್ಮಮತದ ಸುಧಾರಣೆಗೋಸ್ಕರ ಬಹುಪ್ರಯತ್ನದಿಂದ ಅನೇಕ

ಜನ ವಿದ್ಯಾರ್ಥಿಗಳಿಗೆ ಅಭ್ಯಾಸಮಾಡಿಸಿ ವಿದ್ವಾಂಸರನ್ನಾಗಿ ಮಾಡಿದರು. ... *

೯. ಅವರೆ ಮೇಲೆ ಹೇಳಲ್ಪಟ್ಟ ವೀರಶೈವ ಮಹಾಜನಗಳು ಧನಸಂಚಯವನ್ನು ಮಾಡಿಸರಕಾರದಲ್ಲಿಟ್ಟು ಅದರ ಬಡ್ಡಿಯಹಣದಿಂದ ಎಷ್ಟೋಜನವೀರಶೈವರನ್ನು ರಾಜಕೀಯವಿದ್ಯೆಯಲ್ಲಿ ದೊಡ್ಡದೊಡ್ಡ ಪರೀಕ್ಷೆಯನ್ನುಕೊಡಿಸಿ ಸರಕಾರದ ದೊಡ್ಡದೊಡ್ಡ ಪದವಿಯಲ್ಲಿ ಬರುವಂತೆ ಮಾಡಿದರು. ಇದು ನಮ್ಮಮತಕ್ಕೆ ಪರಮಭೂಷಣವಾದದ್ದು. ರಾಜಕೀಯವಿದ್ಯಕ್ಕೆ ಧನಸಂಗ್ರಹವನ್ನುಮಾಡಿ ಸಹಾಯಕೊಟ್ಟಂತೆ, ವೈದಿಕ ವಿದ್ಯೆಯಾದ ಸಂಸ್ಕೃತ ವಿದ್ಯಕ್ಕೆ ಸಹಾಯದೊರತದ್ದೇ ಅದರೆ ಕಾಶಿ, ಕಲಕತ್ತಾ, ಮುಂತಾದ ದೂರ ಸ್ಥಲಗಳಿಗೆ ಹೋಗಿ ಪ್ರತಿವಬ್ಬವೀರಶೈವನು ವೈದಿಕವಿದ್ಯೆಯಲ್ಲಿ ನೈಪುಣ್ಯವನ್ನು ಪಡಿಯುವನು. ಯಾಕೆಂದರೆ ಬಬ್ಬೊಬ್ಬರು ತಮ್ಮತಮ್ಮ ಯೋಗ್ಯತಾನುಸಾರವಾಗಿ ಸಹಾಯಮಾಡಿದ್ದಕ್ಕೆ ಇಷ್ಟರಮಟ್ಟಿಗೆ ನಮ್ಮಮತ ತತ್ವವನ್ನು ತಿಳಿಯತಕ್ಕ ಯೋಗ್ಯತೆಯುಂಟಾಗಿರುವದು ಅನೇಕರು ಬಕ್ಕಟ್ಟಾಗಿ ಮಾಡಿದ ಸಹಾಯದಿಂದ ಇದಕ್ಕಿಂತಲೂ ಹೆಚ್ಚಾದ ಯೋಗ್ಯತೆಯು ದೊರಿಯಬಹುದು. ... ... ... ... *

೧೦. ನಮ್ಮ ಮತಗ್ರಂಥಗಳನ್ನು ತಿಳಿಯಬೇಕಾದರೆ ಅಲ್ಪಸ್ವಲ್ಪ ವಿದ್ಯೆಯು, ಸಾಕಾಗುವದಿಲ್ಲ. ಅದಕಾರಣ ಬಂದೊಂದು ಶಾಸ್ತ್ರದಲ್ಲಿ ಚನ್ನಾಗಿ ಗತಿ ಆಗಿದ್ದರೆ ನಮ್ಮಮತ ಗ್ರಂಥಗಳು ಅನ್ವೈಸುತ್ತವೆ. ಇಷ್ಟಕ್ಕೆ ಚನ್ನಾಗಿ ಅನ್ವೈಸುವದಿಲ್ಲಾ. ಮುಂದೆ ಯಲ್ಲಾ ದರೂಹೋಗಿ ಅಭ್ಯಾಸಮಾಡಬೇಕಾದರೆ ದ್ರವ್ಯಸಹಾಯ ಇಲ್ಲದಕಾರಣ ಇನ್ನು ಅಪ್ರಬಲ ಸ್ಥಿತಿಯಲ್ಲಿಯೇ ಇರುವದು. ಆದ್ದರಿಂದ ರಾಜಕೀಯ ವಿದ್ಯಕ್ಕೆ ಧನಸಂಗ್ರಹ ಮಾಡಿದಂತೆ ವೈದಿಕ ವಿದ್ಯೆಯ ಉತ್ತೇಜನಕ್ಕೋಸ್ಕರ ಬಂದು ಧನರಾಶಿಯನ್ನುಕೂಡಿಸಿ ಆ ಹಣದಬಡ್ಡಿಯಿಂದ ಸಂಸ್ಕೃತ ಅಭ್ಯಾಸ ಮಾಡತಕ್ಕವರಿಗೆ ಸಹಾಯಮಾಡುವದು ಅವಶ್ಯವದೆ. ಅಂದರೆ ಪ್ರತಿವಬ್ಬವೀರಶೈವನು ಶಾಸ್ತ್ರಜ್ಞಾನ ವುಳ್ಳವನಾಗಿ ನಮ್ಮಮತದ ಗ್ರಂಥಗಳನ್ನು ತಿಳಿದು ಅದರಂತೆ ಆಚರಣೆಯಲ್ಲಿ ತರಲಿಕ್ಕೆ ಯೋಗ್ಯನಾಗುತ್ತಾನೆ. ಇದರಿಂದ ಧಾರ್ಮಿಕಸ್ಥಿತಿಯು ಮೊದಲಿನಂತೆ ಉನ್ನತೆಯನ್ನು ಹೊಂದುವದು. ... ... *

೧೧. ಮದ್ರಾಸು ಇಲಾಖೆಯ ವೀರಶೈವಮಹನೀಯರಾದ ನೀವುಗಳು ಲಿಂಗಾಯತ ಫಂಡನ್ನು ಕೂಡಿಸಿ ಮುಂಬೈ ಇಲಾಖೆಯ ವೀರಶೈವರಂತೆ ರಾಜಕೀಯ ವಿದ್ಯಕ್ಕೆ ವ್ಯವಸ್ಥಾಮಾಡತಕ್ಕದ್ದು ಅವಶ್ಯ ಕರ್ತವ್ಯವಾಗಿದೆ. ... ... *

೧೨. ಇತ್ತೀಚಿಗೆ ಮೈಸೂರ ಶೀಮೆಯ ವೀರಶೈವರು ರಾಜಕೀಯ ವಿದ್ಯಕ್ಕೋಸ್ಕರ ಬಂದು ಧನರಾಶಿಯನ್ನು ಕೂಡಿಸಹತ್ತಿದ್ದಾರೆಂದು ತಿಳಿಯಬಂದಿದೆ ಇದು ಬೇಗನೆಬೆಳೆ

ಯುವವನ್ನು ನಿರೀಕ್ಷಿಸಬೇಕಾಗಿಧೆ. ಈ ಮೊದಲು ಮದ್ರಾಸು ಇಲಾಖೆಯ ವೀರಶೈವ ಮಹಾಜನಗಳು ಇವಕ್ಕಾಗಿ ಪ್ರಯತ್ನಶೀಲರಾಗಿರುವದನ್ನು ಕೇಳಿ, ನಿಮ್ಮ ಸಹೋದರರಾದ ಯಾವತ್ತು ವೀರಶೈವರು ಪರಮಾನಂದ ಭರಿತರಾಗಿದ್ಧಾರೆ. ಇದರ ಸತ್ಫಲವನ್ನು ಜಗದೀಶ್ವರನು ಬೇಗನೆ ತೋರಿಸುವದಕ್ಕಾಗಿ ಅಪೇಕ್ಷಿಸಿ ಈ ವಿಷಯುವನ್ನು ಮುಗಿಸುತ್ತೇನೆ. *

ತೋಂಟದ ದೇವರು, ಗುರುತೋಂಟದ ಸ್ವಾಮಿ,

ಸಾ॥ ಗದಗ.

( ಕೈಚಪ್ಪಾಳೆ )

---

ಅಷ್ಟುಹೊತ್ತಿಗೆ ಶ್ರೀ ನೆಲ್ಯಾಳಂ ರಾಜ್ಞಿಯವರ ಪತ್ರವುಬಂದಿತು ಪದ್ಧತಿಯಂತೆ ಮಹಾ ಸಭೆಯವರ ಅಲ್ಪಾಹಾರಕ್ಕಾಗಿ ೫೦, ರೂಪಾಯಿಗಳನ್ನು ಸ್ತ್ರೀ ಮಂಡಲಿಯವರ ಫಲಾಹಾರಕ್ಕಾಗಿ ೨೫ ರೂಪಾಯಿಗಳನ್ನು ಕಳುಹಿಸಿರುತ್ತೇವೆಂತಲು ಸಭೆಯವಿಷಯದಲ್ಲಿ ತಮ್ಮ ಸಂಪೂರ್ಣಾಭಿಮಾನ ವಿರುವದೆಂತಲು ಜಗದೀಶನ ಅನುಗ್ರಹದಿಂದ ಮಹಾಸಭೆಗಳು ವೃದ್ಧಿಗೆ ಬಂದು ಸಮಾಜಕ್ಕೆ ಫಲಕಾರಿಯಾಗಬೇಕೆಂತಲು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದ್ದರೂ. ಇದಲ್ಲದೆ ಹಂಪೆಯ ಶ್ರೀ ಶಂಕರಾಚಾರ್ಯರ ಮಠದ ಶಂಕರಭಾರತೀಸ್ವಾಮಿಗಳು ಈ ಮಹಾಸಭೆಯ ವಿಷಯದಲ್ಲಿ ತಮ್ಮ ಸಹಾನುಭೂತಿಯನ್ನು ಪ್ರದರ್ಶಿಸುವ ತಂತ್ರೀವಾರ್ತೆಯನ್ನು ಕಳುಸಿದ್ದರು. ... ... ... ... *

ಇವೆರಡೂ ವಿಷಯುಗಳನ್ನು ಸಭಿಕರಿಗೆ ಅಧ್ಯಕ್ಷರು ಆನಂದದಿಂದ ತಿಳಿಯಪಡಿಸಿದರು. ... ... ... ... ... *

ಸಭಿಕರು ಮಹದಾನಂದದಿಂದ ಕರತಾಡನ ಮಾಡಿದರು. ಈ ಮಧ್ಯೆ ಅಲ್ಪಾಹಾರ ಸ್ವೀಕಾರಕ್ಕಾಗಿ ೩೦ ನಿಮಿಷದ ಹೊತ್ತು ಸಭೆಗೆ ವಿಶ್ರಾಂತಿಯು ಕೊಡಲ್ಪಟ್ಟಿತು. *

---

ಪುನಃ ೪ ಘಂಟೆಲಿಂದ ೬—೩೦ರ ವರೆಗೂ.

## ೨ನೇ ವಿಷಯ—ಮತ ಸಿದ್ಧಾಂತವನ್ನು ರಾಜಕೀಯ ಭಾಷೆಯಲ್ಲಿ ಬರೆಯಿಸುವ ಅವಶ್ಯಕತೆ.

ಈ ವಿಷಯದ ಮೇಲೆ ವೇ॥ ಅಯ್ಯಪ್ಪಶಾಸ್ತ್ರಿ ಜಗತಿಮಠ ಸಾ॥ ಗದಗ, ಇವರು ಮಾಡಿದ ಭಾಷಣವು.

ಶ್ರೀಮತ್ಪರಮ ಪೂಜ್ಯಪಾದರಾದ ಮಹಾಸ್ವಾಮಿಗಳೇ? ಸಭಾಧ್ಯಕ್ಷರೇ! ಪ್ರತಿನಿಧಿಗಳಾಗಿಯೂ, ಪ್ರೇಕ್ಷಕರಾಗಿಯೂ, ಬಂದಿರುವ ಮಹನೀಯರೇ! ನಾನು ಕೈಕೊಂಡಿರುವ ವಿಷಯವು ಪ್ರಕೃತದಲ್ಲಿ ಬಳ್ಳಾರಿಯಲ್ಲಿ ಮಿಲಿತವಾಗಿರುವ ಈ ೫ನೇ ಶ್ರೀಮದ್ವೀರ ಶೈವ ಮಹಾಸಭೆಯಲ್ಲಿ ಭಾಷಣಮಾಡಲಿಕ್ಕೆನೇಮಿಸಲ್ಪಟ್ಟ ವಿಷಯಗಳೊಳಗೆ ೭ನೇವಿಷಯವಾದ ಮತ ಸಿದ್ಧಾಂತವನ್ನು ರಾಜಕೀಯ ಭಾಷೆಯಲ್ಲಿ ಬರೆಯಿಸುವ ಅವಶ್ಯಕತೆ ಎಂಬುವದಾಗಿರುತ್ತದೆ. ಈ ವಿಷಯದಮೇಲೆ ಭಾಷಣ ಮಾಡಬೇಕೆಂಬದಾಗಿ ಪ್ರಯತ್ನಿಸುವ ನಾನು ಪ್ರಾಂಶುಲಭ್ಯೆಫಲೇಲೋಭಾದುದ್ಬಾಹುರಿವವಾಮನಃ ॥ ಯಂಬ ನ್ಯಾಯದಿಂದ ನಿಂದಾಸ್ಪದನಾಗಬಹುದು. ಆದರೂ ಪರಮಾತ್ಮನ ಕೃಪಾದೃಷ್ಟಿಯಿಂದ ಅಕ್ಷರಾಭಿನಿವೇಶವು ಯನ್ನ ಹೃದಯಾಲವಾಲದಲ್ಲಿ ಮೂರ್ತಿಗೊಂಡದ್ದರಿಂದ ಈ ದುರವಗಾಹವಾದ ಉದ್ಯಮದಲ್ಲಿ ತೊಡಗಿಕೊಂಡಿರುವೆನು. ಇದರಲ್ಲಿ ನ್ಯೂನತೆಗಳು ಕಂಡಲ್ಲಿ ॥ ಮಧುಲಿಹಮಧುಬಿಂದೂನ್ ವಿರಲಾನವಿಭಜತಗುಣಲೇಶಾನ್ ॥ ಎಂಬ ನ್ಯಾಯವನ್ನನುಸರಿಸಿ, ಗುಣಗಳನ್ನುಮಾತ್ರ ಗ್ರಹಿಸಲು ಬೇಡಿಕೊಳ್ಳುತ್ತೇನೆ. ... ... ... *

ನಮ್ಮ ಮತವು ವಿದ್ಯಾವಿಹೀನತೆಯಿಂದಲೂ, ಧರ್ಮಕ್ಷೀಣತೆಯಿಂದಲೂ ಅತ್ಯಂತ ನಿಕೃಷ್ಟಸ್ಥಿತಿಯನ್ನು ಹೊಂದಿರುತ್ತದೆ. ಇದಕ್ಕೆ ಪರಮತೀಯರಾದ ಪೂರ್ವಕಾಲದ ರಾಜರು ನಮ್ಮ ಮತದಮೇಲೆ ದ್ವೇಷಬುದ್ಧಿಯಿಂದ ವ್ಯಕ್ತಪಡಿಸಿದ ದುರಾಗ್ರಹವೇ ಕಾರಣವಾಗಿರುತ್ತದೆ. ಈ ಕಾಲದಲ್ಲಿ ಅನ್ಯಾಯವೆಂಬ ಪ್ರಚಂಡ ಬಿಸಲಿನತಾಪವನ್ನು ದೂರಮಾಡಿ ನ್ಯಾಯವೆಂಬ ತಂಪಾದ ನೆಳಲನ್ನಿತ್ತು ಭರತಖಂಡದ ಪ್ರಾಚೀನ ರಾಜರ ಅನೀತಿಮಯವಾದ ಸಾಮ್ರಾಜ್ಯವೆಂಬ ಬಿಸಲಿನಿಂದಬಳಲುತ್ತಿದ್ದ ಭರತಖಂಡನಿವಾಸಿಗಳಾದ ಪ್ರಜೆಗಳೆಂಬ ಪ್ರವಾಸಿಗಳನ್ನು ಪರಿತೃಪ್ತರನ್ನಾಗಿ ಮಾಡಿದ ಬ್ರಿಟಿಷ್ ಪ್ರಭುಗಳ ಸಾಮ್ರಾಜ್ಯವೆಂಬ ಮಹಾವೃಕ್ಷವನ್ನು ಅವಲಂಬಿಸಿದ ಪಕ್ಷಿಗಳಾದ ನಾವು ನಮ್ಮಮತದ ಉನ್ನತಿಯೆಂಬ ಸತ್ಫಲವನ್ನು ಕಾಣದೇ ಇರುವದು ನಮ್ಮ ದುರ್ಭಾಗ್ಯವೇ ಸರಿ. ಭರತಖಂಡದಲ್ಲಿಯ ಮತಗಳ ಉಚ್ಚನೀಚಾ ವಸ್ಥೆಗಳಲ್ಲಿ ಈಗಿನ ಸಾರ್ವಭೌಮ ಸರ್ಕಾರದವರದೇನೂ ಆಗ್ರಹಪೂರ್ವಕವಾದ ಅಭಿನಿವೇಶ ವಿರುವದಿಲ್ಲಾ, ಆದರೆ ಯಾವಮತಕ್ಕೆ ಸಂಬಂಧಪಟ್ಟ ಪುರಾತನ ಧರ್ಮ

ನಿರ್ಣಯಗಳು ಈ ಹಿಂದುಸ್ಥಾನವನ್ನು ತಾವು ಪ್ರವೇಶಿಸಿದಕಾಲ ಮೊದಲುಗೊಂಡು ಈ ವರಿವಿಗೂ ತಮಗೆ ತಿಳಿದಿರುತ್ತವೆಯೋ? ಅಂತಹ ಮತದ ಜನಾಂಗವು ಗಣ್ಯಸ್ಥಾನದಲ್ಲಿ ಪರಿಗಣಿಸಲ್ಪಟ್ಟದೆ. ಇವರಿಂದಾ ಉಳಿದ ಮತಗಳ ಗಣ್ಯತೆಯಲ್ಲಿ ಅವರಮ ದುರಾಗ್ರಹ ಉಂಟೆಂದು ಭಾವಿಸುವಪಕ್ಕಾಗುವದಿಲ್ಲವು. ಯಾಕೆಂದರೆ ಹಿಂದುಸ್ಥಾನದಲ್ಲಿಯ ಯಾವಮತಕ್ಕೂ ತಾವು ಸಂಬಂಧಪಟ್ಟವರಲ್ಲಾ ಆದುದರಿಂದ ಒಂದು ಮತವನ್ನು ಉಚ್ಚಸ್ಥಿತಿಯಲ್ಲಿ ಪರಿಗಣಿಸುವದು, ಮತ್ತೊಂದು ಮತವನ್ನು ಹೀನತೆಯಿಂದಕಾಣುವದು, ಅವರಿಗೆ ಇಷ್ಟವೆಂದು ತಿಳಿಯುವದಕ್ಕೆ ಯಾವಕಾರಣವು ಕಂಡುಬರುವದಿಲ್ಲಾ ಸಕಲಪ್ರಜೆಗಳು ಸರ್ವವಿಧದಿಂದಲು ಮುಂದೆಬರುವದಕ್ಕೆ ಅವಕಾಶವು ದೊರೆತಿರುವ ಈ ಸುಸಮಯದಲ್ಲಿ ನಮ್ಮಮತದ ಯಥಾರ್ಥವಾದ ಗಣ್ಯತೆಯನ್ನು ದಯಾಳುಗಳಾದ ಸರ್ಕಾರದವರು ತಿಳಿಯದೇ ಇರುವದಕ್ಕೆನಮ್ಮ ಧಾರ್ಮಿಕತತ್ವಗಳು ಅವರಿಗೆ ಗೊತ್ತಾಗದಿರುವದೇ ಮೂಲಕಾರಣವಾಗಿರುತ್ತದೆ. ಆದುದರಿಂದ ಜನಾಂಗ ವರ್ಣನೆಯಲ್ಲಿ ನಮ್ಮನ್ನು ಸಾಮಾನ್ಯ ವರ್ಗಕ್ಕೆ ಸೇರಿಸಿರುತ್ತಾರೆ. ಇದು ಅಲ್ಲದೆ ನ್ಯಾಯಕೋರ್ಟುಗಳಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಪಟ್ಟ ವ್ಯವಹಾರಗಳು ಅಪಕೃಷ್ಟವರ್ಗಕ್ಕೆ ಸಂಬಂಧಿಸಿದ ಧರ್ಮನಿಯಮಗಳಿಂದ ತೀರ್ಮಾನಿಸಲ್ಪಡುತ್ತವೆ. ಇದರಿಂದ ನಮ್ಮ ಸಮಾಜಕ್ಕೆ ಎಷ್ಟೋ ಅನಿವಾರ್ಯಗಳಾದ ಹಾನಿಗಳು ಸಂಭವಿಸುತ್ತವೆ. ಇದು ಅಲ್ಲದೆ ಸರ್ಕಾರದ ತಿಳುವಳಿಕೆಯಲ್ಲಿ ಬಹುದಿನಗಳಿಂದ ಪ್ರಸಾರಗೊಂಡಿರುವ ಗಣ್ಯತೆಯುಳ್ಳ ಇತರ ಸಮಾಜದವರು ನಮನ್ನು ವಿಧೇಯ ವರ್ಗದಲ್ಲಿ ಪರಿಗಣಿಸುವದಲ್ಲದೇ ನಮ್ಮ ಗುರುವರ್ಗದವರು ಯಥಾರ್ಥವಾಗಿ ಅನುಭವಿಸುತ್ತಿರುವ ಮಾನ ಮರ್ಯಾದೆಗಳಿಗೆ ವಿಘ್ನವನ್ನುಂಟುಮಾಡುತ್ತಾರೆ. ಮೈಸೂರ ದೇಶದಲ್ಲಿ ಇತರ ಸಮಾಜದವರಿಂದ ಉಂಟಾಗುವ ತೊಂದರೆಗಳು ಆಗಿಂದಾಗ್ಗೆ ನಮ್ಮಕಿವಿಗೆ ಬೀಳುತ್ತಿರುತ್ತವೆ. ಅಂತಹ ಉಪಟಳಗಳು ಮುಂಬೈ ಸರ್ಕಾರದವರಿಂದ ಬಲುಮಟ್ಟಿಗೆ ದೂರಮಾಡಲ್ಪಟ್ಟವೆ. ಮದ್ರಾಸು ಪ್ರಾಂತದಲ್ಲಿ ಮಾತ್ರ ಇನ್ನೂ ಹಾಗೆಯೇ ಉಳಿದಿರುತ್ತವೆ. ನಮ್ಮ ಮತಕ್ಕೆ ಸಂಬಂಧಪಟ್ಟ ಎಲ್ಲ ಧಾರ್ಮಿಕ ವ್ಯವಹಾರಿಕ ತತ್ವಗಳು, ನಮ್ಮಿಂದ ದಯಾಳು ಸರ್ಕಾರದವರಿಗೆ ಗೊತ್ತು ಮಾಡಲ್ಪಡದೆ ಜನ ಪರಿಗಣತೆಯಲ್ಲಿ ಕಂಡಿರುವ ನಮ್ಮ ಸಮಾಜದ ಅಪಕೃಷ್ಟತ್ವವು ತನ್ಮೂಲಕವಾಗಿ ಇತರ ಸಮಾಜದವರಿಂದ ಸ್ಥಾಪಿಸಲ್ಪಡುವ ಅಪಕರ್ಷವು ದೂರವಾಗಲಾರದು. ಇದಕ್ಕೋಸ್ಕರವಾಗಿ ನಮ್ಮ ಮತಕ್ಕೆ ಸಂಬಂಧಪಟ್ಟ ಸಕಲ ಧಾರ್ಮಿಕ, ವ್ಯವಹಾರಿಕ, ತತ್ವಗಳನ್ನೊಳಗೊಂಡಿರುವ ಸಿದ್ಧಾಂತಗ್ರಂಥಗಳು ನಮ್ಮಲ್ಲಿ ಯಾವಾದರೂ ಇದ್ದರೆ ಅವುಗಳನ್ನು ಪರಿಶೋಧಿಸಿ, ಈಗಿನ ರಾಜಕೀಯ ಭಾಷೆಯಾದ ಇಂಗ್ಲೀಷ ಭಾಷೆಯಲ್ಲಿ ಭಾಷಾಂತರಿಸುವದು ಅವಶ್ಯವದೆ. ಇದಕ್ಕಾಗಿ ನಮ್ಮ ಸಮಾಜದ ಉನ್ನತಿಗೆ ಇಂಗ್ಲೀಷ ಭಾಷೆಯ ಅಭ್ಯಾಸವಾದರೂ ಒಂದು ವಿಧವಾದ ಸಾಧನವೇ ಎಂದು ಪರಿಭಾವಿಸಬೇಕಾಗಿದೆ. ಇದು ಅಲ್ಲದೆ ಸಮಾಜದಲ್ಲಿ ಕಾಲೋಚಿತವಾದ ಏಳಿಗೆಯು ಉಂಟಾಗಬೇಕಾದರೆ ರಾಷ್ಟ್ರವು ಯಾವಯಾವ ಕಾಲದಲ್ಲಿ 'ಯಾವಯಾವ ರಾಜನ

ಕೈಸೇರುತ್ತದೆಯೋ ಆಯಾ ರಾಜವರ್ಗವನ್ನು ಹಲಕೆಲವು ವಿಧಗಳಲ್ಲ್ಯಾದರೂ ಪ್ರಜರು ಅನುಕರಿಸಬೇಕಾಗುತ್ತದೆ. ಹಾಗೆ ಅನುಕರಿಸದಿದ್ದರೆ ಸಮಾಜದಲ್ಲಿ ದೇಶಕಾಲಾನು ಗುಣ ವಾದ ಉನ್ನತಿಯು ಉಂಟಾಗಲಾರ ದೆಂಬುವದು ॥ ಯಥಾಹ್ಯಾಚರತಿಶ್ರೇಷ್ಠಃ ತಥೈವಬ ಹುಧಾಜನಃ । ರಾಜಧರ್ಮಾಃಪ್ರಭವತಿ ಯಥಾರಾಜಾತಥಾಪ್ರಜಾಃ ॥ ಎಂಬ ನ್ಯಾಯದಿಂದ ವ್ಯಕ್ತವಾಗುತ್ತದೆ. ಈ ಕಾಲದಲ್ಲಿ ಇಂಗ್ಲೀಷು ಭಾಷೆಯನ್ನು ಕಲಿತು, ಈಗಿನ ಸಾರ್ವಭೌ ಮ ಸರ್ಕಾರದವರ ನಡವಳಿಕಿಗೆ ಅನುಸಾರವಾಗಿ ನಡದುಕೊಳ್ಳದಿದ್ದರೆ ಇತರ ಸಮಾಜಕ್ಕೆ ದೊರೆತ ಉನ್ನತಿಯು, ನಮ್ಮ ಸಮಾಜಕ್ಕೆ ದೊರೆಯಲಾರದು. ಆದುದರಿಂದ ಇಂಗ್ಲೀಷ ಭಾಷಾಪ್ರವೀಣತೆಯು ನಮ್ಮ ಸಮಾಜಕ್ಕೆ ದೇಶಕಾಲ ಸ್ಥಿತಿಗನುಸಾರವಾಗಿ ಅತ್ಯವಶ್ಯವಾಗಿ ರುತ್ತದೆ. ಇದಕ್ಕೆ ನಮ್ಮ ಸಮಾಜದ ಏಳಿಗೆಯಸಲುವಾಗಿ ಸಾರ್ವಭೌಮ ಸರ್ಕಾರದವರಿಂದ ಪ್ರಕೃತದಲ್ಲಿ ನಮ್ಮಗೆ ದೊರೆಯಹತ್ತಿರುವ ಸಹಾನುಭೂತಿಯೇ ನಿದರ್ಶಕವಾಗಿಧೆ. ನಮ್ಮ ಸಮಾಜದಲ್ಲಿ ಪ್ರಕೃತಕಾಲೋಚಿತವಾಗಿ ಇಂಗ್ಲೀಷ ಭಾಷಾ ನೈಪುಣ್ಯವು ಬೆಳೆಯುವ ಉ ದ್ದೇಶದಿಂದ ಕೈ॥ ರಾವಬಹಾದ್ದೂರ ಗಿಲಗಂಜಿ ಗುರುಸಿದ್ಧಪ್ಪಣ್ಣನವರು ಸಾಂಪ್ರತಕಾಲ ದಲ್ಲಿ ನಮ್ಮ ಸಮಾಜದ ಉನ್ನತಿಯ ಅಭಿಮಾನದ ಆಕೃತಿವಿಶೇಷರಾಗಿ ಶೋಭಿಸುವ ರಾವಬ ಹಾದ್ದೂರ ಅರಟಾಳ ರುದ್ರಗೌಡರು, ಈ ಮಹಾ ಪುರುಷರ ಪ್ರಯತ್ನ ವಿಶೇಷದಿಂದಲೂ ನಮ್ಮ ಸಮಾಜದಮೇಲೆ ಪರಮ ದಯಾಳುಗಳಾದ ನಾಮದಾರ ಶ್ರೀಮಂತ ಲಖಮನಗೌಡ ಸರದೇಸಾಯಿ ಸಂಸ್ಥಾನ ವಂಟಮುರಿ, ಈ ಪರಮ ಪುರುಷರ ಔದಾರ್ಯ ವಿಶೇಷ ಸೂಚಕ ವಾದ ಸಹಾಯ ಸಂಪತ್ತಿಯಿಂದಲೂ, ಶೇಖರ ಗೂಡಿರುವ ಧನರಾಶಿಯ ಸಹಾಯದಿಂದ ಇಂಗ್ಲೀಷ ಭಾಷೆಯಲ್ಲಿ ಪರಿಣತ ಪಾಂಡಿತ್ಯವನ್ನು ಹೊಂದಿ ದೊಡ್ಡದೊಡ್ಡ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರ ಸಂಖ್ಯೆಯು ಮೆಲ್ಲನೆ ಹಚ್ಚುತ್ತ ಬರಹತ್ತಿದೆ. ಇವರಲ್ಲಿ ಸಂಸ್ಕೃತ ಭಾಷೆಯಲ್ಲಿಯೂ, ಇಂಗ್ಲೀಷು ಭಾಷೆಯಲ್ಲಿಯೂ ಪರಿಣತ ಉತ್ಪತ್ತಿಯನ್ನು ಪಡೆದವರಾದ ಕೆಲ ಮಹನೀಯರು ಸಂಸ್ಕೃತ ಕರ್ನಾಟಕ ಭಾಷೆಗಳಲ್ಲಿ ಬರೆಯಲ್ಪಟ್ಟ ನಮ್ಮ ಮತದ ಶಿದ್ಧಾಂತವನ್ನು ಬೋಧಿಸುವ ಗ್ರಂಥಗಳನ್ನು ಇಂಗ್ಲೀಷು ಭಾಷೆಯಲ್ಲಿ ಭಾಷಾಂತರಿಸಿ ಅವುಗಳಲ್ಲಿ ಕಂಡುಬರುವ ವೀರಶೈವಮತದ ಯಥಾರ್ಥ ತತ್ವಗಳು, ನ್ಯಾಯಪ್ರಿಯರಾದ ಸಾರ್ವಭೌಮ ಸರ್ಕಾರದವರಿಗೆ ಗೋಚರಿಸುವಂತೆಮಾಡಿ, ಅದರ ದ್ವಾರದಿಂದ ನಮ್ಮಸಮಾ ಜಕ್ಕೆ ಪದಗಿರುವ ಅಪಕರ್ಷವನ್ನು ಹೋಗಲಾಡಿಸಿದರೆ ಅವರ ಉಪಕಾರಾತಿಶಯವನ್ನು ಈ ಸಮಾಜಕ್ಕೆ ಶೇರಿದ ನಾವೆಲ್ಲರೂ ಬಹಳವಾಗಿ ಮನ್ನಿಸುತ್ತೇವೆ ಇದುಅಲ್ಲದೆ ಸಂಸ್ಕೃತ, ಕರ್ನಾಟಕ, ಭಾಷೆಗಳಲ್ಲಿರುವ ಮತಶಿದ್ಧಾಂತ ಗ್ರಂಥಗಳಿಗೆ ಇಂಗ್ಲೀಷು ಭಾಷೆಯಲ್ಲಿ ಭಾ ಷಾಂತರ ಟಿಪ್ಪಣಿ ಮುಂತಾದವುಗಳನ್ನು ಬರೆದು, ಕಾಲೇಜ ಮುಂತಾದ ವಿದ್ಯಾಲಯಗಳಲ್ಲಿ ಅಭ್ಯಾಸಕ್ಕಾಗಿ ಇಡಲು ತಕ್ಕವುಗಳನ್ನಾಗಿ ಮಾಡಿದರೆ ನಮ್ಮ ಮತದ ಶ್ರೇಷ್ಠ ತತ್ವಗಳು, ಪರಸಮಯಿಗಳಿಗೂ ಗೊತ್ತಾಗಿ ಅದರಿಂದ ನಮ್ಮ ಮತದ ಮೇಲೆ ಹೀನತೆಯನ್ನು ಆರೋ

ಪಿಸಲು ಹವಣಿಸುವ ದುರಾಗ್ರಹಿಗಳ ಕುತೂಹಲಕ್ಕೆ ಪ್ರತಿಬಂಧವಾದರೂ ಉಂಟಾಗುತ್ತ ಆಸುವದರಿಂದ ಸೆವ್ಮುಸಮಾಜದಲ್ಲಿ ಉಭಯ ಭಾಷಾಪ್ರವೀಣರಾದವರು ಈ ಕಾರ್ಯದಲ್ಲಿ ಸ್ಸನ್ನಿಡುವದಕ್ಕಾಗಿ ಆ ಮಹನೀಯರನ್ನು ಕುರಿತು, ನನ್ನ ವಿನಯಪೂರ್ವಕವಾದ ಸೂ ಅದೆ. ಈ ಸೂಚನೆಯನ್ನು ಅಂಗೀಕರಿಸಿದ ಮಹನೀಯರ ಪ್ರಯತ್ನಕ್ಕೆ ಅನುಗುಣ ಫಲವನ್ನೀಯುವದಕ್ಕೂ ಈ ವಿಷಯವನ್ನು ಮಹಾಸಭೆಯಲ್ಲಿ ಚರ್ಚಿಸುವದಕ್ಕಾಗಿ ಟಿಸಿದ ಬಳ್ಳಾರಿ ನಿವಾಸಿಗಳಾದ ವೀರಶೈವ ಮಹಾಜನರ ಸದುದ್ದೇಶದ ಹಿತವು, ನಮ್ಮ ಮಾಜಕ್ಕೆ ಅತಿತ್ವರೆಯಿಂದ ದೊರೆಯಲು ಕರುಣಿಸುವದಕ್ಕೂ ಪರಾತ್ಪರನಾದ ಪಾರ್ವತಿ ಯನ್ನು ಭಕ್ತಿಭಾವದಿಂದ ಪ್ರಾರ್ಥಿಸಿ, ತನ್ನಾಮೋಚ್ಚಾರಣ ಪೂರ್ವಕವಾಗಿ ಜಯ ಘೋಷಿಸಿ ಈ ಭಾಷಣವನ್ನು ಮುಗಿಸುತ್ತೇನೆ. ... ...

( ಕೈಚಪ್ಪಾಳೆ. )

ಅಯ್ಯಪ್ಪಶಾಸ್ತ್ರಿ ಜಗತಿ ಮಠದ ಸಾ॥ ಗದಗ.

---

## ಇದೇ ವಿಷಯವನ್ನು ಅನುಮೋದಿಸುತ್ತಾ ಡಿ॥ ಯೆ॥ ಬಸವರಾಧ್ಯರು ಮಾಡಿದ ಭಾಷಣವು.

ಈ ವೀರಶೈವ ಮಹಾ ಪರಿಷತ್ತಿನಲ್ಲಿ ನೆರೆದಿರುವ ವೈದಿಕ, ಲೌಕಿಕ, ಪ ಶೆಯರೇ ? ॥ ನವೀರಶೈವಸದೃಶಂಮತಮಸ್ತಿ ಜಗತ್ರಯೇ । ಸರ್ವಭೋಗಪ್ರದಂಪುಣ್ಯಂ ಸಾಯುಜ್ಯದಾಯಕಂ ॥ ಅಂದರೆ:—ವೀರಶೈವ ಮತಕ್ಕೆ ಸಮಾನವಾದ ಮತವು ತ್ರಿಭು ದಲ್ಲಿಯೂ ಇಲ್ಲ. ಇಹಲೋಕದಲ್ಲಿ ಸಮಸ್ತ ಭೋಗಗಳನ್ನು, ದೇಹಾಂತದಲ್ಲಿ ಶಿವಸಾ ಜ್ಯ ಪದವಿಯನ್ನೂ ಕೊಡುವುದು. ಹೀಗೆಂಬ ಶಿವಾಗಮ ಪ್ರಮಾಣಾನುಸಾರವಾಗಿ ಸ ಶಾಸ್ತ್ರೋಕ್ತ ಸಿದ್ಧಾಂತಸಾರವಾಗಿಯೂ, ಶಿವಜೀವೈಕ್ಯ ಬೋಧಕವಾದ ಗೂಢತತ್ವ ಕೂಡಿ ಆಚಾರ, ಜ್ಞಾನ, ಗುಣ, ನೀತಿ, ಧರ್ಮ, ಮತೋತ್ಕೃಷ್ಟತೆ, ಅಷ್ಟಾವರಣ, ಪ ಚಾರ ಈ ಮುಂತಾದವುಗಳ ನ್ನೊಳಗೊಂಡು ಏಕೋತ್ತರ ಶತಸ್ಥಲವಾಗಿ ವಿಭಾಗಿಸಲ್ಪ ಸರ್ವಮಾನ್ಯ ವಿಷಯಗಳಿಂದ ಕೂಡಿ, ಸರ್ವೋತ್ಕೃಷ್ಟವಾಗಿರುವ ಈ ವೀರಶೈವ ಸಿದ್ಧಾ ವೆಂಬ ವೈದಿಕ ವಿದ್ಯೆಯು, ಮುಕ್ತಿಸಾಧನವಾಗಿರುವುದು ಮಾತ್ರವಲ್ಲದೆ ಐಹಿಕ, ಸು

ಪಾದಕವಾದ ಸದಾಚಾರ ಸಂಪತ್ತಿಗೂ ಉಪಯೋಗಿ ಯಾಗಿರುವುದರಿಂದ ಅವುಗಳ ಪ್ರಚಾರ ಕ್ಕೆ ಅನುಕೂಲವನ್ನು ಕಲ್ಪಿಸುವುದು. ಮತ್ತೂ ಪ್ರಕೃತಕಾಲೋಚಿತವಾದ ರಾಜಕೀಯ ಭಾಷೆಯಲ್ಲಿ ಅದು ಪರಿವರ್ತಿಸಲ್ಪಡದೆ ಇರುವುದರಿಂದ ಅದರ ಪ್ರಾಶಸ್ತ್ಯವು ಹೊರಬೀಳದೆ ಗುಪ್ತವಾಗಿದೆ. ಆದ್ದರಿಂದ ಅದ್ವೈತಮತ ಸಿದ್ಧಾಂತದಂತೆ ಸಂಸ್ಕೃತ, ಕರ್ನಾಟಕಾದಿ ಭಾಷಾಮಯವಾಗಿರುವ ಸಿದ್ಧಾಂತ ಶಿಖಾಮಣಿ ಮುಂತಾದ ಈ ಮತಸಿದ್ಧಾಂತ ಗ್ರಂಥಗಳನ್ನು ಆಂಗ್ಲೇಯ ಭಾಷೆಯಲ್ಲಿ ಪರಿವರ್ತಿಸಲ್ಪಟ್ಟದ್ದಾದರೆ ದೇಶಾನ್ಯದೇಶಗಳಲ್ಲಿ ಪ್ರಸರಿಸಿ ಆಂಗ್ಲೇಯಭಾಷಾ ಪರಿಣತರಾದ ಸ್ವಮತಪರಮತೀಯರೂ, ಯೂರೋಪ್, ಅಮೇರಿಕಾ, ಮುಂತಾದ ಪರದೇಶೀಯರು ಸಹ ಅವಲೋಕಿಸುವದರ ಮೂಲಕ ಈ ಮತದ ಸಿದ್ಧಾಂತೋತ್ಕೃಷ್ಟತೆಯು ವ್ಯಕ್ತವಾಗಿ ಈ ಮತದಲ್ಲಿ ಪೂಜ್ಯಬುದ್ಧಿಯು ಅಂಕುರಿಸಿ, ಗೌರವ ಲಭ್ಯವಾಗುವದರಲ್ಲಿ ಸಂಶಯವಿರುವುದಿಲ್ಲ. ಆದ್ದರಿಂದ ಸಂಸ್ಕೃತಾಂಗ್ಲೇಯ ಕರ್ನಾಟಕ ಭಾಷಾವಿಶಾರದರು ಈ ವಿಷಯದಲ್ಲಿ ಗಮನವಿತ್ತು ಈ ಮತದ ಸಿದ್ಧಾಂತವನ್ನು ರಾಜಕೀಯ ಭಾಷೆಯಲ್ಲಿ ಪರಿವರ್ತಿಸಿ, ಇತೋಽಪ್ಯತಿಶಯವಾದ ಗೌರವವನ್ನು ದೇಶಾನ್ಯ ದೇಶಗಳಲ್ಲಿ ವ್ಯಾಪಕವಾಗುವ ಫಲಕ್ಕೆ ಭಾಗಿಗಳಾಗಲೆಂದು ಹಾರೈಸಿ, ಈ ಉಪನ್ಯಾಸವನ್ನು ವಿರಮಿಸುತ್ತೇನೆ.

( ಕೈಚಪ್ಪಾಳೆ. )

ಡಿ. ಎ. ಬಸವರಾಧ್ಯ.

---

೩ನೇ—ವಿಷಯ ಆಗ್ರಹದಿಂದುಂಟಾದ ಸಮಯ ಭೇದಗಳನ್ನು ತಪ್ಪಿಸಿ, ನಿರಂಜನ (ವಿರಕ್ತ) ಸ್ವಾಮಿಗಳಲ್ಲಿ ಏಕರೂಪತೆ ಯುಂಟಾಗುವಂತೆ ಪ್ರೋತ್ಸಾಹಿಸತಕ್ಕದ್ದು.

## ಈ ವಿಷಯದಮೇಲೆ ರಾ॥ ರಾ॥ ಶಿರಹಟ್ಟಿ ಚನ್ನಬಸಪ್ಪ ಹುಬ್ಬಳ್ಳಿ, ಇವರಿಂದ ಮಾಡಲ್ಪಟ್ಟ ಭಾಷಣವು.

ಕಾಲೇ ಮನಃ ಕಾಲೇ ಪ್ರಾಣಃ ಕಾಲೇ ನಾಮ ಸಮಾಹಿತಮ್
ಕಾಲೇನ ಸರ್ವಾನಂದ್ನ್ಯಾಗತೇನಪ್ರಜಾ ಇಮಾಃ॥೭॥ ಅಥರ್ವ।ಕಾಂ೧೯।೬।೫೩॥
ಯಥಾಹಾನ್ಯನು ಪೂರ್ವಂ ಭವನ್ತಿ ಯಥಾಋತವಋತುಭಿರ್ಯನ್ತಿ ಸಾಧು ॥
ಯಥಾ ನ ಪೂರ್ವಮಪರೋ ಜಹಾತ್ಯೇವಾ ಧಾತರಾಯೂಂಷಿ ಕಲ್ಪಯೈಷಾಮ್ ॥
ಋ. ೭।೬।೨೬।

## ಪೂಜ್ಯರೇ? ಸಭ್ಯಗೃಹಸ್ಥರೇ!

ಕಾಲ (ಸಮಯ) ಭೇದವನ್ನು ಕುರಿತು ವೇದಗಳು ಉಪದೇಶಮಾಡುವುದನ್ನು ಮೊದಲು ವಿಚಾರಮಾಡಿ ನೋಡೋಣ;—ಮನುಷ್ಯನ ಮನ, ಪ್ರಾಣ, ಕೀರ್ತಿ ಮುಂತಾದುವುಗಳಿಗೆ ಸಮಯವು ಸಂಬಂಧಿಸಿರುವುದರಿಂದ ಯೋಗ್ಯ ಸಮಯದಲ್ಲಿ ಸರ್ವರೂ ತಮ್ಮ ಕಾರ್ಯಗಳನ್ನು ಮಾಡಬೇಕು. ಸಮಯವನ್ನು ದ್ವೇಷಾಸೂಯೆ, ಮತ್ಸರ, ಪಕ್ಷಭೇದ ಇವುಗಳಲ್ಲಿ ಅಪವ್ಯಯ ಮಾಡಿದರೆ ತನ್ನ ಮನ, ಪ್ರಾಣ, ಮತ್ತು ಕೀರ್ತಿ, ಇವುಗಳನ್ನು ಹಾನಿ ಮಾಡಿದಂತೆ ಆಗುತ್ತದೆ. ನಮ್ಮಲ್ಲಿ ಆಗಿಹೋದ ಅನೇಕ ಷಟ್‌ಸ್ಥಲ ಬ್ರಹ್ಮಜ್ಞಾನಿಗಳೂ, ಶ್ರೀ ಬಸವಾದಿ ಪ್ರಮಥರೂ, ಈಗ ನಮ್ಮ ಅಭ್ಯುದಯದ ದೆಶೆಯಿಂದ ಪೂಜ್ಯರುಳು ಅವಿಶ್ರಾಂತ ಶ್ರಮಪಡುತ್ತಲಿರುವ ಶ್ರೀ ನಿರಂಜನ ಪೂಜ್ಯಪಾದರೂ ಕೂಡ ಪಕ್ಷಭೇದದಲ್ಲಿ ಸಮಯವನ್ನು ಅಪವ್ಯಯ ಮಾಡಿರಲಿಲ್ಲ. ... ...

ಸೂರ್ಯಚಂದ್ರಾದಿ ಗ್ರಹಗಳ ಉದಯಾಸ್ತಮಾನಗಳ ಕಡೆಗೂ ವೃಕ್ಷಾದಿಗಳ ಫಲಪುಷ್ಪಗಳಾಗುವುದರ ಕಡೆಗೂ ನೋಡಿದರೆ, ಸೃಷ್ಟಿಯೊಳಗಿನ ಸರ್ವಕೆಲಸಗಳೂ ಸಮಯಾನುಸಾರವಾಗಿ ಆಗುತ್ತಿದ್ದು, ಸಮಸ್ತರಿಗೂ ಹಿತಕರವಾಗಿಯೂ, ಸುಖಕರವಾಗಿಯೂ ಇರುತ್ತವೆಂಬುದು ತಿಳಿದುಬರುವುದು. ಸಮಯದ ಅಪವ್ಯಯವು ಸೃಷ್ಟಿನಿಯಮದಲ್ಲಿ ಲೇಶಮಾತ್ರವೂ ಕಂಡುಬರುವುದಿಲ್ಲ. ದಿವಾರಾತ್ರಿಗಳು ಬಂದರಹಿಂದೊಂದು ಕ್ರಮವಾಗಿಯೂ ಸೃಷ್ಟಿಯೊಳಗಿನ ಸರ್ವ ಕಾರ್ಯಗಳೂ ನಿಯಮಿತವಾಗಿಯೂ, ತಂತಮ್ಮ ಯೋಗ್ಯಸಮಯದಲ್ಲಿ ಆಗುತ್ತಲಿವೆ. ಆದರೆ, ಈಗಿನ ನಮ್ಮ ನಿರಂಜನಪಾದ ಪೂಜ್ಯರ ಸಮಯವಾದರೋ ವ್ಯರ್ಥವಾಗಿ ಹೋಗುತ್ತಲಿದೆ. ಅದರಸಂಗಡವೇ ನಾವೂ ಹೋಗಬೇಕಾದ ಸಂಭವವು ಪ್ರಾಪ್ತವಾಗಿದೆ. ಹಾಗೆಯೇ ಪರಿಭಾವಿಸಿ ನೋಡಿದಲ್ಲಿ, ಪ್ರಕೃತಸಮಯವು ಎಂತಹ ಮಹತ್ವವಾದುದಾಗಿರುವುದು? ಹೀಗಿರುವಲ್ಲಿ ಇಂತಹ ಅಮೌಲ್ಯ ಸಮಯವನ್ನು ವ್ಯರ್ಥವಾಗಿ ಪಕ್ಷಭೇದ, ದ್ವೇಷಾಸೂಯೆಗಳಲ್ಲಿ ಕಳೆಯುವುದು ಮೂರ್ಖತನವಲ್ಲವೇ? ಐಹಿಕ ಮತ್ತು ಪಾರಮಾರ್ಥಿಕ ಕಾರ್ಯಗಳನ್ನು ಆದಷ್ಟು ತೀವ್ರಮಾಡಿ ಮುಗಿಸಲಿಕ್ಕೇಬೇಕು. ಇದಕ್ಕೆ ಪ್ರತಿಯಾಗಿ, ಮುಂದೆ ಮಾಡಲಿಕ್ಕೆ ಸಮಯಬಂದೀತು ನೋಡೋಣ? ಪೂರ್ವದಿಂದ ನಡೆಯುತ್ತ ಬಂದಿರುವ ಸಮಯದಿಂದುಂಟಾದ ಪಕ್ಷಭೇದವನ್ನು ಹೇಗೆ ಬಿಡೋಣ? ಎಂದು ಸಮಯವನ್ನು ಅಪವ್ಯಯಮಾಡಬಾರದು. ಏಕೆಂದರೆ; ಮೃತ್ಯು ಸಮಯವು ಯಾವಾಗ ಬರುತ್ತದೆಂಬುವುದು ನಿಯಮವಿಲ್ಲ: ಮತ್ತು ಅದನ್ನು ಯಾರೂತಿಳಿದವರಿಲ್ಲ. ರೋಗಪ್ರಾಪ್ತವಾದನಂತರ ಔಷಧ ಶೋಧನೆಮಾಡುವುದೂ, ಮನೆಗೆ ಬೆಂಕಿ ಹತ್ತಿದನಂತರ ಭಾವಿ ತೋಡಿಸುವುದೂ, ವಿಚಾರಶೂನ್ಯರ ಕೆಲಸವು. ಆದರೆ ಸತ್ಯವನ್ನೇ ಹಿಂಬಾಲಿಸಿ ಸಮಯಗಳ ಅಪವ್ಯಯವನ್ನು ಮಾಡದೆ ಮುಂಚಿತವಾಗಿಯೇ ಯೋಗ್ಯ ವ್ಯವಸ್ಥೆ ಮಾಡುವುದು ಹಿತಕರವು.

ದುದಲ್ಲವೆ! ನಿರಂಜನ ಪಾದಪೂಜ್ಯರೇ ಆಗಲಿ, ಅವರ ಭಕ್ತರೇ ಆಗಲಿ, ಸಮಯದ ನಿಜವಾದ ಅರ್ಥವನ್ನರಿಯದೆ, ಯಾವ ಸಮಯದಲ್ಲಿ ಯಾವ ಕೆಲಸವನ್ನು ಮಾಡಬೇಕಾಗಿದೆಯೋ ಆ ಸಮಯದಲ್ಲಿ ಆ ಕೆಲಸವನ್ನು ಮಾಡದೆ ಇದ್ದು; ಆ ಕೆಲಸದ ಸಮಯವು ಬೀದಾವೃತ್ತಿ ದುರುಪಯೋಗದಲ್ಲಿ ವ್ಯಯವಾಗಿ ಹೋದಲ್ಲಿ, ಪುನಃ ಅಂತಹ ಸಮಯವು ಬರಲರಿಯದು. ಮತ್ತು ಆ ಸಮಯದಲ್ಲಿ ಸತ್ಕೃತ್ಯವು ಆಗಿರ್ದರೆ ನಮಗೆ ಯಾವ ಸುಖಲಾಭಗಳು ಉಂಟಾಗುತಿರ್ದುವೋ ಅವು ಆಗಿನಂತೆ ಈಗಲೂ ಆಗಲಾರವು. ನಮ್ಮ ಸಮಾಜವೆಂಬ ಮನೆಯು, ಸಮಯಭೇದ ಇದರಿಂದುಂಟಾದ ಪಕ್ಷಭೇದಗಳೆಂಬ ಗುಪ್ತಬೆಂಕಿಯಿಂದ ಸುಡಲ್ಪಡುತ್ತಿರುವುದನ್ನು ನಿರಂಜನ ಪಾದಪೂಜ್ಯರೂ ಅವರವರ ಅನುಯಾಯಿಗಳೂ ನೋಡುತಿರ್ದರೂ, ಸುಮ್ಮನೆ ಇರುವರಲ್ಲಾ ! ಶಿವ? ಶಿವಾ !! ನಮ್ಮ ಸಮಾಜವೆಂಬ ಮನೆಯು, ಸಮಯಭೇದವೆಂಬ ಮಹಾಜ್ವಾಲೆಯಿಂದ ಸುಡಲ್ಪಟ್ಟು ಭಸ್ಮವಾದನಂತರ ಐಕ್ಯವೆಂಬ ಭಾವಿಯನ್ನು ತೆಗೆಸಲು ಯತ್ನಿಸುವುದು ಯಾವ ಸಮಯವೊ, ಯಾವ ಸದಾಚಾರವೊ, ಯಾವ ಧರ್ಮವೊ, ನಾನರಿಯೆನು. ಯೋಗ್ಯಸಮಯದಲ್ಲಿ ಬೀಜವನ್ನು ಬಿತ್ತದೆಹೋದರೆ ಫಲಭರಿತವಾದ ಬೆಳೆಯಾಗುವುದಿಲ್ಲ. ಉನ್ನತಸ್ಥಿತಿಗೆ ಬರಲು ಅನುಕೂಲವಾದ ಇಂತಹ ಸಮಯದಲ್ಲಿಯೂ, ಅಪವ್ಯಯಮಾಡಿದರೆ, ನಾವು ಯಾವ ಉನ್ನತಿಯನ್ನು ತಾನೆ ಹೊಂದುವೆವು? ನಮ್ಮ ಆಯುಷ್ಯವು ಕ್ಷಣಿಕವಾದುದಾಗಿಯೂ. ಪ್ರತಿ ಕ್ಷಣದಲ್ಲಿಯೂ ಕಡಮೆಯಾಗುವುದಾಗಿಯೂ ಇರುವುದು. ಹೀಗಿರುವಲ್ಲಿ ಸಕಾಲ ಲಭ್ಯವಾದ ಸಮಯವನ್ನು ಉಪಯುಕ್ತಮಾಡದೆ ಇರುವಿಕೆಯು, ಮೂರ್ಖತನದಿಂದ ಬಾಳುವಿಕೆ ಎಂದರ್ಥವು. ಮತ್ತು ಸುಳ್ಳು ಜೊಳ್ಳು ಪೊಳ್ಳು ಸಮಯವನ್ನಿಟ್ಟುಕೊಂಡು, ಪಂಚಮುದ್ರೆಗಳನ್ನು ಧರಿಸಿಕೊಂಡು ಅನೇಕಕಡೆಗೆ ಸಂಚಾರಮಾಡಿ, ಭಕ್ತರಿಂದ ಸಂಭಾವನೆ ಪಾದಪೂಜಾರ್ಚನೆಗಳನ್ನು ಹೊಂದುವರೇ ಹೊರತು ಭಕ್ತರ ವಿದ್ಯಾಭಿವೃದ್ಧಿಗೂ, ಸದಾಚಾರಕ್ಕೂ, ಸರ್ವರ ಅಭ್ಯುದಯಕ್ಕೂ, ಲೇಶಮಾತ್ರವೂ ಯತ್ನಿಸುವುದಿಲ್ಲ. ವೇದ ಆಗಮ ಮತ್ತು ಸತ್ಯಶಾಸ್ತ್ರಗಳಿಗೆ ವಿರುದ್ಧವಾದ ಸಮಯಭೇದವನ್ನು ವಹಿಸಿ, ಅದನ್ನೇ ತಮ್ಮ ಭಕ್ತರಲ್ಲಿ ಬಿತ್ತಿದುದರಿಂದಲ್ಲವೆ, ಚೆಲ್ಲಾಳ ಸಮಯವನ್ನು ವಹಿಸಿದ ಭಕ್ತರಿಗೂ, ಕುಮಾರ ಸಮಯವನ್ನು ವಹಿಸಿದ ಭಕ್ತರಿಗೂ, ಪರಸ್ಪರ ಶರೀರ ಸಂಬಂಧವೂ ಸಹ ತಪ್ಪಿಹೋಗಿರುವುದು. ಆ ಪರಶಿವನ ಸಮತೆ ಎಂಬ ಕಂಥೆಯನ್ನೂ ಕ್ಷಮೆಯೆಂಬ ಭಸ್ಮವನ್ನೂ, ವೈರಾಗ್ಯವೆಂಬ ಭಿಕ್ಷಾಪಾತ್ರೆಯನ್ನೂ ಸಹ ಧರಿಸಿ, ಸದಾಚಾರ ಸಂಪನ್ನರಾಗಿ ಭಕ್ತರ ಅಭ್ಯುದಯದ ಚಿಂತನೆಯನ್ನು ಮಾಡದೆ, ಅದಕ್ಕೆ ಪ್ರತಿಯಾಗಿ ಆನೆ ಬಂಟೆಗಳಮೇಲೆ ನೌಬತ್ತು ನಗಾರಿಗಳನ್ನು ಹೊಡೆಸುತ್ತ ಬಹುಪರಾಕ್ ಎಂದು ಹೊಗಳಿಸಿಕೊಳ್ಳುತ್ತ ಸಂಚರಿಸುವುದು ಯಾವ ಸಮಯವೊ? ಇದಕ್ಕೆ ಯಾವ ಆಧಾರ ಉಂಟೋ! ಎಂಬುವುದನ್ನು ಅವರೇ ಅಪ್ಪಣೆಕೊಡಿಸಲಿ. ಸಮಯವನ್ನರಿತವರೇ ಸುಶೀಲರೂ, ಜ್ಞಾನವಂತರೂ, ಸದಾಚಾರಿಗಳೂ, ಪರೋಪಕಾರಿಗಳೂ, ಉದಾರರೂ, ದಯಾಪರರೂ, ವಿದ್ವಾ

ನರೂ, ಬುದ್ಧಿವಂತರೂ, ಪರಮಪೂಜ್ಯರೂ ಆಗುವರೇ ಹೊರತು ಅನ್ಯರಲ್ಲವು. *

ನಮ್ಮ ಪೂರ್ವದ ನಿರಂಜನ ಪಾದಪೂಜ್ಯರು, ಭಕ್ತರಿಗೆ ಸದ್ವಿದ್ಯಾತ್ಪೈಕ್ಷಣ್ಯವನ್ನು ಕೊಟ್ಟು, ನೀತಿ ನಿಪುಣೋದ್ಯೋಗಶೀಲರನ್ನಾಗಿ ಮಾಡಿ, ಅವರನ್ನು ಶಾಸ್ತ್ರಮರ್ಯಾದೆಯಲ್ಲಿಯೂ, ದೇಶಮರ್ಯಾದೆಯಲ್ಲಿಯೂ, ಸ್ವಾತ್ಮಮರ್ಯಾದೆಯಲ್ಲಿಯೂ ರಾಜಮರ್ಯಾದೆಯಲ್ಲಿಯೂ ಭೂತಮರ್ಯಾದೆಯಲ್ಲಿಯೂ ನಿರತರನ್ನಾಗಿ ಮಾಡಿ ಅವರುಗಳೀಸರ್ವ ಮರ್ಯಾದೆಗಳನಿಯಮಗಳನ್ನು ಪರಿಪಾಲನೆ ಮಾಡಿಕೊಂಡು ಸುಖಿಗಳಾಗಿರಬೇಕೆಂಬ ಸದಿಚ್ಛೆಯಿಂದಲೂ, ನಿರ್ವಂಚನೆಯಿಂದಲೂ, ನಿರ್ಮಲಾಂತಃಕರಣದಿಂದಲೂ ಕೂಡಿ, ತಾವೆಲ್ಲರೂ ಒತ್ತಟ್ಟಗೇ ಇದ್ದರೆ, ಸಮುಯದಲ್ಲಿನ ಕರ್ತವ್ಯಸಾಧನೆಗೆ ಬಲಿಯು ಸಾಲದೆಂದು ಪರಿಯಾಲೋಚಿಸಿ;— ನಾಲ್ವರು ನಾಲ್ಕುದಿಕ್ಕುಗಳಲ್ಲಿ ಬೇರೆಬೇರೆ ಮಠಗಳನ್ನು ಸ್ಥಾಪಿಸಿ, ಅಲ್ಲಲ್ಲಿ ವಿಶ್ವವಿದ್ಯಾಲಯಗಳನ್ನಿಟ್ಟುಕೊಂಡು ಮೇಲೆಹೇಳಿದ ಸದ್ವಿದ್ಯಾಮರ್ಯಾದೆಗಳ ಶಿಕ್ಷಣವನ್ನು ಪ್ರಸಾರಮಾಡುವುದಕ್ಕೆ ಸಮಯವಿಭಾಗವನ್ನು ಮಾಡಿಕೊಂಡಿರ್ದರೇ ಹೊರತು, ಈಗ ಕಂಡುಬರುವ ಸಮಯ ಭೇದ ಪಕ್ಷಭೇದಗಳನ್ನು ಮಾಡಿರಲಿಲ್ಲ. ಅವರೇ ಮಾಡಿದರೆಂದು ಹೇಳುವುದಾದರೆ;—

ಸತ್ಯಮೇವೇಶ್ವರೋ ಲೋಕೇ ಸತ್ಯೇ ಧರ್ಮಃ ಸದಾಶ್ರಿತಃ ॥
ಸತ್ಯಮೂಲಾನಿ ಸರ್ವಾಣಿ ಸತ್ಯಾನ್ನಾಸ್ತಿ ಪರಂಪದಮ್ ॥೧೩॥

ವಾ॥ರಾ॥ ಅಯೋಧ್ಯಾ॥೧೦೯॥

“ ಜಗತ್ತಿನಲ್ಲಿ ಸತ್ಯವೇ ಈಶ್ವರನು, ಸತ್ಯದ ಆಧಾರದಿಂದಲೇ ಧರ್ಮವಿರುತ್ತದೆ ಸಮಸ್ತ ಪದಾರ್ಥಗಳೂ ಸತ್ಯಮೂಲಕವಿರುತ್ತವೆ. ಸತ್ಯದ ಹೊರತು ಇನ್ನಾವುದೂ ಪರಮ ಪದವಿಲ್ಲವು. ” ‘ಅರ್ಥಾತ್ ಸತ್ಯದ ಆಶ್ರಯದಿಂದಲೇ ಪ್ರಕೃತಿ ಧರ್ಮ ಮತ್ತು ಮೋಕ್ಷಗಳಿರುತ್ತವೆ. , ಅಂದಮೇಲೆ, ನಮ್ಮನಿರಂಜನ ಪಾದಪೂಜ್ಯರು “ಸಮಯಭೇದವನ್ನು” ಯಾವಸತ್ಯದ ಆಧಾರದಿಂದ ಇಟ್ಟುಕೊಂಡಿರ ಬಹುದೆಂಬುವುದನ್ನು ವಿಚಾರಮಾಡಿ ನೋಡೋಣ:— ... ... ... ... *

ನಮ್ಮ ನಿರಂಜನ ಪೂಜ್ಯಪಾದರಲ್ಲಿ ಈಗ ಕಂಡುಬರುವ ಸಮಯಭೇದವು, ವೀರಶೈವ ಮತದ ಗುರುವರ್ಗದೊಳಗಿನ ನಿರಾಭಾರಾಶ್ರಮದ ಮತ್ತು ನಮ್ಮೆಲ್ಲರ ಒಡಕಿಗೆ ಹೇತುವಾದ ದುರಭಿಮಾನದ ಮುದ್ದೆಯಾಗಿ, ಇದು ಬಲವಾಗಿ ಊರಲ್ಪಟ್ಟಂದಿನಿಂದುಂಟಾದ ಅನಾಹುತವನ್ನು ಹೇಳತೀರದು. ಆ ಶಬ್ದದ ಮೂಲಾರ್ಥವನ್ನು ವಿಚಾರಮಾಡಿ ನೋಡಿದರೆ “ ॥ ಸಮಯಾಃ ಶಪಥಾಚಾರ ಕಾಲಸಿದ್ಧಾಂತಸಂವಿದಃ ॥ ,, ಶಪಥವೆಂತಲೂ, ಆಚಾರವೆಂತಲೂ, ಕಾಲವೆಂತಲೂ, ಸಿದ್ಧಾಂತವೆಂತಲೂ, ಸಂವಿತ್ ಎಂತಲೂ ಬಹು ಅರ್ಥಗಳುಳ್ಳ

ದಾಗಿದೆ. ಶಪಥವೆಂದರೆ—ಹಟದಿಂದ ಮಾಡಿಕೊಂಡ ಕಟ್ಟು, ಇದರಿಂದ ಸಮಯಭೇದವಾಯಿತೆಂದರೆ, ಶಿವಧರ್ಮಾಭಿಮಾನದಿಂದಲೋ ಶರೀರಾಭಿಮಾನದಿಂದಲೋ ವಿಚಾರಮಾಡೋಣ.

೧. ಶಿವಧರ್ಮಾಭಿಮಾನದ ಹಟದಿಂದ ಮಾಡಿಕೊಂಡ ಕಟ್ಟೆಂದು ಭಾವಿಸಿದರೆ, ನಿರಾಭಾರಾಶ್ರಮದ ಒಂದು ವ್ಯಕ್ತಿಯಲ್ಲಿ ತೋರಿದ ಈ ಶಪಥವು, ಸಮಾನಾಶ್ರಮದ ಎಲ್ಲ ವ್ಯಕ್ತಿಗಳಲ್ಲಿಯೂ ಏಕರೂಪವಾಗಿ ತೋರಲೇಬೇಕು. ಅದೇಕೆಂದರೆ-ಧರ್ಮವು ಒಂದೇ ಇರುವುದರಿಂದ ಏಕಧರ್ಮಭಾಗಿಗಳು ಭೇದವನ್ನು ಕಲ್ಪಿಸಲು ಮಾರ್ಗವೆಲ್ಲಿಯದು ? ಏಕೆಂದರೆ.

ನವೈ ಭಿನ್ನಾ ಜಾತು ಚರನ್ತಿ ಧರ್ಮಂ ನವೈ ಸುಖಂ ಪ್ರಾಪ್ನುವನ್ತೀಹಭಿನ್ನಾಃ॥
ನವೈಭಿನ್ನಾ ಗೌರವಂಪ್ರಾಪ್ನುವನ್ತಿ ನವೈಭಿನ್ನಾಃ ಪ್ರಶಮಂ ರೋಚಯನ್ತೆ॥೫೬॥
ಭಾರತ ಉ॥ ಅ॥ ॥೩೬॥

"ಸಮಯಭೇದ ಪಕ್ಷಭೇದ ಮುಂತಾದ ಮಾತ್ಸರ್ಯದೋಷಗಳು ಯಾರಲ್ಲಿ ಉಂಟೋ ಅವರಿಂದ ಧರ್ಮಕಾರ್ಯಗಳು ಆಗುವುದೂ ಇಲ್ಲ; ಅವರಿಗೆ ಸುಖವು ಸಿಕ್ಕುವುದೂ ಇಲ್ಲ ಅವರಿಗೆ ಗೌರವವು ಲಭಿಸುವುದೂ ಇಲ್ಲ; ಮತ್ತು ಇದರಿಂದ ಅವರಿಗೆ ಶಾಂತಿಯೂ ಸಹ ಸಿಕ್ಕುವುದಿಲ್ಲ." ಧರ್ಮವಿಷಯಕ ಐಕ್ಯ, ಭಾಷೆಗಳ ಐಕ್ಯ, ಆಚಾರಗಳ ಐಕ್ಯ, ಸಮಯಗಳ ಐಕ್ಯ, ಸುಖದುಃಖವಿಷಯಗಳಲ್ಲಿ ಐಕ್ಯ, ಸಮಾಜಹಿತಕಾರ್ಯಗಳಲ್ಲಿ ಐಕ್ಯ ಈ ಸಕಲವಿಧವಾದ ಐಕ್ಯವೇ ವೀರಶೈವ ಧರ್ಮದ ಮುಖ್ಯತತ್ವವು. ಉಪಭೋಗಯೋಗ್ಯವಾದ ಒಂದು ಗೃಹವು ಉಪಭೋಗಿಗಳೆಲ್ಲರಿಂದಲೂ ಸಮಾನಾಭಿಮಾನದೊಡನೆ ಹೇಗೆ ರಕ್ಷಿತವಾಗಿರುವದೋ ಅದರಂತೆ, ಏಕಧರ್ಮಾಶ್ರಿತರಲ್ಲಿ ಧರ್ಮವು ಪರಸ್ಪರ ಭಿನ್ನಭಿನ್ನವಾಗಿ ತೋರಲಾರದು. *

೨. ಶರೀರಾಭಿಮಾನದಿಂದ ಸಮಯಭೇದವೆಂದರೆ—ನಿರುಪಾಧಿಕವಾದ ನಿರಂಜನ ಪೂಜ್ಯಪಾದರಿಗೆ ಸಮಯಭೇದವು ದೇಹಾಭಿಮಾನದಿಂದುದ್ಭವಿಸಿತೆಂದು ಹೇಳಲು ಅವಕಾಶವಿಲ್ಲ. ಏಕೆಂದರೆ;—ಸಂಗರಹಿತವಾಗಿಯೂ, ಭಾರಶೂನ್ಯವಾಗಿಯೂ, ದೇಹಾಭಿಮಾನರಹಿತವಾಗಿಯೂ, ಉಪಾಧಿರಹಿತವಾಗಿಯೂ, ಪ್ರಮಾಣಶೂನ್ಯವಾಗಿಯೂ, ನಿರ್ಮಲವಾಗಿಯೂ, ಅಖಂಡವಾಗಿರುವುದರಿಂದ ರೂಪವಿಲ್ಲದೆಯೂ ಇರುವ ಜಂಗಮಸ್ಥಲದಲ್ಲಿ ಅಭಿಮಾನವನ್ನು ಹುಡುಕಲುಂಟೇ ? ಇಲ್ಲ ! ಇಲ್ಲ ?? ಅಂದಮೇಲೆ, ಶಪಥದಿಂದಲೂ ಕೂಡ ಸಮಯಭೇದ ಉಂಟಾಯಿತೆಂದು ಹೇಳುವ ಬಗೆ ಹೇಗೆ ! ... ... *

೩. ಆಚಾರದಿಂದ ಸಮಯಭೇದವೆಂದರೆ; — ಜಂಗಮಸ್ಥಲಕ್ಕೆ ಆಚಾರಭೇದವು ಯಾವ ಆಧಾರದಿಂದಲೂ ತೋರದು. ಉಂಟೆಂದು ಹೇಳಿದರೆ, ಜಂಗಮಸ್ಥಲವು ಎರಡೆಂದು ಹೇಳಬೇಕಾಗುವುದು. ಮತ್ತದಕ್ಕೆ ನಾನಾಮದ್ವಯವು ಇದ್ದೇ ತೀರಬೇಕಾದೀತು. ಇದು

ಅತ್ಯಂತ ನಿರಾಕೃತವಾದ್ದರಿಂದ ಆಚಾರದಿಂದಲೂ ಸಮಯಭೇದವನ್ನು ಹೇಳಲಿಕ್ಕೆ ಬರುವಂತೆ ಇಲ್ಲ. ... ... ... ... *

೪. ಕಾಲದಿಂದ ಸಮಯ ಭೇದವಾಯಿತೆಂದರೆ;—ಕಾಲಗಳೆಂದರೆ ಭೂತಭವಿಷ್ಯದ್ವರ್ತಮಾನಕಾಲಗಳೋ, ಸುಭಿಕ್ಷದುರ್ಭಿಕ್ಷಕಾಲಗಳೋ, ಪ್ರಾತಃ ಸಾಯನ್ನ ಮಧ್ಯಕಾಲಗಳೋ, ಭಕ್ತರ ಐಕ್ಯಭಂಗವಂ ಮಾಡಿ ಅವರನ್ನು ಅಧಃ ಪತಿತರನ್ನಾಗಿ ಮಾಡಿದ ಮಹಾಪ್ರಳಯಕಾಲವೋ, ಯಾವುದೂ ತಿಳಿಯದು. ತ್ರಿಗುಣರಹಿತವಾದ ಮತ್ತು ಕಾಲಾತೀತವಾದ ಸನ್ಮಾರ್ಗದಲ್ಲಿ ಸಂಚರಿಸುವ ಶಿವೈಕ್ಯರಿಗೆ ಸುಖದುಃಖಗಳು ಎಲ್ಲಕಾಲಗಳಲ್ಲಿಯೂ ಸಮಾನವಾಗಿರುವುದರಿಂದ ಕಾಲದಿಂದಲೂ ಸಮಯಭೇದವನ್ನು ಹೇಳಲಿಕ್ಕೆ ಬರುವಂತೆ ಇಲ್ಲ.

೫. ಸಿದ್ಧಾಂತದಿಂದ ಸಮಯ ಭೇದವೆಂದರೆ;—ಮತಸಿದ್ಧಾಂತವು ಮೇಲೆಹೇಳಿದ ಕಾರಣಗಳಿಂದ ಭಿನ್ನವಾಗದ್ದರಿಂದ ಅದರಿಂದಲೂ ಸಮಯಭೇದವು ತೋರದು. *

೬. ಜ್ಞಾನದಿಂದ ಸಮಯ ಭೇದವೆಂದರೆ;—ಒಪ್ಪಿಗೆಯಾಗಲಾರದು ಜ್ಞಾನವಂತನು ಭೇದದಿಂದ ಭಯವುಂಟೆಂಬ ಅರ್ಥವುಳ್ಳ "ಭೇದಾದ್ವೈ ಭಯಂ ಭವತಿ" ಎಂಬ ಪ್ರಮಾಣಕ್ಕೆ ವಿರುದ್ಧನಾಗಲಾರನು. ಜ್ಞಾನದಲ್ಲಿ ಭಿನ್ನತ್ವ ಇದ್ದರೆ ಜ್ಞೇಯವಾದ ವಸ್ತುವೂ ಭಿನ್ನವಾಗಿ ನಿತ್ಯಸುಖವೂ ದೊರೆಯದೆ, ದುಃಖಕ್ಕೀಡಾಗಬೇಕಾದೀತು. ಶಕ್ತಿವಿಶಿಷ್ಟಾದ್ವೈತಕ್ಕೆ ಹಾನಿದಾಯಕವಾದ್ದರಿಂದ ಜ್ಞಾನದಿಂದ ಸಮಯ ಭೇದವನ್ನು ಕಲ್ಪಿಸುವುದೂ ಅಸಂಭವವು.

೭. ವಿಚಾರ ದೃಷ್ಟಿಯಿಂದ ನೋಡಿದರೆ, ನಿರಾಭಾರಾಶ್ರಮದವರೆಲ್ಲರೂ ಸಮಯಭೇದವನ್ನೊಪ್ಪಿಲ್ಲ. ಹೀಗಿರುವಲ್ಲಿ ಅದರೊಳಗಿನ ಕೆಲವರು ಮಾತ್ರ ಸದ್ವಿದ್ಯಾಭಾವ ಮತ್ತು ವಿಚಾರಗಳಿಲ್ಲದುದರಿಂದ, ಅಸ್ಥಿರವಾದ ಭೇದಭಾವನೆಯನ್ನು ದೃಢವಾಗಿ ಒಪ್ಪಿ, ಅದರಂತಾಚರಿಸುತ್ತಿರುವ ಸಂಶಯದಿಂದಲೂ, ಪ್ರತ್ಯಕ್ಷಾನುಭವದಿಂದಲೂ, ಸಮಯ ಭೇದವು ದುರಾಗ್ರಹದಿಂದಮಾತ್ರವೆ ಉಂಟಾಗಿದೆ ಎಂದು ಹೇಳಲು ಯಾವ ಸಂದೇಹವೂ ಇಲ್ಲ. ಮತ್ತಿದು ತೂರ್ಯವೀರ ವ್ರತಸ್ಥರಿಗೆಂದಿಗೂ ಸಲ್ಲದು. ಏಕಂದರೆ:— ... *

ನಕ್ರೋಧಂ ನಚಮಾತ್ಸರ್ಯಂ ನವೈಷಮ್ಯಂ ನವೇದನಂ
ನ ಬಹಿಃ ಕುರತೇಂತಸ್ಥಂ ಪ್ರಾಣೇಷುಚ್ಛಾವಚೇಷ್ವಪಿ ॥ಪಾ।ಆ॥

"ನಿರಾಭಾರಾಶ್ರಮಿಗಳು, ಹೊಟ್ಟೆಕಿಚ್ಚು ವೈಷಮ್ಯ ಪರಪೀಡಾಚಾರಾದಿ ಮುಂತಾದುವುಗಳನ್ನು ಪ್ರಾಣೋತ್ಕ್ರಮಣ ಕಾಲದಲ್ಲಿಯೂ ಮಾಡಬಾರದು." ಇತ್ಯಾದಿಪ್ರಮಾಣಗಳಿಂದ, ಕಾಮಾದಿ ಅರಿಷಡ್ವರ್ಗಾಭೇದ್ಯವಾದ ಜಂಗಮಸ್ಥಲದಲ್ಲಿ ನೂತನವಾಗಿ ದ್ವೇಷಾ

ಸಮಯಗಳಿಂದ ಭೇದವನ್ನು ಕಲ್ಪಿಸಿ, ಒಬ್ಬರ ಅಷ್ಟಾವರಣಗಳೇ ಮತ್ತೊಬ್ಬರವಾಗಿದ್ದರೂ ಅದರಲ್ಲಿ ಲಕ್ಷ್ಯವಿಲ್ಲದೆ ಪರಸ್ಪರ ನಮಸ್ಕಾರವಂ ಮಾಡದಿರುವಿಕೆ ಏಕತ್ರಕೂಡದಿರುವಿಕೆ, ಶಿವಾಚಾರವನ್ನತಿಕ್ರಮಿಸಿ ಒಂದೇ ಸ್ಥಾನದಲ್ಲಿ ಮಧ್ಯದೋಳ್ ಪರದೆಯನ್ನು ಹಾಕಿಕೊಂಡು ಒಬ್ಬರಪಾದವನ್ನೊಬ್ಬರು ನೋಡುತಿರ್ದರೂ, ಒಬ್ಬರ ಕ್ರಿಯೆಯನ್ನು ಮತ್ತೊಬ್ಬರು ಈಕ್ಷಿಸುತಿರ್ದರೂ, ಕ್ರಿಯಾಕ್ಷೇಪವನ್ನು ಮಾಡಬಾರದೆಂದು ತಿಳದಿರ್ದರೂ, ಧಿಕ್ಕರಿಸಿ ಪ್ರತ್ಯೇಕ ಕ್ರಿಯೆಗಳನ್ನಾಚರಿಸುವಿಕೆ, ದರ್ಶನಾದಿಗಳಿಗವಕಾಶವಂ ಕೊಡದಿರುವಿಕೆ, ಇವೇ ಮುಂತಾದ ಅಪಸವ್ಯವರ್ತನೆಕ್ಕೆ ಮನಗೊಟ್ಟು, ತಮ್ಮಲ್ಲಿ ಒಬ್ಬರುಬಂದರೂ ಅವರಲ್ಲಿ ತಾವು ಹೋಗಬಾರದೆಂಬ ಹಟವನ್ನು ಹುಂದುಮಾಡಿ ಆಚರಿಸುತ್ತಿರುವುದನ್ನು ನೋಡಿದರೆ ನಿರಂಜನ ಪದಕ್ಕೆ ಯುಕ್ತವಲ್ಲದ ಈ ದುರಭಿಮಾನಗಳನ್ನು ಯಾರು ತಾನೇ ಹಾಸ್ಯಮಾಡದೇ ಇರುವರು ! ... ... ... *

ಜಂಗಮೋಜಂಗಮಂ ದೃಷ್ಟ್ವಾ ನಪ್ರಣಾಮಂಕರೋತಿಯಃ ॥
ಸಏವಜಂಗಮದ್ರೋಹೀ ಮದ್ದ್ರೋಹೀಚನಸಂಶಯಃ ॥

"ಯಾವ ಜಂಗಮನು ಅನ್ಯಜಂಗಮನನ್ನು ನೋಡಿ ನಮಸ್ಕಾರವನ್ನು ಮಾಡುವುದಿಲ್ಲವೋ ಆತನೇ ಜಂಗಮದ್ರೋಹಿಯು, ಮತ್ತು ನನ್ನ ದ್ರೋಹಿಯೂ ಆಹುದು ಈ ವಿಷಯದಲ್ಲಿ ಸಂಶಯವಿಲ್ಲ." ಎಂದು ಪರಶಿವನು ಗಿರಿಜೆಯನ್ನು ಕುರಿತು ಬೋಧಿಸಿದಕಾರಣ ಜಂಗಮರಲ್ಲಿ ಪರಸ್ಪರ ಭೇದವು ಇಲ್ಲವೆಂತಲೂ, ಸದ್ಯಃಅನೇಕರಲ್ಲಿ ತೋರುವ ಭೇದಭಾವನೆಯು ಕೆಲವು ದಿವಸಗಳಿಂದಿತ್ತ ಉದ್ಭವಿಸಿದ ದುರಾಗ್ರಹದ ಮೂಲವೆಂತಲೂ ಸಿದ್ಧವಾಗುತ್ತದೆ. ಹೀಗಿರುವಲ್ಲಿ ನಾಲ್ಕು ಸಮಯಗಳೆಂದು ಹೇಳುವ ಪಕ್ಷಕ್ಕೆ ಈ ಜಂಗಮಸ್ಥಲದಲ್ಲಿನ ಬೇರೆಬೇರೆ ಸಮಯದವರು ತಂತಮ್ಮೊಳಗಿನವರಲ್ಲಿಯೇ ಸಮಯಭೇದಕ್ಕೆ ಒಪ್ಪದೆ, ಭೇದ ಉಳ್ಳವರನ್ನೂ ಪ್ರೀತಿಸದೆ, ಪರಸ್ಪರ ಸಂಧಿಸಿ ಏಕಕಾಲದಲ್ಲಿಯೇ ಪೂಜನವಂದನಾದಿಗಳನ್ನು ಸ್ವೀಕರಿಸಿ, ಅನ್ಯೋನ್ಯ ಮೈತ್ರಿಯಿಂದ ವರ್ತಿಸುತ್ತಬಂದಿರುವುದು ಕೆಲವು ಮಠದ ಪೂಜ್ಯಪಾದರ ಪರಂಪರೆಯಿಂದ ತಿಳಿದುಬರುತ್ತದೆ. ಹೀಗಿರುವಲ್ಲಿ ಸಮಯಭೇದವು ಎಷ್ಟರಮಟ್ಟಿಗೆ ನಂಬಲರ್ಹವಾದುದೆಂಬುದನ್ನು ತಾವೇ ಊಹಿಸತಕ್ಕುದು. ಇದೂಅಲ್ಲದೆ ಸಮಯಭೇದಗಳು ಎಷ್ಟೋದಿವಸಗಳಿಂದ ಇರುತ್ತಿರ್ದರೂ ಪ್ರತ್ಯೇಕಪ್ರತ್ಯೇಕ ಸಮಯವನ್ನು ಹೊಂದಿರ್ದರೂ, ಅನೇಕ ಮಹಾತ್ಮರು ಮಹಿಮೆಯಿಂದ ಮೆರೆದುಹೋಗಿರುವರು; ಮತ್ತು ಮೆರೆಯುತ್ತಲೂ ಇರುವರು. ಆದರೆ;—ಒಂದುಗ್ರಾಮದಲ್ಲಿ ದುಷ್ಟರು ಸ್ವಜನರೊಡನೆ ಕಲಹವಂಗೈದು ಪಂಗಡಗಳನ್ನು ಮಾಡಿಕೊಂಡಿರಲು ತತ್ಕಾಲದಲ್ಲಿ ಇದ್ದ ಮತ್ತು ಉತ್ತರೋತ್ತರ ಸಂಜನಿಸಿ ಪ್ರಸಿದ್ಧಿಪಡೆದಿದ್ದ ಸತ್ಪುರುಷರು, ಜನಗಳು ಒಂದೊಂದು ಗುಂಪಿನೊಳಗೆ ಸೇರಿಕೊಂಡಿರ್ದರೂ, ಪಂಗಡಗಳ ತತ್ವವನ್ನರಿತು, ತದ್ವಿರುದ್ಧವಾದಾಚರ

ಣೆಯಿಂದುಂಟಾದ ಜುಗುಪ್ಸೆಯಿಂದದನ್ನವರು ಮರೆಯುವ ಉಪಾಯವನ್ನು ಕುರಿತು ಪ್ರ
ತ್ನಗೈಯುವಂತೆ, ಎಷ್ಟೋಜನ ಪೂಜ್ಯಪಾದರು ಅಶಾಸ್ತ್ರೀಯವೂ ಸ್ವಮತ ಸಿದ್ಧಾಂತ
ಶವೂ ಆದ ಸಮಯಭೇದವನ್ನು ಮುರಿಯಬೇಕೆಂದು ಸಭೆಗೂಡಿಸಲೆತ್ನಿಸಿದ್ದರೆಂಬುವುದು
ಅದ್ಯಾಪಿ ಬಹುಮಠಗಳಲ್ಲಿಕಾಣುವ ಪತ್ರಗಳಮೇಲಿನಿಂದ ಸ್ಪಷ್ಟವಾಗುತ್ತದೆ. ಹಾಗಿರ್ದ
ಈ ಸಮಯಭೇದವು ಅಪ್ರಶಸ್ತವೆಂದೂ ದುಸ್ಥಿತಿಯ ಮೂಲಸ್ಥಾನವೆಂದೂ ಕೆಲವರ
ಕ್ಕೆ ಗೊತ್ತಾಗಿರ್ದರೂ ಪರಿಪಕ್ವಕಾಲವು ದೊರಿಯದೆ ಈವರೆಗೂ ತಿಕ್ಕುತ್ತಬಂದಿರುವ
ಅಪರೆ ಪೂರ್ವದಿಂದಲೂ ಸಮಯಭೇದವನ್ನು ಇಟ್ಟುಕೊಳ್ಳದೆ ಇರತಕ್ಕವರೂ, ಮಧ್ಯ
ವಿಚಾರದಿಂದ ತ್ಯಜಿಸಿದವರೂ, ಈಗಿನಕಾಲದಲ್ಲಿ ಅದನ್ನು ಅತಿನಿಂದ್ಯವೆಂದು ತಿಳಿಯತಕ್ಕ
ವರೂ ಕೂಡ ಎಲ್ಲೆಲ್ಲಿಯೂ ಇರುವರು. “ಅಪ್ಪಹಾಕಿದ ಆಲದಮರವೆಂದು ನೇಣುಹಾ
ಕೊಳ್ಳುವುದಕ್ಕೆ ಯಾರೂ ಬಪ್ಪರು. ... ... ...

ತಮ್ಮ ಪೂರ್ವಜರು ಆಚರಣೆಯಲ್ಲಿಟ್ಟುಕೊಂಡಿರ್ದ ಸಮಯಭೇದವನ್ನು ಈ
ಬಿಡಬೇಕೆಂದು ಸಂಶಯಗೊಳ್ಳುವದು ಅನರ್ಥಕ್ಕೆಕಾರಣವಾಗಿದೆ. ಜಂಗಮವು ಒಂದೇವ
ವಾಗಿರುವುದರಿಂದ ಪರಸ್ಪರರು ಮಾಡುವ ಸಮಯಭೇದವು ಆತ್ಮಹತ್ಯಾದೋಷಕ್ಕೆಸಮ
ವಾಗಿ, ತತ್ಸಂಬಂಧವಾದ ದುಷ್ಫಲವನ್ನುಂಬುವುದಕ್ಕೆ ಗುರಿಮಾಡದೆಬಿಡದು. ಸಮಯಭೇ
ದವು ಪರಿಗ್ರಾಹ್ಯವಲ್ಲೆಂಬುವುದಕ್ಕೆ ಷಟ್ಸ್ಥಲ ಬ್ರಹ್ಮಿಗಳಾದ ಬಾಲಲೀಲಾಮಹಂತಚರ
ಗವರು ತಮ್ಮ ಅಮೃತವಾಣಿಯಿಂದ ಅಪ್ಪಣೆಕೊಡಿಸಿರುವುದೇನೆಂಪರೆ; — “ಮೂ
ಸಮಯಗಳಲ್ಲಿ ನಾವು ಶಿವಸಮಯದವರಿರುತ್ತೇವೆ. ಮೂರು ಸಮಯದವರೂ ಪರ
ನನ್ನು ಭಜಿಸುತ್ತಿರುವರಷ್ಟೆ; ಮೂರುಸಮಯಗಳೆಂಬ ಲತೆಗೆ ಬೇರು ಒಂದೇ ಇರ್ಪ
ಆ ಬೇರನ್ನು ಹಿಡಿದುಕೊಂಡೇ ನಾವು ಪರಶಿವನನ್ನು ಕಂಡೆವು. ಮೂರು ಲಿಂಗದ ಮ
ಸಾರವೆಲ್ಲವೂ ಒಂದೇ ಇದ್ದು ಏಕಸಾಕ್ಷಿತಾರಕವಾದಮೇಲೆ ಭೇದವೆತ್ತಣದು? ಸಮ
ಗಳು ಮಹಂತಲಿಂಗನ ಅಂಗಲಿಂಗರೂಪಗಳಾಗಿ ಅಡಗಿದವು. ಗಂಗೆ ಸರಸ್ವತಿ ಯಮುನೆಗ
ಸಂಗಮಕ್ಷೇತ್ರದಲ್ಲಿ ಅಡಗಿದಂತೆ, ಬಹು ಸಮಯಗಳೆಂಬ ನದಿಗಳು ಶಿವಸಮಯವೆಂಬ
ಮುದ್ರದಲ್ಲಿ ಅಡಗಿ ಸಮರಸವಾದುವು. ಐದು ಮಂತ್ರಗಳೂ ಮೂಲಪ್ರಣವದಲ್ಲಿ ಐಕ್ಯ
ಹೇಗೆ ಶೋಭಿಸುತ್ತಿವೆಯೋ, ಅದರಂತೆ ಪರಿಪರಿಯ ಅಂಗಗಳೂ, ಪರಿಪರಿಯ ಲಿಂಗಗಳ
ಮಹಂತಲಿಂಗದಲ್ಲಿ ಅಡಗಿದುವು. ಮೂರು ಸಮಯಗಳು ಅಂಗಗಳಾಗಿಯೂ, ಮೂರು ಸ್
ಮಿಗಳು ಲಿಂಗಗಳಾಗಿಯೂ, ತೋರಿದುವು. ಇನ್ನುಮೇಲೆ ಸಮಯಗಳೆಂಬ ಕಿರಣಗ
ಮಹಂತಲಿಂಗನೆಂಬ ಸೂರ್ಯನೊಳ ಅಡಗಿದವೆಂತಲೂ ಹಾಡಿಕೊಂಡಿರುತ್ತಾರೆ.” ಇ
ರಿಂದ ನಿರಾಭಾರಾಶ್ರಮಿಗಳಲ್ಲಿ ಸಮಯಭೇದವೆಂಬುವುದು ದುರಿತಹೇತುವೆಂದು ಸ್ಪಷ್ಟ
ಗುತ್ತಿರ್ದರೂ, ಸಮಾನಾಶ್ರಮಿಗಳಲ್ಲಿ ನಾನು ಮೂಲ!! ನಾನು ಮೂಲ??? ವೆಂದು ಗ

ಒಳಗೊಟ್ಟವರನ್ನೂ, ಅವರವರಲ್ಲಿಯ ಪರಸ್ಪರ ದ್ವೇಷಾಸೂಯೆಯನ್ನೂ ನೋಡಿದರೆ, ಇವರು ಸ್ವಾರ್ಥದ ಈ ತತ್ವದ ಕೀಲನರಿಯದ ಮುಗ್ಧರೆಂದು ಎಂಥವರಿಗಾದರೂ ತಿಳಿಯದೇ ಹೋಗದು. ಚರಸ್ಥಲವೇ ಮೂಲವಾಗಿರುವಲ್ಲಿ, ಅದರೊಳಗೆ ಮೂಲವನ್ನು ಹುಡುಕುವುದು ಶಿವಾನುಭವಶಾಸ್ತ್ರಕ್ಕೂ ಪುರಾತನ ಚರಪುಂಗವರ ಆಚರಣೆಗೂ ವಿರುದ್ಧವಾಗಿ ಇಂಥವರೆಲ್ಲರೂ ದುರಭಿಮಾನಕ್ಕೆ, ಭಕ್ತರ ಹೀನಸ್ಥಿತಿಗೆ, ಸಮಾಜಹಿತದ ವಿಘಾತಕ್ಕೆ, ಧರ್ಮನಾಶಕ್ಕೆ, ದೇಶದ್ರೋಹಕ್ಕೆ, ಮೂಲಕಾರಣರೆಂದು ಹೇಳಲು ಈಗಿನ ಅವರ ಸಮಯಭೇದವೇ ಸಾಕಾದ ದೃಷ್ಟಾಂತವಾಗಿದೆ. ಹೇಗೆಂದರೆ;— ... ... ... *

ಈ ನಮ್ಮ ಸಮಾಜವೇ ಒಂದು ಶರೀರವೆಂದು ಊಹಿಸೋಣ:— ಇಲ್ಲಿ ಆತ್ಮನು ನಿರಂಜನ ಪೂಜ್ಯಪಾದ ಜಂಗಮವು, ಪಂಚಪ್ರಾಣಗಳೇ ಪಂಚಾಚಾರ್ಯರು; ಪಂಚೇಂದ್ರಿಯಗಳೇ ತಂತಮ್ಮ ಹದ್ದಿನೊಳಗಿನ ಭಕ್ತರ ಧರ್ಮಶ್ರದ್ಧೆಯನ್ನು ವೃದ್ಧಿಪಡಿಸುವುದಲ್ಲದೆ ಆಗಿಂದಾಗ್ಯೆ ಇದ್ದ ಸ್ಥಿತಿಯನ್ನು ಮೇಲಿನ ಅಧಿಕಾರಿಗಳಿಗೆ ಯಥಾವತ್ ತಿಳಿಸುವಂಥ ಹಿರೇಮಠದ ಪಟ್ಟದಚರಮೂರ್ತಿಗಳು, ಪಂಚಭೂತಜವಾದ ಶರೀರದೊಳಗಿನ ಇತರಸರ್ವಾವಯವಗಳೇ ಭಕ್ತಗಣಸಮೂಹವು. ಈ ಪ್ರಕಾರವಾಗಿ ನಮ್ಮೆಲ್ಲರಿಗೂ ಏಕವಾದ ಶರೀರವು. ಹೇಗೆ ಶಾಂತತೆಯಿಂದಲೂ, ಐಕ್ಯದಿಂದಲೂ, ಪರಸ್ಪರ ಪ್ರೇಮದಿಂದಲೂ, ನಡೆದು ಬಂದಿರುತ್ತದೆಂಬುವುದನ್ನು ಯಾರು ಚನ್ನಾಗಿಬಲ್ಲರೋ, ಅವರೇ ಸಮಾಜದ ಸುವ್ಯವಸ್ಥೆಯನ್ನೂ ಧರ್ಮೋನ್ನತಿಯನ್ನೂ ಮಾಡುವುದಕ್ಕೆ ಸಮರ್ಥರಾಗುತ್ತಾರೆ. ಇದನ್ನು ಚನ್ನಾಗಿ ಅರಿತವರಾಗಿದ್ದ ನಮ್ಮ ಪೂರ್ವದ ನಿರಂಜನ ಮಹಾಪ್ರಭುಗಳೂ, ಪಂಚಾಚಾರ್ಯರೂ ಸಹ ಭಕ್ತರ ವಿದ್ಯಾಭಿವೃದ್ಧಿಗೂ, ಧರ್ಮಶ್ರದ್ಧೆಗೂ, ಸಮಾಜೋನ್ನತಿಗೂ, ಸರ್ವರ ಅಭ್ಯುದಯಕ್ಕೂ ಸಹ ತಮ್ಮಲ್ಲಿನ ಪರಸ್ಪರ ಪ್ರೇಮದಿಂದಲೂ, ಕಳಕಳಿಯಿಂದಲೂ, ಆಸಕ್ತತೆಯಿಂದಲೂ ಕೂಡಿ, ತಂತಮ್ಮ ಸ್ವಾತ್ಮೋನ್ನತಿಯ ಕಡೆಗೆ ಗಮನವಿಟ್ಟು ಈಗಿನ ನಮ್ಮ ನಿರಂಜನ ಪಾದಪೂಜ್ಯರಲ್ಲಿಯೂ ಮತ್ತು ಪಂಚಾಚಾರ್ಯರಲ್ಲಿಯೂ ಕಂಡುಬರುವಂಥ ಸರ್ವ ರಾಜಭೋಗಗಳಲ್ಲಿಯೂ ವಿರಕ್ತಿಯನ್ನು ಹೊಂದಿ, ಶಿವಧ್ಯಾನಯೋಗದಲ್ಲಿ ಕೂಡಿ ಸಮರಸವನ್ನು ಹೊಂದುವುದಕ್ಕೆ ಪೂಜಾಸಮಯ ವಿಭಾಗಗಳನ್ನು ಮಾಡಿಕೊಂಡಿರ್ದರೇ ಹೊರತು ಅನ್ಯಥಾ ಭೇದವಿರಲಿಲ್ಲವೆಂಬುದು ಐತಿಹಾಸಿಕ ಪ್ರಸಿದ್ಧವಾದ ಮಾತಾಗಿದೆ. ಈ ಗುಟ್ಟನ್ನರಿಯದೆ ರೂಢಿಯಲ್ಲಿ ಇಟ್ಟುಕೊಂಡಿರುವ ಈಗಿನ ಸಮಯಭೇದದಿಂದ ನಮ್ಮ ಸಮಾಜದೊಳಗಿನ ಸುವ್ಯವಸ್ಥೆಯು ಅಧಃಪತನವನ್ನು ಹೊಂದಿದೆ. ಹೇಗೆ ಶರೀರದಲ್ಲಿ ಆತ್ಮನೂ ಪ್ರಾಣೇಂದ್ರಿಯಗಳೂ ಇತರ ಸರ್ವ ಅವಯವಗಳೂ ಕೂಡ, ಪರಸ್ಪರ ದ್ವೇಷಾಸೂಯೆಗಳಿಂದ ಐಕ್ಯವಿಲ್ಲದೆ ತಂತಮ್ಮ ಕರ್ತವ್ಯಗಳಿಂದ ಪರಾಙ್ಮುಖವಾಗಿ ಸ್ಪರ್ಧೆಮಾಡಲುಪಕ್ರಮಿಸಿದರೆ ಶರೀರವು ಕ್ಷಿಪ್ರದಲ್ಲಿಯೇ ಹೇಗೆ ನಾಶಹೊಂದಿ ಮಣ್ಣುಪಾಲಾಗುವುದೋ ಹಾಗೆ, ಒಂದೇ ಸಮಾಜವೆಯು

ಶರೀರದೊಳಗಿನ ನಿರಂಜನ ಪಾದಪೂಜ್ಯರೂ, ಪಂಚಾಚಾರ್ಯರೂ, ಅವರವರ ಅನುಯಾ
ಗಳೂ, ಭಕ್ತರೂ ಸಹ ಪಕ್ಷಭೇದ ಸಮಯಭೇದಗಳನ್ನು ವಹಿಸಿ ನಡೆಯುತ್ತಿರುವುದರಿಂ
ಲ್ಲವೆ, ನಮ್ಮ ಸಮಾಜವು ದಿನೇದಿನೆ ಅತಿನಿಕೃಷ್ಟಾವಸ್ಥೆಗೆ ಬಂದಿರುವುದುಮಾತ್ರವೇ ಅಲ್ಲ
ಇಂತಹ ಅನುಕೂಲವಾದ ಪ್ರಕೃತಕಾಲದಲ್ಲಿಯೂ ಸಹ ಅಭ್ಯುದಯದ ಮಾರ್ಗವನ್ನ ನ
ರಿಸಲವಕಾಶವಿಲ್ಲದಂತಾಗಿರುವುದು ? ಇದು ಹೀಗೆಯೇ ಇನ್ನು ಕೆಲವುದಿವಸಗಳು ನಡೆ
ತ್ತಹೋದರೆ, ನಮ್ಮ ಸಮಾಜದ ಸ್ಥಿತಿಯು ಇನ್ನೆಷ್ಟು ಶೋಚನೀಯವಾದುದಾಗುವು
ಬುವುದನ್ನು ನೀವೇ ಊಹಿಸಿರಿ ! ... ... ...

ಶ್ರೀಮದ್ ಮಹಾನಿರಂಜನಪದ ಸಾರ್ವಭೌಮರಾದ ಬಾಲಲೀಲಾಮಹಂತ ಜ
ಪುಂಗವರು ಪುನಃ ಅಪ್ಪಣೆಕೊಡಿಸುವುದೇನೆಂದರೆ;— „ ವಿರಕ್ತರು ಸಮಯಭೇದಗಳನ್ನು
ಏಕೆಮಾಡಿಕೊಂಡಿರುವರು ! ಪರಶಿವನ ಲೀಲಾವಿಗ್ರಹದಲ್ಲಿ ಹಲವು ಭೇದಗಳಿರುವುವೆ !
ಷ್ಟಾವರಣಗಳು ಎಲ್ಲವರಿಗೂ ಸಮಾನವಾಗಿರುತ್ತವಲ್ಲವೆ ? ತಾವು ಅವತರಿಸಿದುದು ಯೇ
ಮಾಡತಕ್ಕ ಕರ್ತವ್ಯವೇನು ? ಹೋಗತಕ್ಕುದೆಲ್ಲಿಗೆ ? ಮತ್ತು ಲಿಂಗದ ಅರ್ಥವನ್ನು ತಿ
ಯುವುದಕ್ಕೆ ಯೋಗ್ಯವಾದ ಮನುಷ್ಯಶರೀರದ ಸುಸಮಯವನ್ನು ಹುಚ್ಚರಂತೆ ದ್ವೇ
ಷಾಯೆಗಳಲ್ಲಿ ಕಳೆದುಕೊಂಡು, ಅನ್ಯಸಮಯವನ್ನು ಹೇಳುವುದು ಉಚಿತವೆ ? ಮಲ
ಶಗಳನ್ನು ಕಿತ್ತು, ಅರಿಷಡ್ವರ್ಗಗಳನ್ನು ಓಡಿಸಿ, ಮಾಯಾವಾಸನೆಯನ್ನು ದೂರಮಾ
ಸಹಸ್ರದಳ ಕಮಲದ ಮಧ್ಯದಲ್ಲಿ ಬೆಳಗುವ ಪರಮಾತ್ಮನೋಳ್ ಕೂಡುವ ಸಮಯವನ್
ಗೊತ್ತುಮಾಡದೆ ಮನಬಂದಂತೆ ಹೇಳಿಕೊಳ್ಳುವ ಸಮಯವೆಂತಹ ಅಜ್ಞಾನವಾಗಿರಬಹು
ಏಕಚಿತ್ತ ಮನೋಭಾವಗಳಿಂದ ಹಮ್ಮು ಬಿಮ್ಮುಗಳನ್ನು ನುಗ್ಗೊತ್ತಿ, ಹರಗಣ ಭಕ್ತ
ಣದ ಸಂಮೇಳನದಿಂದ ಪ್ರಮೋದಿಸುತ್ತ, ಷಟ್‌ಸ್ಥಲ ಬ್ರಹ್ಮಾನಂದದ ರಸವಂ ಸವಿವ ಸ
ಮಯವಂ ಕಳೆದುಕೊಂಡು:—ನಾವು ಕುಮಾರಸಮಯದವರು, ನಾವು ಕೆಂಪಿನ ಸಮ
ದವರು, ಎಂಬ ಅಸಂಬದ್ಧವಾದ ಜೊಳ್ಳು ಪೊಳ್ಳು ಸಮಯಗಳನ್ನು ಹೇಳಿಕೊಳ್ಳುತ್ತಿ
ವುದು ಜಂಗಮಸ್ಥಲಕ್ಕೆ ಹೇಗೆ ಒಪ್ಪಿಗೆಯು ! ಎಂದಿಗೂ ಒಪ್ಪಿಗೆಯಲ್ಲ. ಆದರೆ, ಹಾಲಿನ
ಹಾಲು, ನೀರಿನಲ್ಲಿ ನೀರು, ಅಗ್ನಿಯಲ್ಲಿ ಅಗ್ನಿಯು, ಬೆರೆತು ಏಕವಾದಂತೆ „ ತ್ವಂಪದವು
„ ತತ್‌ಪದದಲ್ಲಿ „ ಕೂಡಿ ಸಮರಸವಾದಮೇಲೆ ಭೇದವೆಂದಿಗೂ ತೋರುವುದಿಲ್ಲ. ಆ
ಪ್ರಯುಕ್ತ, „ ಇಂದ್ರಿಯಗಳನ್ನು ಜಯಿಸುವಿಕೆ, ಮರಣವನ್ನು ಗೆಲ್ಲುವಿಕೆ, ಮರವೆ
ಯೆಗಳನ್ನು ತ್ಯಜಿಸುವಿಕೆ, ವೈರಾಗ್ಯವನ್ನು ಪಿಡಿಯುವಿಕೆ, ಶಿವನೋಳ್ ಕೂಡುವಿಕೆ, ಸ
ರಿಚ್ಛೆಯಂತೆ ನಡೆಯದಿರುವಿಕೆ, ಮುಂತಾದ ಸಮಯಗಳನ್ನು ಬಿಟ್ಟು—ರಾಗದ್ವೇಷ ಸಮ
ಯಗಳನ್ನು ಅವಲಂಬಿಸಬಾರದು. ಅಂಗವೇ ಶಿವಲಿಂಗ, ಲಿಂಗವನೊಳಗೊಂಡ ಕಂಗಳ
ಪ್ರಾಣವು, ಪ್ರಾಣವನೊಳಗೊಂಡ ಭಾವಾಂಗಗಳೆಲ್ಲವೂ ತಾನೇ ತಾನಾದ ಮಂಗಳಶಿವಾ

ದವಲ್ಲಿ ಸಮಯಗಳಿಲ್ಲವು. ನವಚಕ್ರಗಳೊಳಗಿರ್ಪ ನವಲಿಂಗ ಮೂರ್ತಿಗಳ ವಿವರವನ್ನು ತಿಳಿಯುತ್ತ,'ಭವವನ್ನುಗೆದ್ದು, ಶಿವಮಹಾಂತೇಶನೊಳ್ ಸಮನಿಸಿದ ಸಮರಸವೇ ಶಿವಸಮಯವಾಗಿರುವಲ್ಲಿ, ಬೇರೆಸಮಯಗಳನ್ನು ಹೇಳುವುದು ಶಿವೈಕ್ಯರಪಥವೆಂದಿಗೂ ಅಲ್ಲ,, ಎಂತಲೂ ಅಪ್ಪಣೆ ಕೊಡಿಸಿರುತ್ತಾರೆ. ಪ್ರಿಯ ಭ್ರಾತೃಗಣ! ನಿಮಗೆ ಸಿದ್ಧಾಂತ ಮಾಡಿಕೊಳ್ಳುವ ಕುತೂಹಲವಿದ್ದರೆ, ದಯವಿಟ್ಟು ಬಾಲಲೀಲಾ ಮಹಾಂತಚರ ಪುಂಗವರ ಕೈವಲ್ಯ ಪದ್ಧತಿಯನ್ನು ಅವಲೋಕನಮಾಡಿರಿ. ಇಂಥ ಪೂಜ್ಯಪಾದರ ಸದುಕ್ತಿಗಳಿಗೂ ವೇದಾಗಮಗಳ ಆಜ್ಞೆಗಳಿಗೂ ಲಕ್ಷಿಸದೆ, ದ್ವೇಷಜನ್ಯವಾದ ಸಮಯಭೇದವನ್ನು ಗಟ್ಟಿಯಾಗಿ ಹಿಡಿದು ಶಿವೋಕ್ತಿಗಳಿಗೆ ವಿರುದ್ಧವಾಗಿ ಆಚರಿಸುತ್ತಿರುವುದು ಅನ್ಯಾಯವೆಂದು ಎಷ್ಟಾವೃತ್ತಿ ಹೇಳಿದರೂ ತೀರದು. ಇನ್ನಾದರೂ, ಸುಸಂಭವಕಾಲವಾದ ಇಂತಹ ಇಪ್ಪತ್ತನೆಯ ಶತಮಾನದಲ್ಲಿಯೂ ಜಾಡ್ಯಸದೃಶವಾದ ಸಮಯಭೇದದ ಸಂಚಾರಕ್ಕೆ ಅವಕಾಶಕೊಡದೆ ನಿರಾಭಾರಾಶ್ರಮದ ಶ್ರೀಪೂಜ್ಯಪಾದರೆಲ್ಲರೂ ಏಕರೂಪದಿಂದ ವರ್ತಿಸಬೇಕೆಂದು ಅತಿವಿನಯದಿಂದ ಬೇಡಿಕೊಳ್ಳುತ್ತೇನೆ. ಮತ್ತು ನಮ್ಮ ಪೂಜ್ಯಪಾದರ ಐಕ್ಯಸ್ಥಲದ ಗೌರವಕ್ಕೆ ಕಲಂಕವನ್ನುಂಟುಮಾಡಿದ ಸಮಯಭೇದವೆಂಬ ದೋಷಕ್ಕೆ ಭೇದಬುದ್ಧಿಯಿಂದ ಆಶ್ರಯವನ್ನು ಕೊಟ್ಟ ಭಕ್ತವರ್ಗವು, ಇತಃಪರಃ ಸನ್ಮಾರ್ಗೋಪದೇಶಕ್ಕೆ ಕಿವಿಗೊಟ್ಟು ಭೇದಬುದ್ಧಿಯನ್ನು ತ್ಯಜಿಸಿ, ಒಂದೇ ಶಿವಸಮಯದವರಾದ ಪೂಜ್ಯಪಾದರುಗಳ ದರ್ಶನಾಶಿರ್ವಾದಗಳಿಗೂ, ಸರ್ವವ್ಯವಹಾರಕ್ಕೂ ಅಭೇದಭಾವನೆಯಿಂ ಗುರಿಯಾಗಿ, ತಮ್ಮ ಇಷ್ಟ ಮನೋರಥಗಳ ಲಾಭದಿಂದ ಸುಖಿಗಳಾಗಿ ಜೀವಿಸಿ, ಸರ್ವೋನ್ನತಿಗಳನ್ನೂ ಹೊಂದಲೆಂದು ಆ ಪರಶಿವನನ್ನು ಭಜಿಸಿ, ಆತನ ಐಕ್ಯಾನುಗ್ರಹ ಸಮಯವನ್ನೇ ನಿರೀಕ್ಷಿಸುತ್ತೇನೆ. ... *

ಈ ನನ್ನ ಭಾಷಣಕ್ಕೆ ಅನುಜ್ಞೆಯನ್ನಿತ್ತ, ಸಮಯಭೇದವನ್ನಳಿದ ಬಾಲಲೀಲಾ ಮೂರ್ತಿಗಳಾದ ಶ್ರೀಮನ್ಮಹಾ ನಿರಂಜನಪದ ಸಾರ್ವಭೌಮರಾದ ಮುಳುಗುಂದದ ಮಹಂತ ಚರ ಪುಂಗವರ ನಮ್ಮ ಸಮಾಜಹಿತ ವರ್ಧನೆಕಾರ್ಯದಲ್ಲಿ ನಿರ್ವಂಚನೆಯಿಂದ ಹಗಲಿರುಳು ಅವಿಶ್ರಾಂತಶ್ರಮ ಪಡುತ್ತಲಿರುವ ಶ್ರೀಮನ್ಮಹಾ ನಿರಂಜನ ಪದ ಸಾರ್ವಭೌಮರಾದ ಹಾನಗಲ್ಲ ಶ್ರೀ ಕುಮಾರಸ್ವಾಮಿಗಳ ಪಾದ ಸ್ಮರಣೆಯನ್ನು ಮಾಡಿ, ನನ್ನ ಭಾಷಣವನ್ನು ವಿರಮಿಸಿ ನನ್ನಸ್ಥಾನಕ್ಕೆ ತೆರಳುತ್ತೇನೆ. ... ... ... *

( ಕೈಚಪ್ಪಾಳೆ )

ಸಿರಹಟ್ಟಿ ಚನಬಸಪ್ಪ, ಹುಬ್ಬಳ್ಳಿ.

## ಇನ್ನೆ ವಿಷಯದಮೇಲೆ ವೇ॥ ಕಲಿಗಣನಾಥಶರ್ಮ ಇವರು ಮಾಡಿದ ಭಾಷಣವು.

ಅಯ್ಯಾ! ಪರಮಹಂಸ ನಿರಂಜನ ಚರವರ್ಯರೇ? ಮತೋದ್ಧಾರಕರಾದ ಪಟ್ಟಾಧ್ಯಕ್ಷರೇ! ಅಖಿಲ ಗುರುವರ್ಯರೇ! ಸಭಾಧ್ಯಕ್ಷರೇ! ಸಮಸ್ತಪ್ರೇಕ್ಷಕರೇ! ಈ ಆನೇ ಶ್ರೀಮದ್ವೀರಶೈವ ಮಹಾಸಭೆಯಲ್ಲಿ ನಿಯಮಿತಗಳಾದ ವಿಷಯಗಳಲ್ಲಿ ೩ನೆ ವಿಷಯವಾದ ಅಗ್ರಹದಿಂದುಂಟಾದ ಸಮಯ ಭೇದಗಳನ್ನು ತಪ್ಪಿಸಿ, ನಿರಂಜನ (ವಿರಕ್ತ) ಮಹಾಸ್ವಾಮಿಗಳಲ್ಲಿ ಏಕರೂಪತೆಯುಂಟಾಗುವಂತೆ ಪ್ರೋತ್ಸಾಹಿಸತಕ್ಕದ್ದು ಎಂಬ, ವಿಷಯವು ನಿಯಮಿತವಾದದ್ದು ನೋಡಿ ಮನಸ್ಸಿಗೆ ಪರಮಾನಂದವಾಗುತ್ತದೆ? ಯಾಕಂದರೆ—ಇದು ಅತ್ಯುಪಯುಕ್ತವಾದ್ದರಿಂದಲೂ, ನಮ್ಮ ವೀರಶೈವ ಮತಾಭಿವೃದ್ಧಿಗೆ ಮೂಲಕಾರಣವಾದ್ದರಿಂದಲೂ, ಇಂಥಾ ಸಮಯವು ನಮಗೆ ಮುಂದೆ ಎಂದಿಗೂ ದೊರಿಯಲಾರದು. ತಸ್ಮಾತ್ ಈ ವಿಷಯವನ್ನು ಕುರಿತು, ಪ್ರತಿಪಾದನಮಾಡತಕ್ಕ ಶಕ್ತಿಯು ನನ್ನಲ್ಲಿ ಇಲ್ಲದೇ ಇದ್ದಾಗ್ಯೂ, ಶ್ರೀಪರಮಕಾರುಣಿಕನಾದ ಪರಶಿವನ ಪಾದಾಶೀರ್ವಾದವೆಂಬ ಶಕ್ತಿಯು ಉತ್ಪನ್ನವಾದ್ದರಿಂ ತದನುಗುಣವಾಗಿ ಪ್ರತಿಪಾದನ ಮಾಡುವದಕ್ಕೆ ತಮ್ಮಗಳ ಅನುಮೋದನವನ್ನು ಭಕ್ತಿಪೂರ್ವಕವಾಗಿ ಪ್ರಾರ್ಥಿಸಿ, ವಿಷಯವನ್ನು ಆರಂಭಿಸುತ್ತೇನೆ. ... ...

ಸೃಷ್ಟಿಸ್ಥಿತಿ ಲಯಗಳಿಗೆ ಮೂಲಕಾರಣೀಭೂತನಾದ ಪರಶಿವನು ಮತಗಳಲ್ಲಿ ಸರ್ವೋತ್ಕೃಷ್ಟವಾದ ಅನಾದಿ ವೀರಶೈವ ಮತವೆಂಬುದನ್ನು ಸ್ಥಾಪಿಸಿದನು. ಇಂಥಾ ಪೂಜ್ಯವಾದ ಮತದಲ್ಲಿ ಹುಟ್ಟಿದವರೇ ವೀರಶೈವರು. ಈ ವೀರಶೈವ ಶಬ್ದಕ್ಕೆ ಅವರು ಹ್ಯಾಗೆ ವಾಚ್ಯರಾಗುವರೆಂದರೆ ॥ ಶಿವೇಭಕ್ತಿರ್ಯೇಷಾಂತೇ ಶೈವಾಃ ವೀರಾಶ್ಚತೇಶೈವಾಶ್ಚ ವೀರಶೈವಾಃ ಶೈವೇಷುವೀರಾಃ ವೀರಶೈವಾಃ ॥ ಎಂಬ ಉತ್ಪತ್ತಿಯಿಂದ ಸಾಕ್ಷಾತ್ಪರಶಿವನಲ್ಲಿ ॥ಪೂಜ್ಯೇಷ್ವನುರಾಗೋಭಕ್ತಿಃ॥ ಎಂಬ ವಿಗ್ರಹದಿಂದುಂಟಾದ ಅನುರಾಗ ವಿಶೇಷದಿಂದ ಕೂಡಿ ಶಿವನಿಂದಕರ, ಶಿವದ್ವೇಷಿಗಳ ದುಷ್ಟವಾಕ್ಯಗಳನ್ನು ಕೇಳದೇ ಶಿವನೇ ಸರ್ವೋತ್ಕೃಷ್ಟನೆಂಬದಾಗಿ ಯಾರು ಆಚರಿಸುವರೋ ಅವರೇ ಈ ವೀರಶೈವ ಶಬ್ದಕ್ಕೆ ವಾಚ್ಯರಾಗುತ್ತಾರೆ. ಮತ್ತು ವೀಶಬ್ದೇನೋಚ್ಯತವಿದ್ಯಾ ಶಿವಜೀವೈಕ್ಯಬೋಧಿನೀ॥ ತಸ್ಯಾಂರಮಂತೆಯೇಶೈವಾಃ ವೀರಶೈವಾಃಪ್ರಕೀರ್ತಿತಾಃ ॥೧॥ ಎಂಬ ನೀಲಕಂಠ ಶಿವಾಚಾರ್ಯರ ಕಾರಿಕೆಯಮೇಲಿಂದ ಸಮುದ್ರತರಂಗನ್ಯಾಯದಂತೆ ॥ ಯುಷ್ಮದಸ್ಮಚ್ಛಬ್ದಬೋಧ ಜನಕವಾದ ವೇದಾಂತ ವಿದ್ಯೆಯು ವಿಶಬ್ದದಿಂದ ಹೇಳಲ್ಪಡುತ್ತದೆ. ಇಂಥಾ ಭವನಿವಾರಕವಾದ ವೇದಾಂತವಿದ್ಯೆಯಲ್ಲಿ ಯಾರು ವಿಶೇಷವಾಗಿ ರಮಿಸುವರೋ, ಅಂದರೆ ಆಸಕ್ತಿಯುಳ್ಳವರೋ ಅವರೂಕೂಡ ಈ ವೀರಶೈವ ಶಬ್ದಕ್ಕೆ ವಾಚ್ಯರಾಗುತ್ತಾರೆ. ಈ ವೀರಶೈವ ಶಬ್ದವು ಸಾಮಾನ್ಯವೆಂತಲೂ, ವಿಶೇಷವೆಂ

ಲೂ, ನಿರಾಭಾರವೆಂತಲೂ ತ್ರಿವಿಧ ಭೇದವುಳ್ಳದ್ದಾಗಿರುತ್ತದೆ. ಇದರಲ್ಲಿ ಪ್ರಾಥಮಿಕಭೇದ ವಿಶಿಷ್ಟವಾದ ವೀರಶೈವ ಶಬ್ದಕ್ಕೆ ವಾಚ್ಯರಾರೆಂದರೆ;—ಪ್ರಮಾಣವು॥ ಪರಬ್ರಹ್ಮಮುಖೋದ್ಭೂತ ಪಂಚರುತ್ವಿಗ್ಭಿರೇವಚ । ದೀಕ್ಷಾಮಂತ್ರಸಮಾಯುಕ್ತಃ ಗುರುಜಂಗಮಲಿಂಗಕಾನ್। ಶೇವಯಿತ್ವಾಯಥಾಶಕ್ತಿರಯಾಚನಪರೋಭವೇತ್ ॥ ಸ್ವಯಂದಾನಪರೋಯಸ್ತು ಸಾಮಾನ್ಯೋವೀರಶೈವಕಃ ॥ ಇದರ ಅರ್ಥವು — ಜಗದೀಶ್ವರನ ಪಂಚಮುಖದಿಂದ ಉದ್ಭವಿಸಿದ ಮರುಳಾರಾಧ್ಯ, ಏಕೋರಾಮಾರಾಧ್ಯ, ರೇಣುಕಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ, ಎಂಬ ಸುನಾಮಾಂಕಿತರಾದ ಪಂಚರುತ್ವಿಜರಿಂದ ದೀಕ್ಷಾಮಂತ್ರಯುಕ್ತರಾಗಿ ಗುರು ಲಿಂಗ ಜಂಗಮಗಳನ್ನು ಶಕ್ತ್ಯಾನುಸಾರವಾಗಿ ಶೇವಿಸಿ, ಅಯಾಚನಪರರಾಗಿ, ಸ್ವಯಂದಾನಪರರಾದವರೇ ಸಾಮಾನ್ಯ ವೀರಶೈವ ಶಬ್ದಕ್ಕೆ ವಾಚ್ಯರೆಂದು ಹೇಳಲ್ಪಡುತ್ತಾರೆ. ಭಕ್ತಮಾಹೇಶ್ವರಾರಾಧ್ಯಾಭಿಧ ಬ್ರಾಹ್ಮಣಾಲಿಂಗಧಾರಿಣೋ ವಿಶೇಷವೀರಶೈವಾಃ ಇತಿವೀರಶೈವ ಸರ್ವೋತ್ಕರ್ಷಪ್ರದೀಪಿಕಾ ವಚನಾನುಸಾರಾತ್ ಲಿಂಗಧಾರಿಗಳಾದ ಭಕ್ತ ಮಾಹೇಶ್ವರ ಆರಾಧ್ಯ ಎಂಬ ನಾಮ ಸಮೇತರಾದವರೇ ವಿಶೇಷ ವೀರಶೈವ ಶಬ್ದಕ್ಕೆ ವಾಚ್ಯರಾಗುತ್ತಾರೆ. ॥ ಕಂಥಾಕಮಂಡಲುಧರೋ ಭೂತಿರುದ್ರಾಕ್ಷಸಂಯುತಃ ॥ ದಂಡಕೌಪೀನಧಾರೀಚ ನಿರಾಭಾರ ಇತಿಸ್ಮೃತಃ ॥ ಎಂಬ ಸೂಕ್ಷ್ಮತಂತ್ರ ವಚನದಮೇಲಿಂದ ಕಂಥಾಕಮಂಡಲು ಧಾರಿಗಳಾದ ಭಸ್ಮರುದ್ರಾಕ್ಷಗಳಿಂದ ಕೂಡಿದಂಥಾ ಮತ್ತು ದಂಡಕೌಪೀನಗಳನ್ನು ಧರಿಸಿದವರೇ ನಿರಾಭಾರ ವೀರಶೈವಶಬ್ದಕ್ಕೆ ವಾಚ್ಯರಾಗುವರು. ಅತಏವನಿರ್ಗತಃ ಆಭಾರೋಯಸ್ಯಸಃ ನಿರಾಭಾರಃ ಎಂಬ ಉತ್ಪತ್ತಿಯಿಂದುಂಟಾದ ಮಾಯಾಬದ್ಧವಾದ ಪ್ರಪಂಚಕ್ಕೆ ಸಂಬಂಧಪಟ್ಟ ಪುತ್ರದಾರಾದಿ ಪಾಲನಾತ್ಮಕವಾದ ಆಭಾರಶೂನ್ಯತ್ವವೆಂಬರ್ಥವು. ಇವರಲ್ಲಿ ನೈಸರ್ಗಿಕಸಿದ್ಧವಾಗಿರುತ್ತದೆ. ಈ ಮಹಾಶಯರೇ ಅತ್ಯಾಶ್ರಮಿಗಳೆಂತಲೂ ಮತ್ತು ಶೂನ್ಯಸಿಂಹಾಸನಾಧಿಪತಿಗಳಾದ ನಿರಂಜನಸ್ವಾಮಿಗಳೆಂತಲೂ, ವಿರಕ್ತರೆಂತಲೂ, ವ್ಯವಹರಿಸಲ್ಪಡುತ್ತಾರೆ. ಈ ವ್ಯವಹಾರಾತ್ಮಕವಾದ ಅಭಿಧಾನವು ಇವರಲ್ಲಿ ಹ್ಯಾಗೆ ಸಂಭವಿಸುತ್ತದೆಂದರೆ;—ಜ್ಞಾನಮಯಪೀಠಸ್ಥರಾದ್ದರಿಂದಲೂ, ಮತ್ತು ನಿರ್ಗತಃರಂಜನೋಯಸ್ಯಸಃ ನಿರಂಜನಃ ವಿಗತಃರಕ್ತೋಯಸ್ಯಸಃ ವಿರಕ್ತಃ ಎಂಬ ಉತ್ಪತ್ತಿದ್ವಯ ಜನ್ಯವಾದ ವೈಷಿಕಾನು ಶಕ್ತಿರಹಿತರಾದ್ದರಿಂದಲೂ, ಮೇಲೆಹೇಳಿದ ನಾಮಗಳಿಗೆ ಅರ್ಹರಾಗುತ್ತಾರೆ. ಇರಲಿ, ಈ ನಿರಂಜನ ವಿರಕ್ತಮಹಾಸ್ವಾಮಿಗಳಲ್ಲಿ ಉಂಟಾದ ಸಮಯಭೇದಗಳು ವಿಚಾರಮಾಡಿ ನೋಡಿದಲ್ಲಿ ಋಗ್ಯಜುಸ್ಸಾಮಾಥರ್ವಣ ವೇದಗಳಲ್ಲಿಯೂ ಕಾಮಿಕಾದಿವಾತುಲಾಂತಗಳಾದ ಅಷ್ಟಾವಿಂಶತ್ಯಾಗಮಗಳಲ್ಲಿಯೂ ಮತ್ತು ಪುರಾಣೇತಿಹಾಸಗಳಲ್ಲಿಯೂ ಅಪ್ರಸಿದ್ಧವಾಗಿರುತ್ತವೆ. ಇದಲ್ಲದೆ ಅವುಗಳ ಭೇದಗಳಿಗೆ ಕಾರಣೀಭೂತಗಳಾದ ಪ್ರಮಾಣಗಳಾಕೂಡ ಶಿಗುವದಿಲ್ಲ. ಅತಃ ಈ ನಿರಂಜನ (ವಿರಕ್ತ) ಮಹಾಸ್ವಾಮಿಗಳಲ್ಲಿ ಜನ್ಯಗಳಾದ ಚೀಲಾಳ, ಕುಮಾರ, ಮುರಿಗಿ, ಕೆಂಪು ಎಂಬ ನಾಮಸಮೇತಗಳಾದ ಸಮಯಭೇದಗಳು ಮಾತ್ರ ಇತ್ತೀಚಿಗೆ ಕಾಲವೈಪರೀತ್ಯದಿಂದಲೂ,

ವಿದ್ಯಾಭ್ಯಾಸರಾಹಿತ್ಯದಿಂದಲೂ, ಸ್ವತಃ ಕಲ್ಪಿತಗಳಾದಂತೆ ಕಂಡುಬರುತ್ತವೆ. ಈ ಕಲ್ಪನಕ್ಕೆ ಕಾರಣೀಭೂತವಾದ ಸಮಯಪದದ ತತ್ತ್ವಾರ್ಥವನ್ನು ಪರ್ಯಾಲೋಚಿಸಿದಲ್ಲಿ ಶಪಥಾಚಾ ರವೆಂಬರ್ಥವು ಸ್ಪಷ್ಟವಾಗಿ ಹೇಳಲ್ಪಡುತ್ತದೆ. ಈ ವಿಧವಾಗಿ ಸೃಷ್ಟೀಕರಿಸಲ್ಪಟ್ಟ ಸಮಯ ಪದಜನ್ಯ ಶಪಥಾಚಾರವೆಂಬರ್ಥವನ್ನವಲಂಬಿಸಿಕೊಂಡಿರುವದರಿಂದಲೇ ಈ ಮಹಾಸ್ವಾಮಿ ಗಳಲ್ಲಿ ಪರಮಾನರ್ಥಕ್ಕೆ ಹೇತುಭೂತಗಳಾದ ಮತ್ತು ಅರಿಷಡ್ವರ್ಗಗಳಲ್ಲಿ ಪರಿಗಣಿಸಲ್ಪಟ್ಟಿ ರುವದರಿಂದಲೇ ಮನುಷ್ಯರಿಗೆ ಶತ್ರುಸ್ವರೂಪಗಳಾದ ದ್ವೇಷಾಸೂಯಗಳು ವೃದ್ಧಿಗತ ಳಾಗಿ ಪರಸ್ಪರ ಸಮ್ಮೇಳನಕ್ಕೆ ಅಂತರಾಯ ಭೂತಗಳಾಗಿರುತ್ತವೆ. ಇಂಥಾ ಪರಸ್ಪರ ಸ ಮ್ಮೇಳನಕ್ಕೆ ಅಂತರಾಯ ಭೂತಗಳಾದ ದ್ವೇಷಾಸೂಯಗಳನ್ನು ಅವಲಂಬಿಸಿ ವರ್ತಿಸೋ ಣದರಿಂದಲೇ ನಮ್ಮ ಪೂಜ್ಯವಾದ ಧಾರ್ಮಿಕ ಸಮಾಜವು ಕೂಡ ಅನೈಕ್ಯಕ್ಕೆ ಈಡಾಗಿರು ತ್ತದೆ. ಮತ್ತು ಅಷ್ಟಾವರ್ಣ ಘಟಕೀಭೂತವಾದ ಭೃಶಂಗಚ್ಛತೀತಿ ಎಂಬ ಉತ್ಪತ್ತಿಯಿಂ ಸಿದ್ಧವಾದ ಜಂಗಮಶಬ್ದಕ್ಕೆ ವಾಚ್ಯರಾದ ಈ ನಿರಂಜನ (ವಿರಕ್ತ) ಮಹಾ ಸ್ವಾಮಿಗಳಲ್ಲಿ ಅನೇಕ ಭೇದಗಳು ಕಲ್ಪಿತಗಳಾಗಿರೋಣದರಿಂದ ಆಯಾಯಭೇದಸ್ಥರಾದ ನಿರಂಜನವಿರಕ್ತ ಮಹಾಸ್ವಾಮಿಗಳನ್ನು ಆಶ್ರಯಿಸಿದ ಭಕ್ತರು, ಪರಸ್ಪರ ಭೇದಸ್ಥರಾದ ನಿರಂಜನವಿರಕ್ತ ಮಹಾಸ್ವಾಮಿಗಳನ್ನು ನಿಂದಿಸುವದು ಲೋಕಪ್ರಸಿದ್ಧವಾಗಿರುವದರಿಂದ ಇಂಥಾ ನಿಂದಾತ್ಮ ಕವಾದ ಪಾಪವು, ಭಕ್ತರಿಗೆ ಅವಶ್ಯವಾಗಿ ಸಂಘಟಿಸುತ್ತದೆ. ಯಾಕಂದರೇ ಯಾರು ಅಷ್ಟಾ ವರ್ಣಯುಕ್ತರಾಗಿ ಗುರು, ಲಿಂಗ, ಜಂಗಮ ಪಾದೋದಕಪ್ರಸಾದವನ್ನು ಸೇವಿಸುವರೋ ಅವರು ಅಂಥಾ ಕೈವಲ್ಯದಾಯಕಗಳಾದ ಗುರು ಲಿಂಗ ಜಂಗಮಗಳನ್ನು ನಿಂದಿಸುವದಾದ ಘೋರವಾದ ಕಲ್ಮಷಕ್ಕೀಡಾಗುವರೆಂಬದಾಗಿ ಅನೇಕ ಅಭಿಯುಕ್ತರು ಹೇಳುವದಲ್ಲದೇ ಈ ವಿಷಯದಲ್ಲಿ ಪ್ರಮಾಣಗಳು ಕೂಡ ಸಾಕ್ಷಿಭೂತಗಳಾಗಿರುತ್ತವೆ. ಆದ್ದರಿಂದ ಭಕ್ತರಕಲ್ಯಾ ಣಕ್ಕೆ ಈ ನಿರಂಜನ ವಿರಕ್ತ ಮಹಾಸ್ವಾಮಿಗಳವರ ಪರಸ್ಪರ ಸಮ್ಮೇಳನಾ ಭಾವವು ಮೂಲಕಾರಣವಾಗಿರುವದಲ್ಲದೆ ಪರಮತೀಯರಿಂದಲೂ ಹಾಸ್ಯಾಸ್ಪದಕ್ಕೆ ಈಡಾಗಿರುತ್ತ ಅತಃ ನಿರೀಚ್ಛರಾದ ನಿರಭಿಮಾನಿಗಳಾದ ನಿರಂಜನ ವಿರಕ್ತ ಮಹಾಸ್ವಾಮಿಗಳೇ ಪರಮಾ ಸ್ಪರಿಗೆ ನಿಂದಾಸ್ಪದಗಳಾದ ಮತ್ತು ಈವರಿಗೂ ನಿಮ್ಮ ವಂಶಪರಂಪರಾಗತಗಳಾದ ಸಮಯ ಭೇದಗಳಿಗೆ ಮುಂದೆ ಅವಕಾಶವನ್ನು ಕೊಡದೆ, ಪರಸ್ಪರ ಸಮ್ಮೇಳನವನ್ನು ಆಚರಿಸಿ ದ್ದಾದರೆ ನಮ್ಮ ಪೂಜ್ಯವಾದ ಧಾರ್ಮಿಕಸಮಾಜವು ಸುಧಾರಿಸುವದಲ್ಲದೇ ಭಕ್ತರಲ್ಲಿಯೂ ಕೂಡ ಐಕ್ಯವು ಉಂಟಾಗುತ್ತದೆಂಬದಾಗಿ ಕಂಡುಬರುತ್ತದೆ. ಮತ್ತು ಮೇಲೆವುದಾಹೃತವಾದ ಪರ ಸ್ಪರ ಸಮ್ಮೇಳನಕ್ಕೆ ಕಾರಣೀಭೂತವಾದ ಒಂದು ಉಪಾಯವು ನನ್ನ ಅಲ್ಪಬುದ್ಧಿ ಸ್ಫುರಿತ ವಾದ್ದರಿಂದ ಅದನ್ನು ತಮ್ಮ ಪ್ರದರ್ಶನಕ್ಕಾಗಿ ಇಲ್ಲಿಯೇ ಸೂಚಿಸುವೆನು. ಅದಾವದೆಂದರೆ ಮುಂದೆ ನಿಮ್ಮ ಪೂಜ್ಯವಾದ ಆಸ್ಥಾನ ಸಿಂಹಾಸನಕ್ಕೆ ಅಧಿಕಾರಿಗಳಾಗಿ ಮಾಡಬೇಕಾದ ಮರಿ ಗಳು ತಕ್ಕಮಟ್ಟಿಗೇ ಶಿವಾನುಭವ ಶಾಸ್ತ್ರದಲ್ಲಿ ಗತಿಯುಳ್ಳವರಾಗಿರಬೇಕು. ಮತ್ತು ಮತ

ತತ್ವವನ್ನು ಬಲ್ಲವರಾಗಿರಬೇಕು. ಇಂಥವರನ್ನೇ ಅಧಿಕಾರಿಗಳನ್ನಾಗಿ ಮಾಡಿದರೆ, ಅವರು ಶಾಸ್ತ್ರ ಪ್ರವೀಣತೆಯಿಂದ ಕಲಹಜನ್ಯಗಳಾದ ಸಮಯಭೇದಗಳಿಗೆ ಅವಕಾಶವನ್ನು ಕೊಡದೆ ಪರಸ್ಪರ ಸಂಘಟನ ಪ್ರವೃತ್ತಿಯುಳ್ಳವರಾಗಿ ಸಮಾಜ ಸುಧಾರಣೆಯಲ್ಲಿ ಲಕ್ಷ್ಯವಿಟ್ಟು ಮತ ವನ್ನು ವೃದ್ಧಿಗೊಳಿಸುವರೆಂದು ನಿಸ್ಸಂದೇಹವಾಗಿ ಹೇಳುತ್ತೇನೆ. ಆದ್ದರಿಂದ ಇದೆಲ್ಲವನ್ನು ದಿವ್ಯಚಿತ್ತದಿಂದ ಪರ್ಯಾಲೋಚಿಸಿ, ಮೇಲೆಪ್ರದರ್ಶನಕ್ಕಾಗಿ ಸೂಚಿಸಿದ ಉಪಾಯವನ್ನು ಕೃಪಾಪೂರಿತರಾದ ತಾವು ದಯವಿಟ್ಟು ಜಾರಿಯಲ್ಲಿ ತಂದು ಪರಮ ಶ್ರೇಯಸ್ಸನ್ನು ಹೊಂ ದುವದಲ್ಲದೇ ನಮ್ಮಮತಕ್ಕೆ ಸುಸ್ಥಿತಿಯನ್ನುಂಟುಮಾಡಬೇಕೆಂದು ಪ್ರಾರ್ಥಿಸುತ್ತೇನೆ ಈ ನನ್ನ ಪ್ರಾರ್ಥನೆಯನ್ನು ಸರ್ವವ್ಯಾಪಿಯಾದ ಪರಶಿವನು ಸಫಲಗೊಳಿಸಲೆಂದು ಪುನಃ ಭಕ್ತಿ ಪೂರ್ವಕವಾಗಿ ಪ್ರಾರ್ಥಿಸಿ, ನನ್ನ ಭಾಷಣವನ್ನು ಮುಗಿಸುತ್ತೇನೆ. ... *

( ಕೈಚಪ್ಪಾಳಿ. )

ಕಲಿಗಣನಾಥಶರ್ಮ ಪಂಚಾಕ್ಷರಶಾಸ್ತ್ರಿ, ಪಗಳದಿನ್ನಿ
ಮುಕ್ಕಾಮು ಗದಗ ಸಂಸ್ಕೃತ ಪಾಠಶಾಲಾ
ತೋಂಟದಾರ್ಯ ಮಹಾಸ್ವಾಮಿನಾಂ ॥

---

## ಇದೇ ವಿಷಯದಮೇಲೆ ಚೆನ್ನಯ್ಯಾ ದ್ಯಾಂಪುರ ಇವರ ಭಾಷಣವು.

ಶ್ರೀಮನ್ನಿರಂಜನ ಮಹಾಸ್ವಾಮಿಗಳ ಸಮುದಾಯಕ್ಕೂ, ಸಮಸ್ತ ಗುರುವರ್ಗ ಕ್ಕೂ, ತ್ರಿಕರಣ ಪೂರ್ವಕವಾಗಿ ಅಭಿವಂದಿಸಿ, ಅಲ್ಪಜ್ಞನಾದ ನನ್ನ ಭಾಷಣೆಯಲ್ಲಿ ತೋ ರುವ ದೋಷಗಳನ್ನು ಬಿಟ್ಟು ನೀರಿನಲ್ಲಿಬೆರೆದ ಕ್ಷೀರವನ್ನೇ ಸೇವಿಸುವ ಹಂಸನಂತೆ ಸಾರ ಗ್ರಾಹಕರಾದ ಶ್ರೀಮಂತ, ಅಧ್ಯಕ್ಷ, ಪ್ರಮುಖ, ಧರ್ಮಪಿತೃಗಳಿಗೆ ಪ್ರಾರ್ಥಿಸಿ ನಾನು ಕೈ ಕೊಂಡ ಈ ೫ನೇ ಶ್ರೀಮದ್ವೀರಶೈವ ಮಹಾಸಭೆಯಲ್ಲಿ ನಿಯಮಿಸಿದ ಆಗ್ರಹದಿಂದುಂಟಾದ ಸಮಯಭೇದಗಳನ್ನು ತಪ್ಪಿಸಿ ನಿರಂಜನ ಸ್ವಾಮಿಗಳಲ್ಲಿ ಏಕರೂಪತೆ ಯುಂಟಾಗುವಂತೆ ಪ್ರೋತ್ಸಾಹಿಸತಕ್ಕದ್ದು ಎಂಬ, ೩ನೇ ವಿಷಯವನ್ನುಕುರಿತು, ವಿವರಿಸಲಾರಂಭಿಸುತ್ತೇನೆ.

ಈ ನಮ್ಮ ಜಗತ್ಪೂಜ್ಯರಾದ ನಿರಂಜನ ಮಹಾಸ್ವಾಮಿಗಳು, ಎಂದೆಂದಿಗೂ
ರೂಪವೇ ಇದ್ದು; ಸ್ವಲ್ಪಕಾಲದಿಂದೀಚೆಗೆ ಸಮಯಭೇದಗಳನ್ನು ಕಲ್ಪಿಸಿ, ನಾಲ್ಕುರ
ಗಳಾಗುವದಕ್ಕೆ ಕಾರಣವೇನಿರಬಹುದೆಂಬುವದನ್ನು ವಿಚಾರಮಾಡುವ;—ಸಮಾಜ ಸು
ರಣೆಗೆ ಐಕಮತ್ಯವೇ ಮುಖ್ಯವಾದದ್ದು. ಒಂದು ಮತದವರೆಲ್ಲರು ಒಕ್ಕಟ್ಟನಿಂದಿರುವ
ಕ್ಯಗುಣಕ್ಕೆ ಐಕಮತ್ಯವೆಂಬ ಹೆಸರುಬಂದದೆ ಈ ಐಕಮತ್ಯ ಒಂದಿಲ್ಲದಿದ್ದರೆ ಬಹುರ
ವಾಗಿ ಸಮಾಜದಲ್ಲಿ ಸುಖವೇ ಆಗುವದಿಲ್ಲ. ಮತವು ಉನ್ನತಾವಸ್ಥೆಯನ್ನು ಹೊಂದ
ಕೆಂಬ ಲವಲವಿಕೆಯಿಂದ ಪ್ರತಿಯೊಬ್ಬನು ತನ್ನ ಜನ್ಮಸಾಫಲ್ಯಕ್ಕೋಸ್ಕರವಾಗಿ ಐಕಮ
ವನ್ನು ಅವಶ್ಯ ಸಂಪಾದಿಸಬೇಕು. ಐಕಮತ್ಯವಿಲ್ಲದೆ ಸಮಾಜ ಸುಧಾರಣೆಗೆ ಪ್ರಯತ್ನ
ಡುವದು ಗೋಡೆಯಲ್ಲಿ ಹೆಗ್ಗಣವನ್ನು ಹೊಗಿಸಿ, ಗುದ್ದು ಮುಚ್ಚಿದಂತೆ ನಿಷ್ಫಲವಾಗುತ್ತ
ಈ ಐಕ್ಯತೆಯು ವ್ಯವಹಾರವೊಂದಕ್ಕೇ ಉಪಯೋಗವಂತಲ್ಲ; ಮೋಕ್ಷಕ್ಕೂ ಮುಖ್ಯ
ಪಾಯವಾಗಿದೆ. ಅತ್ಯಲ್ಪಶಕ್ತಿಯುಳ್ಳದ್ದಾದರೂ ತೃಣವು ರಜ್ಜುರೂಪದಿಂದ ಮದೋನ್ಮ
ಗಜವನ್ನು ಕೂಡಾ ಕಟ್ಟಲಿಕ್ಕೆ ಹ್ಯಾಗೆ ಸಮರ್ಥವಾಗುವದೋ ಅದರಂತೆ ಸಮಾಜಕ್ಕೊ
ಅಸಾಧ್ಯವಾದ ಹಾನಿಯನ್ನು ಸಹ ದೂರಮಾಡಲಿಕ್ಕೆ ಈ ಐಕ್ಯತೆಯ ಬಲದಿಂದ ಸ್ವಲ್ಪ
ಕ್ತಿಯ ವ್ಯಕ್ತಿಗಳು ಸಮರ್ಥರಾಗುವರು. ಅಚ್ಚುಗಾಲಿ, ನಗಕೀಲು ಮುಂತಾದಸಾಧನ
ಸಹಾಯದಿಂದ ಒಂದು ರಥವೆನಿಸಿ ನಡೆಯುವಂತೆ, ಅದರಲ್ಲಿ ಒಂದುಸಾಧನವುಕೆಟ್ಟರೆ ಮ
ಲಿಗುಂಪಾಗಿ ಬೀಳುವಂತೆ, ವ್ಯಕ್ತಿಗಳ ಮತಾಭಿಮಾನ ಜ್ಞಾನ ಐಕ್ಯತೆಗಳ ಸಾಧನಸಹಾ
ದಿಂದ ಧರ್ಮವೆನಿಸಿ, ಮುಂದಕ್ಕೆ ಸಾಗುತ್ತದೆ. ಮತಾಭಿಮಾನಿಗಳಲ್ಲಿ ಒಂದು ಕಡಿಮೆ
ದರೆ ಸಾಕು, ಸಮಾಜಧರ್ಮವು ಜೀರ್ಣವಾಗುತ್ತದೆ. “ಲವಳಸರವು ಗುಂಪಾಗಿದ್ದರೆ
ಸಹಕಾಲಿಡ,, ದೆಂಬ ಗಾದೆಯಂತೆ ಐಕ್ಯತೆಯಿಂದ ಸಮಾಜದಲ್ಲಿ ಅನ್ಯಧರ್ಮಗಳು ಸೇ
ಕ್ಕೆ ಆಸ್ಪದವೇ ದೊರೆಯುವದಿಲ್ಲ. ಹೀಗೆ ಭುಕ್ತಿ ಮುಕ್ತಿಗಳಿಗೆ ಸಾಧನವಾದಂಥ ಐಕ್ಯತೆ
ಯನ್ನು ನಾವು ಮೊದಲಿಂದಲೇ ಪಾಠಮಾಡುತ್ತಿರಬೇಕು. ಇದು ಯಾವಾಗಲೂ ಆಗಲ
ಜಾಗ್ರತರಾಗಿರಬೇಕು. ಮತಾಭಿಮಾನದಿಂದ ಪ್ರಾಪ್ತವಾಗುವ ಈ ಐಕಮತ್ಯವು ಮಹ
ಕಾಂಕ್ಷೆಯಿಂದ ಕೆಡುವರೂಢಿಯುಂಟು. ಇಂಥ ಮಹತ್ವಾಕಾಂಕ್ಷೆಗೆ ದುರಭಿಮಾನವೇ ಜ
ಭೂಮಿಯಾಗಿದೆ. ಈ ದುರಭಿಮಾನವು ಭಕ್ತಾಂಗವಾದ ಅಷ್ಟಾವರಣಗಳಲ್ಲಿ ಅವಿಶ್ವಾಸಬು
ಎಂಬ, ಸೊಕ್ಕೇರಿ ಬೆಳೆಯುವ ವಿಷಬಳ್ಳಿಗೆ ಕೊನೆರಾಗಿದೆ. ಅಷ್ಟಾವರಣರೂಪವಾದ ವೀ
ಶೈವರಪ್ರಾಣಕ್ಕೆ ದಾಳಿಯನ್ನು ತರುವಂಥ ದುರಭಿಮಾನವು ಬಹುರೂಪವಾಗಿ ಪಾಪವ
ಕೊಡುವದೇನೂ ಆಶ್ಚರ್ಯವಲ್ಲ. ಹ್ಯಾಗಂದರೆ ಯಾವನು ಗುರು, ಲಿಂಗ, ಜಂಗಮ ಪೂ
ಶಕ್ತಿಯಿಂದ ಖರೇ ವೀರಶೈವ ನೆನಿಸುವನೋ ಅವನು ಅಷ್ಟಾವರಣವಿಸಿಷ್ಟನಾದ ವೀರಶೈ
ಮಹನೀಯನಲ್ಲಿ ಮಹತ್ವವನ್ನು ಬಯಸುವ ದುರಭಿಮಾನದ ದುರ್ವಿಲಾಸಕ್ಕೆ ಎಳ್ಳಷ್ಟು
ಶಾ ಇಂಬುಗೊಡುವದಿಲ್ಲ. ಯಾಕಂದರೆ;—ದುರಭಿಮಾನವಲ್ಲಿ ಅನ್ಯರ ಲಘುತನದ ಕ

ಯೂ, ಅಶ್ರದ್ಧೆಯೂ, ದೂಷಣೆಗಳೂ ಹುಟ್ಟುತ್ತವೆ. ಆದರೆ ವೀರಶೈವನನ್ನು ಉದಾಸೀನತೆಯಿಂದ ಆತ್ಮೋನ್ನತಿಗಾಗಿ ನಿಂದಿಸಿದರೆ, ಅಷ್ಟಾವರಣವನ್ನೇ ನಿಂದಿಸಿದಂತಾಗುತ್ತದೆ. ಗುರುನಿಂದೆ, ಶಿವನಿಂದೆ, ಶಿವಕಥಾನಿಂದೆ, ಶೈವನಿಂದೆ, ಪ್ರಮಥನಿಂದೆ, ಜಂಗಮನಿಂದೆ, ಪಾದೋದಕನಿಂದೆ, ಶಿವನಿರ್ಮಾಲ್ಯನಿಂದೆ, ಭಸ್ಮಧಾರಣನಿಂದೆ, ಶಿವಾಗಮನಿಂದೆ, ಶಿವಕ್ಷೇತ್ರಶಿವಾಚಾರ ಸಂಪ್ರದಾಯನಿಂದೆಗಳಂಸ್ಯೆರಿಸದೆ ಕೇಳದ ಕಿವಿಗಳಿಗೆ ಪ್ರಾಯಶ್ಚಿತ್ತಮಾಡಿಕೊಂಡು ನುಡಿವ ನಾಲಿಗೆಯನ್ನು ಕೀಳುವಾತನಾಗಿ ಎಂದು ಮುಂತಾದ ಲಕ್ಷಣಗಳಿಂದ ಜಗತ್ಪೂಜ್ಯನೆನ್ನುತನೇ ವೀರಶೈವ ನಪ್ಪ. ಹೀಗೆ ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯು ವಿಶದವಾಗಿ ಹೇಳುತ್ತಿದ್ದು, ನಾವೇ ನಮ್ಮಮತದ ಅಷ್ಟಾವರಣ ರೂಪ ಮಹನೀಯರನ್ನು ನಿಂದಿಸಿದರೆ ನಮ್ಮ ನಾಲಿಗೆಯನ್ನು ಯಾರು ಕೀಳಬೇಕು. ಆದರೆ ಇಂಥ ದೂಷಣೆಯನ್ನು ಹೊಂದಿದ ಮನಸ್ಸೇ ಘನಿಯು. ಇದು ಕಲ್ಮಷ ಖನಿಗಳಾಗಿ ಜನಿಸುತ್ತದೆಂದು ಪುರಾತನೋಕ್ತಿಯುಂಟು. ಈ ಮರ್ಮವನ್ನು ಚನ್ನಾಗಿ ತಿಳಿದು, ಮತಬಾಂಧವರಲ್ಲಿ ಪೂರ್ಣಭಕ್ತಿಯಿಟ್ಟು, ಅವರ ಮಹತ್ವದ ಚಿಂತನೆಯಲ್ಲಿದ್ದರೆ ನಮಗೆ ದೊಡ್ಡಸ್ತಿಕೆಬರುವದೇ ವಿನಹಾ ಬರೇ ಶಠಂಭಾವದಿಂದೆ ಪಡಿಯಲಿಚ್ಛಿಸಿದರೆಂದೂ ಬಾರದು, ಮತ್ತಷ್ಟು ಲಘುತನಕ್ಕೆ ಕಾರಣವಾಗುತ್ತದೆ. ನಮ್ಮಲ್ಲಿ ಧರ್ಮಸಂಬಂಧದಿಂದ ವಿರೋಧಮಾಡುವವರ್ಯಾರೇ ಇರಲಿ, ಅವರಿಗೆ ವೀರಶೈವರೆಂಬ ನಾಮವು ಸಲ್ಲುವದೇ ಇಲ್ಲ. ಶ್ರೀಶೈಲಾದಿ ಪುಣ್ಯಕ್ಷೇತ್ರವಾಸಿಗಳಾದ ಮೃಗಪಕ್ಷಿಗಳಲ್ಲಿ ವೈರವರ್ಗಗಳು ಸಹಾ ತಮ್ಮ ತಮ್ಮ ಹುಟ್ಟುಗುಣವಾದ ಶತ್ರುಭಾವವನ್ನು ಬಿಟ್ಟಿದ್ದವೆಂಬ ಬಗ್ಗೆ ಪುಣ್ಯಕಥೆಗಳು ಘಂಟಾಸದೃಶವಾಗಿ ಘೋಷಿಸುತ್ತವೆ. ವೀರಶೈವಮತವೆಂಬ ಬಹು ಪುಣ್ಯಸ್ಥಾನವನ್ನು ಹೊಂದಿದಂಥ ನಾವು, ನಮ್ಮಮತದ ಪ್ರಿಯಬಾಂಧವರಲ್ಲೇ ವೈರತ್ವವನ್ನು ಪ್ರಯಾಸದಿಂದಪಡಿದು ಸಂಗ್ರಹಿಸಿ, ಭದ್ರವಾಗಿಟ್ಟುಕೊಂಡರೆ ನಮಗೆ ಆ ಪಶುಪಕ್ಷಿಗಳೆಂಬುವದಕ್ಕಿಂತ ಇನ್ನಷ್ಟು ಮುಂದಿನಬಿರಿದು ನಿರಾತಂಕವಾಗಿ ಸಲ್ಲುವದಕ್ಕೇನುಸಂಶಯವು. ಆ ಪಶುಪಕ್ಷಿಗಳ ಸ್ವಾಭಾವಿಕ ವೈರವನ್ನು ಕ್ಷೇತ್ರವೇಬಿಡಿಸಿ ಸ್ನೇಹವನ್ನುಬೆಳಿಸಿತ್ತು. ಅದರಂತೆ ಈ ದುರಭಿಮಾನವನ್ನು ಬಿಡಿಸುವಷ್ಟು ಮಹತ್ವವು ಈ ಮತದಲ್ಲೇ ಇಲ್ಲೆಂದು ಯಾರಾದರೂ ಶಂಕಿಸಿದರೆ, ಇವತ್ತಿಗೆ ಶಂಭುಸನ್ನಿಧಿಯಲ್ಲಿ ಅವನಿಗಿಂತ ಹೆಚ್ಚುಪೂಜ್ಯತೆಯೊಡನೆ ವಿರಾಜಮಾನರಾಗಿರುವ ಅಗಣಿತ ಶರಣ ಸಂತತಿಗೆ ಈ ನಮ್ಮ ವೀರಶೈವ ಮತವು ಯಾವ ಮಹತ್ವವನ್ನು ಬೀರಿತ್ತೋ ಅದೇ ಮಹತ್ವವನ್ನು ಈಗಲೂ ಅದೇರೀತಿಯಲ್ಲಿ ತೋರಿಸುತ್ತದೆ. ಆದರೂ ಆ ಮಂಗನಿಗೆ ದೊರೆದ ರತ್ನದಂತೆ ನಿರರ್ಥಕ ಮಾಡಿಕೊಂಡಿದ್ದೇವೆಂದು ಯಾಕೆ ತಿಳಿಯಬಾರದು. ಆದರೆ ವೈಷಮ್ಯಮಾಡುವ ದುರಭಿಮಾನಿಗಳಲ್ಲಿ ಸತ್ಯಾಚಾರವೇ ಇರುವದಿಲ್ಲ. ಮತಾಭಿಮಾನವಂತೂ ಸ್ವಪ್ನವನ್ನಾದರೂ ಹೊಂದಿ ತೋರುವದಿಲ್ಲ. ಇಂಥವರು ಆಚಾರವಂತರೂ ಮತಾಭಿಮಾನಿಗಳೂ ಇದ್ದಾರೆಂದು ಪಕ್ಷಾಂತರದಲ್ಲಿ ಯಾರನ್ನಾದರೂ ದೃಷ್ಟಾಂತಕ್ಕಿಟ್ಟರೆ ಅವರು ವೇಷಧಾರರಂತೆ ಕಪಟಿಗಳೇ ಹೊರ್ತು ಸತ್ಯರಲ್ಲ,

ಇಂಥ ಕುಟಿಲಾತ್ಮರ ದುರಭಿಮಾನದ ದೆಶೆಯಿಂದ ಈ ನಮ್ಮ ಸತ್ಯಸಮಾಜಕ್ಕೆ ಯಾವ
ವಾಗಬಹುದು. ... ... ... ...

ದುರಭಿಮಾನವೆಂಬ ಮಹಾರಾಜನಿಗೆ ಈ ನಮ್ಮ ವೀರಶೈವರೇ ರಾಜಭಕ್ತಿಯಿ
ನಡಕೊಳ್ಳುವ ಪ್ರೀತಿಯ ಪ್ರಜೆಗಳಾಗಿರುವದರಿಂದ ಅವನ ಪ್ರಸಾರವಾದ ದುರಾಚಾರಗ
ಭರಭರಾಟಿಯಿಂದ ತಲೆದೋರಿ ಪೂರ್ಣಾವಸ್ಥೆಯನ್ನು ಹೊಂದುತ್ತಿರುವಷ್ಟರಲ್ಲಿ ಧ
ಪ್ರಭುಗಳಾದ ಈ ಪ್ರಸ್ತುತದಲ್ಲಿ ತಮ್ಮ ಕೃಪಾದೃಷ್ಟಿಯನ್ನು ಹರಹಿದಂಥ ಶ್ರೀಮನ್ನಿ
ಜನ ಹಾನಗಲ್ಲ ಮಹಾಸ್ವಾಮಿಗಳವರು, ಲಿಂಗೈಕ್ಯರಾದ ಶಿರಸಂಗಿ ಯಜಮಾನರವರು,
ಮಹಾಸಭೆಗೆ ಅಧ್ಯಕ್ಷರಾಗಿರುವ ಶ್ರೀಮಂತ ರಾವಸಾಹೇಬ, ಅಪ್ಪಾಸಾಹೇಬರವರು,
ತಾದ ಮಹನೀಯರು ಧರ್ಮಜೀವನರು ತಮ್ಮಲ್ಲಿಸ್ವಾಭಾವಿಕವಾಗಿ ನೆಲೆಗೊಂಡಿದ್ದ ಮತ
ದ್ಧಾರದ ಬುದ್ಧಿಯಿಂದ ಮರಿಯಹತ್ತಿದಂದಿನಿಂದ ಇದರ ಯೋಜನೆಯಲ್ಲಿ ತೊಡಗಿದ್ದ
ಹಿಂದಕ್ಕೆ ನಮ್ಮ ಪಿತೃಗಳಾದ ಬಸವಾದಿ ಪ್ರಮಥರು, ನಮ್ಮಸಲುವಾಗಿ ಗಳಿಸಿ, ಹೂ
ರುವ ಶಿವಾಚಾರ ಧನವನ್ನು ಶೋಧಿಸಿ ಪಡಿಯದೆ, ಅಜ್ಞಾನವೆಂಬ ಕತ್ತಲೆ ಕೋಣೆಯೊ
ಬಿದ್ದಿರುವ ದುರ್ಭಾಗ್ಯರಾದ ನಾವು ಈ ಧರ್ಮಾತ್ಮರ ಪುಣ್ಯಪ್ರಭಾವದಿಂದಲೇ ಮಾರ್ಗ
ದು ಮುಂದಕ್ಕೆ ಬರಬೇಕಾಗಿದೆ. ಈ ಸುಸಮಯದಲ್ಲಿ ದುಷ್ಟಫಲದಾಯಕವಾದ ದುರಭ
ನವನ್ನು ಮೊದಲಂತೆ ಲೋಭದಿಂದೆ ನಂಬಿದರೆ, ನಮ್ಮದಶೆಯಿಂದ ನಿನ್ನ ಆಯುಧಗಳ
ಸಾಣಿಯಿಡಿಸೆಂದು ಯಮನಿಗೆಹೇಳಿ ಕಳುಹಿಸಿದಂತಾಗುತ್ತದೆ. ಅದರಿಂದನಾವೆಲ್ಲರು ದು
ಮಾನವನ್ನು ಖಂಡಿತವಾಗಿ ಬಿಟ್ಟು ಇನ್ನುಮೇಲೆ ಬುದ್ಧಿವಂತರಾಗಬೇಕು. ...

ಈಗ ೩೪ ಲಕ್ಷ ಜನರುಳ್ಳ ನಮ್ಮ ಕುಟುಂಬವು, ಐಕ್ಯತೆಯನ್ನು ಹಿಡಿದು
ಕ್ಕೆ ಆಚಾರ, ತಪಸ್ಸಿದ್ಧಿ, ಸಂಪತ್ತು, ವಿದ್ಯಾ ಕಲಾಕುಶಲತ್ವಾದಿಗಳಿಂದೆ ಬಹುಹೆಸರಾಗಿ
ಈ ಮನೆತನದಲ್ಲಿ ನಾವು ದುರ್ಬಲರು ಹುಟ್ಟಿ ದುರಭಿಮಾನವೆಂಬ ದುಷ್ಟನ ಗೆಳೆತನ
ಹೂವುಮಾರಿದ ಅಂಗಡಿಯಲ್ಲಿ ಹುಲ್ಲುಮಾರಿತೆಂಬಗಾದೆಯಂತೆ ಅತಿಹೀನದೆಶೆಗೆ ತಂದಿದ್ದೆ
ದುರಭಿಮಾನವೆಂಬ ಪಿಶಾಚಿಯು, ಯಾವನನ್ನು ಅಂಟುವದೋ ಅವನನ್ನು ತನ್ನಂತೆ
ಡಿಕೊಳ್ಳುತ್ತದೆ. ಮೂರುಮನೆಗಳಲ್ಲಿ ಆರುಮನೆಮಾಡುವ ವಿದ್ಯೆಯನ್ನು ಈ ಪಿಶಾಚಿ
ಚನ್ನಾಗಿ ಬಲ್ಲದು. ... ... ... ...

ನಮ್ಮ ಶ್ರೀಮನ್ನಿರಂಜನ ಸ್ವಾಮಿಗಳ ಮನೆತನವು, ಈ ಹಿರೇ ಪಿಶಾಚಿಯ
ವಳಿಯೊಳಗೆ ಸಿಕ್ಕದರಿಂದಲೇ ಚೀಲಾಳಸಮೆ, ಮುರಗಿಸಮೆ, ಕೆಂಪಿನಸಮೆ, ಕುಮಾರಸ
ಎಂದು ನಾಲ್ಕುರೂಪವಾಯಿತು. ಇಷ್ಟೆ ಅಲ್ಲ. ಇವರು ಅನ್ಯೋನ್ಯ ಸ್ಪರ್ಶನ, ಸಂಭಾಷ
ದರ್ಶನವು ಸಹ ಆಗಬಾರದೆಂದು ಕಟ್ಟುಪ್ಪಣೆಮಾಡಿರುವದು ಬಬ್ಬಾನೊಬ್ಬ ದುಷ್ಟರಿತ

ಲಿಂಗವಿಹೀನನನ್ನು ತುಂಬಾಸಂತೋಷದಿಂದೆ ಮಾತಾಡಿಸಿದರೂ ಅಡ್ಡಿಯಿಲ್ಲ ಪರಂತು ನಿಮ್ಮ
ಸಮಾನಿಕರಾದ ವಿರಕ್ತಸ್ವಾಮಿಗಳನ್ನು ಉದಾಸೀನ ವೃತ್ತಿಯಿಂದಾದರೂ ಮಾತಾಡಿಸಬಾರ
ದೆಂದು ಗೊತ್ತುಮಾಡಿ ಕೊಟ್ಟದೆ. ಎರಡು ಸಮಯದ ಸ್ವಾಮಿಗಳು, ಆಕಸ್ಮಿಕ ಪ್ರವಾಹ
ದಿಂದೆ ಒಂದೇ ಕಡೆಯಲ್ಲಿ ಕೂಡಿದರೆ ತತ್ಕ್ಷಣವೇ ಪಡದೇ ಸಹ ಹಾಕಿಸಿ, ಉಪಚರಿಸುತ್ತದೆ
ನಾಲ್ಕುಸಮಯದವರು ಒಬ್ಬರಿಗೊಬ್ಬರು ಸ್ಪರ್ಶನಮಾಡಬಾರದೆಂಬ ಮಂತ್ರವನ್ನಂತೂ
ಪದೇಪದೇ ಬಹುಸೊಗಸಾಗಿ ವಿಧಿವದ್ಬೋಧಿಸಲಿಕ್ಕೆ ಈ ಪಿಶಾಚಿಯು ಗುರುವಾಗಿರುವಲ್ಲಿ
ಕೇಳುವದೇನು. ಷಟ್ಸ್ಥಲಪ್ರಸಾರಕ್ಕೆ ತೊಂದರೆಯೋ ಇಲ್ಲ. ಕ್ರಿಯಾಪದ್ಧತಿಯಲ್ಲಾದರೂ
ಒಂದೊಂದು ಸಮಯದಲ್ಲಿ ಒಂದೊಂದು ರೀತಿಯಾಗಿ ಬೇರೆಬೇರೆ ತೋರುವವರಿಂದ ಮನ
ಬಂದಂತೆ ಆಚಾರಗಳನ್ನು ನಿರ್ಣೈಸಿ ಕೊಡಲಿಕ್ಕೆ ವೇದಾಗಮಗಳಂತೆ ಈ ದುರಭಿಮಾನ
ಭೂತವು ಪ್ರಮಾಣವಾಗಿದೆ. ನಿರಂಜನ ಸ್ವಾಮಿಗಳ ಆದರಾತಿಥ್ಯವನ್ನು ಮಾಡುವ ಭಕ್ತಸ
ಮುದಾಯದಲ್ಲಿ ಕೆಲವು ಭಕ್ತರು, ದುರಭಿಮಾನ ಪಿಶಾಚಿಯ ಮರಿಗಳಂತೆ ಇರುತ್ತಾರೆ. ಈ
ಮರಿಗಳ ಯುಕ್ತಿಸಾಹಸಗಳಂತೂ ವರ್ಣಿಸಲಸಾಧ್ಯವೇ, ಸ್ವಾಮಿಗಳ ಅಧಿಕಾರವೆಲ್ಲ ಇವರ
ಕಣ್ಸನ್ನೆಯೊಳಗೇ ಇರುತ್ತದೆ. ಒಂದುವೇಳೆ ಆ ಸ್ವಾಮಿಗಳು ಅನುಮತಿಮೀರಿ ನಡೆದಿದ್ದಾ
ದರೆ, ಕತ್ತಲೊಳಗೆ ಹೊನ್ನಿನ ಜೀಲವನ್ನು ಕಳಕೊಂಡವನು ಕೈದೀವಿಗೆ ಹಿಡಿದು ಹುಡು
ಕುವಂತೆ ಸ್ವಾಮಿಗಳ ದೋಷವನ್ನು ಹುಡುಕಿ ತಿಳಕೊಂಬುವದಕ್ಕೆ ಆಡಬರಿಸುತ್ತಾರೆ.
ಯಾವವಿಧದಿಂದಾದರೂ ದೋಷಾರೋಪಮಾಡಿ ಮಾನಿಸುವದಿಲ್ಲ ಅಥವಾ ಕಲಹವನ್ನೆಬ್ಬಿಸು
ವರು. ಇದಕ್ಕಾಗಿ ಅಂಜಿ ಕೆಲವುಸ್ವಾಮಿಗಳು ದಡ್ಡತನದಿಂದ ಅವರಧೀನರಾಗಿ ಇರಬೇಕಾ
ಗುತ್ತದೆ. ಹ್ಯಾಗೆ ಜೇಡಹುಳವು ತಂತುವಿಗೆ ಬೀಜವಾಗಿ ಆ ತಂತುವನ್ನು ತೆಗೆದು ಅದರಿಂದ
ಜಾಲವನ್ನು ರಚಿಸಿ, ಅದೇಜಾಲದೊಳಗೆ ತಾನು ಒಳಹೊಕ್ಕು ಬಲೆಗೆಬಿದ್ದ ಪ್ರಾಣಿಗಳಿಂದ
ತನ್ನ ನಿರ್ವಾಹ ಮಾಡಿಕೊಳ್ಳುವದೋ, ಅದರಂತೆ ಈ ಮರಿಗಳು ವಿರಕ್ತ ಸ್ವಾಮಿಗಳ ಕಲ
ಹಕ್ಕೆ ಬೀಜವಾಗಿ ಕಲಹವನ್ನು ಹೊತ್ತಿಸಿ, ಅದರಲ್ಲಿ ತಾವುಹೊಕ್ಕು ಅವರನ್ನು ಬೈಲಿಗೆ
ತಂದು ಹಲುಬಿಸಿ, ಒಳ್ಳೇತನದಿಂದ ತಮ್ಮಕೆಲಸ ಮಾಡಿಕೊಳ್ಳುವ ವಿದ್ಯೆಯನ್ನು ಚನ್ನಾಗಿ
ಕಲಿತಿರುವರು. ದೇವರವರವಾದರೂ ಪೂಜಾರಿಯು ವರವನ್ನು ಕೊಡಲಿಲ್ಲೆಂಬಗಾದಿಯಂತೆ
ಸ್ವಾಮಿಗಳು ಹಣಕಳಕೊಂಡು ಮೆತ್ತಗಾಗಿ ಆಗಲಿ, ವಿವೇಕದಿಂದಾಗಲಿ, ಬಹುರೂಪವು
ತಕ್ಕದ್ದಲ್ಲಾದ್ದರಿಂದ ಒಬ್ಬರಿಗೊಬ್ಬರುಕೂಡಿ ಪ್ರೀತಿಯಿಂದಿರಬೇಕೆಂದು ಆತುರಪಟ್ಟರೂ
ಈ ಮರಿಗಳು ಹಾಯಗೊಡುವದಿಲ್ಲ. ಸ್ವಾಮಿಗಳು ಮೇಲಿಂದಮೇಲೆ ಅನ್ಯರ ಫಿರ್ಯಾದೆಗಳ
ನ್ನು ಹೇಳುತ್ತಲೇ ಇರಬೇಕು. ಅಂದರೆ ಈ ಮರಿಗಳಿಗೆ ಸಮಾಧಾನವು. ಅನ್ಯಸ್ವಾಮಿಗಳು
ಬಂದು ಮೆರೆಯುವದನ್ನು ನೋಡಿದರಂತೂ ತಮ್ಮ ತಂದೆಯು ವಿಮಾನ ಹೋದಂತೆ ಸಂಕಟ
ಪಟ್ಟು ಈ ಮರಿಗಳು ಉರುಳಾಡುತ್ತವೆ. ಉತ್ತರನ ಶೌರ್ಯೋಕ್ತಿಯಂತೆ ಪೌರುಷವಾ
ಡಿಕೊಂಡು ಸ್ವಸ್ಥಲದ ಸ್ವಾಮಿಗಳಿಗೆ ಹುಬ್ಬೇರಿಸಿ, ಹೆಳವಹುಲಿಯು ಸಿಟ್ಟಿಗೆದ್ದು ನಿಂತಲ್ಲಿ

ದೇ ಆಪಚರಿಸುವಂತೆ ಮಾಡಿ, ಮೋಜು ನೋಡುತ್ತಾರೆ. ಸಾಮರಸ್ಯ ವಿಷಯದ ಕಲ್ಲ
ದಲ್ಲಿ ಈ ಹುರಿಗಳು ಹೊಕ್ಕರೆ ಸ್ಥಲಕೊಡಿಥ ಮೂರ್ತಿಗಳ ಮೇಲೆ ಮೂರುವೊಳ ವ್ಯಾ
ಪಾಡಿ ತೀರ್ಪುಕೊಡುತ್ತಾರೆ ಇವರ ತೀರ್ಪಿಗೆ ಸ್ವಾಮಿಗಳಾದರೂ ಸುಮ್ಮನೇ ಕಿವಿಜೋಲು
ಹಾಕುತ್ತಾರೆ. ಅನಧಿಕಾರ ವಾಕ್ಯವೆಂದು ತಿಳಿಯುವದಿಲ್ಲ ನಿರಂಜನ ಸ್ವಾಮಿಗಳು ಬಹುರು
ವದಿಂದಿದ್ದಾರೆ, ನಮ್ಮ ಸ್ವಾಮಿಗಳ್ಯಾಗಿ ನಮ್ಮ ಅಧೀನದಲ್ಲಿ ಇರುತ್ತಾರೆ. ನಾವು ಹೆಸರಿಗೆಬರು
ತ್ತೇವೆ, ನಮ್ಮ ಕೆಲಸಗಳಾಗುತ್ತಿರುವವು. ಇವರೆಲ್ಲರೂ ಒಕ್ಕಟ್ಟು ಆದರೆ ಅನೇಕ ಕಾರಣ
ಳಿಂದ ನಮ್ಮ ಆಟಪಾಟ ಸಾಗುವದಿಲ್ಲ ಅದರಿಂದ ಹೀಗೆ ಇರಲೆಂದು ಸಂಕುಚಿತದೃಷ್ಟಿಯಿಂ
ತಿಳಕೊಂಡಿದ್ದ ಕೆಲವುಭಕ್ತರ ಅಭಿಪ್ರಾಯವನ್ನು ನಾನು ಪರ್ಯಾಯದಿಂದ ಮನಗಂಡಿದ್ದೇ
ನಮಗಿಂತ ಹೆಚ್ಚಿನ ತಪಸ್ಸಿದ್ಧರ ಪ್ರಭಾವದೊಳಗೆ ನಾವು ಮೂಲಿಗೆ ಬೀಳುವೆವು. ಅದು
ರಿಂದ ಸಮಯಭೇದವು ಹೀಗೇ ಇರಲೆಂದು ಸ್ವಾಮಿಗಳಾದರೂ ತಿಳಕೊಂಡಿರುವರೋ ಏ
ನೋ, ಹೀಗಿದ್ದರಂತೂ ಇವರ ಹುಚ್ಚುತನಕ್ಕೆ ಬೆಲೆಯೇ ಇಲ್ಲ. ಮುಕ್ತಿರೂಪವಾದ ಸಿ
ನ್ನಾಸಿಂಹಾಸನವನ್ನೇ ಈರೀತಿ ವಶಮಾಡಿಕೊಂಡು ಕುಣಿದಾಡಿಸ ಹತ್ತಿದ ಬಳಿಕ, ಉಳಿದವು
ಪಾಡೇನು. ಈ ದುರಭಿಮಾನ ಪಿಶಾಚಿಯ ಆಳಿಕೆಗೆ ಇನ್ನೂ ಕೆಲವುಕಾಲ ಅವಕಾಶವಾದ
ಿ ಸಮಯವಾಗುವದಕ್ಕೆ ಹುಕುಂಕೊಡತಕ್ಕದ್ದದೆ. ಒಂದೇ ಒಂದಾಗಿದ್ದ ಶ್ರೀಮದಲ್ಲಮ
ಪ್ರಭು ಸಂತತಿಗೆ ಹ್ಯಾಗೆ ಚೀಲಾಳಸಮೆ, ಮುರಿಗಿಸಮೆ, ಕೇಪಿನಸಮೆ ಕುಮಾರಸಮೆ ಎಂ
ದು ಮೊದಲಿಗಿಲ್ಲದ ಹೆಸರುಗಳನ್ನಿಟ್ಟು ಇವರ ಅಶಾಸ್ತ್ರೀಯಸಮ್ಮತಿಗೆ ಈ ಪಿಶಾಚಿಯು ನ
ಕ್ಕು ಅಣಕಿಸುವದೋಹಾಗೆ ಈ ಹೆಸರುಗಳಗಿಂತ ಮೇಲಾಗಿ ಮುಂದೆಬೆಳೆಸುವ ನಾಲ್ಕುಸಮ
ಯಗಳಿಗೆ ‟ಸಿರಿಯಾಳಸಮೆ ಪಟ್ಟೇ (ತಿರಿಗಿ)ಸಮೆ, ಹಳದೀಸಮೆ, ಪ್ರಾಣಸಮೆ" ಎಂದು
ಮನಸಿಗೆಬಂದಂತೆ ಹೆಸರಿಡುತ್ತ ಹೋದರೂ ಕೇಳುವವರೇ ಇಲ್ಲದಂತಾಗಿದೆ ಉಪಾಯವಿಲ್ಲ
ಸುಮ್ಮನೇ ತಲೆಬೊಗ್ಗಿ ಆದಷ್ಟು ನಡಕೊಳ್ಳುವದೇ ಮಾರ್ಗವು. ಶಿವಶಿವಾ? ಈ ಶೋಚನೀ
ಯ ಸ್ಥಿತಿಯನ್ನು ವಿಚಾರಿಸಿದರೆ ವಿಭ್ರಮವೇ ಆಗುತ್ತದೆ. ಸಮಯಭೇದವುಳ್ಳ ನಿರಂಜನ
ಸ್ವಾಮಿಗಳೂ, ಇವರಿಗೆ ಉತ್ತೇಜನಕೊಡುವ ಕೆಲವು ಭಕ್ತರೂ ಮಾಡುವ ಆಟವನ್ನು
ನೋಡಿದರೆ ಸಮಾಜಾಪಕರ್ಷಕ್ಕೆ ಇವರೇ ಕಾರಣರೆಂಬುವಲ್ಲಿ ತಪ್ಪಾಗುವದಿಲ್ಲ. ವಿರಕ್ತಸ್ವಾ
ಮಿಗಳು ಸಂಪಾದಿಸಿಕೊಂಡ ಮೂರುಶಾಸ್ತ್ರಗಳು ಈಗಿನ ಸಮಯಭೇದಕ್ಕೆ ಅರ್ಥಕೊಡು
ತ್ತವೋ, ಇವರಿಗೆ ಗುರುಗಳೇ ತಿಳಿಸಿಲ್ಲವೋ, ಅಥವಾ ಇವರೇ ಚನ್ನಾಗಿ ತಿಳುಕೊಳ್ಳದೆ
ಶಾಸ್ತ್ರವನ್ನು ಪುಂಡೀ ಸೊಪ್ಪಿನಂತೆ ಉಡಿಯೊಳಗೆ ತಕ್ಕೊಂಡಿದ್ದಾರೋ, ಇಲ್ಲವೆ ಕಾಲವೈಚಿ
ತ್ರ್ಯವೋ ಎಂಬ ಬಗ್ಗೆ, ಸಮದೃಷ್ಟಿಯಿಂದ ವಿಚಾರಮಾಡಿದರೆ ಶಾಸ್ತ್ರವು ಸಮಯಭೇದಕ್ಕೆ
ಅರ್ಥ ಕೊಡುವದಿಲ್ಲೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಒಂದೇಶಾಸ್ತ್ರ, ಒಂದೇ ಆಚಾರ
ಒಂದೇ ಅಧಿಕಾರ, ಒಂದೇ ಪ್ರಯೋಜನವಿದ್ದು, ಸಮಯ ಭೇದಗಳೆಲ್ಲಿಂದ ಬಂದವು? ಇ
ಥರ ಯೋಚನೆಯನ್ನು ಯಾಕೆ ಮಾಡಬಾರದು! ಯಾವನಾದರೂ ‟ಎತ್ತು ಈಯಿತೆಂದು"

ಹೇಳಿದರೆ ,,ಮೈತೊಳೆದು ಹತ್ತೀಕಾಳಿಡು" ಎಂದಪ್ಪಣೆ ಕೊಡಬೇಕೇನು. ಇಂಥವರೇ ತಮ್ಮ ಸಮಯಭೇದದತೊಡರಿನಿಂದ ಮತಾವನತಿಗೆ ಅವಕಾಶಕೊಟ್ಟರೆ ಮಿಕ್ಕಾದ ನಮ್ಮಂಥ ದುರ್ಬಲರೆಷ್ಟು ಕೊಡಬೇಕು. ,,ಸಾಲೇ ಅಯ್ಯನವರು ಮೂತ್ರವನ್ನು ನಿಂತುಬಿಟ್ಟರೆ ಹುಡುಗರು ಓಡ್ಯಾಡಿ ಬಿಟ್ಟರು,, ಎಂಬ ಗಾದೆಯಂದೆ ಆಗಲಿಕ್ಕಿಲ್ಲವೇ! ಅಹೋ ನಿರಂಜನಮಹನೀಯರೇ? ಗುರುವರ್ಯರೇ? ನಿಮ್ಮಲ್ಲಿ ಆಗಿರುವ ಬಹುರೂಪತೆಯಿಂದ ಸಮಾಜಹಿತಕ್ಕೆ ಹೇಳಕೂಡದಷ್ಟು ಪ್ರತಿಬಂಧಕವಾಗಿರುತ್ತ ಇದನ್ನು ತಪ್ಪಿಸುವಬಗ್ಗೆ ಏಕರೂಪತೆಯುಂಟಾಗಲೆಂದು ಇದೊಂದು ವಿಷಯವಾಗಿ ಇಟ್ಟದ್ದಾಗಿದೆ. ಈ ಮಹದ್ವಿಷಯವನ್ನು ಕೈಕೊಳ್ಳಲು ನಾನುಶಕ್ತನಲ್ಲ. ಆದರೂ ಸ್ವಧರ್ಮಾಭಿಮಾನವನ್ನು ಹಿಡಿದು, ಆದಷ್ಟು ಸಮಾಜಸೇವೆಗೆ ನೆರವಾಗಬೇಕೆಂಬ ಲವಲವಿಕೆಯಿಂದ ತಿಳಿದಂತೆ ಎರಡು ಮಾತಾಡಿರುವೆನು. ಶಿಶುವಿನ ತೊದಲುನುಡಿಗಳು ತಂದೆಯ ಅತ್ಯಾನಂದಕ್ಕೆ ಕಾರಣವಾಗುವಂತೆ ನನ್ನ ಭಾಷಣವಲ್ಲಿ ಮಹದ್ವಿಷಯಕ್ಕನುಗುಣವಾದ ತಾತ್ಪರ್ಯವನ್ನು ನಿಮ್ಮ ಸುವಿಚಾರದಿಂದ ತುಂಬಿ, ಸಂತೋಷಪಡಬೇಕೆಂದು ಪ್ರಾರ್ಥಿಸುತ್ತೇನೆ. ಆದರೆ ಪೂಜ್ಯಪಾದ ಮಹಾಸ್ವಾಮಿಗಳೇ? ಗುರುಗಳೇ ಬಹುರೂಪತೆಯಿಂದಾಗುವ ಹಾನಿಗಳನ್ನು ಮನಗಂಡು, ನಿಮ್ಮಲ್ಲಿ ಐಕಮತ್ಯವನ್ನು ಬೆಳೆಸಿರಿ. ಬಿದಿರಿನಂತೆ ನೆಟ್ಟಗೆ ಹೋಗಿರುವ ನಿಮ್ಮ ಮನಸ್ಸನ್ನು ನಿಮ್ಮಂಥ ಮಹನೀಯರಲ್ಲಿ ಉಪಾಯದಿಂದ ಮುರಿಯದಂತೆಬಾಗಿಸಿ, ಕೈಬಿಡುವ ಸ್ವಧರ್ಮವನ್ನುದ್ಧರಿಸಿ ನಡಗಟ್ಟಿನಮ್ಮೆಲ್ಲರನ್ನು ನೀವು ನಿಮ್ಮ ಕೃಪಾರಸದಲ್ಲಿ ಮುಳಗಿಸಿ, ಶಾಸ್ತ್ರಕ್ಕೂ ನಡೆಯುವ ಆಚಾರಕ್ಕೂ ಒರೆಹಚ್ಚಿನೋಡಿ ಕಂಡುಬರುವ ನ್ಯೂನಾತಿರೇಕಗಳನ್ನು ಸರಿಪಡಿಸಿರಿ, ಭಕ್ತಶಿಷ್ಯೋದ್ಧಾರವೇ ನಮ್ಮಕರ್ತವ್ಯವೆಂದು ಯತ್ನಮಾಡಿರೆಂದು ಇನ್ನೊಮ್ಮೆ ಅನನ್ಯಭಾವದಿಂದ ಸನ್ನಿಧಿಯಲ್ಲಿ ವಿಜ್ಞಾಪನೆಯನ್ನು ಮಾಡಿ, ನನ್ನ ಭಾಷಣೆಯನ್ನು ಮುಗಿಸಲಪ್ಪಣೆಯನ್ನು ಪಡೆಯುತ್ತೇನೆ. ... ... ... ... *

( ಕೈಚಪ್ಪಾಳೆ. )

ಚನ್ನಯ್ಯಾ ದ್ಯಾಂಪುರ,
ತಾಲೂಕ ಯಲಬುರಗಾ, ಜಿಲ್ಲಾ ಕೊಪ್ಪಳ.

## ಇದೇ ವಿಷಯುವ ಪುಷ್ಟೀಕರಣಾರ್ಥವಾಗಿ ರಾ॥ರಾ॥ ಚನ್ನಮಲ್ಲಪ್ಪ, ಶಿರಾಳಕೊಪ್ಪ ಇವರು ಮಾಡಿದ ಭಾಷಣವು.

ಶ್ರೀಮನ್ಮಹಾ ನಿರಂಜನ ಸ್ವಾಮಿಗಳವರೇ ? ಸಭಾಧ್ಯಕ್ಷರವರೇ ! ಮತ್ತು ಸಭಾ ಸದರೇ ! ವೀರಶೈವ ಮತದಲ್ಲಿ ನಿರಂಜನ ಸ್ವಾಮಿಗಳು ಅಗ್ರಗಣ್ಯರಾಗಿರುವುದೂ, ಇವರು ಪರಮೇಶ್ವರನ ಅವತಾರ ರೂಪರೆಂದು ನಮ್ಮವರೆಲ್ಲರೂ ಎಣಿಸುವುದೂ, ಇವರು ಭಕ್ತೋದ್ಧರಣಾರ್ಥವಾಗಿ ಸಂಚರಿಸಿ ಭವದೂರ ರಾಗುವಂತೆ ಈ ಮತೀಯರನ್ನುದ್ಧರಿಸುವುದಕ್ಕೆ ಪ್ರಯತ್ನಿಸುವುದೂ, ಎಲ್ಲರಿಗೂ ತಿಳಿದ ವಿಷಯುವೇ ಆಗಿದೆ. ... ...

೧. ‹ನಿರಂಜನ, ಎಂಬ ಪದದಿಂದಲೇ ಇವರು ರಂಜನೆ ಬಾಹಿರರೆಂದೂ, ಲೌಕಿಕರಂತೆ ಪ್ರಪಂಚದಲ್ಲಿ ನೆಲೆಯಾಗಿರುವ ಅರಿಷಡ್ವರ್ಗಗಳಿಗೂ ಮಾಯಾಪಾಶಕ್ಕೂ ಒಳಗಾಗತಕ್ಕವರಲ್ಲವೆಂದೂ ಸ್ಪಷ್ಟವಾಗಿಯೇ ಇದೆ. ಇಂಥಾ ನಿರಂಜನ ಸ್ವಾಮಿಗಳಲ್ಲಿ ಮುರುಘ ಮಯು, ಕುಮಾರಸಮುಯ, ಚೀಲಾಳಸಮುಯ, ಕೇಪಿನ ಸಮುಯುವೆಂದು ನಾಲ್ಕು ಸಮಯ ಭೇದಗಳಿರುವುದಾಗಿಯೂ, ಪ್ರತಿ ಸಮುಯದವರೂ ಇತರ ಸಮುಯದ ಸ್ವಾಮಿಗಳ ದರ್ಶನಕ್ಕೂ, ಇತರ ಸಂಸರ್ಗಗಳಿಗೂ, ಸಹಿಸದಿರುವ ಅಥವಾ ತಿರಸ್ಕರಿಸುವ ಪದ್ಧತಿಯಿದೆ ಎಂ ತಿಳಿಯುತ್ತೇನೆ. ಆದರೆ ಈ ಸಮುಯ ಭೇದಗಳು ವೀರಶೈವ ಮತ ವಿಷಯುಗಳನ್ನು ವಿಶೇ ವಾಗಿ ತಿಳಿಸುತ್ತಿರುವ ಆಗಮುಗಳಲ್ಲಿಯಾಗಲೀ ಅದರಿಂದೀಚೆಗಿನ ಕಾಲದಲ್ಲಿ ರಚಿತವಾದ ಪುರಾಣಗಳಲ್ಲಿಯಾಗಲೀ, ಉಕ್ತವಾದಂತೆ ಇದೂವರೆವಿಗೂ ತಿಳಿದಿಲ್ಲ. ಆದರೆ ಒಬ್ಬ ಗುರುವಿನ ಕಂಜಾತರಾದ ನಾಲ್ವರು ಶಿಷ್ಯರು ಮೇಲ್ಕಂಡ ಸಮುಯ ನಾಮಧೇಯರು ಪರಸ್ಪರ ಅಗ್ರ ದಿಂದ ಬೇರೆ ಬೇರೆ ಪ್ರಾಂತಗಳಲ್ಲಿ ವಾಸವಾಗಿದ್ದು ಸ್ವಪ್ರತಿಷ್ಠೆಯನ್ನು ಆಯಾ ಪ್ರಾಂತ ಳಲ್ಲಿ ಬೀರಿದರೆಂದು ಕೀವದಂತಿ ಇದೆ. ತದನುಸಾರವಾಗಿಯೇ ಅವರ ಅನುಯಾಯಿಗಳ ಸ್ವಪ್ರತಿಷ್ಠಾ ಪುರಸ್ಸರವಾದ ಈ ಅಭಿಮಾನವನ್ನು ವಹಿಸಬೇಕಾಗಿ ಬಂದಿರಬಹುದು ಎ ದೂಹಿಸಬೇಕಾಗಿದೆ. ... ... ... ...

೨. ಈಗಿನ ನಿರಂಜನ ಮುಹಾಸ್ವಾಮಿಗಳು ಏಕಮತ್ಯದಿಂದಿರುವುದಕ್ಕೆ ಇನ್ನೊ ದು ದೊಡ್ಡ ವಿಘ್ನವಿರುವುದು. ಅದೇನೆಂದರೆ:—ಈ ಪರ ಶಿವಸ್ವರೂಪಿಗಳಾದ ಮುಹಾಸ್ವಾಮಿ ಗಳವರ ಮಹಿಮೆಯನ್ನು ತಿಳಿದು ಪೂರ್ವದ ರಾಜರೂ, ಮುಹಾತ್ಮರೂ, ಇವರನ್ನು ಜ ದ್ಗುರುಗಳೆಂದು ಕರೆದರು. ಆ ಕಾಲದಲ್ಲಿ ದಕ್ಷಿಣ ಇಂಡಿಯಾದಲ್ಲಿ ಅನೇಕ ಪಾಳಯ ಪಟ್ಟ ಗಳು ಇದ್ದುದರಿಂದಲೂ, ಒಂದೊಂದು ಪಾಳಯ ಪಟ್ಟನವರಿಗೆ ಪರಸ್ಪರ ಸಂಬಂಧಗಳಿ ದುದರಿಂದಲೂ, ಮೇಲ್ಕಂಡ ನಾಲ್ವರು ಮುಹಾಸ್ವಾಮಿಗಳವರು ಯಾವ ಯಾವ ಪ್ರಾಂತದ

ದ್ದರೋ ಅಲ್ಲೆಲ್ಲಾ ಅವರು ಜಗದ್ಗುರುಗಳಾದರು. ಆಗ ಈ ಸ್ವಾಮಿಗಳಿಗೆ ಭೇಟಿ, ಮರು ಭೇಟಿಗವಕಾಶ ವಿರಲಿಲ್ಲವೆಂದೂಹಿಸಬಹುದಾದ್ದರಿಂದ ಅವರ ಸಮಯಪದ್ಧತಿಯೂ ,, ಜಗದ್ಗುರು,, ಬಿರುದೂ ನಿರಾತಂಕವಾಗಿ ನಡೆಯುಕೊಂಡುಬಂದಿತು ಈಗ ಒಂದೇ ಭಾಗವಾದ ಚಕ್ರಾಧಿಪತ್ಯದ ಆಳ್ವಿಕೆಯಲ್ಲಿ ಈ ನಾಲ್ವರು ಮಹಾಸ್ವಾಮಿಗಳವರೂ ತಮ್ಮತಮ್ಮ ಜಗದ್ಗುರು ಪದವಿಯನ್ನು ಸ್ಥಿರಗೊಳಿಸಿಕೊಂಡಿರುವುದಕ್ಕೆ ಸಂಕೋಚಪಟ್ಟುಕೊಳ್ಳಬೇಕಾಗಿರುವುದು.

೩. ಅಗ್ರಗಣ್ಯರಾದ ಈಗಿನ ನಿರಂಜನ ಸ್ವಾಮಿಗಳು ಭೇದಬುದ್ಧಿಯನ್ನು ಅಲ್ಪ ಮಾತ್ರ ಇಟ್ಟುಕೊಂಡರೆ ಅವರ ಅನುಗ್ರಹಕ್ಕೆ ಪಾತ್ರರಾದವರೂ, ತದನುಯಾಯಿಗಳೂ, ಶಿಷ್ಯರೂ, ಆಶೀರ್ವಾದಕ್ಕೆ ಪಾತ್ರರಾದವರೂ, ಕೊಂಚ ಕೊಂಚವಾಗಿಯಾದರೂ ಭೇದವನ್ನು ಇಟ್ಟುಕೊಳ್ಳುವರು. ಇದರಿಂದ ಐಕಮತ್ಯಕ್ಕೆ ವಿಘ್ನವು ಉಂಟಾಗುವುದು. ಈಗಿನ ವೀರಶೈವ ಸಾಮಾನ್ಯ ಜನರು ಬಹುತರವಾಗಿ ಅಲ್ಪವಿದ್ಯೆಯವರಾದ್ದರಿಂದ ಐಕಮತ್ಯದಿಂದುಂಟಾಗುವ ಮಹತ್ಫಲಗಳನ್ನು ಗಣಿಸದೆ, ಅಥವಾ ಅವುಗಳ ಅಂಕುರವನ್ನಾದರೂ ಯೋಚನೆಗೆ ತಾರದೆ, ಭೇದ ಬುದ್ಧಿಯೊಂದೇ ಸ್ವಪ್ರತಿಷ್ಠೆಯ ಉಪಾಯವೆಂದರಿತಿರುವರು. ಇಂಥಾ ಕಾಲದಲ್ಲಿ ಕಿಂಚಿದ್ಭೇದವೇ ಮಹದ್ಭೇದವಾಗಿ ಪರಿಣಮಿಸುವುದು. ಆದ್ದರಿಂದ ಆಯಾ ಮಹಾಸ್ವಾಮಿಗಳವರ ಪಂಥವನ್ನೇ ನಡೆಸಬೇಕೆಂದು ಅನೇಕರು ಕುತೂಹಲಪಡುವರು. ಇದರಿಂದ ಮತ ಸಾಮಾನ್ಯದ ಕಾರ್ಯಗಳಿಗೆ ವಿಘ್ನ ಬರುವುದು. ... ... *

೪. ‹ಜಗದ್ಗುರು› ಬಿರುದನ್ನು ಉಳಿದ ಮೂವರು ಸ್ವಾಮಿಗಳಿಂದಲೂ ಹೊಂದಬೇಕೆಂದು ಯಾರಾದರೂ ಸ್ವಾಮಿಗಳು ಯೋಚಿಸುವುದಾದರೆ, ಅಂತಹ ಶಕ್ತಿಯನ್ನು ಸ್ಥಿರ ಪ್ರಯತ್ನವೆಂದು ಕೊಂಡಾಡಬಹುದು. ಆದರೆ ಆ ಬಿರುದನ್ನು ಆ ಮಹಾಸ್ವಾಮಿಗಳು ಸ್ಥಿರಪಡಿಸಿಕೊಳ್ಳಲಾರರೆಂದು ಖಚಿತವಾಗಿ ಊಹಿಸಬಹುದಾಗಿದೆ. ‹ಜಗದ್ಗುರು› ಎಂಬಲ್ಲಿ ಜಗತ್ತಿಗೆ ಪ್ರಪಂಚವೆಂಬ ಧಾರಾಳವಾದ ಅರ್ಥವನ್ನು ಮಾಡಬೇಕೇ ಹೊರತು, ವೀರಶೈವಜಗತ್ತೆಂದು ಮಾತ್ರ ಅರ್ಥಮಾಡಲಾಗುವುದಿಲ್ಲ. (ಹಾಗೆ ಮಾಡುವ ಪಕ್ಷಕ್ಕೆ ತನ್ನ ಮನೆಯನ್ನು ಜಗತ್ತೆಂದು ಭಾವಿಸಿದರೆ ಪ್ರತಿಮನೆಯ ಯಜಮಾನನೂ ತನ್ನ ಮನೆಯ ಜಗದ್ಗುರು ವಾಗುನು.) ಈಗ ಪ್ರಪಂಚದಲ್ಲಿಯಾದರೋ ಅನೇಕ ಮತಗಳಿರುವುವು. ಆ ಮತಗಳೆಲ್ಲವನ್ನು ಖಂಡಿಸಿ ಸಿದ್ಧಾಂತ ಪಡಿಸಿ, ಈ ಮತವನ್ನು ಎಲ್ಲಾ ಕಡೆಯಲ್ಲಿಯೂ ಹರಡುವಂತಹ ಅಘಟನಘಟನಾ ಶಕ್ತಿಯು ಆ ಮಹಾಸ್ವಾಮಿಗಳಲ್ಲಿ ಬರಬೇಕಾಗುವುದು. ಈಗಿನ ಸ್ಥಿತಿಯೇ ಇನ್ನು ಮುಂದೂ ನೆಲೆಗೊಳ್ಳುವುದಾದರೆ ಪರಮೇಶ್ವರನೇ ತನ್ನ ನಾಲ್ವರು ಅವತಾರಿಗಳನ್ನು ಭೂಲೋಕಕ್ಕೆ ಕಳುಹಿಸಿ ಅವರ ಮೂಲಕ ಈ ಪ್ರಪಂಚದಲ್ಲಿ ಭೇದವನ್ನು ಹುಟ್ಟಿಸಿ, ಜನರ ಏಳಿಗೆಯನ್ನು ಇಂಥಾ ನಾಗರಿಕ ಕಾಲದಲ್ಲಿಯೂ ಹಾಳು ಮಾಡುತ್ತಿರುವನೆಂದು ಭಾವಿಸಬೇಕಾಗಿದೆ. ... ... ... ... *

೫. ವೀರಶೈವ ಮತದ ಆಚಾರವೆಂಬುದು ಕತ್ತಿಯ ಬಾಯುಳ್ಳಿನ ಜೇನುತು ಪಂತಿರುವುದು, ಎಂಬ ವಾಕ್ಯವು ಮತಗ್ರಂಥಗಳಲ್ಲಿ ಘೋಷಾಘೋಷ ವಾಗಿರುವುದು. ಕಷ್ಟವಾದ ಒಂದೆರಡು ಸಂಗತಿಗಳನ್ನು ಇದರಡಿ ಹೇಳುತ್ತೇನೆ. ...

ನಕರ್ಷೇದ್ಧರಣೀಂವೀರಶೈವದೀಕ್ಷಾಸುಯೋಜಿತಃ ।
ನಬಾತೇನ್ನಖನೇತ್‌ಕ್ವಾಪಿನಚ್ಛೇದೇನ್ನೈವಬಂಧಯೇತ್ ॥
ನವಹೇಚ್ಛಿರಸಾಭಾರಂ ನಾಕಾಷ್ಟಂ ನೇತರಂ ಲಘು ॥
ಪಾ. ಆ. ಪಂಚಮ ಪಟಲ ॥೬೫।೬೬॥

ನಸ್ಪರ್ಶಯೇಚ್ಛ ನೋಪೇಕ್ಷೇತ್ ಶ್ವಾದಿಭಿರ್ಮಾಂಸಲೋಲುಪೈಃ ।
ಶಿವದೀಕ್ಷಾಶ್ರಿತೋಲಿಂಗೀ ನೈವಾಲಿಂಗಿ ನಮರ್ಚ್ಛಯೇತ್ ॥
ಸೇವಾಪೇಕ್ಷೇತ ತತ್ಪೂಜಾ ಮರ್ಚ್ಚಯೇದೇವಲಿಂಗಿನಂ ।
ಪೂಜ್ಯಪೂಜಕ ಕರ್ಮೇಷು ಯದಯೋಗ್ಯಾ ಅಲಿಂಗಿನಃ ॥

ಈ ಕಾಲದಲ್ಲಿ ನಿಜವಾದ ವೀರಶೈವ ರೆಂಬುವರು, ಈ ನಿರಂಜನ ಸ್ವಾಮಿಗ ಮತ್ತು ಇವರ ಅನುಗ್ರಹಕ್ಕೆ ಪಾತ್ರರಾದ ಪಟ್ಟಚರಮೂರ್ತಿಗಳು ಮುಂತಾದವರೇ: ರತು, ಜೀವನಕ್ಕಾಗಿ ಬಂದು ಉದ್ಯೋಗವನ್ನು ನಡೆಸುವವರಲ್ಲ. ಮಿಕ್ಕವರು ಈ ವ ಅನುವಿಡಿದು ವೈದಿಕ, ವ್ಯವಹಾರಿಕ, ಕರ್ಮಗಳೆರಡನ್ನು ನಡೆಸಬೇಕಾಗಿದೆ. ಆದ್ದರಿಂದ ನಿರಂಜನ ಸ್ವಾಮೀಗಳು ಆಗಮೋಕ್ತವಾಗಿರುವ ಪರಶಿವನ ಅಪ್ಪಣೆಯನ್ನು ಪಾಲಿಸಬೇ ಧ್ದು ಅವರ ಕರ್ತವ್ಯವಾಗಿದೆ. ಅಂಥಾ ಅಪ್ಪಣೆಗಳಾವುವೆಂದರೆ:— ...

ಯ ಇಚ್ಛೇನ್ಮಮಸಾರೂಪ್ಯಂ ಸೋರ್ಚಯೇಚ್ಛಿವಯೋಗಿನಂ ।
ಪಾ. ಆ. ಪಟಲ ।೧। ॥೫೦॥

ಅರ್ಚಯೇಜ್ಜಂಗಮಂಧನ್ಯಾಃ ಸಂಧ್ಯಾಯಾಂಗೃಹಮಾಗತಂ ।
ಸಾಕ್ಷಾನ್ಮದ್ರೂಪಮಿಶಾನಿ ಶಯನಾಸನ ಭೋಜನೈಃ ॥
ಪಾ. ಆ. ಪಟಲ ।೪। ॥೮೭॥

ನಕಾರ್ಯಃ ಕಲಹೋದೇವಿ ಅನ್ಯೋನ್ಯಂ ಶಿವಯೋಗಿಭಿಃ ।
ನ ಪೈಶೂನ್ಯಂ ನ ಮಾತ್ಸರ್ಯಂ ನ ದ್ರೋಹಂ ನಾಪಿ ಪೀಡನಂ ॥
ಪಾ. ಆ. ಪಟಲ ।೪।।೯೦॥

೬. ವೀರಶೈವ ಮಂಡಲಿಗೆ ಪರ ಶಿವ ಸ್ವರೂಪಿಗಳಾದ ಎಲ್ಲಾ ಸ್ವಾಮಿಗಳಿಗೆ ಜಿಮಾನರಾದ್ದರಿಂದ ಅವರವರು ಆಯಾಯ ಪ್ರಾಂತದಲ್ಲಿ ಜಗದ್ಗುರು, ಎಂಬ ಬಿರುದ ಧರಿಸುವುದಕ್ಕೆ ಆಯಾ ಸದಾಚಾರವನ್ನು ಅನುಮತಿಸಿದುದು ದರಿಂದಲೂ, ಭಕ್ತ

ದವೂ ಅದೇ ಭಾವನೆಯಿಂದ ಆರಾಧಿಸುತ್ತಿರುವುದರಿಂದಲೂ, ಪ್ರತಿಯೊಬ್ಬರೂ ಜಗದ್ಗುರು ಬಿರುದನ್ನು ಆಯಾ ಪ್ರಾಂತಿಕವೆಂದು ಭಾವಿಸಿಕೊಂಡು ರಾಜರು ರಾಜರನ್ನು ಪ್ರೀತಿಸುವಂತೆ ಒಬ್ಬೊಬ್ಬರು ಪ್ರೀತಿಪೂರ್ವಕವಾಗಿ ಸಂಸರ್ಗಗಳನ್ನು ನಡೆಸಿ, ಐಕಮತ್ಯತೆಯನ್ನು ಹೊಂದುವ ಪಕ್ಷದಲ್ಲಿ ಭಕ್ತಕೋಟಿಯು ಉದ್ಧಾರವಾಗುವುದು. ಮತ್ತು ಪರಶಿವನ ಅಪ್ಪಣೆಯನ್ನು ಅವರು ನೆರವೇರಿಸಿದಂತಾಗುವುದು. ... ... *

೭. ಆದ್ದರಿಂದ ಈಗಿನ ನಿರಂಜನ ಮಹಾ ಸ್ವಾಮಿಗಳವರು ಆಗ್ರಹದಿಂದುಂಟಾದ ಭೇದಗಳನ್ನು ಬಿಟ್ಟು, ಭಕ್ತವೃಂದದ ಆಗ್ರಹ ಶಾಂತಿಗಾದರೂ ಪೂರ್ಣ ಕೃಪೆಗೂಡಿ, ಐಕಮತ್ಯವನ್ನು ಹೊಂದುವ ಬಗ್ಗೆ ಆ ಮಹಾಸ್ವಾಮಿಗಳ ಸನ್ನಿಧಿಗೆ ಕೆಲ ಮಹನೀಯರನ್ನು (ಡೆಪುಟೇಷನ್) ಕಳುಹಿಸುವುದರ ಮೂಲಕ ಅವರಿಗೆ ದಂಡಪ್ರಣಾಮ ಪುರಸ್ಸರವಾಗಿ ವಿಜ್ಞಾಪಿಸಿಕೊಳ್ಳಬೇಕೆಂದು ಈ ಮಹಾ ಸಭೆಯವರೆಲ್ಲರೂ ತೀರ್ಮಾನಮಾಡಿ ಸ್ವಸಮಾಜಾಭಿವೃದ್ಧಿಗೆಯ್ಯಬೇಕೆಂದು ಬೇಡಿಕೊಂಡು ನನ್ನ ಭಾಷಣವನ್ನು ಮುಗಿಸುತ್ತೇನೆ. ... *

( ಕೈಚಪ್ಪಾಳೆ. )

ಕೆ. ಚನ್ನಮಲ್ಲಪ್ಪ, ಶಾಲಾ ಹೆಡ್ಮಾಸ್ಟರ್
ಶಿರಾಳಕೊಪ್ಪ. ಜಿಲ್ಲಾ ಶಿವಮೊಗ್ಗಾ.

---

೪ನೇ ವಿಷಯ—ಪಟ್ಟಚರಾಧಿಕಾರಕ್ಕೆ ನಿಯಮಿಸುವ ವಟು (ಮರಿ)ಗಳು, ಅವಶ್ಯ ಸದಾಚಾರ ಸಂಪನ್ನರಾಗಿಯೂ ವಿದ್ಯಾವಂತರಾಗಿಯೂ ಇರಬೇಕು.

## ಈ ವಿಷಯವನ್ನು ಕುರಿತು, ವೇ॥ ಸುತ್ತೂರು ಶಾಂತವೀರ ಶಾಸ್ತ್ರಿಗಳು ಮಾಡಿದ ಭಾಷಣವು.

ಶ್ರೀಮತ್ಪೂಜ್ಯ ಪಾದರಾದ ಮಹಾಸ್ವಾಮಿಗಳೇ? ಅಧ್ಯಕ್ಷರೇ! ಮತ್ತು ಸಭಿಕರೇ!

ನಮ್ಮ ಈ ವೀರಶೈವ ಮತದಲ್ಲಿ ಧರ್ಮಗ್ಲಾನಿಯುಂಟಾಗಿರುವುದು, ಶಾಸ್ತ್ರೋಕ್ತವಾಗಿರತಕ್ಕ ಸದಾಚರಣೆಗಳು ಬಹುಮಟ್ಟಿಗೆ ನಮ್ಮ ಮತೀಯರ ಅನುಷ್ಠಾನದಲ್ಲಿ ಇಲ್ಲದೇ ಹೋಗಿರುವುದು. ಕೆಲವುಕಡೆ ಸ್ವೇಚ್ಛಾಚಾರಗಳು ಪ್ರಬಲಿಸಿರುವುದು. ಧರ್ಮಕರ್ಮಾಚರಣೆಗಳಲ್ಲಿ ಭಿನ್ನ ಭಿನ್ನ ರೂಪಾಂತರಗಳುಂಟಾಗಿರುವುದೂ ಸಹ ವಿಚಾರಪರರಿಗೆಲ್ಲರಿಗೂ ಗೊತ್ತಾಗಿಯೇ ಇದೆ. ಮತದ ದೃಢತೆಗೆ ಅದರ ಧರ್ಮ ಕರ್ಮಾಚರಣೆಗಳು ಶಿಥಿಲವಾಗದೆ ಇರುವ್ರು

ದೇ ಮುಖ್ಯಸಾಧನವಾದದ್ದಾಗಿದೆ. ಅಂಥಾ ಶೈಥಿಲ್ಯವುಂಟಾಗಬಾರದೆಂಬುದಕ್ಕಾಗಿಯೆ ನಮ್ಮ
ಪ್ರಾಚೀನರು, ಇತರ ಮತದವರು, ಯಾರೂ ಮಾಡದಿರುವ ಪ್ರಶಸ್ತವಾದ ಏರ್ಪಾಡನ್ನು
ಮಾಡಿರುತ್ತಾರೆ. ಆ ಏರ್ಪಾಡು ಯಾವುದೆಂದರೆ;—ದೀಕ್ಷಾ ಶಿಕ್ಷಾಧಿಕಾರವನ್ನು ವಹಿಸಿಕೊಂ
ಡಿರುವ ಮುಖ್ಯ ಪೀಠಾಚಾರ್ಯರ ಅಧಿಕಾರ ಸ್ಥಾನಗಳು, ಅವುಗಳ ಶಾಖೋಪಶಾಖೆಗಳ
ಠಗಳೂ ಸಹ ದೇಶದ ಎಲ್ಲಾ ಕಡೆಯೂ ಇರುವಂತೆ ಮಾಡಿರುವುದೇ ಆಗಿರುತ್ತದೆ. ವಿಚಾ
ಮಾಡಿದರೆ ಈ ಮಠಗಳು ನಮ್ಮ ಮತೀಯರ ಭವರೋಗಕ್ಕೆ ಚಿಕಿತ್ಸೆಯನ್ನು ಮಾಡು
ವೈದ್ಯಶಾಲೆಗಳಾಗಿಯೂ, ದುರಾಚಾರ ದುಷ್ಟ ಧರ್ಮಾದಿಗಳನ್ನು ಮೆಟ್ಟಿ ತುಳಿದು ಸದ್ಧ
ಸ್ಥಾಪನಾರ್ಥವಾಗಿ ಶಿಕ್ಷಾರಕ್ಷೆಗಳನ್ನು ಮಾಡುವ ನ್ಯಾಯಮಂದಿರಗಳಾಗಿಯೂ, ಸ್ವಮ
ಯರಿಗೆ ಸದ್ಬೋಧೆಯನ್ನಿತ್ತು ಸುನೀತಿ ಸತ್ಕ್ರಿಯಾ ಸಮ್ಯಜ್ಞಾನ ಸಂಪನ್ನರನ್ನಾಗಿ ಮಾ
ಡುವ ಮಹಾ ಪಾಠಶಾಲೆಗಳಾಗಿಯೂ ಇರುವಂತೆ ಮಾಡಬೇಕೆಂಬುವುದೇ ಇವುಗಳನ್ನು
ಸಂಸ್ಥಾಪಿಸಿದ ನಮ್ಮ ಪೂರ್ವಾಚಾರ್ಯರ ಮುಖ್ಯೋದ್ದೇಶವಾಗಿತ್ತು. ಆ ಉದ್ದೇಶವು ಎ
ರಮಟ್ಟಿಗೆ ಈಡೇರುತ್ತಿರುವದೆಂಬುದು ಈಗಿನ ಮಠಗಳಸ್ಥಿತಿಯನ್ನು ಕಣ್ಣಾರಕಂಡಿರ
ನಮ್ಮ ಸಮಾಜ ಬಾಂಧವರಿಗೆ ನಾನಾಗಿ ಇಲ್ಲಿ ವಿವರಿಸಿ ಹೇಳಬೇಕಾದದ್ದೇನೂ ಅವಶ್ಯಕ
ಗಿಲ್ಲ. ಉದ್ದೇಶಾನುಸಾರವಾಗಿ ಅವುಗಳ ಸ್ಥಿತಿ, ಇರುತ್ತಿದ್ದರೆ ಮತದ ಧಾರ್ಮಿಕಸ್ಥಿತಿ
ಇಷ್ಟು ಶಿಥಿಲವಾಗುವುದಕ್ಕೆ ಯಾವಕಾರಣವು ಇರುತ್ತಿರಲಿಲ್ಲ. ಆದುದರಿಂದ ಮತದಲ್ಲಿನ
ರ್ಮಿಕ ಶೈಥಿಲ್ಯವನ್ನು ಹೋಗಲಾಡಿಸಬೇಕಾದರೆ ಆ ಧಾರ್ಮಿಕ ಸೂತ್ರವನ್ನು ಕೈಲಿ ಹಿಡಿ
ಕೊಂಡಿರುವ ಈ ಮಠಗಳ ಸ್ಥಿತಿಯನ್ನು ಮೊದಲು ನೆಟ್ಟಗೆ ಮಾಡಬೇಕು. ಅಂದರೆ ಮ
ಕಟ್ಟಡವನ್ನು ಜೀರ್ಣೋದ್ಧಾರ ಮಾಡಬೇಕೆಂದಲ್ಲ, ಮಠಾಧಿಪತಿಗಳಾದ ಗುರುಗಳು ಕ
ವ್ಯದಕ್ಷರಾಗಿರುವಂತೆ ಮಾಡಬೇಕೆಂಬುದೇ ಆಗಿರುತ್ತದೆ. (೨.) ಮತ ಧರ್ಮರಕ್ಷಣೆ
ಭಾರವನ್ನು ಈಮೇಲೆ ಕಂಡ ಧರ್ಮಗುರುಗಳ ಮಠಗಳು, ಮಾತ್ರವೇ ಹೊತ್ತಿರುವ
ಮತಸ್ಥರಾದ ಸರ್ವಜನರ ತಲೆಯಮೇಲೂ ಅದರ ಭಾರವು ಹೊತ್ತಿರುತ್ತದೆ. ಆದರೆ ಧ
ಧಿಕಾರಿಗಳು ತಮ್ಮ ಕರ್ತವ್ಯದಲ್ಲಿ ನ್ಯೂನತೆಯನ್ನುಂಟು ಮಾಡಿಕೊಂಡಿರುವ ಮಟ್ಟಿಗೆ
ಧೀನರಾದ ಜನರುಗಳು ತಮ್ಮ ಕರ್ತವ್ಯದಲ್ಲಿ ನ್ಯೂನತೆಯನ್ನುಂಟುಮಾಡಿಕೊಂಡಿಲ್ಲ.
ಗಂದರೆ;—ಶಿಷ್ಯಜನರು ಯಥಾಶಕ್ತಿಯಾಗಿ ಗುರುಸೇವೆಯನ್ನು ಮಾಡುವುದರಲ್ಲೂ ಕಾ
ಕೆ ಮೊದಲಾದುವನ್ನು ಕೊಟ್ಟು ಗುರುಕುಲದವರನ್ನು ಆದರಿಸುವುದರಲ್ಲೂ, ಸಾಧ
ವಾಗಿ ತತ್ಪರರಾಗಿಯೇ ಇದ್ದಾರೆ. ಗುರು ಶ್ರೇಣಿಯವರಾದರೋ ಇದಕ್ಕೆ ಪ್ರತಿಯಾಗಿ
ಮಾಡಬೇಕಾದ ಸದಾಚಾರ ಬೋಧೆ, ದುರಾಚಾರ ಖಂಡನೆ, ಮತ ತತ್ವೋಪದೇಶ
ಲಾದ ತಮ್ಮ ಕರ್ತವ್ಯ ಕರ್ಮಗಳನ್ನು ನಾವು ಸರಿಯಾಗಿ ಮಾಡದೇ ಇದ್ದರೂ ತಮ್ಮ
ಣಿಕೆ ಕಪ್ಪಗಳನ್ನು ಎತ್ತುವ ವಿಷಯದಲ್ಲಿ ಮಾತ್ರ, ತಮ್ಮ ಯಾವಚ್ಛಕ್ತಿ ಬುದ್ಧಿ ಜ್ಞಾನ
ಗಳನ್ನೆಲ್ಲಾ ಉಪಯೋಗಿಸಲು ವ್ಯಗ್ರರಾಗಿರುತ್ತಿರುವುದು ಮಾತ್ರ ವಿಷಾದಕರವಾ

ಹೀಗೆ ಅವರಲ್ಲಿರುವ ಕರ್ತವ್ಯ ಕುಂಠತೆಯನ್ನು ಅವರೇ ತಿಳಿದು, ಅದರ ಪರಿಹಾರೋಪಾಯವನ್ನು ಅವರೇ ಗೊತ್ತುಮಾಡಿಕೊಂಡು ಆಚರಿಸಿ, ಕರ್ತವ್ಯದಕ್ಷರಾಗಿದ್ದರೆ ಶಿಷ್ಯಜನಶ್ರೇಣಿಯು ಅದಕ್ಕಾಗಿ ಯಾವದೊಂದು ಯತ್ನವನ್ನು ಮಾಡಬೇಕಾದದ್ದೇ ಇರಲಿಲ್ಲ. ಅವರಲ್ಲಿ ಆ ವಿಧವಾದ ಎಚ್ಚರಿಕೆಯೂ ಯತ್ನವೂ ಕಂಡು ಬರುವದಿಲ್ಲವಾದ್ದರಿಂದ ದಾರಿತಪ್ಪಿದ ಗಂಡನನ್ನು ವಿನೀತೆಯಾದ ಗೃಹಿಣಿಯು, ತಿದ್ದಿಕೊಳ್ಳಲು ಯತ್ನಿಸಿಕೊಳ್ಳುವಂತಹ ಅವಸ್ಥೆಯು ಸದ್ಯಃ ನಮ್ಮ ಮಠದಲ್ಲುಂಟಾಗಿರುವುದು. ಆ ಕಾರಣದಿಂದಲೇ ನಮ್ಮ ಈ ಮಹಾಸಭೆಯವರು ಪಟ್ಟಚರಾಧಿಕಾರಕ್ಕೆ ನೇಮಿಸಲ್ಪಡುವ ‹ ವಟುಗಳು ›, ಅವಶ್ಯ ಸದಾಚಾರಸಂಪನ್ನರಾಗಿಯೂ ವಿದ್ಯಾವಂತರಾಗಿಯೂ ಇರಬೇಕೆಂಬೊಂದು ವಿಷಯವನ್ನು ಚರ್ಚನೀಯಾಂಶಗಳ ಕೋಟೆಯಲ್ಲಿ ಸೇರಿಸಿರುವುದು. ಮಠಾಧಿಕಾರವನ್ನು ಮಾಡತಕ್ಕ ಗುರುವು, ತಾನು ಸ್ವತಃ ವಿದ್ಯಾನೀತಿ ಸದಾಚಾರಾದಿಗಳಿಂದ ಸಂಪನ್ನನಾಗದಿದ್ದರೆ, ತನ್ನ ಕೈಕೆಳಗಿರುವ ಮಠದ ಜನರನ್ನು ಆ ಸದ್ಗುಣಗಳಿಂದ ಸಂಪನ್ನರಾಗುವಂತೆ ಮಾಡಲು ಎಂದಿಗೂ ಶಕ್ತನಾಗುವದಿಲ್ಲ. ॥ಶ್ಲೋ॥ ಗುರುಶ್ಚಗುಣವಾರ್ಪ್ರಾಜ್ಞಃ ಪರಮಾನಂದಭಾಸಕಃ ॥ ತತ್ವವಿಚ್ಛಿವಸಂಸಕ್ತೋ ಮುಕ್ತಿದೋನತುಚಾಪರಃ ॥ ನಪುನರ್ನಾಮಮಾತ್ರೇಣ ಸಂವಿತ್ತಿರಹಿತಸ್ತುಯಃ॥ ಅನ್ಯಂನತಾರಯೇದಜ್ಞಃ ಕಿಂಶಿಲಾತಾರಯೆಚ್ಛಿಲಾಂ ॥ ಎಂದರೆ;—ಗುರುವು ಸದ್ಗುಣಶಾಲಿಯಾಗಿಯೂ, ಪಂಡಿತನಾಗಿಯೂ, ಶಿಷ್ಯನಿಗೆ ಸುಜ್ಞಾನಾನಂದವನ್ನುಂಟುಮಾಡಿ ಕೊಡುವನಾಗಿಯೂ, ಮತ ತತ್ವವನ್ನು ಬಲ್ಲವನಾಗಿಯೂ, ಶಿವಯೋಗಿಯಾಗಿಯೂ ಇದ್ದರೆ ಆಶ್ರಿತರಿಗೆ ಮುಕ್ತಿಯನ್ನು ಕೊಡಲು ಶಕ್ತನಾಗುತ್ತಾನೆ. ಅಂಥಯೋಗ್ಯತೆ ಇಲ್ಲದವನು ಮುಕ್ತಿಪ್ರದ ಗುರುವೆನಿಸಿಕೊಳ್ಳುವದಿಲ್ಲ. ತಕ್ಕ ಜ್ಞಾನವಿಲ್ಲದೆ ನಾಮ ಮಾತ್ರಕ್ಕೆ ಗುರುವೆನಿಸಿಕೊಂಡಿರುವವನು ತಾನೇ ಭವಸಾಗರವನ್ನು ದಾಟಲು ಅಸಮರ್ಥನಾಗಿರುವಾಗ, ತನ್ನನ್ನು ಆಶ್ರಯಿಸಿದ ಮತ್ತೊಬ್ಬರನ್ನು ಭವಬಂಧದಿಂದ ತಪ್ಪಿಸಿ, ಮುಕ್ತನನ್ನು ಮಾಡಬಲ್ಲನೆ? ನೀರಿನಲ್ಲಿ ತಾನೇ ಮುಳುಗಿಕೊಳ್ಳುವ ಕಲ್ಲು, ತನ್ನನ್ನು ಗಂಟುಬಿದ್ದ ಮತ್ತೊಂದು ಕಲ್ಲನ್ನು ಮೇಲಕ್ಕೆ ತೇಲಿಸುವದುಂಟೆ! ಎಂಬದಾಗಿ ಕ್ರಿಯಾಸಾರದಲ್ಲಿ ಹೇಳಲ್ಪಟ್ಟರುವುದು. ಗುರುವು ಎಂಥಾವನಾಗಿರಬೇಕೆಂಬುದು, ಇದರಿಂದ ಸ್ಪಷ್ಟವಾಗುವುದು. ಮತ್ತು ಮಠದ ಆಚಾರ ರಕ್ಷಣೆಗಾಗಿ ಪಟ್ಟ ಚರಮೂರ್ತಿಗಳನ್ನು ನೇಮಿಸಿಕೊಳ್ಳಬೇಕೆಂದು ವಿಧಿಸುವಾಗ ವೀರಶೈವಾಚಾರ ಕೌಸ್ತುಭದಲ್ಲಿ ಅವರ ಯೋಗ್ಯತೆಯ ಅವಶ್ಯಕತೆಯನ್ನು ಕುರಿತು ಹೇಳಿರುವ ದೇನೆಂದರೆ; — ಶ್ಲೋ॥ ಕುಲೀನಂಸತ್ಯಸಂಧಾನಂ ಸರ್ವಲಕ್ಷಣಸಮ್ಮತಂ । ಗುರುಸಿದ್ಧಾಂತತಂತ್ರಜ್ಞಂ ಗುರುಕ್ರಮಸಮನ್ವಿತಂ॥ ಲಕ್ಷಣೈಸ್ತಂಪರೀಕ್ಷೇತ ಬಹುಶಶ್ಯಾಸ್ತ್ರಕೋವಿದಃ ॥ ಎಂದರೆ;—ಗುರುಸ್ಥಾನವನ್ನು ಅಡರುವುದಕ್ಕೆ ಸತ್ಕುಲಪ್ರಸೂತನಾಗಿಯೂ, ಸತ್ಯಶೀಲನಾಗಿಯೂ, ಅಂಗವೈಕಲ್ಯಾದಿ ಯಾವದೊಂದು ದೋಷವಿಲ್ಲದವನಾಗಿಯೂ, ಅಯ್ಯಾಚಾರದ ಮನೆತನದವನಾಗಿಯೂ ಇದ್ದಾನೆಯೋ ಇಲ್ಲವೋ ಎಂಬುವದನ್ನು ಶಾಸ್ತ್ರಜ್ಞ

ರಾದ ಜನರು, ಚೆನ್ನಾಗಿ ಪರೀಕ್ಷಿಸಿ ಅಂಥ ಯೋಗ್ಯತೆ ಇದ್ದವರಿಗೆ ಮಠಾಧಿಕಾರವನ್ನು ಕೊಡಿಸಬೇಕೆಂದು ಹೇಳಲ್ಪಟ್ಟಿರುವುದು. ಮತ್ತು ಕ್ರಿಯಾಸಾರದಲ್ಲಿ;—ಶ್ಲೋ॥ ಮಠಸ್ಥ ಸಮುತ್ಪನ್ನಃ ಶ್ಯಾಂತಶ್ಯೈವಾಗಮಾರ್ಥವಿತ್। ಅನೂಚಾನಃಪ್ರಸನ್ನಾತ್ಮಾ ಶಿವದೀಕ್ಷಾಭಿಷಿಚಿತಃ ॥ ಶಿವಾಗಮಜ್ಞೋಮತಿಮಾಂಚ್ಛಿವಪೂಜಾಪರಾಯಣಃ। ರುದ್ರಾಕ್ಷಮಾಲಾಬಿಭ್ರಾಣಸ್ತ್ರಿಪುಂಡ್ರಾಂಕಿತಮಸ್ತಕಃ ॥ ವಿಶುದ್ಧದೇಹಃಕುಲಜಶ್ಯೈವಾಚಾರಸಮನ್ವಿತಃ। ಭಸ್ಮೋದ್ಧೂಳಿತನಿಷ್ಣಾತೋ ಭಸ್ಮತತ್ವವಿವೇಕವಾನ್ ॥ ವರ್ಣಾಶ್ರಮಕ್ರಿಯಾನಿಷ್ಠೋ ಧರ್ಮವಿಚ್ಛಾಸ್ತ್ರಕೋವಿದಃ। ಮಿತಾಶೀಮಿತನಿದ್ರಶ್ಚ ಯಮಿಾವಾಗ್ಯೋಗತತ್ಪರಃ ॥ ಜಿತೇಂದ್ರಿಯೋಜಿತದ್ವಂದ್ವಸ್ತಪಶ್ಶೀಲೋದಯಾಪರಃ। ಸ್ಥಿರಬುದ್ಧಿಸ್ಥಿರಾರಂಭ ಶ್ಯೈವಪೂಜಾದಿಕರ್ಮವಿತ್। ಸತ್ಯವಾಗೂರ್ಜಿತಪ್ರಾಜ್ಞೋ ಮೇಧಾವೀನಿಯತಶ್ಶುಚಿಃ। ಲಿಂಗಾಂಗಸ್ಥಲಭೇದಜ್ಞಃ ಷಟ್ಸ್ಥಲಜ್ಞಾನತತ್ಪರಃ ॥ ವಯಸ್ಷೋಡಶಕಾದೂರ್ಧ್ವಂ ಸಪ್ತತೇರಥಯಿಷ್ಯತೇ। ನ್ಯಾಸಮುದ್ರಾವಿಧಾನಜ್ಞೋಹ್ಯಂಕುರಾರ್ಪಣತತ್ವವಿತ್ ॥ ಶಿವಸಿದ್ಧಾಂತತತ್ವಜ್ಞಃ ಷಡಧ್ವಜ್ಞಾನತತ್ಪರಃ। ನಿತ್ಯಾಧಿಕಾರಕುಶಲೋ ನೈಮಿತ್ತಿಕವಿಚಕ್ಷಣಃ ॥ ಕಾಮ್ಯಾಧಿಕಾರಚತುರೋ ದೀಕ್ಷಾಕರ್ಮಣಿಕರ್ಮಠಃ ॥ ಎಂದರೆ; — ಮಠಾಧಿಕಾರಿಗಳ ವಂಶೀಯರಾಗಿಯೂ ಮಠಾಧಿಕಾರಿಗಳಾತಕ್ಕವರು ವಿದ್ಯಾ, ನೀತಿ, ಸೌಜನ್ಯ, ಶಮದಮಾದಿ ಗುಣಸಂಪತ್ತಿ, ಸತ್ಕುಲಪ್ರಸೂತ ಮೊದಲಾದ ಸದ್ಗುಣಗಳುಳ್ಳವರಾಗಿರಬೇಕೆಂದು ಹೇಳಲ್ಪಟ್ಟಿರುವುದು. ಮಠಾಧಿಕಾರವನ್ನು ವಹಿಸುವವರ ಯೋಗ್ಯತೆಯು ಹೀಗಿರಬೇಕೆಂಬುದನ್ನು ಕುರಿತು, ಇದರಂತೆ ಎಷ್ಟೋ ಗ್ರಂಥಗಳಲ್ಲಿ ವಿವರಿಸಿರುವರು. ಮಠಾಧಿಕಾರವನ್ನು ವಹಿಸಿದನಂತರವೂ ಕೂಡ ಅವರುಗಳು ಮಾಡಬೇಕಾದ ಕರ್ತವ್ಯವೇನೆಂಬುದನ್ನು ಕುರಿತು, ವೀರಶೈವಾಚಾರ ಕೌಸ್ತುಭದಲ್ಲಿ ಹೀಗೆ ವರ್ಣನೆ ಇರುತ್ತದೆ; — ಶಿವೋತ್ಕರ್ಷಂವೀರಶೈವ ಮತಂಸ್ವಾಚಾರಮುತ್ತಮಂ। ಸ್ಥಾಪಯಸ್ವಯಥಾಶಾಸ್ತ್ರಂ ಚರಮೂರ್ತೀನ್ಪ್ರತೋಷಯ ॥ ಸಂಚಾರಂಕುರುಸರ್ವತ್ರ ಸ್ಥಾಪ್ಯಗುರುರಾಡಹರಾತ್ ॥ ಎಂದರೆ;—ನೀನು ದೇಶದ ಎಲ್ಲಾ ಕಡೆಯಲ್ಲೂ ಸಂಚರಿಸಿ ಶಿವಸರ್ವೋತ್ತಮತ್ವವನ್ನು, ವೀರಶೈವ ಮತದ ಔತ್ಕೃಷ್ಟ್ಯವನ್ನು, ಸದಾಚಾರವನ್ನೂ ಶಾಸ್ತ್ರಸಮ್ಮತವಾಗಿ ಬೋಧಿಸಿ, ಪ್ರತಿಷ್ಠಾಪಿಸು ಎಂದು ಚರ ಪಟ್ಟಾಧಿಕಾರಿಗೆ ಸ್ಥಿರ ಪಟ್ಟಾಧಿಕಾರಿಯು ಉಪದೇಶಿಸಬೇಕೆಂದು ವಿಧಿ ಇರುವುದು. ಇಂಥ ಸ್ವಕರ್ತವ್ಯವನ್ನು ನೆರವೇರಿಸಬೇಕಾಗಿದ್ದರೆ ಅವರ ಯೋಗ್ಯತೆಯೂ ಶಕ್ತಿಯು ಸಾಮರ್ಥ್ಯವೂ ಎಷ್ಟರಮಟ್ಟಿಗೆ ಇರಬೇಕೆಂಬುವದನ್ನು ಹೇಳಬೇಕಾದ್ದಿಲ್ಲ. ಅದು ಕಾರಣವೇ ಗುರುಪೀಠಾಧಿಕಾರವನ್ನು ವಹಿಸತಕ್ಕವರು ವಿದ್ಯಾವಂತರಾಗಿ ಮತ ಗ್ರಂಥಗಳನ್ನು ಓದಿ ತಿಳಿದುಕೊಳ್ಳುವುದಕ್ಕೆ ಸಾಧಕವಾದ ಸಂಸ್ಕೃತ ವಿದ್ಯಾಭ್ಯಾಸವನ್ನು ಮಾಡಿ, ಗುರುಕುಲವಾಸದಿಂದ ಸದಾಚಾರ ಕ್ರಮವನ್ನು ತಿಳಿದು,—ಶ್ಲೋ॥ ಆಚಿನೋತಿಹಿಶಾಸ್ತ್ರಾರ್ಥಾ ನಾಚಾರಾನ್ಸ್ಥಾಪಯತ್ಯಪಿ। ಸ್ವಯಮಾಚರತೇಯಸ್ತು ಸ ಆಚಾರ್ಯ ಇತಿಸ್ಮೃತಃ॥ ಎಂದರೆ;—ಶಾಸ್ತ್ರದಲ್ಲಿ ಹೇಳಿರತಕ್ಕ ಆಚಾರಗಳನ್ನು

ತಿಳಿದವನಾಗಿ, ಅದರಂತೆ ತಾನು ಆಚರಿಸುತ್ತಾ ಶಿಷ್ಯಮಂಡಲಿಗೆ ಬೋಧಿಸಿ, ತದನುಷ್ಠಾನಾಸಕ್ತರನ್ನು ಮಾಡುವವನೇ ಆಚಾರ್ಯನೆನಿಸಿಕೊಳ್ಳುವನು. ಆಚಾರ್ಯನೆಂಬ ಪೆಸರು ಗುರುಪೀಠಾಧಿಕಾರಿಗೆ ಸಾರ್ಥಕವಾಗಬೇಕಾಗಿದ್ದರೂ, ಅಂಥ ಆಚಾರ್ಯನಿಂದ ಮಠಕ್ಕೆ ಬಂದುಪ್ರಯೋಜನವಾಗಬೇಕಾಗಿದ್ದರೂ, ಆತನು ಪೂರ್ವೋಕ್ತವಾದ ಲಕ್ಷಣಗಳಿಂದ ಸಂಪನ್ನನಾಗಿದ್ದೇ ತೀರಬೇಕು. ಹಾಗಲ್ಲದಿದ್ದವರು ನಾಮ ಮಾತ್ರದ ಆಚಾರ್ಯರೇ ಹೊರತು ಮತ್ತೆ ಬೇರೆ ಅಲ್ಲ. ಶಿಷ್ಯರು ಮಠಾಚಾರ್ಯರಿಗೆ ಸಲ್ಲಿಸುವ ದಕ್ಷಿಣೆ ಕಾಣಿಕೆ ಮೊದಲಾದ ವೆಚ್ಚಗಳು ಸಾರ್ಥಕವಾಗಬೇಕಾದರೂ ಮಠಸ್ಥಾಪಕರಾದ ಪೂರ್ವಿಕರ ಉದ್ದೇಶವು ಈಡೇರಬೇಕಾದರೂ ನಿಷ್ಫಲವಾಗಿ ಈಗ ಉಂಟಾಗಿರುವ ಮಠಗಳ ಸಂಖ್ಯಾಧಿಕ್ಯದಿಂದ ಮಠಕ್ಕೆ ಬಂದು ಭಾರವೇ ಹೊರತು ಪ್ರಯೋಜನವಿಲ್ಲವೆಂದು, ಈಗ ಮಠಸ್ಥರಲ್ಲಿ ಉಂಟಾಗಿರುವ ತಿಳುವಳಿಕೆಯೂ ಕಳೆದು ಹೋಗಬೇಕಾದರೂ, ಮಠಸ್ಥರಲ್ಲಿ ಶಿಷ್ಯಜನರ ಭಕ್ತಿಯು ನಿಷ್ಕಪಟವಾಗಿ ಬೆಳೆಯಬೇಕಾದರೂ, ಅವರಲ್ಲಿ ಧರ್ಮಶ್ರದ್ಧೆ ಸದಾಚಾರ ಪ್ರೀತಿ ಮಠ ತತ್ವಜ್ಞಾನ ಇವುಗಳ ಪ್ರಸಾರವಾಗಬೇಕಾದರೂ, ನಮ್ಮ ಮಠ ಗುರುಗಳ ಸುಧಾರಣೆಯೇ ಅತ್ಯಾವಶ್ಯಕವೆಂಬುದನ್ನು ಎಷ್ಟುಬಾರಿ ಹೇಳಿದರೂ ತೀರದು. ಅವರಲ್ಲಿ ಯಾವಸುಧಾರಣೆಯುಂಟಾಗಬೇಕಾದರೂ, ಎಲ್ಲಕ್ಕೂ ಮೂಲಾಧಾರವಾದ ವಿದ್ಯಾಭ್ಯಾಸವನ್ನು ಅವರು ಮಾಡಿಯೇತೀರಬೇಕಾಗಿರುವುದು. ಅದನ್ನು ಬಿಟ್ಟು ಬೇರೆ ಉಪಾಯವಿಲ್ಲ. ಏಕೆಂದರೆ;—ಶ್ಲೋ॥ ವಿದ್ಯೋತ್ಕರ್ಷಬಲೇನೈವಗುರುರ್ಭವತಿನಾನ್ಯಥಾ ॥ ಎಂಬದಾಗಿ ಪ್ರಮಾಣವಿರುವದಲ್ಲದೆ ಅನುಭವಸಿದ್ಧವಾಗಿಯೂ ಇರುವುದು. ಆದುದರಿಂದ ಆ ಗುರುಪೀಠದವರ ಸುಧಾರಣೆಯನ್ನು ಮಾಡುವುದಕ್ಕಾಗಿ ಮಠಸ್ಥರೆಲ್ಲರೂ ಈಗ ಪೂರ್ಣಸಾಹಸವನ್ನು ಮಾಡಬೇಕಾಗಿರುವುದು. ಈ ಉದ್ದೇಶವನ್ನು ನೆರವೇರಿಸುವುದಕ್ಕಾಗಿ ಪ್ರತಿಯೊಂದು ಸ್ಥಲದ ಭಕ್ತಮಾಹೇಶ್ವರರು ತಮಗೆತೋಚಿದ ಸಾಧ್ಯವಾದ ಪ್ರಯತ್ನಗಳನ್ನೆಲ್ಲಾ ತ್ರಿಕರಣಪೂರ್ವಕವಾಗಿ ಮಾಡುತ್ತಾಬಂದರೆ ಮಠ ಧರ್ಮೋದ್ಧಾರದ ಫಲವನ್ನು ಜಗದೀಶ್ವರನು ಅವರಿಗೆ ಉಂಟುಮಾಡಿ ಕೊಡುವನು. ಇಂಥ ಪ್ರಯತ್ನಗಳಿಗೆ ವಿಘ್ನವನ್ನು ತರುವವರು ಮಠದ್ರೋಹಿಗಳೂ, ಧರ್ಮದ್ರೋಹಿಗಳೂ, ಶಿವಾನುಗ್ರಹ ದೂರರೂ ಆಗುವುದರಲ್ಲಿ ಸಂಶಯವಿಲ್ಲ. ಮುಖ್ಯವಾಗಿ ಇತಃಪರವಾದರೂ ಪ್ರತಿಯೊಂದು ಮಠಕ್ಕೂ ವಿದ್ಯಾವಂತರಾದ ವಟುಗಳನ್ನೇ ಮಠಾಧಿಕಾರಿಗಳನ್ನು ಮಾಡುತ್ತಾ ಬರಬೇಕು. ಅವರವರ ದೇಹಸಂಬಂಧಗಳಲ್ಲಿ ಅಂಥ ವಿದ್ಯಾವಂತರು ದೊರೆಯದಿದ್ದರೆ ಬೇರೆ ಕಡೆಯಿಂದಲಾದರೂ ಅಂಥ ಯೋಗ್ಯತೆಯುಳ್ಳವರನ್ನು ಆರಿಸಿ ತರುವ ಉದಾರಭಾವವನ್ನು ಮಠದ ಕಲ್ಯಾಣದಮೇಲಣ ದೃಷ್ಟಿಯಿಂದ ವಹಿಸುವವರಾಗಬೇಕು ಇಂಥವಟುಗಳು ಯಥೇಚ್ಛವಾಗಿ ದೊರೆಯಬೇಕೆಂಬದಾಗಿ ಮಾಡಬೇಕೆಂಬ ಉದ್ದೇಶದಿಂದಲೇ ಶ್ರೀ ಹಾನಗಲ್ಲು ಮಹಾ ಸ್ವಾಮಿಯವರು ಶಿವಯೋಗ ಮಂದಿರದ ಸ್ಥಾಪನವನ್ನು ಮಾಡಿ ಚಿರಸ್ಮರಣೀಯವಾದ ಉಪಕಾರವನ್ನು ಮಾಡಿ, ಎಲ್ಲರ ಕೃತಜ್ಞತಾವಂದನೆಗಳಿಗೆ ಪಾತ್ರರಾಗಿರುತ್ತಾರೆ.

ದೇಶದಮೇಲಿರುವ ಎಲ್ಲಾ ಮಠಗಳು, ಮುಖ್ಯಾಚಾರ್ಯಪೀಠಗಳಿಗೆ ಶಾಖೆಗಳಾಗಿಯೂ, ಅಧೀನಗಳಾಗಿಯೂ ಇರುತ್ತವೆ. ಆಯಾ ಶಾಖೆಯ ಮಠಗಳ ಗೋಷ್ವಾರಿಯನ್ನು ಆ ಮುಖ್ಯಾಚಾರ್ಯರು ಮಾಡಿಸಿಟ್ಟುಕೊಂಡು ಪ್ರತಿಯೊಂದು ಮಠಕ್ಕೂ ನವೀನಾಧಿಕಾರಿಯನ್ನು ನಿಯಮಿಸಿ ಬೇಕಾಗಿ ಬಂದಾಗ ಆ ವಟುವಿನ ಯೋಗ್ಯತೆ ಮೊದಲಾದ ವಿಷಯಗಳನ್ನು ಸ್ಥಳೀಯರು ಅಥವಾ ಪೂರ್ವಾಧಿಕಾರಿಗಳು ಸಂಸ್ಥಾನಗಳಿಗೆ ತಿಳುಹಿಸಿ, ಅಲ್ಲಿಂದ ಅನುಮೋದನೆಯನ್ನು ಪಡೆದನಂತರವೆ ಅಲ್ಲಿನ ಪಟ್ಟಾಧಿಕಾರ ಮೊದಲಾದವುಗಳು ನೆರವೇರುವಂತೆಯೂ ಹಾಗಲ್ಲದೆ ಸ್ವೇಚ್ಛೆಯಿಂದ ಮಾಡಿಕೊಂಡ ಮಠಾಧಿಕಾರಕ್ಕೆ ಅಲ್ಲಿನ ಶಿಷ್ಯಮಂಡಲಿಯು ವಿಧೇಯತೆಯನ್ನು ತೋರಿಸದೆ ಇರುವಂತೆಯೂ ಬಂದು ಕಟ್ಟಪ್ಪಣೆಯನ್ನು ಮಾಡಿಕೊಂಡಿದ್ದಾದರೆ ಈ ಉದ್ದೇಶವು ತಕ್ಕಮಟ್ಟಿಗೆ ಸಫಲವಾಗುವದೆಂದು ಕಾಣುತ್ತದೆ. ಇದು ಸರ್ವರಶ್ರೇಯಸ್ಸಿಗೂ ಅತ್ಯಂತ ಸಾಧಕವಾದ ವಿಷಯವಾದ್ದರಿಂದ ಮಹಾ ಸಭೆಯವರೆಲ್ಲರೂ ಪೂರ್ಣವಾಗಿ ಪರ್ಯಾಲೋಚಿಸಿ, ಸಿಂಹಾಸನಾಧೀಶ್ವರರ ಅನುಮತಿಯನ್ನು ಪಡೆದು, ಇಂಥ ನಿಬಂಧನೆಯೊಂದನ್ನು ವ್ಯವಹಾರದಲ್ಲಿ ತಂದುಕೊಳ್ಳುವುದಕ್ಕೆ ಮನಸ್ಕರಿಸಬೇಕೇಂದು ಈ ಮಹಾಸಭೆಗೆ ಮಹಾಭಿಮಾನ ವಿಶೇಷದಿಂದ ದಯಮಾಡಿಸಿರುವ ಮಹಾ ಜನರೆಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಸಮಯಬಿದ್ದಾಗ ಇದೇ ತೆರದ ಪ್ರಯತ್ನವನ್ನು ತ್ರಿಕರಣಶುದ್ಧಿಯಿಂದ ಮಾಡುವವೇದೃಢಪ್ರತಿಜ್ಞಾರೂಢ ರಾಗಬೇಕೇಂದು ಪ್ರಾರ್ಥಿಸಿ, ಈ ಮಹಾ ಸೂಚನೆಯನ್ನು ಸಭೆಯ ಮುಂದಿಟ್ಟು ನನ್ನ ಉಪನ್ಯಾಸವನ್ನು ವಿರಮಿಸುತ್ತೇನೆ. ... ...

( ಕೈಚಪ್ಪಾಳೆ )

ಸುತ್ತೂರು ಶಾಂತವೀರಶಾಸ್ತ್ರಿ, ಮೈಸೂರು.

---

## ಇದೇ ವಿಷಯವನ್ನು ಅನುಮೋದಿಸುತ್ತಾ ವೇ॥ ಮಿರಜಿ ಸಣ್ಣ ತಮ್ಮಪ್ಪಶಾಸ್ತ್ರಿಗಳು ಮಾಡಿದ ಭಾಷಣವು.

ಭೋ ಪ್ರಣವ ಸ್ವರೂಪಿಗಳಾದ ನಿರಂಜನ ಪ್ರಭುಗಳೇ ! ಗುರುಗಳಾದ ಪಟ್ಟಾಧ್ಯಕ್ಷರೇ ! ಚರ ಪಟ್ಟಾಧ್ಯಕ್ಷರೇ ? ಇತರ ಮಾಹೇಶ್ವರ ಮೂರ್ತಿಗಳೇ ? ಅಧ್ಯಕ್ಷರೇ! ಇತರ ಮಹನೀಯರೇ ? ಪ್ರಕೃತದಲ್ಲಿ ಧರ್ಮಸುಧಾರಣೆಯ ಬಗ್ಗೆ ಉಪನ್ಯಾಸ ಮಾಡಲಿಕ್ಕೆ ಅಪ್ಪಣೆಯ ಮಾಡಿದರೆ ಇದು ಸಾಧಾರಣವಲ್ಲ; ನನ್ನಂಥ ಅಲ್ಪಜ್ಞನಿಂದ ಪರಿಪೂರ್ಣವಾಗತಕ್ಕದ್ದಲ್ಲ; ಈ ವಿಷಯವು ಸಮುದ್ರಪ್ರಾಯವಾದಂಥಾದ್ದು. ಆದರೂ ಅಧ್ಯಕ್ಷರ ಆಜ್ಞೆಕ್ಕೆ

ಅನುಸರಿಸಿ, ಅಲ್ಪಮತಿಯ ಪ್ರಕಾರ ತಮ್ಮಮುಂದೆ ಇಡುತ್ತೇನೆ. ನೀರಕ್ಷೀರನ್ಯಾಯದಂತೆ ಸ್ವೀಕರಿಸಬೇಕೆಂದು ಪ್ರಾರ್ಥಿಸಿ, ನನ್ನ ವ್ಯಾಖ್ಯಾನವನ್ನು ಆರಂಭಿಸುತ್ತೇನೆ. (ಧರ್ಮಸುಧಾರಣೆ) ಅಂದರೆ ಹೊಸದಾಗಿ ಪ್ರತಿಪಾದನ ಮಾಡತಕ್ಕದ್ದಲ್ಲ; ಧರ್ಮವು ಅನಾದಿ ಸಂಸಿದ್ಧವಾದಂಥಾದ್ದೇ ಅದೆ. ಜಗದ್ವ್ಯಾಪಕನಾದ ಪರಮೇಶ್ವರನು ಯಾವಾಗ್ಗೆ ಸೃಷ್ಟಿಮಾಡಿದನು ಆಗ್ಗೆ ಧರ್ಮನಿರ್ಮಾಣಮಾಡಿದ್ದಾನೆ. (ಧರ್ಮ) ಅಧಃ ಪತಿತಾನ್ ಜನಾನ್‌ಧಾರ್ಯತೇಸೇಧರ್ಮಃ ಹೀಗೆ ವಿಗ್ರಹವಾಗುತ್ತದೆ. ಅನೇಕ ಬುಧಜನರು (ಧರ್ಮ) ಸ್ವಭಾವ ಹೀಗೆ ಅರ್ಥಮಾಡುತ್ತಾರೆ. ಇದರಮೇಲಿಂದ ಧರ್ಮ, ಇದು ಅನಾದಿಯೆಂದು ನಿಶ್ಚಯವಾಗುತ್ತದೆ. ಸುಧಾರಣಾ ಅಂದರೆ ಸಾಂಪ್ರತಧರ್ಮಕ್ಕೆ ಉಂಟಾದ ಗ್ಲಾನಿಯು ಹೋಗಲಾಡಿಸುವದೇ ಸುಧಾರಣ. ಈ ಧರ್ಮಸುಧಾರಣೆಯು ಸಕಲ ಪ್ರಾಣಿಗಳಿಗೆ ಅವಶ್ಯವಾದದ್ದು. ನಮ್ಮೊಳಗ ಮಾಹೇಶ್ವರ, ಮತ್ತು ಭಕ್ತ, ಹೀಗೆ ಎರಡು ವರ್ಗಗಳುಂಟು. ಭಕ್ತವರ್ಗ ಸುಧಾರಿಸುವದಕ್ಕಿಂತಲೂ ಮಾಹೇಶ್ವರ ವರ್ಗ ಸುಧಾರಿಸುವದೇ ಆದ್ಯ ಕರ್ತವ್ಯ. ಯಾಕಂದರೆ ಮಹೇಶ್ವರವರ್ಗಕ್ಕೆ ಗುರುವರ್ಗ, ಆಚಾರ್ಯವರ್ಗ, ಆರಾಧ್ಯವರ್ಗ, ಹೀಗೆ ಅನೇಕ ನಾಮಗಳುಂಟು. ಈ ವರ್ಗ ಸುಧಾರಿಸಿದಮೇಲೆ ಭಕ್ತವರ್ಗ ಸಹಜ ಸುಧಾರಿಸುತ್ತದೆ. ಧರ್ಮಕೆಡಲಿಕ್ಕೆ ಮೂರುಕಾರಣಗಳುಂಟು. ಅವಿದ್ಯಾ, ಅಜ್ಞಾನ, ಬಾಲವಯಸ್ಸಿನಲ್ಲಿ ಅಧಿಕಾರಮಾಡೋಣ, ಇವೇ ೩ ಮುಖ್ಯ ಕಾರಣಗಳುಂಟು. ವಿದ್ಯೆಯು ಸಕಲರಿಗೆ ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಸದೃಶವಾದಂಥಾದ್ದು. ಈ ಆಚಾರ್ಯರು ವಿದ್ಯೆ ಇಲ್ಲದಿದ್ದರೆ ಕಣ್ಣುಗಳಿದ್ದಾಗ್ಯೂ ಕುರುಡರೇ ಸರಿ ಯಾಕಂದರೆ, ತಾವು ಯಾರು ? ತಮ್ಮ ಕರ್ತವ್ಯಗಳೇನು ! ತಿಳಿಯಲಿಲ್ಲ. ಅಂದರೆ ಅಂಧರಲ್ಲವೇ, ಇವರಿಗೆ ವಿದ್ಯಾಬಾರದಿದ್ದರೆ ಜನ್ಮಾರಭ್ಯ ಆಮರಣಪರ್ಯಂತ ಆಗಮೋಕ್ತ ಗರ್ಭಾದಾನಾದಿ ಅಂತೇಷ್ಟಿವರೆಗೆ ಷೋಡಶ ಸಂಸ್ಕಾರಗಳು ಯಾರು ಮಾಡಿಸತಕ್ಕದ್ದು ಹೀಗೆ ಅನೇಕ ಪ್ರಕಾರ ಶೋಧಮಾಡಲಾಗಿ ಇವೆಲ್ಲ ಇವರದೇ ಕರ್ತವ್ಯವು. ಮತ್ತು ಶಿಷ್ಯರಿಗೆ ಸದ್ಬೋಧಮಾಡಿ ಸನ್ಮಾರ್ಗತೋರಿಸಿ, ಮೋಕ್ಷಾರ್ಹರನ್ನು ಮಾಡತಕ್ಕದ್ದು, ಇವರದೇ ಕರ್ತವ್ಯವು ಇದಕ್ಕೆಲ್ಲ ವಿದ್ಯೆಯೇ ಮೂಲಕಾರಣವಲ್ಲವೇ ? ಈ ಬಗ್ಗೆ ಶಾಸ್ತ್ರದಲ್ಲಿ ,,ಕಿಂಕಿಂನಸಾಧಯತಿ ಕಲ್ಪಲತೇವವಿದ್ಯಾ,, ಮತ್ತು ,,ವಿದ್ಯಾಧನಂ ಸರ್ವಧನೇಷುಮುಖ್ಯಂ,, ಹೀಗೆ ಅನೇಕ ಉದಾಹರಣೆಗಳುಂಟು. ಪ್ರಕೃತಮನುಸರಾಮಃ ಎಂಬಂತೆ ಸ್ವಲ್ಪವೇ ತಕ್ಕೊಂಡಿರುತ್ತೇನೆ. ಈ ಕಾಲದಲ್ಲಿ ಮೇಲಿನ ವರ್ಗದವರಿಗೆ ಸರಿಯಾಗಿ ವಿದ್ಯೆಯು ಬರುವದಿಲ್ಲ; ಅಂದಮೇಲೆ ಧರ್ಮವು ಹ್ಯಾಗೆ ಸುಧಾರಿಸುವದು ಇದಕ್ಕೆ ಇವರೇ ಕಾರಣರಲ್ಲ, ಭಕ್ತವರ್ಗವಾದವರೂ ಕಾರಣವೆಂದು ನಿಶ್ಚಯದಿಂದ ಹೇಳಬಹುದು. ಅಜ್ಞಾನ ಅಂದರೆ ಅಂಧಕಾರವು, ಕತ್ತಲೆಯಲ್ಲಿ ಪದಾರ್ಥಗಳು ಹ್ಯಾಗೆ ಕಾಣುವದಿಲ್ಲವೋ ಹಾಗೆ ಆದ್ಯವರ್ಗದವರಿಗೆ ಅಜ್ಞಾನದಿಂದ ಕಾರ್ಯಾಕಾರ್ಯ ವಿಚಾರವು ಹುಟ್ಟುವದಿಲ್ಲ; ಇದು ಧರ್ಮಗ್ಲಾನಿಗೆ ಎರಡನೇ ಕಾರಣವು. ಮತ್ತು ಅಜ್ಞಾನಕ್ಕೆ ದುರಭಿಮಾನ ಇದು ಒಂದು ಅಂಗವಾಗಿದೆ. ನಾವು ಸ್ವಾಮಿಗಳು, ನಾವು ಗುರುಗಳು

ನಾವು ಪೀಠಾಧಿಕಾರಿಗಳು, ನಮ್ಮಂಥವರು ಅನ್ಯರಕಡೆಯಿಂದ ಹ್ಯಾಗೆ ವಿದ್ಯಾಕಲಿಯುವ
ನಮ್ಮ ಮರ್ಯಾದೆಗೆ ಕೊರತೆ ಬರುವದು, ಇಂಥಾ ದುರಾಲೋಚನೆಯಿಂದ ಸದಸದ್ವಿ
ಶೂನ್ಯರಾಗಿ ಈ ಧರ್ಮಕ್ಕೆ ಹೀನಸ್ಥಿತಿಯನ್ನು ತಂದಿರುವರು. ಮನುಷ್ಯನಿಗೆ ದೇಹಾ
ಮಾನ ಹೋಗದ ಹೊರ್ತು ಎಂದೆಂದಿಗೂ ಪೂಜ್ಯತೆಯು ಬರಲಾರದು, ಈ ಬಗ್ಗೆ ಯೋ
ವಾಶಿಷ್ಟದಲ್ಲಿ ವಶಿಷ್ಟರು ಹೀಗೆ ಅಂದಿದ್ದಾರೆ;—ಶ್ಲೋ॥ ದೇಹಾಭಿಮಾನೆಗಲಿತೆ ವಿಜ್ಞಾತೆ
ಮೇಶ್ವರೀ ।ಯತ್ರಯತ್ರಮನೋಯಾತಿ ತತ್ರತತ್ರಸಮಾಧಯಃ॥ ಈ ಶ್ಲೋಕದ ಸಾರಾ
ವೇನಂದರೇ ಯೋಗಿಗಳು ಅಭಿಮಾನದಿಂದ ಸಮಾಧಿ ಸಾಧಿಸಬೇಕಾದರೆ ಬಹಳೇ ಕಠಿಣ
ಗುತ್ತದೆ. ಅಭಿಮಾನತ್ಯಾಗ ಮಾಡಿ ಸರ್ವಜ್ಞನಾದ ಪರಮೇಶ್ವರನಲ್ಲಿ ಲಕ್ಷ್ಯವಿಟ್ಟರೆ ಸ
ಸಮಾಧಿ ಸಾಧ್ಯವಾಗುತ್ತದೆ. ಹೀಗೆ ಸರ್ವರೀತ್ಯಾ ವಿಚಾರಮಾಡಿದರೆ ದುರಭಿಮಾನವೇ ಇ
ನಕ್ಕೆ ಕಾರಣವಾದದ್ದು ಇದಕ್ಕಾದರೂ ಭಕ್ತವರ್ಗವೇ ಕಾರಣವು. ಹ್ಯಾಗಂದರೆ ಯೋ
ಯೋಗ್ಯವಿಚಾರ ಮಾಡದೆ ಸ್ಥಲಕುಲಾದಿಗಳನ್ನು ಶೋಧಿಸದೆ ತಮ್ಮತಮ್ಮ ಹಟವನ್ನು
ಧಿಸುವಬಗ್ಗೆ ಪಂಗಡಗಳುಹುಟ್ಟಿಸಿ ತಮ್ಮ ಇಚ್ಛೆಪ್ರಕಾರಅಧಿಕಾರಮಾಡಿ ಯೋಗ್ಯರಿಗೆ
ರ್ಯಾದೆಯು ಅಯೋಗ್ಯರಿಗೆ ಮರ್ಯಾದೆಯು ಹೀಗೆ ವಾತ್ಸಲ್ಯಸಾಧಿಸುವ ಬಗ್ಗೆ ಮಾಡುತ್ತಾ
ಇದರ ಸತ್ಯಾಸತ್ಯ ತಾವೇ ವಿಚಾರಮಾಡಬೇಕು. ಅಧಿಕಾರಿಗಳನ್ನು ಮಾಡಬೇಕಾದರೆ
ಥವರನ್ನೇ ಮಾಡಬೇಕೆಂದು ಅನೇಕ ಗ್ರಂಥಾಧಾರಗಳುಂಟು. ಆದರೂ ಉದಾಹರಣಾ
ವಾಗಿ ಒಂದೇ ಗ್ರಂಥದಪ್ರಮಾಣ ಕೊಡುತ್ತೇನೆ. ವೀರಶೈವ ಸದಾಚಾರ ಸಂಗ್ರಹ ಶ್ಲೋ
ಗುರುಸ್ಥಲಸಮಾಖ್ಯಾತಾ ವೀರಮಾಹೇಶ್ವರಾಭಿಧಾ । ಏತೆಗುರುಪದಾಧ್ಯಕ್ಷಾ ನಾನ್ಯೆಲಾಂ
ಧಾರಿಣಃ ॥೧॥ ಪಟ್ಟಾಭಿಷೇಕಯುಕ್ತಾಂಶ್ಚ ಶಂಖಮುದ್ರಾನ್ವಿತಾನ್ಭುವಿ । ಷಟ್ಸ್ಥಲಜ್ಞಾ
ಸಂಪನ್ನಃ ಕುರುವಂತಿಚರಸಂಜ್ಞಕಾನ್॥೨॥ ವ್ಯವಹಾರಪರಾಯೇಚ ಯೇಶೇವಾಪರಾ
ಮಃ । ನಾಸ್ತಿತೇಷಾಂಮಹಾದೀಕ್ಷಾ ವೀರಮಾಹೇಶ್ವರಾಭಿಧಾ ॥ ೩ ॥ ಇದರ ತಾತ್ಪರ್ಯ
ಯಾರಿಗೆ ಗುರುಸ್ಥಲದವರು ಅನ್ನುತ್ತಾರೆ, ಅವರಿಗೇ ವೀರಮಾಹೇಶ್ವರರು ಅನ್ನುತ್ತಾ
ಅವರಿಗೇ ಗುರುಪದಾಧ್ಯಕ್ಷರು ಅನ್ನುತ್ತಾರೆ, ಅವರೇ ಅಧಿಕಾರಕ್ಕೆ ಯೋಗ್ಯರು. ಅನ್ಯ
ವೇಷಧಾರಿಗಳು. ಭೂಲೋಕದಲ್ಲಿ ಷಟಸ್ಥಲ ಜ್ಞಾನಸಂಪನ್ನರು, ಅವರನ್ನೇ ಪಟ್ಟಾಭಿಷೇ
ಯುಕ್ತರನ್ನು ಮತ್ತು ಶಂಖಮುದ್ರಾನ್ವಿತರನ್ನು ಚರಸಂಜ್ಞಕರನ್ನು ಮಾಡುತ್ತಾರೆ.
ವಹಾರ ಮಾಡತಕ್ಕವರಿಗೆ ಸೇವಾಮಾಡತಕ್ಕವರಿಗೆ ಸ್ಥಾವರ ದೇವತಾಪೂಜಾ ಮಾಡತಕ್ಕ
ರಿಗೆ ವೀರಮಾಹೇಶ್ವರ ಸಂಜ್ಞಕದೀಕ್ಷಾ ಸಹ ಇಲ್ಲ; ಹೀಗೆ ಅನೇಕ ರೀತಿಯಿಂದ ವಿಚಾ
ಮಾಡಲಾಗಿ ಸಾಂಪ್ರತ ಸ್ಥಿತಿಯು ಹ್ಯಾಗೆ ಅದೆ ಎಂಬುದು ಎಲ್ಲರಿಗೂ ಜ್ಞಾಪಕವೇ ಉಂಟು
ಈ ವಿಷಯದಲ್ಲಿ ವಿಶೇಷ ಬಾಲವಯಸ್ಸಿನಲ್ಲಿ ಅಧಿಕಾರ ಮಾಡತಕ್ಕದ್ದು, ಬಹಳೇ ತಪ್ಪು
ಶಾಸ್ತ್ರರೀತಿಯಿಂದ ವ್ಯವಹಾರರೀತಿಯಿಂದ ಮತ್ತು ಅನೇಕರೀತಿಯಿಂದ ಶೋಧಮಾಡಿ
ನಿಷೇಧವೇ ಸರಿ, ಅಧಿಕಾರ ವಯಸ್ಸಿನ ಬಗ್ಗೆ ಸ್ಮೃತಿಕಾರರು ಹೀಗೆ ಬರೆಯುತ್ತಾರೆ

ಶ್ಲೋ॥ ಚತುರ್ಥಮಾಯುಷೋಭಾಗ ಮುಷಿತ್ವಾದ್ಯಂಗುರೇದ್ವಿಜಃ । ದ್ವಿತೀಯಮಾಯುಷೋಭಾಗಂಕೃತದಾರೋಗೃಹೇವಸೇತ್॥೧॥ ಷಟ್ತ್ರಿಂಶದಾಬ್ದಿಕಂಚರಿಯಂಗುರೋತ್ರೈವೈದಿಕಂವ್ರತಂ । ತದರ್ಧಿಕಂಪಾದಿಕಂವಾಗ್ರಹಣಾಂತಿರಮೇಥವಾ ॥೨॥ ಇದರ ತಾತ್ಪರ್ಯವು ಮನುಷ್ಯ ಆಯುಷ್ಯವು ನೂರುವರ್ಷವು ಹೀಗೆ ಶಾಸ್ತ್ರಸಿದ್ಧವು. ಅದರಲ್ಲಿ ನಾಲ್ಕುಭಾಗವು ಮೊದಲನೇ ಭಾಗವು ೨೫ ವರ್ಷ ಗುರುವಿನ ಮನೆಯಲ್ಲಿ ಶಾಸ್ತ್ರಾಭ್ಯಾಸ ಮಾಡತಕ್ಕದ್ದು. ಎರಡನೇ ಭಾಗದಲ್ಲಿ ಅಂದರೆ ೨೫ ವರ್ಷದ ಮುಂದೆ ಅಧಿಕಾರಮಾಡತಕ್ಕದ್ದು. ಎರಡನೇ ಪ್ರಮಾಣವು ಗುರುವಿನ ಮನೆಯಲ್ಲಿ ೩೬ ವರ್ಷದ ವರೆಗೆ ಬ್ರಹ್ಮಚರ್ಯ ವ್ರತದಿಂದ ನಿಂತು, ಸರಿಯಾಗಿ ಶಾಸ್ತ್ರಾಭ್ಯಾಸ ಮಾಡತಕ್ಕದ್ದು. ಇಷ್ಟೂ ಆಗದವಪಕ್ಷದಲ್ಲಿ ೧೬ರ ವರೆಗೆ ಅಭ್ಯಾಸ ಮಾಡಿ ಆಮೇಲೆ ಅಧಿಕಾರ ಕೊಡತಕ್ಕದ್ದು. ಇದರಂತೆ ವೀರಶೈವಾಚಾರ ಪ್ರದೀಪಿಕೆಯಲ್ಲಿ ಹೀಗೆ ಬರೆದಿದ್ದಾರಲ್ಲಾ. ಶ್ಲೋ॥ ತಸ್ಮಾತ್ಸರ್ವಪ್ರಯತ್ನೇನ ಗುರುರ್ಗ್ಗರವಮಾಚರೇತ್ ವಯಃಷೋಡಶಕಾದೂರ್ಧ್ವವಿಷ್ಯತೇಸಪ್ತತ್ರಿಂಶತೇ ॥ಅರ್ಥ॥ ಗುರುವು ಬಹುಪ್ರಯತ್ನದಿಂದ ಮರ್ಯಾದೆಯಿಂದ ಆಚರಿಸತಕ್ಕದ್ದು. ೧೬ ವರ್ಷದ ಮುಂದೆ, ಅಥವಾ ೩೦ ವರ್ಷದ ಒಳಗಾಗಿ ಅಧಿಕಾರ ಮಾಡಬೇಕೆಂದು ತಾತ್ಪರ್ಯವು. ಸಾಂಪ್ರತವಯಸ್ಸು ವಿಚಾರಮಾಡದೆ ತಮ್ಮ ಅನುಕೂಲ ಪ್ರಕಾರ ಅಧಿಕಾರಮಾಡಿ, ಆ ಅಧಿಕಾರಿಗಳು ತಮ್ಮಮನಸ್ಸಿಗೆ ಬಂದಂತೆ ಆಚರಿಸಿ ಧರ್ಮವು ನಾಮಶೇಷಮಾಡಿದರು. ತಸ್ಮಾತ್ ಉಭಯವರ್ಗವು ಒಮ್ಮನಸ್ಸಿನಿಂದ ಶಾಸ್ತ್ರ, ಮತ್ತು ರೂಢಿ, ಎರಡೂ ಸರಿಯಾಗಿ ವಿಚಾರಮಾಡಿ, ಯಥಾರ್ಥ ಅಧಿಕಾರಮಾಡಿದರೆ ಧರ್ಮಸುಧಾರಣೆಯು ತೀವ್ರವಾದೀತು. ವೇಳೆಯು ಬಹಳೇ ಇಲ್ಲದಕಾರಣ ನನ್ನ ಅಲ್ಪ ಮತಿಯಿಂದ ಇಷ್ಟು ವಿಷಯವು ಹೇಳಿ, ಸರ್ವರಕಡೆಯಿಂದ ಅಪ್ಪಣೆಯನ್ನು ತಕ್ಕೊಳ್ಳುತ್ತೇನೆ; ಮತ್ತು ಈ ವ್ಯಾಖ್ಯಾನದಲ್ಲಿ ಎಷ್ಟೋತಪ್ಪುಗಳು ಇರಬಹುದು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ... ... ... ... *

( ಕೈಚಪ್ಪಾಳೆ. )

ಸಣ್ಣ ತಮ್ಮಪ್ಪಶಾಸ್ತ್ರಿ, ಮಿರಜ್.

ಅಲ್ಲಿಗೆ ೭ ಗಂಟೆ ಸಮೀಪಿಸುತ್ತ ಬರಲು ಅಂದಿನ ಸಭೆಯು ವಿಸರ್ಜಿಸಲ್ಪಟ್ಟಿತು.

## ೩—ನೆಯ ದಿವಸ ೧೨ ಘಂಟೆಯಿಂದ ೩ ಘಂಟೆ ವರೆಗು.

ಎರಡನೆಯ ದಿನದ ವಿಷಯುವಾದ (ಮಠಾರ್ಹ ವಟು) ಗಳನ್ನು ಕುರಿತು, ಶ್ರೀ ಚೌಡದಾನ ಪುರದ ಪುಟ್ಟನಂಜೇ ಒಡೆಯರ್ ಇವರ ಭಾಷಣವು ಸಕಾಲಕ್ಕೆ ದೊರಿ[illegible] ಕಾರಣ ಶಿ॥ ರಾ॥ ರಾ॥ ಬಸವಯ್ಯ, ಚೆನ್ನಬಸವಯ್ಯ, ಕಿತ್ತೂರ ಇವರು ಬರೆದು ಕಳ[illegible] ಸಿದ ಭಾಷಣವು ಉತ್ತಮವಾಗಿದ್ದುದರಿಂದ ಅದರ ಸಾರಾಂಶವನ್ನು ಇದರಡಿಯಲ್ಲಿ ಕೊ[illegible] ರುತ್ತೇವೆ. ... ... ... ... ...

ಪೂಜ್ಯರಾದ ಮಹಾಸ್ವಾಮಿಗಳೇ? ಸಭಾಧ್ಯಕ್ಷರೇ! ಸಭ್ಯಗೃಹಸ್ಥರೇ? ನಾ[illegible] ತಮ್ಮ ಸನ್ನಿಧಿಯಲ್ಲಿ ‹‹ ಪಟ್ಟಚರಾಧಿ ಕಾರಕ್ಕೆ ನೇಮಿಸಲ್ಪಡುವ ವಟುಗಳು, ವಿದ್ಯಾ ಸ[illegible] ಚಾರ ಸಂಪನ್ನರಾಗಿರಲವಶ್ಯವಾದದ್ದು ›› ಈ ವಿಷಯುವಾಗಿ ಯಥಾನುಮತಿ ಮಾತನಾ[illegible] ಪೇಕ್ಷಿಸುವೆನು. ಈ ವಿಷಯುವು ಗಹನವೂ ವ್ಯಾಪಕವೂ ಆಗಿರುವದರಿಂದ, ನನ್ನಂಥ [illegible] ಮತಿಯಿಂದ ಇದನ್ನು ವಿವರಿಸುವದು ಅಸಾಧ್ಯವಾಗಿದ್ದರೂ ಇದರ ಅತ್ಯವಶ್ಯಕ[illegible] ಮೂಲಕ ಕೈಕೊಳ್ಳಬೇಕಾಗಿದೆ. ... ... ...

ಮಠಾರ್ಹ ವಟುಗಳೆಂದರೆ ಮಠಕ್ಕೆ ತಕ್ಕ ಮರಿಗಳು, ವಸ್ತುತಃ ಮಠ ಶ[illegible] ರ್ಥವು ‹‹ ಛಾತ್ರಾದಿನಿಲಯೋ ›› ಅಂದರೆ ಶಿಷ್ಯರಿರುವ ಸ್ಥಳವೆಂದಾಗುತ್ತದೆ. ಇದ[illegible] ಅಲ್ಲಿ ಗುರುಗಳಿರಕೂಡದೆಂದು ಅರ್ಥ ಮಾಡಲಾಗದು. ಆದಿ ಪದದಿಂದ ಗುರುಗಳೂ, [illegible] ಚಾರಕರೂ ಕೂಡ ಇರಬಹುದು. ಛಾತ್ರ ಶಬ್ದವನ್ನೇ ಮೊದಲು ತೆಗೆದುಕೊಂಡದ್ದ[illegible] ಮಠವು ವಿಶಿಷ್ಟರೀತಿಯಿಂದ ಶಿಷ್ಯೋಪಯೋಗಕ್ಕಾಗಿಯೇ ನಿರ್ಮಿಸಿರುವದೆಂದು ಅನ್ನ[illegible] ಹುದು. ಪೂರ್ವದಲ್ಲಿ ಗುರುಗಳು ಸ್ನಾನ, ಧ್ಯಾನ, ಶಿವಾರ್ಚನಾದಿ ನಿತ್ಯನೈಮಿತ್ತಿಕ ಕಾ[illegible] ಗಳನ್ನು ನೆರವೇರಿಸಿಕೊಂಡು ಪ್ರಾಣಧಾರಣ ಮಾತ್ರ ಸಾತ್ವಿಕಾನ್ನ ಗ್ರಹಣಮಾಡಿ, ಅ[illegible] ಯನಾಧ್ಯಾಪನೆಯಿಂದ ಶಿಷ್ಯಕಲ್ಯಾಣೈಕ ತತ್ಪರರಾಗಿ ಕಾಲ ಕಳೆಯುತ್ತಿದ್ದರು. ಅದ[illegible] ಮಠದ ಉಂಬಳಿಯನ್ನೆಲ್ಲ ವರ್ಷಾನುವರ್ಷ ಶಿಷ್ಯವರ್ಗವೇ ಅನುಭೋಗಿಸುತ್ತಲಿತ್ತು. ಹೀಗೆ ಛಾತ್ರೋಪಯೋಗ ಬಾಹುಲ್ಯವನ್ನು ನೋಡಿ ಅಮರಸಿಂಹನು ಮಠಕ್ಕೆ ‹‹ ಛಾತ್ರ[illegible] ನಿಲಯ ›› ಎಂದು ಹೇಳಿದ್ದಾನೆ. ... ... ...

ಇದೇ ಪರಮಪೂಜ್ಯವಾದ ಮಠಕ್ಕೆ ರೂಢಿಯಲ್ಲಿ ಉತ್ತಮರು ಅಯ್ಯನವರ [illegible] ಮನೆಯೆಂತಲೂ, ಕನಿಷ್ಠರು ಅನ್ನವನ್ನು ವಿಕ್ರಯಿಸುವ ಸ್ಥಳವೆಂತಲೂ ತಿಳಿದುಕೊ[illegible] ರುವದು ಸುಪ್ರಸಿದ್ಧವಾದ ಸಂಗತಿಯೇಸರಿ ಅಯ್ಯೋ ಇದು ಎಷ್ಟುಕಷ್ಟಕರವಾದ ಮಾ[illegible] ಹೀಗಾದುದರಿಂದಲೇ ನಮ್ಮ ಸಮಾಜದ ಉನ್ನತಿಯ ಸ್ಥಾನವನ್ನು ಅವನತಿಯು [illegible]

ಆಕ್ರಮಿಸಿ ಬಿಟ್ಟಿತು. ಪೂಜ್ಯವಾದ ಮಠಗಳ ಸ್ಥಿತಿಯು ಇಷ್ಟು ನಿಕೃಷ್ಟವಾಗುವದಕ್ಕೆ ಕಾರಣಾರೆಂದರೆ; ಆಧಿಪತ್ಯಕ್ಕೆ ಅನರ್ಹರಾದ ಸ್ವಾಮಿಗಳೇ ಎಂದು ಹೇಳಿದರೆ ಅಯಥಾರ್ಥವಾಗಲಿಕ್ಕಿಲ್ಲ. ಮತ್ತು ಗುರುದ್ರೋಹವೂ ಬರಲಿಕ್ಕಿಲ್ಲವೆಂದು ಹೇಳಬೇಕಾಗಿದೆ. *

ನಮ್ಮ ಸಮಾಜವು ಉನ್ನತಾವಸ್ಥೆಯನ್ನು ಹೊಂದಬೇಕಾದರೆ ಎಲ್ಲಕ್ಕೂ ಮೊದಲು ಗುರುವರ್ಗವು ಸುಧಾರಿಸಲಿಕ್ಕೆಬೇಕು. „ಯಥಾಗುರುಸ್ತಥಾಶಿಷ್ಯಃ„ ಎಂಬ ವಾಕ್ಯವಾದರೂ ಇದೇ ಮಾತನ್ನೇ ಹೇಳುತ್ತದೆ. ಜಲಾಶಯದಲ್ಲಿ ನಿರ್ಮಲ, ಶೀತಲ ಸ್ವಾದೋದಕವು ತುಂಬಿದ್ದರೇನೇ ನಲ್ಲಿಗಳಿಂದ ಅಂತಹ ನೀರೇ ನಮ್ಮೆಲ್ಲರಿಗೆ ಲಭಿಸುವದಲ್ಲವೇ? ಇದರಂತೆ;— ... ... ... ... *

ಗುರುವೊಳ್‌ವಿವೇಕಮಿರ್ದೊಡೆ । ಪರಿಜನರೋಳ್‌ಭಕ್ತರೋಳ್‌ವಿವೇಕತೆಯಿರ್ಕುಂ ॥
ಗುರುವೊಳವಿವೇಕಮಿರ್ದೊಡೆ । ಪರಿಜನರೋಳ್‌ಭಕ್ತರೊಳವಿವೇಕತೆಯಿರ್ಕುಂ ॥೧॥

ಈ ನಿಜವಾದ ತತ್ವವನ್ನು ಕಂಡು ಹಿಡಿದುದರಿಂದಲೇ ಪರಮ ಪೂಜ್ಯರಾದ ಶ್ರೀ ಹಾನಗಲ್ ಕುಮಾರ ಮಹಾ ಸ್ವಾಮಿಗಳವರ ಸದಯಾಂತಃಕರುಣದಿಂದ ಶ್ರೀ ಶಿವಯೋಗ ಮಂದಿರವು, ಸ್ಥಾಪನೆಯನ್ನು ಹೊಂದಿರುವದಲ್ಲವೇ? ಗುರುಕುಲವು ಸುಶಿಕ್ಷಿತವೂ, ಸದಾಚಾರಸಂಪನ್ನವೂ ಆಗಬೇಕೆಂಬ ಭಾವನೆಯಿಂದಲೇ ಶಿವಯೋಗ ಮಂದಿರದ ಸ್ಥಾಪನೆಯಾಗಿರುವದೆಂಬದು ಸರ್ವಶ್ರುತವಾದ ಸಂಗತಿಯು. ವಿದ್ಯಾಪ್ರೌಢಿಮೆಯಿಂದಲೂ, ಸದಾಚಾರ ದಾರ್ಢ್ಯತೆಯಿಂದಲೂ ಕೂಡಿದ ಗುರುವು, ತೇಜೋ ವಲಯನಾದ ಸೂರ್ಯನಂತೆ ಸ್ವಯಂಪ್ರಕಾಶಿತನಾಗಿರುತ್ತಾನೆ. ಇವು ನಮ್ಮ ಗುರುಗಳಲ್ಲಿ ಇಲ್ಲದ್ದರಿಂದ ವಾಡಿಕೆಯಾಗಿ ನಮ್ಮಲ್ಲಿ „ಕೌದಲ ಕಟ್ಟಿಗೆ ಪೊಳ್ಳು ಅಯ್ಯನವರ ಮಾತು ಸುಳ್ಳು„ ಎಂಬ ಗಾದೆಯ ಮಾತನ್ನು ವ್ಯವಹರಿಸುವದಾಗಿದೆ. ಯಾಕಂದರೆ;— ... ... ... *

ದಾರ್ಢ್ಯತೆಯಿಂ ಪ್ರೌಢತೆಯಿಂ । ಕೂಡಿದ ಕಾರಣದೊಳಂತು ನಿಂದಿಪರಖಿಳರ್ ॥
ಕೌದಲಕಟ್ಟಿಗೆ ಪೊಳ್ಳುಂ । ರೂಢಿಯೊಳಯ್ಯನವರಪ್ಪಣೆಯು ತಾಂ ಸುಳ್ಳುಂ ॥೨॥

ದಾರ್ಢ್ಯತೆಯಿಂದಲೂ, ಪ್ರೌಢತೆಯಿಂದಲೂ ಕೂಡದೆ ಇದ್ದ ಕಾರಣ ವ್ಯವಹಾರದಲ್ಲಿ ಕೌದಲಕಟ್ಟಿಗೆಯು ನಿರುಪಯೋಗಿಯಾಗಿದ್ದಂತೆ ವಿದ್ಯಾಪ್ರೌಢಿಮೆಯೂ, ಸಚ್ಛೀಲದಾರ್ಢ್ಯವೂ ಇಲ್ಲದ ಗುರುವು, ಮಠಕ್ಕೂ ಸಮಾಜಕ್ಕೂ ನಿಶ್ಚಯವಾಗಿ ನಿರುಪಯೋಗಿಯಾಗಿರುತ್ತಾನೆ. ಸರ್ವಗುಣೋಪೇತನಾದ ಗುರುವು ಚಂದನದಂತೆ ಸರ್ವೋಪಯೋಗಿಯೂ. ಕೀರ್ತಿಸುವಾಸನಾಪರನೂ, ಸದಾನಂದಮೂರ್ತಿಯೂ ಆಗಿರುತ್ತಾನೆ. ಆದುದರಿಂದ ಎಲ್ಲಕ್ಕೂ

ಮೊದಲು ಭಾವೀ ಗುರುಗಳಾಗತಕ್ಕ ವಟುಗಳು, ವಿದ್ಯಾಚಾರ ಸಂಪನ್ನರಾಗಲಿಕ್ಕೇಬೇಕು. ಯಾಕಂದರೆ:— ... ... ... ...

ಕಲಿವುದು ಮೋಕ್ಷಾಪೇಕ್ಷೆಗೆ। ಕಲಿವುದು ಶಾಂತತೆಗೆ ಧರ್ಮಸಂರಕ್ಷಣೆಗೆ ॥
ಕಲಿವುದು ಸುವೃತ್ತಿಗಲ್ಲದೆ। ಕಲಿವುದು ತನ್ನಾಪ್ತವಂಶ ರಾಷ್ಟ್ರೋನ್ನತಿಗೆ॥೩॥

ಮೋಕ್ಷಸಾಧನೆಗಾಗಿಯೂ, ಧರ್ಮಸಂರಕ್ಷಣೆಗಾಗಿಯೂ, ಸಂಸಾರ ಸುಖಕ್ಕಾಗಿಯೂ, ರಾಷ್ಟ್ರೋನ್ನತಿಗಾಗಿಯೂ ಎಲ್ಲರೂ ವಿದ್ಯೆಯನ್ನು ಕಲಿಯಬೇಕಾಗಿರುವಲ್ಲಿ ಗುರುವರ್ಗವಂತೂ ಎಲ್ಲಕ್ಕೂ ಮೊದಲು ವಿದ್ವಂತರಾಗಿರಲೇ ಬೇಕು. ಯಾಕೆಂದರೆ ಧರ್ಮಮಂದಿರದ ಅಸ್ತಿತ್ವಕ್ಕೆ ಸ್ತಂಭಾಯಮಾನರಾದ ಗುರುಗಳು ಸತ್ಯ, ನ್ಯಾಯ, ದಯಾ ಅಥವಾ ಪ್ರೇಮ, ತಜ್ಜನ್ಯಶಾಂತಿ, ಸದಾಚಾರ ಸಂಪನ್ನರಾಗಿರದಿದ್ದರೆ ಆ ಸಮಾಜವು ಉತ್ಕರ್ಷವನ್ನು ಎಂದೂ ಹೊಂದಲಾರದು. ಈ ಮರ್ಮವನ್ನು ತಿಳಿದೂತಿಳಿದು ಪವಿತ್ರವಾದ ಗುರುಪೀಠಗಳ ಸಂದಿಗೊಂದಿಗಳಲ್ಲಿ ಸಿಗುವ ಅಂಥಿಂಥ ಅಶಿಕ್ಷಿತ ಅನಾಚಾರ ವಟುಗಳನ್ನು ಎಳತಂದು, ಅಧಿಕಾರಿಗಳನ್ನಾಗಿ ಮಾಡುವದು, ಸಮಾಜಕ್ಕೆ ಮಹಾ ಘಾತಕವಾಗಿರುವದು. ಮರಿಗಳನ್ನಾರಿಸುವದೂ, ಅವರಿಗೆ ಅಧಿಕಾರವನ್ನು ಕೊಡುವದೂ ನಮ್ಮ ಕಯ್ಯೊಳಗೇ ಇದ್ದು ಅದನ್ನು ಆಚರಿಸಲಿಕ್ಕೆ ನಾವು ಅಕ್ಷರಶಃ ತಪ್ಪುತ್ತೇವೆ. ನಮ್ಮ ಸ್ವಾಮಿಗಳಾದರೋ ತಮ್ಮ ಪೂರ್ವಾಶ್ರಮದ ಬಾದರಾಯಣ ಸಂಬಂಧವನ್ನು ಗೃಧ್ರದೃಷ್ಟಿಯಿಂದ ಪರಿಶೋಧಿಸಿ ಎಲ್ಲಿಲ್ಲಿ ಹುಡುಗರನ್ನೋ ಹುಡುಕಿ ತಂದು ಮಠದ ಅಧಿಕಾರಿಗಳನ್ನಾಗಿ ಮಾಡಿಟ್ಟು, ಅವರಿಗೆ ಸದಾಚಾರವನ್ನೂ, ವಿದ್ಯೆಯನ್ನೂ ಕಲಿಸದೆ ತಮ್ಮ ದುರ್ಗುಣಗಳನ್ನು ಮಾತ್ರ ಮರಿಯದೆ ಕಲಿಸಿ ಶಿವಾ ಎನ್ನುತ್ತಾರೆ. ಅವರ ತರುವಾಯ ಈ ಅಗಡುಬಂಡ ಮರಿಗಳೇ ಮಹಾಮಹಿಮಂತ ಗುರುದೇವರಾಗಿ ನಿಲ್ಲುತ್ತಾರೆ. ಈ ಪಂಡಿತ ಗುರುಗಳಿಂದ ಮಠವೂ, ಸಮಾಜವೂ ಇನ್ನಾವಬಗೆಯಿಂದ ಸುಧಾರಿಸಬೇಕು? ಈ ಹುಡುಗರ ತಾಯಿತಂದೆಗಳು, ಅಥವಾ ಆ ಹುಡುಗರು ದುರಾಚಾರಿಗಳಿರಲಿ, ರೋಗಿಗಳಿರಲಿ, ಅಂಗವಿಕಲರಿರಲಿ, ಜ್ಞಾನಲವದುರ್ವಿದಗ್ಧರಾಗಿರಲಿ, ಮುಂದೆ ಮಠದ ಸಂಪೂರ್ಣ ಆಸ್ತಿಯನ್ನು ಫಲಹಾರಮಾಡುವವರೇ ಇರಲಿ ಈ ವಿಚಾರವನ್ನೇ ಮನಸಿನಲ್ಲಿ ತಾರದೆ, ಅವರು ನಮ್ಮ ಆಪ್ತರು, ಅವರ ಕಲ್ಯಾಣವಾದಂತಾಯಿತು, ನಮ್ಮ ದೀಪವು ನಿಂತಹಾಗಾಯಿತು, ಎಂಬ ಕೂಪಮಂಡೂಕ ವಿಚಾರದಿಂದ ಮಠವನ್ನು ಸಮಾಜವನ್ನೂ ಹಾಳುಮಾಡಿಬಿಡುವರು ಇದು ಸುಪರಿಣಾಮದ ಮಾರ್ಗವೇ?

ನಿಜವಾಗಿ ವಿಚಾರಮಾಡಿದರೆ ಮಠಕ್ಕೆ ಹುಡುಗರನ್ನು ಹುಡುಕಿತರುವ ಕೆಲಸವು ಅತಿ ಮಹತ್ವದ್ದಾಗಿದೆ. ಅದರಲ್ಲಿ ಎಳ್ಳಷ್ಟಾದರೂ ದುರ್ಲಕ್ಷ ಮಾಡಕೂಡದು; ಇದೇ ನಮ್ಮ ಸಮಾಜದ ಭಾವೀಸುಖಕ್ಕೆ ಮೂಲಕಾರಣವು. ಇದರಿಂದಲೇ ನಮ್ಮ ಸಮಾಜದ ಬಂಧನ

ದೃಢವಾಗತಕ್ಕದ್ದಿದೆ, ಆದರಿಂದ ನಾವು ಮೊದಲು ಮಠಗಳ ಆಧಿಪತ್ಯಕ್ಕೆ ಗುಣ ಕರ್ಮ ವಿದ್ಯಾ ಪರಿಶುದ್ಧರಾದ ವಟುಗಳನ್ನು ಹುಡುಕಿ ತೆಗೆಯಬೇಕು. ಶ್ರೀ ಶಿವಯೋಗ ಮಂದಿರವು ಇಂತಹ ಪರಿಶುದ್ಧರಾದ ವಟುಗಳನ್ನು ಸಿದ್ಧಪಡಿಸಿ ಕೊಡಲಿಕ್ಕೇ ಉದಯವಾಗಿದೆ. ಈ ಕ್ರಮವನ್ನು ನಮ್ಮ ಸಮಾಜದವರು ಎಂದು ರೂಢಿಯಲ್ಲಿ ತರುವರೋ ಅಂದಿಗೆ ನಮ್ಮ ಮಠಗಳ ಕಿಲುಬು ಬಿಡುವದು. ... ... ... ... *

ನಮ್ಮ ಸಮಾಜವು ಪರಿಶುದ್ಧವಾಗಲಿಕ್ಕೂ ಸುಧಾರಿಸಲಿಕ್ಕೂ, ಮೊಟ್ಟ ಮೊದಲು ಪ್ರತಿಯೊಂದು ಗ್ರಾಮದಲ್ಲಿ ಮಠಗಳನ್ನು ಸ್ಥಾಪಿಸುವ ಕಲ್ಪನೆಯನ್ನು ತೆಗೆದ, ನಮ್ಮ ಪೂರ್ವಜರನ್ನು ಎಷ್ಟು ಕೊಂಡಾಡಿದರೂ ನಾವು ಅವರ ಋಣದಿಂದ ಮುಕ್ತರಾಗುವಂತಿಲ್ಲ. ಮಠಗಳನ್ನು ಸುಧಾರಿಸಿ, ಅವುಗಳಿಂದಾಗತಕ್ಕ ಪರಮೋಚ್ಚ ಲಾಭಗಳನ್ನು ಮಾಡಿಕೊಳ್ಳುವದೇ ಪೂರ್ವಜರ ಮನೋದ್ಧಾರದ ದಾರಿಯು ಸಾಂಪ್ರತಕ್ಕೆ ನಾವು ಈ ಮಾರ್ಗವನ್ನು ಬಿಟ್ಟು ಬಹು ದೂರದಲ್ಲಿದ್ದೇವೆ. ... ... ... *

ಮೊದಲೊಳ್ ಭೂವರರಿತ್ತರೊಲ್ದು ಧನಭೂವರ್ಷಾಶನಾದ್ಯಂಗಳಂ ॥
ಬುಧಮಾಹೇಶ್ವರ ವೃಂದಕ್ಕೈದೆ ನಿಜಶಿಷ್ಯವ್ರಾತಮುಂ ಶಾಸ್ತ್ರ ಕೋ ।
ವಿದರಂ ಗೆಯ್ಯಲ ಶೇಷಲಿಂಗ ಮತಮಂ ಸದ್ಧರ್ಮದಿಂ ಪಾಲಿಸಲ್ ।
ಅದನೇ ಮರ್ಯಾದೆಯ ಮಾಳ್ಪರೋ ಶಿವಶಿವಾ? ದುಷ್ಟಾಟ್ಕಮರೀಕಾಲದೊಳ್ ॥೪॥

ನಮ್ಮ ವೀರಶೈವ ಮತವು ಪರಿಶುದ್ಧವಾಗಿರಬೇಕೆಂತಲೂ, ಸತ್ಯ ನ್ಯಾಯ ದಯಾ ಶಾಂತಿ ಯುಕ್ತವಾದ ಸದ್ಧರ್ಮವು ಸರಿಯಾಗಿ ಸಂರಕ್ಷಿಸಲ್ಪಡಬೇಕೆಂತಲೂ, ಮಠದ ಮರಿಗಳು ವೇದಾಗಮ ವೇತ್ತರಾಗಬೇಕೆಂತಲೂ, ಗುರುಗಳಾದರೂ ಅಧ್ಯಯನಾಧ್ಯಾಪನೆಗಳಲ್ಲಿ ಧುರಂಧರರಾಗಿರ ಬೇಕೆಂತಲೂ, ಪೂರ್ವದ ರಾಜರುಗಳಿಂದ ಅಲ್ಲಲ್ಲಿ ಅಖಂಡವಾದ ಮಠಮಾನ್ಯಗಳನ್ನೂ, ಉಂಬಳಿಯನ್ನೂ ಹಾಕಿ ಕೊಟ್ಟಿರಲು ಅದು ಕಾಲಮಹಿಮೆಯಿಂದ ತದ್ವಿಪರೀತವಾಗಿ ಪರಿಣಮಿಸಿ ಹಾಳಾಗಹತ್ತಿರುವದನ್ನು ನೋಡಿದರೆ ನಾವು ಎಷ್ಟು ದುಃಖಿಸಿದರೂ ತೀರದಂತಾಗಿದೆ. ... ... ... ... *

ಅಲ್ಲಲ್ಲಿ ಕಂಡು ಬರುತ್ತಿರುವ ಕೆಲವು ಮಠಗಳ ನೀಚಸ್ಥಿತಿಯನ್ನು ಹೇಳಲು, ನಾಚಿಕೆಬರುತ್ತದೆ. ಯೋಗ್ಯರಾದ ಗುರುಗಳ ಅಭಾವಕ್ಕಾಗಿ ಇಂತಹ ಮಠಗಳ ಉದಾಹರಣೆಯಿಂದ ಪರಮತೀಯರಿಂದ ನಾವು ತಿರಸ್ಕೃತರಾಗಬೇಕಾಗಿದೆ. ಕೆಲಮಠಗಳ ಗುರುಗಳು ಕೇವಲ ಪರನಿಂದೆಯಲ್ಲಿಯೂ, ಸ್ವಪ್ರತಿಷ್ಠೆಯಲ್ಲಿಯೂ ಕಾಲಹರಣಮಾಡುವದನ್ನೂ ಕೆಲ ಗುರುಗಳು ಊರಲ್ಲಿ ಬಣಗಳನ್ನು ಬೆಳಸಿ ಇತ್ತಂಡವಾದಗಳನ್ನೂ, ಇಲ್ಲದ ಕಲಹಗಳ

ನ್ನೂ ಎಬ್ಬಿಸಿ, ಕೋರ್ಟು ಕಚೇರಿಗಳಿಗೆ ಎಡತಾಕುತ್ತಿರುವದನ್ನು, ಇನ್ನೂ ಕೆಲವು ದುರಾಚಾರ ಪ್ರವರ್ತಕರಾಗಿ ಪಾಪಕೂಪದಲ್ಲಿ ಮಗ್ನರಾಗಿರುವದನ್ನೂ ಬಹು ಜನರು ಕಂಡಿರಬಹುದು. ಇಂಥವರ ವಿದ್ವತ್ವದವರ್ಣನೆಯನ್ನು ಮಾಡುವದೂ ಕೂಡ ಅಸಾಧ್ಯವಾಗಿ ಇವರಿಗೆ ಅಕಾರವೇದರೆ ಅರ್ಧ ಚಂದ್ರಾಕೃತಿಯೆಂದು ಹೇಳುವ ಸಮಾಚಾರವೇ ಬರುತ್ತ ಬಿಸಿಯರೊಟ್ಟಿಗೆ ಸೂರ್ಯ ಕಜ್ಜಾಯವೆಂತಲೂ, ತಂಗಳರೊಟ್ಟಿಗೆ ಚಂದ್ರ ಕಜ್ಜಾಯವೆಂತಲೂ ಕಲ್ಪಿಸಿ, ತಮ್ಮ ಸಂಸ್ಕೃತವಿದ್ಯಾ ಪ್ರೌಢಿಮೆಯನ್ನು ತೋರಿಸಲಾತುರ ಪಟ್ಟು ಸ್ವಾಸ್ಪದರಾಗುವ ಗುರುಗಳೆಷ್ಟೋ ಜನ ರಿರುವರು. ಇವರಲ್ಲಿ ಸ್ವಲ್ಪ ಬಲ್ಲವರಿದ್ದರೆ ಪುರಾಣ ಸಮಾಪ್ತಿ, ಲಗ್ನಾಡಂಬರ, ರಥೋತ್ಸವ ಮೊದಲಾದವುಗಳ ಮೂಲಕ ಕಲಹಗಳನ್ನೆಬ್ಬಿಸಿ ತೃಪ್ತಿಯನ್ನು ಹೊಂದುವರು. ಅಂತೂ ಬಂದಿಲ್ಲೊಂದು ವ್ಯಾಜ್ಯದಲ್ಲಿದ್ದರೇನೇ ಇವರಿಗೆ ಸಮಾಧಾನ, ಸರ್ವದಾ ಇಂತಹ ಕಾರ್ಯಗಳಲ್ಲಿಯೇ ತೊಡಗಿದವರಿಗೆ ಅಥವಾ ಕೇವಲ ಜೀವಿಕೆಯ ಬೆನ್ನು ಹತ್ತಿದವರಿಗೆ ಸ್ನಾನ, ಶಿವಾರ್ಚನ, ಇಂದ್ರಿಯ ದಮನಾದಿಗಳಲ್ಲಿಯೂ ಅಧ್ಯಯನಾಧ್ಯಾಪನಗಳಲ್ಲಿಯೂ ಮಗ್ನರಾಗುವ ಕನಸು ಕೂಡ ಬೀಳಲಿಕ್ಕೆ ಸ್ವಲ್ಪಾದರೂ ಆಸ್ಪದವಿರುವದೋ! ಇಂಥವರ ಮಠವು ಮುಂದಕ್ಕೆ ಬರಬೇಕಾದರೆ ನಮ್ಮ ಸಮಾಜವು ಉತ್ಕರ್ಷವನ್ನು ಹೊಂದಬೇಕಾದರೆ, ಇವರ ಶಿಷ್ಯರು ಸದ್ಗುಣಿಗಳಾಗಬೇಕಾದರೆ ಶ್ರೀ ಬಸವೇಶ್ವರನ ಅವತಾರವೇ ಪುನಃ ದಯಮಾಡಿಸಬೇಕಲ್ಲವೆ? ಇನ್ನೂ ಕೆಲ ,, ಆಧುನಿಕರ ಮುಖ ವ್ಯಾಘ್ರನೆಂತಿರ್ಪ ದುರಾತ್ಮ ವಿರಕ್ತರ್ಕೆಲರ್ ದಾಸೋಹಮಂ ಮಾಳ್ಪೆವೆಂದು ದಶ ಷೋಡಶಾಷ್ಟಾದಶ ತ್ರಿಷಷ್ಟ್ಯಾದ್ಯಸಂಖ್ಯಾಕ ಪೂಜಾಮಂಟಪಗಳಂ ವಿರಚಿಪೆವೆಂದು ಬರದಿಂ ಗಳುಪುತ್ತಂ. ,,— ... ... ... ... ...

ಅಲ್ಲಲ್ಲಿ ತಿರಿದು ಧನಮಂ । ಮೆಲ್ಲನೆ ಕೂಡಿಟ್ಟು ಪೆಣ್ಗಳದಿರೊಳ್ ಮೆರೆಯಲ್ ।
ಪಲ್ಲಕ್ಕಿಯ ದಂಡಿಗೆಯಂ । ನಿಲ್ಲದೆ ಮಾಡಿಸುವರವರದೇಂ ಗಾವಿಲರೋ ॥ ೩.॥

ವಿದ್ಯಾ ಸದಾಚಾರ ಸಂಪನ್ನರಾದ ಯೋಗ್ಯ ಮರಿಗಳಿಗೆ ಮಠಾಧಿಕಾರವನ್ನು ಕೊಡದೆ ಇರುವದರಿಂದಲೇ ನಮ್ಮಸಮಾಜವು ಹಾಳಾಗ ತೊಡಗಿರುವದೆಂಬುದಕ್ಕೇನೂ ಸಂಶಯವಿಲ್ಲ. ಅದೇಕೆಂದರೆ;— ... ... ... ...

ಕೋವಿದನಾಗಲದೋರ್ವಂ । ಸಾವಿರಪಲ್ಲಕ್ಕಿಯಕ್ಕು ಮಗ್ಗಳಮಕ್ಕುಂ ।
ಭಾವಿಪೊಡೆ ಜ್ಞಾನಶೂನ್ಯರ್ । ತಾವಾಗಲನಂತ ಸಂಪದಂಗಳ್ಪೋಕುಂ ॥

ವಿದ್ಯಾ ಸದಾಚಾರ ಸಂಪನ್ನರಾದ ಗುರುದೇವರಿಂದ ಮಠಗಳ ವೈಭವಾತಿಶಯವು ಹೆಚ್ಚಿ, ಸಮಾಜವು ನಿಶ್ಚಯವಾಗಿ ಹೆಚ್ಚಳವನ್ನು ಪಡೆಯುವದು. ಜ್ಞಾನಶೂನ್ಯ ಗುರುವನು ಅಂಥ ಅನಂತ ಸಂಪತ್ತನ್ನು ಕ್ಷಣಮಾತ್ರದಲ್ಲಿ ಕಳೆದು ಬಿಡುವನು.

ಅದರಿಂದೆನುಪಮ ಸುಖಸಂ । ಪದ ದೀರ್ಘಾಯುಶೋ ವಿರಾಜಮಾನಂ ಸ್ವಮತಾ ।
ಭ್ಯುದಯಕರ ಮುನಿಪ ವಿದ್ಯೆಯು । ನೊದಯಿಸುವದಶೇಷ ವೀರಶೈವ ಜನರ್ಕಳ್ ॥

ವಿದ್ಯೆಯೂ, ಅದರ ಜೊತೆಗೆ ಸದಾಚಾರಣೆಯೂ ಸೇರಿದ ವಟುಗಳು, ಪಟ್ಟಚರಾಧಿಕಾರಕ್ಕೆ ಅಧಿಕರ್ತೃಗಳಾದರೆ ಮತಾಭ್ಯುದಯವೂ, ಸಮಾಜ ಸಖ್ಯವೂ, ವಿಶಿಷ್ಟವಾದ ಸಂಪತ್ತು, ನಮಗೆ ಲಭಿಸಿ ನಾವು ಕೀರ್ತಿವಂತರಾಗುವದರಲ್ಲಿ ಅಭ್ಯಂತರವಿಲ್ಲ. ಅಶಿಕ್ಷಿತ ಅಯ್ಯನವರ ಅನಾಚಾರದಿಂದಲೂ, ಆ ಅಯ್ಯನವರ ಹಿಂದೆ ಅವರಂತೆ ಡೊಳ್ಳುಬಡಿಯುವ ಲಿಗಾಡ ಸೆಟ್ಟಗಳ ಅಷ್ಟ ನಡೆಯಿಂದಲೂ ನಮ್ಮ ಸಮಾಜವು ಹಾಳಾಗ ಹತ್ತಿರುವದೆಂದು ರಾ॥ ಬ॥ ಆರಟಾಳ ರುದ್ರಗೌಡ ಸಾಹೇಬರವರು ಅಲ್ಲಲ್ಲಿ ಅಡಿಗಡಿಗೆ ಅನ್ನುತ್ತಿರುವದನ್ನು ಎಷ್ಟೋ ಜನರು ಕೇಳಿರಬಹುದು. ಎಲ್ಲಾ ಗುರುವರ್ಗವೂ ಸೆಟ್ಟಗಳೂ ಇಂಥವರೇ ಇರುವರೆಂದು ನನ್ನ ಮತವಲ್ಲ. ಅಹೋರಾತ್ರಿ ಮತಾಭ್ಯುದಯದ ಕಾರ್ಯದಲ್ಲಿಯೇ ತನುಮನಧನಗಳನ್ನು ಸೂರೆಮಾಡುತ್ತಿರುವ ಪರಮ ಪೂಜ್ಯರಾದ ಗುರುಗಳೂ, ವಟುಗಳೂ, ಯೋಗ್ಯರಾದ ಸೆಟ್ಟರೂ ನಮ್ಮ ಸಮಾಜದಲ್ಲಿ ಎಷ್ಟೋಜನರಿರುವರು. ಕೆಲವರು ಮಾತ್ರ ಇಂತಹ ಬಯಲಭಂಜನೆಯಲ್ಲಿ ಕಾಲವನ್ನುನೂಕಿ ಸಮಾಜವನ್ನು ಹ್ರಾಸಮಾಡುತ್ತಿರುವರೆಂದು ಮಾತ್ರ ಹೇಳಬೇಕಾಗಿದೆ. ಕೆಲ ಅಯೋಗ್ಯರಾದ ಮಠಾಧಿಕಾರಿಗಳ ಸ್ವಚ್ಛಂದ ವೃತ್ತಿಗೆ ಸರಿಯಾಗಿ ಕಾರ್ಯಕ್ರಮಗಳು ಜರುಗಿ ತದನುಸಾರವಾಗಿ ಅವರ ಪೋಷಾಕುಗಳು ಬದಲಾಯಿಸಿ, ಭಕ್ತರಲ್ಲಿ ಅವರಬಗ್ಗೆ ಭಕ್ತಿಯೂ, ವಿಶ್ವಾಸವೂ ಹಾರಲಿಕ್ಕೆ ಅನುಕೂಲವಾಯಿತು. ಯಾಕಂದರೆ;—

ಶಾಟಯುವಸ್ತ್ರವೆತ್ತ ಜರಕಾಟಿಯು ಪಾವಡವೆತ್ತ ಸರ್ಜದಾ ।
ಕೋಟುಗಳೆತ್ತ ನೀಳ್ದನಿಲುವಂಗಿಗಳೆತ್ತ ಪವಿತ್ರಬೂಟನಾ ॥
ಭಾರ್ಟವಿದೆತ್ತ ಪಾದುಕೆಗಳೆತ್ತ ಪ್ರಪಂಚದ ಹಾಳುಬೀಳುಗೋ ।
ಳಾಟವಿದೆತ್ತ ವೀರವಿರತತ್ವಮದೆತ್ತ ಧರಾಂತರಾಳದೊಳ್ ॥

ಕಾವಿಯನ್ನದ್ದಿದ ನಿಲುವಂಗಿಗಳಿಂದಲೂ, ರೇಶಿಮೆಯ ಶಾಟಿಯಿಂದಲೂ, ಪವಿತ್ರವಾದ ಪಾದುಕೆಗಳಿಂದಲೂ ಪರಿಶೋಭಿಸುತ್ತಲಿರುವ ಗುರುದೇವನನ್ನು ಕಂಡು, ಪರಿಚಯವಿಲ್ಲದಿದ್ದರೂ ಪ್ರತಿಯೊಬ್ಬರು ಭಯಭಕ್ತಿಯಿಂದ ಸಾಷ್ಟಾಂಗಪ್ರಣಾಮವನ್ನುಮಾಡದೆ ಎಂದಿಗೂ ಬಿಡಲಾರನು. ಅದೇ ಕೋಟು ಪಾಟ್ಲೋಣ ಬೂಟುಗಳಿಂದಲೂ, ಜರಕಾಟಿಯ ರುಮಾಲಗಳಿಂದಲೂ ಆರ್ಭಟಿಸುತ್ತಿರುವ ಪಟ್ಟಾಚಾರ್ಯರನ್ನು ಕಂಡು;— ... *

ಈತಂ ಮರಿದೇವನೊ ಗುರು । ನಾಥನೊ ಶಿವಮಂತ್ರ ದರ್ಪಣವನೊಡೆಯುವ ಹೆ ।
ಗ್ಗೋತಿಯೊ ವಿರತಾರಾತಿಯೊ । ಪಾತಕ ಸಂಚಯಮೊ ನರಕ ಕೂಪಮೊ ಕಾಣೆಂ ॥

ಎಂದು ಅವರನಿಜತತ್ವವ ತಿಳಿಯದೆ, ನಮಸ್ಕಾರಮಾಡಲು ನಾವೇ ಹಿಂಜರಿ ದೆ ನೋಡಬೇಕಾಗುವದು. ಇಂತಹ ಮಹನೀಯರು ,, ಶಿವಮಂತ್ರಂಗಳನರಿಯದಿರ್ದೊ ಪ್ರಸ್ಥ ಪ್ರಯೋಜನಾದಿ ಕಾರ್ಯವೈಶೇಷ್ಯದೊಳುಂ ಆಮಂತ್ರಿತ ಧನಿಕರ ಗೃಹಂಗಳೊ ಶಿವಪೂಜೆಯಂ ಮಾಡಿಕೊಳ್ಳುತಿರ್ಪಗಳ್ ,, ... ...

ಮುಸುಂಕುತ್ತಂ ಚೀನಾಂಬರವ ಜಪಮಾಲಾಂಕ ಲಸಿತಂ ।
ಲಸದ್ಭಸ್ಮಾಲಿಪ್ತಂ ಘಣಘಣಿಪ ಘಂಟಾದಿ ನಿನದಂ ॥
ಅಸಂಬದ್ಧಂ ಮಂತ್ರೋಚ್ಚರಿತ ಬಹಿರಾಭ್ರಾಟ ಭರಿತಂ ।
ಅಸನ್ನಿಷ್ಠೋಪೇತಂ ಗುಣುಗುಣು ಗುಡುತ್ತೈದೆ ಮೆರೆವರ್ ॥

ಅಗ್ಗದ ಭಸ್ಮವನ್ನು ಜಗ್ಗಿ ಬಡಿದು ಗಂಟೆ ಜಾಗಟೆಗಳ ಗಣಗಣಾಟದಲ್ಲಿ ಮಡಿಯ ಮುಸುಕಿನಲ್ಲಿಯೂ ಈ ಶಿವಯೋಗಿಗಳ ಶಿವಾರ್ಚನೆಯು ಸಮಾಪ್ತಿಯಾಗಿ ಗುವದು. ಅಯ್ಯೋ ! ಈ ಹೇಯವಾದ ಆಡಂಬರವು ಯೋಗ್ಯವಟುಗಳನ್ನು ಪಟ್ಟಚ ಕಾರಿಗಳಗೆ ನಿಯಮಿಸದೆ ಇರುವದರ ಫಲವಲ್ಲವೇ ? ... ...

ಇಲ್ಲಿ ಇನ್ನೊಂದು ಮಾತನ್ನು ಹೇಳಲು ಸಂದೇಹಮನಸ್ಕನಾದರೂ ರೇನೇ ಲೇಸಾಗುವದೆಂದು ನಿರುಪಾಯದಿಂದ ಹಾಗೆ ಮಾಡುವೆನು. ...

,, ನಿರಕ್ಷರಕುಕ್ಷಿಗಳಪ್ಪ ಪಲಂಬರ್ ಪಟ್ಟ ಚರಮೂರ್ತಿಗಳುಂ ಗುರುಸ್ಥ ಗಮರ್ಕಳುಂ ಗರ್ಭಾಧಾನ ಪುಂಸವನ ಸೀಮಂತ ಮೊದಲಾದ ವೈದಿಕವಿಧಾನಮನರಿ ಲಿಂಗಧಾರಣವಿಧಿ ನಾಮಕರಣ ಅನ್ನಪ್ರಾಶನ ಚೌಲ ದೀಕ್ಷಾ ವಿವಾಹ ವಿಧಿಯೊಳುಂ ಸ ರಾಧನಾಸಂಭ್ರಮದೊಳುಂ ಅಂತ್ಯೇಷ್ಟಿಯೊಳುಂ ಅಷ್ಟಕವೋ ಸ್ತೋತ್ರವೋ ಪುಷ ಜಲಿಯೋ ಅರಿಯಲಸದಳಮಪ್ಪಂತೆ ಸೋಮೇಶ್ವರ ಶತಕದೊಳಗಣ ಪದ್ಯಂಗಳಂ ಪ ಪರಮತೀಯರಿಂ ತಿರಸ್ಕರಣೀಯಮಪ್ಪಂತೆವೋಲ್ ಅಬದ್ಧಾಬದ್ಧ ಕರ್ಕಶಪ್ರಯೋಗ ಅಶುದ್ಧ ಪದವಿನ್ಯಾಸಮಂ ಗೈದು ಕರ್ಣಕಠೋರಮೆನೆ ಗಳಹುತ್ತಿರ್ಪರ್ ,, ...

ಕೆಲಕೆಲ ಹಳ್ಳಿಗಾಡ ಮಠಗಳಲ್ಲಿಯ ಪಟ್ಟ ಚರಾಧಿಕಾರಿಗಳಗೆ ಲಗ್ನದ ಮಂ ಷ್ಟಕವನ್ನೂ ಕೂಡ ಉಚ್ಚರಿಸಲಿಕ್ಕೆ ಬರುವದಿಲ್ಲೆಂಬುದನ್ನು ಹೇಳಲಿಕ್ಕೆ ಅಸಹ್ಯವೆನಿ ತ್ತದೆ. ಕೆಲವೊಂದು ಸ್ಥಳದಲ್ಲಿ ,, ಡೋಮಾಕೇಶಗೆ ಮದುವೆಮಾಳ್ಪರಣಗೈ ಕೋರ್ವ ತೋ ಮಂಗಲಂ ,, ಎಂದು ಅಕ್ಷತೆಗಳನ್ನೆಸೆದ ಅಕ್ಷರಶತ್ರುಗಳನ್ನು ನಾನು ಕಂಡಾರೆ ಡಿದ್ದೇನೆ. ಆದರೂ ನಮ್ಮಸಮಾಜದ ಸುದೈವದಿಂದ ಎಷ್ಟೋಮಹಾಸ್ವಾಮಿಗಳು ಪ್ರಾ ವಂತರೂ, ಪುಣ್ಯಕರ್ಮಿಗಳೂ ಇದ್ದೇ ಇದ್ದಾರೆ. ಇಂತಹರೂ ಇಲ್ಲದಿದ್ದರೆ ಎಲ್ಲವ

ಗ್ರಾಸವಾಗಿ ನಾವು ಇಂತಹ ಪ್ರಚಂಡವಾದ ಮಹಾಸಭೆಯನ್ನು ಕೂಡಿಸುತ್ತಿದ್ದಿಲ್ಲ. ಇಂತಹ ಸುಖದ ದಿವಸಗಳನ್ನು ಕಾಣುತ್ತಿದ್ದಿಲ್ಲ. ಪರಂತು ಇಂತಹ ಮಹನೀಯರು ವಿರಳ, ನಮ್ಮ ಬಹುಜನ ಜಂಗಮ ಸಮೂಹವು ವಿದ್ಯಾವಿರಹಿತವಾಗಿ ಅಚಾರಕ್ಕೆ ಅರದಾಳಬಡೆದು ಸಮಾಜ ಶಕಟವನ್ನು ಅಡ್ಡ ಎಳೆಯ ಹತ್ತಿರುವದೇ ನಮ್ಮ ಅವನತಿಗೆ ಕಾರಣವಾಗಿದೆ. ಕಾಲವೈಪರೀತ್ಯದಿಂದ ಇಂತಹರೇ ಹೆಚ್ಚಾಗಿ ಸಮಾಜೋನ್ನತಿಯ ಕಾರ್ಯವು, ವಿಪರ್ಯಾಸವನ್ನು ಹೊಂದಿದೆ ನೋಡಿರಿ! ... ... ... ... *

ಅವಿಡೆ ಸುಲ್ಲಿ ಸ್ವೈರದೆ ವಿನರ್ತಿಪ ವಾಣಿಯ ನೂಪುರಸ್ವನಂ ।
ತೀವಿರಲಾ ವಿರಕ್ತರದ ಕರ್ಣದೊಳಾಂತು ಕೃತಾರ್ಥರಾದರಾ ॥
ಪಾವನಮಪ್ಪ ತಾಣದೊಳೆ ಪೆಣ್ಗಳನೂಪುರಯುಕ್ತಪಾದ ಭಾ ।
ರಾವ ಸಚಾಲನೋತ್ಥಿತರವಂ ಶ್ರುತಿ ಮಂಜುಳಮಾದುದಕ್ಕಟಾ ॥

"ಹೂವು ಮಾರಿದ ಅಂಗಡಿಯಲ್ಲಿ ಹುಲ್ಲು ಮಾರಿತೆಂಬ" ನಾಣ್ಣುಡಿಗೆ ಅನುಸರಿಸಿ ವೇದಘೋಷಗಳಿಂದ ಪರಿಪ್ಲುತವಾದ ಪವಿತ್ರಮಠಗಳಲ್ಲಿ ಸದ್ಯಕ್ಕೆ ಕಲಹಗಳ ಕಲಕಲಾಟವು ಕೇಳಬರುತ್ತಿರುವದು ಕಲಿಕಾಲದ ಮಹಿಮೆಯಲ್ಲದೆ ಮತ್ತೇನು! ಇಂತಹ ಪವಿತ್ರವಾದ ಮಠಗಳಿಗೆ ಆರಂಭದಲ್ಲಿ ಅಶಿಕ್ಷಿತರೂ, ಅನಾಚಾರಿಗಳೂ, ಆದ ವಟುಗಳನ್ನು ಅಧಿಪತಿಗಳನ್ನಾಗಿ ಮಾಡಿದ್ದರಫಲವೇ ಇದು? ಇದನ್ನು ಕೇಳಿ ಎಷ್ಟೋಜನರು ನೀವು ಗುರುನಿಂದೆಗೇಬ ಪಂತೆ ತೋರುತ್ತದೆ ಎಂದೆಂದು ಕೊಳ್ಳಬಹುದು, ನಿರುಪಾಯವದೆ ವಿದ್ವಾಂಸರು ಸ್ವಭಾವೋಕ್ತಿಗೆ ನಿಂದೆಯೆಂದು, ಎಂದೂ ಅನ್ನಲಿಕ್ಕಿಲ್ಲ. ಅಂದರೂ ಕ್ಷಮಿಸದೆ ಇರಲಿಕ್ಕಿಲ್ಲವೆಂದು ತಿಳಿಯುತ್ತೇನೆ:— ... ... ... ... *

ಸಭಿಕರೇ! ಅಶಿಕ್ಷಿತರಾದ ಚಿಕ್ಕ ಮಕ್ಕಳನ್ನು ಭಾವೀಕಾಲದ ಕಡೆಗೆ ಲಕ್ಷ್ಯಕೊಡದೆ ಮಠಾಧಿಕಾರಿಗಳನ್ನು ಮಾಡುವದು ತೀರ ದಡ್ಡತನವು. ಅವರು ಮುಂದೆ ಎಂಥವರಾಗುತ್ತಾರೆಂಬುವದು ಆರಂಭದಲ್ಲಿ ತಿಳಿಯುವದಿಲ್ಲ. ಇಂತಹ ಅಜ್ಞಾನಿಗಳನ್ನು ಪಟ್ಟಕ್ಕೆ ಕೂಡ್ರಿಸುವದೂ, ಫಲಭರಿತವಾದ ಭೂಮಿಗಳಲ್ಲಿ ಕಲ್ಲುಗಳಿಗೆ ಸುಣ್ಣಬಡಿದು ಬೆಚ್ಚೆಂಬ ಬೆದರು ಇಡುವದೂ ಸಾದೃಶ್ಯವಾಗಿದೆ. ಫಲವನ್ನು ತಿನ್ನಲಪೇಕ್ಷಿಸುವ ಪಶುಪಕ್ಷ್ಯಾದಿ ಪ್ರಾಣಿಗಳು ಆರಂಭಕ್ಕೆ ಬೆಚ್ಚಿಗೆ ಬೆದರಿ ಹಿಂದಿನಿಂದ ಇದು ನಿರ್ಜೀವ ವಸ್ತುವೆಂದು ಮನಗಂಡು ಯಥೇಷ್ಟವಾಗಿ ಬೆಳೆಯನ್ನುಂಡು ಕಡೆಗೆ ಆ ಬೆಚ್ಚುಗಳಮೇಲೆಯೇ ಕೂತು, ವಿಶ್ರಾಂತಿಯನ್ನು ಹೊಂದುತ್ತವೆ. ಇದರಂತೆ ವಿದ್ಯಾಗಂಧವೂ, ಶೀಲಸ್ವಭಾವವೂ ಇಲ್ಲದ ಗುರುವನ್ನು ಭಕ್ತವರ್ಗವು ಕಂಡು ಅವರೊಡನೆ ಅಸಡ್ಡೆಯಿಂದ ನಡೆದುಕೊಳ್ಳುವದು, ವಿದ್ಯೆ ಸದಾಚಾರ ಇವುಗಳಲ್ಲಿ ಒಂದಾದರೂ ಕಡುತರವಾಗಿ ಉಳ್ಳ ಗುರುವು, ತೇಜೋಬಲದಿಂದಲೇ ಇರುತ್ತಾನೆ.

ಎರಡೂ ಇದ್ದರಂತೂ ಚಿನ್ನಕ್ಕೆ ರತ್ನ ಸೇರಿದಂತೆ ಸ್ವಯಂಪ್ರಕಾಶಿತನಾಗುತ್ತಾನೆ. ಇದ-ರಿಂದ ನಾವು ಪ್ರತಿಯೊಂದು ಮಠಕ್ಕೆ ಇಂತಹ ವಿದ್ಯಾಚಾರ ಸಂಪನ್ನರಾದ ವಟುಗಳನ್ನೇ ಆರಿಸತಕ್ಕದ್ದು. ನಮ್ಮ ಪಂಚಾಚಾರ್ಯರ ಪೀಠದವರು, ಅರ್ಥಾತ್ ಸಮಾಜದವರು ಈ ಬಗ್ಗೆ ಮನಃಪೂರ್ವಕವಾಗಿ ವಿಚಾರಮಾಡಿ ಸದ್ಗುಣಿಗಳಿಗೆ ಉತ್ತೇಜನವನ್ನು, ದುರ್ಗುಣಿಗಳಿಗೆ ಬಹಿಷ್ಕಾರವನ್ನು ಕೊಡುತ್ತ ಬಂದಿದ್ದರೆ, ನಾವು ಇಷ್ಟೊಂದು ನಿಕೃಷ್ಟಾವಸ್ಥೆಯನ್ನು ಹೊಂದುತ್ತಿರಲಿಲ್ಲ. ಅದೇ ಸುಕಾಲವು ಈಗೀಗ ಪ್ರಾಪ್ತವಾಗುತ್ತಲಿದೆಯೆಂದು ಹೇಳಬೇಕಾ-ಗಿರುವದು. ಉದಾಹರಣಾರ್ಥವಾಗಿ ಚಿತ್ರದುರ್ಗದ ಶ್ರೀ ಬೃಹನ್ಮಠಕ್ಕೂ, ಹುಬ್ಬಳ್ಳಿ ಮೂರುಸಾವಿರ ಮಠಕ್ಕೂ ವಿದ್ಯಾಚಾರಸಂಪನ್ನರಾದ ವಟುಗಳನ್ನು ನಮ್ಮ ಸಮಾಜದವರು ನಿಯಮಿಸಿದ್ದರಿಂದಲಾ ಮಠಗಳು ಹೇಗೆ ಉಚ್ಛ್ರಾಯವನ್ನು ಹೊಂದಿರುವವೆಂಬುದು ಸು-ಶ್ರುತವಾಗಿರುವದು. ಈ ಸ್ಥಿತಿಯನ್ನೆಲ್ಲ ಸದಸದ್ವಿಚಾರದಿಂದ ಲಕ್ಷ್ಯಕ್ಕೆ ತಂಯು ಸರ್ವ ವೀರ-ವರು ತಮಗೆ ಸಂಬಂಧವಿರುವ ಮಠಗಳಿಗಾಗಿ ಯೋಗ್ಯರಾದ ಭಾವೀಗುರುಗಳನ್ನೇ ಆರಿ-ತಂದು ಅಧಿಕಾರ ಕೊಡತಕ್ಕದ್ದು. ... ... ...

ಇನ್ನು ಮಠಾರ್ಹ ವಟುಗಳಲ್ಲಿ ಇರಲವಶ್ಯವಾದ ಮುಖ್ಯಮುಖ್ಯ ಗುಣಗಳನ್ನು ಹೇಳಿ ಈ ಬೆಳೆದ ಭಾಷಣವನ್ನು ಮುಗಿಸುತ್ತೇನೆ. ... ...

೧-ನೇದ್ದು ಕುಲೀನತೆಯು; ೨-ನೇದ್ದು ಸದ್ವಿದ್ಯೆಯು; ೩-ನೇದ್ದು ಸದಾಚಾರವು.

(೧) ಸತ್ಕುಲ ಸಂಜಾತರು, ಪರಂಪರೆಯಿಂದ ಸತ್ಸಂಸ್ಕಾರ ವಿಶಿಷ್ಟರೂ, ಆರೋ-ಗ್ಯಭಾಗ್ಯ ಸಂಪನ್ನರೂ ಆಗಿರುತ್ತಾರೆ. ... ... ...

(೨) ವಿದ್ಯಾವಂತರು, ಸದ್ಧರ್ಮಕ್ಕೆ ಆಧಾರವಾದ ಸತ್ಯ, ನ್ಯಾಯ, ದಯಾ, ಶಾಂ-ತಿಗಳಿಂದ ಪರಿಪ್ಲುತರಾಗಿ ಬಹುಶ್ರುತರೂ, ಸದಸದ್ವಿಚಾರಿಗಳೂ ಆಗಿರುತ್ತಾರೆ. ...

(೩) ಸಚ್ಛೀಲರು, ಮೇಲಿನ ಎಲ್ಲ ಗುಣಗಳಿಗೆ ಸ್ಥಿರವಾದ ಉತ್ತಮರೂಪವನ್ನು ಕೊಡುತ್ತಾರೆ. ... ... ... ...

ಆದುದರಿಂದ ಈ ಗುಣಗಳಿಂದ ಮಂಡಿತರಾದ ಅಂದರೆ ವಿದ್ಯಾ ಸದಾಚಾರಸಂಪನ್ನ-ರಾದ ವಟುಗಳನ್ನೇ ಆರಿಸಿ, ಪಟ್ಟಚರಾಧಿಕಾರಗಳಿಗೆ ನಿಯೋಗಿಸಬೇಕೆಂದು ಸವಿನಯದಿಂದ ಪ್ರಾರ್ಥಿಸಿ ನನ್ನ ಉಪನ್ಯಾಸವನ್ನು ಉಪರಮಿಸುವೆನು. ... ...

ಈ ನನ್ನ ಎಲ್ಲ ಭಾಷಣದ ಸಾರವನ್ನು ಇನ್ನು ಉಪಸಂಹಾರದ ಈ ಒಂ-ದು ಪದ್ಯದಲ್ಲಿ ಹೇಳಿ, ತಮ್ಮ ಅಪ್ಪಣೆಯನ್ನು ತೆಗೆದುಕೊಳ್ಳುವೆನು. ...

॥ ಮಾ ಲಿ ನೀ ವೃ ತ್ತ. ॥

ಗುರುಮತ ಪಥಿಪಂಲಿಂಗೈಕ್ಯನಾಗಲ್ಕೆ ಭಕ್ತರ್ ।
ಮರಿಯನರಸುತಂ ಸುಜ್ಞಾನ ಸಂಪನ್ನನಂ ತಂ ।
ದಿರಿಸಿ ಪರಿಕಿಸುತ್ತಂ ಪಟ್ಟಮಂ ಕಟ್ಟಲಾತಂ ।
ಧರೆಗೆ ಬೆಳಗುತಿರ್ಪಂ ದಿವ್ಯಯೋಗೀಂಪ್ರನಂತೆ ॥

( ಕೈಚಪ್ಪಾಳೆ. )

ಕೇ. ಬಸವಾರ್ಯ.

---

ಇದೇ ವಿಷಯದಮೇಲೆ ವೇ॥ ನಂದಿಕೊಟಕೂರು, ವೈಯ್ಯಾಕರಣಿ ನೀಲಕಂಠ ಶಾಸ್ತ್ರಿಗಳು, ಅನೇಕ ಪ್ರಮಾಣಗಳನ್ನು ಲಿಂಗಧಾರಣೆಗೆ ತಕ್ಕ ಪ್ರಮಾಣಗಳನ್ನು ಆಂಧ್ರ ಭಾಷೆಯಲ್ಲಿ ಸೂಚಿಸಿದರು. ... ... ... *

ಆರ್ಯರೇ? ನಾನು ತೆಗದುಕೊಂಡಿರುವ ವಿಷಯದಲ್ಲಿ ತಕ್ಕಷ್ಟು ಪ್ರಮಾಣಗಳನ್ನು ಕೊಡುವಪಕ್ಕೆ ಉದ್ಯುಕ್ತನಾಗಿರುವೆನು; ದಯವಿಟ್ಟು ಕೇಳಿ:—ನ ಸಾಸಭಾಯತ್ರನ ಸಂತಿವೃದ್ಧಾವೃದ್ಧಾನತೇಯೇನ ವದಂತಿಧರ್ಮಂ ಧರ್ಮಾನತದ್ಯತ್ರನಸತ್ಯಮಸ್ತಿಸತ್ಯಂ ನತದ್ಯ ಚ್ಛಲಮಭ್ಯುಪೈತಿ ॥ ... ... ... ... *

ಆಚಾರಹೀನಂ ನಪುನಂತಿವೇದಾ ಯದ್ಯಪ್ಯಧೀತಾಸ್ಸಹಷಡ್ಭಿರಂಗೈಃ ವೇದಾಃ ಷಡ್ಭಿರಂಗೈಃ ಶಿಕ್ಷಾವ್ಯಾಕರಣಛಂದೋಂ ನಿರುಕ್ತಜ್ಯೋತಿಷಕಲ್ಪೈ ಸಹಾಧೀತಾಯದಿ ಆಚಾರೇಣಹೀನಃ ಆಚಾರದೂರ ಇತ್ಯರ್ಥಃ ಆಜ್‌ಪೂರ್ವಕ ಚರಗತಿಭಕ್ಷಣಯೋಃ ಇತ್ಯಾಕಾರಕ ಧಾತೋಃ ಭಾವಾರ್ಥೇಘಙ್ ಸ್ವಯಮಾಚರಂತಿ ಶಿಷ್ಯಾನಾಚಾರಯಂತಿ ಕುಲಾಚಾರಂಭೋಧಯಂತೀತಿ ಆಚಾರ್ಯಾಃ ಗುರವಃ ನಾಮ ಜಗದಾಚಾರ್ಯಾಃ ಪಂಚಾಚಾರ್ಯಾ ಇತಿ ಪ್ರತೀತೋರ್ಥಃ ॥ ... ... ... ... *

ಆಚಾರಾದ್ಭಕ್ತಿಮಾಪ್ನೋತಿ ಭಕ್ತ್ಯಾಕರ್ಮಕ್ಷಯೋಭವೇತ್ । ಕರ್ಮಕ್ಷಯಾದ್ಧಿ ಸದ್ಬುದ್ಧಿ ಸ್ಸದ್ಬುದ್ಧ್ಯಾತತ್ವದರ್ಶನಮ್ ॥ ೧ ॥ ತಸ್ಮಾದ್ದರ್ಪಕ್ಷಯಂಯಾತಿ ತಸ್ಮಾತ್ಜ್ಞಾನಂ

ಪ್ರಸಿದ್ಧ್ಯತಿ । ಜ್ಞಾನಾನ್ಮೋಕ್ಷಮಭ್ಯೇತಿ ಮೋಕ್ಷಾಪನ್ನೋನವಿದ್ಯತೆ ॥ ೨ ॥ ಜ್ಞಾ
ವಿನಾನಖಲುಕರ್ಮಶತೈಶ್ಚಮೋಕ್ಷೋ। ಮಾಯಾಪಸಾರಣಮೃತೇನಹಿಬೋಧಲೇಶಃ। ಪ್ರ
ಯಾಕ್ರಿಯಾಯುತಮಿದಂ ಸ್ವಯಮೇವಜ್ಞಾತುಂ ತತ್ವಾರ್ಥವೇದಿನಮತೀಂದ್ರಿಯಮಾಶ್ರಯ
ತೇ ॥೩॥ ಅಪಿಚ। ಫಲಪ್ರಕಾಶಕಂ ಪುಷ್ಪಂಫಲಂಪುಷ್ಪ ವಿನಾಶಕಮ್ । ಜ್ಞಾನಪ್ರಕಾಶಕ
ಕರ್ಮಜ್ಞಾನಂ ಕರ್ಮವಿನಾಶಕಮ್ ॥ ೪ ॥ ಉಭಾಭ್ಯಾಮೇವಪಕ್ಷಾಭ್ಯಾಂ ಯಥಾಖೇಪ
ಣಾಂಗತಿಃ । ಕ್ರಿಯಾಜ್ಞಾನಸಮಾಯುಕ್ತಂ ವೀರಶೈವಸ್ಸಮಾಚರೇತ್ ॥೫॥ ( ಕುಸುಮಾ
ಜಲೌ ) ನಿತ್ಯನೈಮಿತ್ತಿಕೈರೇವ ಕುರ್ವಾಣೋದುರಿತಕ್ಷಯಮ್ । ಜ್ಞಾನಂಚವಿಮಲೀ
ರ್ವನ್ನಭ್ಯಾಸೇನಚಪಾಚಯೇತ್ । ಅಭ್ಯಾಸಾತ್ಪಕ್ವವಿಜ್ಞಾನಂ ಕೈವಲ್ಯಂಲಭತೇನರಃ ॥ ೬
(ಸೂತ್ರಭಾಷ್ಯೇ) ಯಥಾಮೃತಾತ್ಪರಂನಾಸ್ತಿ ಭೋಗ್ಯವಸ್ತುಮಹತ್ತರಂ । ತಥಾಸ್ಥ
ಲಿಂಗೈಕ್ಯಾದನ್ಯೋಮೋಕ್ಷಪಥೋನಹಿ ॥ ೭ ॥ ಅಮೃತೇನತುತೃಪ್ತಸ್ಯ ಪಯಸಾಕಿಂ
ಯೋಜನಮ್ । ಏವಂತತ್ಪರಮಂಜ್ಞಾತ್ವಾ ವೇದೈರ್ನಾಸ್ತಿಪ್ರಯೋಜನಮ್ ॥೭॥ ನೋ
ದ್ಯತೇವಿನಾಜ್ಞಾನಂ ವಿಚಾರೇಣವಿನಾಕ್ವಚಿತ್ । ಯಥಾಪದಾರ್ಥಭಾನಂಹಿ ಪ್ರಕಾಶೇನವಿ
ಕ್ವಚಿತ್ ॥ ೮ ॥ (ನೀತೆ) ವಿತ್ತಂಬಂಧುರ್ವಯಃಕರ್ಮ ವಿದ್ಯಾಭವತಿಪಂಚಮಿ। ಏ
ನಿಮಾನ್ಯಸ್ಥಾನಾನಿ ಗರೀಯಾಂಸ್ಯುತ್ತರೋತ್ತರಮ್ ॥ ೯ ॥ ಅಷ್ಟಾವರಣನಿಷ್ಠಾಸ್ತೇ
ಪಟ್ಟಾಧಿಕಾರಿಣಃ । ಲಿಂಗಾನುಷ್ಠಾನಭೂಯಿಷ್ಠಾ ಭಕ್ತಜ್ಞಾನಪ್ರವಾಹಿನಃ ॥ ೧೦ ॥ ಜ್ಞಾ
ಮುದ್ರಾಸಮಾಯುಕ್ತಾ ವಿದ್ಯಾವಿನಯಭೂಷಿತಾಃ । ದೀಕ್ಷಾಂಶಿಕ್ಷಾಂನೃಣಾಂರಕ್ಷಾಂಕರ್ತು
ಪ್ರಬದ್ಧಚೇತಸಃ ॥ ೧೧ ॥ ಜಿತೇಂದ್ರಿಯಾಸ್ಸತ್ಯವಾಕ್ಯಾ ತಪಸ್ಸಾಮ್ರಾಜ್ಯವೈಭವಾಃ। ಕ್ಷ
ತಿಭಾಶಾಲಿನೋನಿತ್ಯಂ ಪಂಚಪೀಠಾಧಿಕಾರಿಣಃ ॥ ೧೨ ॥ (ಪಾರ್ವತೀಂಪ್ರತಿಪರಮೇಶ್ವ
ಪ್ರಾಹ (ವೀರಶೈವಾಚಾರಕೌಸ್ತುಭೇ) ಇತಃಪರಂಪ್ರವಕ್ಷ್ಯಾಮಿವ್ಯವಸ್ಥಾಗೋತ್ರವರ್ಗಿ
ಗುರುಸ್ಥಲಸಮಾಖ್ಯಾತೌ ವೀರಮಾಹೇಶ್ವರಾಭಿದಾಃ ॥ ೧೩ ॥ ಏತೆಗುರುಪದಾಧ್ಯಕ್ಷಾ
ನ್ಯೇಲಾಂಛನಧಾರಿಣಃ । ಅತಸ್ಸ್ವವಂಶಜಾನ್ ಬಾಲಾನ್ ಗೃಹೀತ್ವಾತ್ವಾಂವರಾನನೇ ॥ ೧೪
ವೀರಮಾಹೇಶ್ವರೀಂದೀಕ್ಷಾಂ ಕೃತ್ವಾತೇಪುತ್ರವರ್ಗಿಣಃ। ಪಟ್ಟಾಭಿಷೇಕಯುಕ್ತಾಂಶ್ಚ ಶಿ
ಮುದ್ರಾನ್ವಿತಾನ್ ಭುವಿ ॥ ೧೫ ॥ ಷಟ್ಸ್ಥಲಜ್ಞಾನಸಂಪನ್ನಾಃ ಕುರ್ವಂತಿಚರಸಂಜ್ಞಿಕಾನ್
ಗುರುಚರಣಂಭವಹರಣಂ ಶರಣಹೃದಾಭರಣ ಮಾತ್ಮಸುಖಕರಣಮ್ । ಮರಣಭಯಸೂ
ತ್ತರಣಂ ತರುಣಾರುಣಕಿರಣ ವರಣಮುಹಮೊಡೇ ॥ ೧೬ ॥ ಏತಾದೃಶಗುರವಃಭಾತ್ರಾ
ಕಿಂಕುರ್ವನ್ತಿ । ವಿದಳಯತಿಕುಬೋಧಂ ಬೋಧಯತ್ಯಾಗಮಾರ್ಥಂ । ಸುಗತಿಕುಗತಿಮಾ
ಗೌಪುಣ್ಯಪಾಪೇವ್ಯನಕ್ತಿ । ಅವಗಮಯತಿಕೃತ್ಯಾ ಕೃತ್ಯಭೇದಂಗುರುರ್ಯೋ ಭವಜಲ
ನಿಧಿಪೋತಸ್ತಂವಿನಾನಾಸ್ತಿಕಶ್ಚಿತ್ ॥೧೭॥ ಆಹ ॥ ಏತೇಷಾಂಮಹತಾಂ ದರ್ಶನೇನಕಿಂಫಲ
ಸ್ಯಾದಿತ ॥ ಸರ್ವಸಿದ್ಧಿಕರಂಪುಂಸಾಂದರ್ಶನಂ ಶಿವಯೋಗಿನಾಂ । ಸ್ಪರ್ಶನಂಪಾಪಶಮನಂಪೂ
ಜನಂ ಮುಕ್ತಿಸಾಧನಂ ॥ ೧೮ ॥ ಮಹತಾಂಶಿವತಾತ್ಪರ್ಯ ವೇದಿನಾಮನುಮೋದಿನಾಂ । ಕಿ

ವಾಫಲಂನೆಸಿದ್ಧ್ಯೇತ ಸಂಪರ್ಕಾಚ್ಛಿವಯೋಗಿನಾಂ ॥೧೯॥ ಪಾದಾಗ್ರರೇಣವೋಯತ್ರಪತಂತಿ ಶಿವಯೋಗಿನಃ । ತದೇವಸದನಂಪುಣ್ಯಂ ಪಾವನಂಶಿವಮಂದಿರಮ್ ॥೨೦॥ ಯಸ್ಮಿನ್ಸಿಂಚಿಪ ದಾಂಭೋಜ ರಜಃಕಣಪವಿತ್ರಿತಮ್ । ತದೇವಭವನಂನೋಚೇನ್ನ್ಯಕಾರ ಸ್ತತ್ರಲುಪ್ಯತೇ॥ ಸಾಧೂನಾಂದರ್ಶನಂಪುಣ್ಯಂ ಶಂಡದಾತಿಸದಾಸ್ಪೃಶಾಂ । ಸರ್ವ್ವಾರ್ತ್ಥಾಲಭತೇಸಸ್ಯಂ ನರಸಾ್ಸ ಧುಸಮಾಗಮಾತ್ ॥೨೧॥ ಯದ್ದುಷ್ಕರಂಯದ್ದುರಾಪಂ ಯದ್ದುರ್ಗಂಯಚ್ಚದುಸ್ತರಂ। ತತ್ಸರ್ವಂತಪಸಃಪ್ರಾಪ್ಯಂ ತಪೋಹಿದುರತಿಕ್ರಮಮ್ ॥ ... ॥೨೩॥

ಇನ್ನು ಮತಸನಾತನತ್ವವನ್ನು ಕುರಿತು ಹೇಳುತ್ತೇನೆ.

ವೀರಶೈವಾಃ ಬಸವೇಶ್ವರಾ ತ್ಪೂರ್ವ್ವಂಸಂತಿವಾನವೇತಿಶಂಕಾ ಜಾಗ್ರ ತಸ್ಯಾಃಸಮಾ ಧಾನಂವಕ್ಷ್ಯತೇ । ಸನಾತನತ್ವಂನಾಮ ಸದಾಭವಃಸನಾತನಃ। ತಸ್ಯಭಾವಃಸನಾತನತ್ವಂ ಏತೇ ನವೀರಶೈವಾನಾಮನಾದಿತ್ವಂಸಿದ್ಧಂ ಏತದ್ವಿಷಯೇ ॥ ಪಾಶುಪತ್ಯಾಗಮೇ ॥ ಏಕಾಕ್ಷರೋ ದ್ವ್ಯಕ್ಷರಶ್ಚತ್ರ್ಯಕ್ಷರಶ್ಚತುರಕ್ಷರಃ । ಪಂಚಾಕ್ಷರಃಕೃತಯುಗೇ ಪಂಚನಾಮಾನಿಸರ್ವಶಃ । ಏಕವಕ್ತ್ರೋದ್ವಿವಕ್ತ್ರಶ್ಚ ತ್ರಿವಕ್ತ್ರಶ್ಚತುರಾನನಃ॥ ಪಂಚವಕ್ತ್ರೇತಿತ್ರೇತಾಯಾಂ ಪಂಚನಾಮಾ ನಿಸರ್ವಶಃ । ದಾರುಕಶ್ಯಂಕುಕರ್ಣಶ್ಚ ರೇಣುಕೋಧೇನುಕರ್ಣಕಃ ॥ ವಿಶ್ವಕರ್ಣಶ್ಚಪಂ ಚೈತೇ ದ್ವಾಪರೇಪರಿಕೀರ್ತಿತಾಃ । ಮರುಳಶ್ಚೈಕರಾಮಶ್ಚ ರೇಣುಕಃಪಂಡಿತಸ್ತಥಾ। ವಿಶ್ವಾ ರಾಧ್ಯ ಇತಿಪ್ರೋಕ್ತಾಃ ಕಲೌಪಂಚಾರ್ಯನಾಮಕಾಃ ॥ ಇತಿ ಪಾಶುಪತ್ಯಾಗಮೇ ॥ ಯಜು ಶ್ಶಾಖಾಯಾಂ(ವೀರಲೈಂಗ್ಯೋಪನಿಷದಿ) ಆತ್ಮಲಿಂಗಂಯೋಧತ್ತೇ। ಸೋಹಮೇವ ತದಧೀಹಿ ದ್ವಿವಿಧಂಲಿಂಗಂ ಇಷ್ಟಂಪ್ರಾಣಂಚ ( ಹಂಸೋಪನಿಷದಿ ) ಹೃದಬ್ಜಮಧ್ಯೇ ಲಿಂಗಂಧೃತ್ವಾ ಜ್ಯೋತಿಂಸಂವಿಶಂತಿ। ಅತ್ರ್ಯಾಶ್ರಮಸ್ಥಾಃ । ಪರಿಮುಚ್ಯಂತೇ। ಸರ್ವೇಲಿಂಗಾಂಗಶೋಭಾವೋ ಕ್ಷಮಾರ್ಗೈಕನಿಷ್ಠಾಃ।ತೇಬ್ರಹ್ಮಲೋಕೇಷುಪರಾಂತಕಾಲೇ। ಶಿವಪ್ರಸಾದಾತ್ಪರಿಮುಚ್ಯಂ ತೇಸರ್ವೇ ಲಿಂಗಾಂಗಸಾಮರಸ್ಯಾಚ್ಚ ಶರೀರೇಲಿಂಗಧಾರಣಾತ್ ನಿಯಮೇನೈವಧೃತ್ವಾತೇ ಮುಕ್ತಾಸ್ಸಂಸಾರಬಂಧನಾತ್ ಇತಿ ॥ ಸ್ವಯಂಭುವಾಗಮೆ ನವಮಪಟಲೇ ॥ ಈಶ್ವರಃಪಾ ರ್ವತೀಂಪ್ರತ್ಯಾಹ । ಅತಃಪರಂಪ್ರವಕ್ಷ್ಯಾಮಿ । ಪಂಚಾಚಾರ್ಯಸಮುದ್ಭವಂ । ತೇಷಾಂನಾ ಮಾನಿದೇವಿತ್ವಂ । ಶೃಣುನಿಶ್ಚಲಚೇತಸಾ । ಘಂಟಾಕರ್ಣಗಣಶ್ಚಾದ್ಯೋ । ಗಜಕರ್ಣೋದ್ವಿ ತೀಯಕಃ । ತೃತೀಯೋರೇಣುಕಾಖ್ಯಾತಃ। ಚತುರ್ಥೋದಾರುಕಸ್ತಥಾ ॥ ಪಂಚಮೋವಿಶ್ವ ಕರ್ಣಾಶ್ಚ ಪಂಚಾರಾಧ್ಯಾ ಇತಿಸ್ಮೃತಾಃ। ತಏವಯುಗಭೇದೇನಪ್ರತಿನಾಮಾನ್ಯುಪಾಗತಾಃ ಮಮಪಂಚಮುಖೋದ್ಭೂತಾ ಸ್ಸರ್ವಾಗಮವಿಶಾರದಾಃ ॥ ಭವಿತಾರಃಪ್ರವಕ್ಷ್ಯಾಮಿ ಶೃಣು ತಜ್ಜನನಕ್ರಮಂ । ದ್ರಾಕ್ಷಾರಾಮೇರಾಮನಾಥ ಲಿಂಗೇಯುಗಚತುಷ್ಟಯೇ ॥ ಏಕೋ ರಾಮಸ್ಯಜನನ ಮಾವಾಸಸ್ತುಹಿಮಾಲಯೇ । ಸುಧಾಕುಂಡಾಖ್ಯಸಕ್ಷೇತ್ರೇ ಲಿಂಗೇಶ್ರೀಮಲ್ಲಿ ಕಾರ್ಜುನೇ ॥ ಜನನಂಪಂಡಿತಾರ್ಯಸ್ಯ ನಿವಾಸಶ್ಶ್ರೀಗಿರೌಶಿವೇ । ಅಥರೇವಣಸಿದ್ಧಸ್ಯ ಕೊ

ಲ್ಲಿಪಾಕೀಮನೋಹರೇ ॥ ಸೋಮೇಶಲಿಂಗಜನನ ಮಾಮಾಸಕದಲೀಪುರೇ । ತದ್ವನ್ಮರು
ಸಿದ್ಧಸ್ಯ ವಟಕ್ಷೇತ್ರೇಮಹೋತ್ತರೇ ॥ ಸಿದ್ಧೇಶಲಿಂಗಜನನಂ ಸ್ಥಾನಮುಜ್ಜಯಿನೀಪ್ರ
ಕಾಶ್ಯಾಂವಿಶ್ವೇಶ್ವರೇಲಿಂಗೇ ವಿಶ್ವಾರಾಧ್ಯಸ್ಯಸಂಭವಃ ॥ ಸ್ಥಾನಂಶ್ರೀಕೊಲ್ಲಿಪಾಕೇಚ ಸ್ವ
ಪಾರ್ವತಿಸಾವರಂ । ಕೃತಾದ್ಯುಗಚತುರ್ಷ್ವೇತೆ ಪಂಚಾರಾಧ್ಯಾಯಥಾಕ್ರಮಂ ॥ ಮಮಃ
ಚಮುಖೋದ್ಭೂತಾ ಸಂಸ್ಥಾಪ್ಯಕಲಶರ್ಾಭುವಿ । ದೀಕ್ಷಾಕೃತ್ವಾಕ್ರಮಾದೇವಂ ವಿ
ರ್ವಾಯಥಾತಥಾ ॥ ಕಲೌತದ್ವಂಶಜಾತಾನಾಂದೀಕ್ಷಾನುಗ್ರಹಕಾರಣಮ್। ನಿಧಾಯಸ್ವ
ಜಾಂಶ್ಚಪುನಸ್ತೇಷಾಂಸಮಾಗತಾಃ । ಆರಾಧ್ಯಪಂಚಕಾನಾಂಚವಂಶಜಾನಾಂಪೃಥಕ್ಪ್ರ

ಇನ್ನು ಲಿಂಗಧಾರಣವನ್ನು ಕುರಿತು ಹೇಳುತ್ತೇನೆ.

ಅಥಲಿಂಗಧಾರಣ ಶ್ರುತಯಃ ಸವ್ಯಾಖ್ಯಾಲಿಖ್ಯಂತೇ ತತ್ರಋಗ್ವೇದೇ ಲಿಂ
ರಣವಿಧೌ ಇಯಂಶ್ರುತಿರಾಮ್ನಾತಾ । ಪವಿತ್ರಂತೇ ವಿತತಂಬ್ರಹ್ಮಣಸ್ಪತೇ ಪ್ರಭು
ತ್ರಾಣಿಪರ್ಯೇಷಿ ವಿಶ್ವತಃ । ಅತಪ್ತತನೂರ್ನತ ದಾಮೋಅಶ್ನುತೇ । ಶೃತಾಸ ಇ
ತಸ್ತತ್ಸಮಾಸತ । ಬ್ರಹ್ಮಣಸ್ಪತೇ ಲಿಂಗಸ್ಯಾಧಿಷ್ಠಾತಃತೇ ತವಪವಿತ್ರಂ ಲಿಂ
ತತಂ ವ್ಯಾಪ್ತಂಪ್ರಭುಸ್ತ್ವಂವಿಶ್ವೇಷಾಂಗಾತ್ರಾಣಿ ಶರೀರಾಣಿಪರ್ಯೇಷಿ ವ್ಯಾಪ್ನೋಷಿವಿಷ
ದಿಭಿರಪಿ ತ್ವಲ್ಲಿಂಗಸ್ಯಧೃತತ್ವಾತ್ ಸ್ಪಷ್ಟಂಚೈತತ್ತ್ವಪ್ಮೇ। (ಶಿವರಾಘವಸಂವಾದೇ) ಬ್ರ
ವಿಷ್ಣ್ವಾದಯೋದೇವಾ ಮುನಯೋಗೌತಮಾದಯಃ । ಧಾರಯಂತಿಸದಾಲಿಂಗ ಮ
ಮಾಂಗೇವಿಶೇಷತಃ ॥೧॥ ಅತಪ್ತಾಅಕ್ಲೇಶಿತಾ । ಶಿವದೀಕ್ಷಾದಿನಾರಹಿತಾ ತನುರ್ಯೇಷ
ಅಮೋಪಕ್ವಾಂತಃಕರಣಃ ತಲ್ಲಿಂಗಂನಾಶ್ನುತೇ ದುರದೃಷ್ಟವತ್ತ್ವಾತ್ತದ್ಧಾರಣೇನಪ್ರ
ಇತ್ಯರ್ಥಃ ॥ ಇದ್ವಹನ್ತಃ ಲಿಂಗಧಾರಯಂತಃ । ಶೃತಾಸಃ ವಿದ್ವಾಂಸಃ ತಲ್ಲಿಂಗಂ ಅಶ್ನು
ಪ್ರಾಪ್ನುವಂತಿ । ಅಸ್ಯಾಶ್ರುತೇಃಪಾಶುಪತಾಗಮೋಕ್ತಾರ್ಥಶ್ಚಲಿಖ್ಯತೇ । ಬ್ರಹ್ಮೇತಿ
ಮಾಖ್ಯಾತಂ ಬ್ರಹ್ಮಣಸ್ಪತಿರೀಶ್ವರಃ । ಪವಿತ್ರಂತದ್ಧಿವಿಖ್ಯಾತಂ ತತ್ಸಂಪರ್ಕಾತ್ತನುಶ್ಯ
ಋಗಿತ್ಯಾಹ ॥ ಪವಿತ್ರಂತೇವಿತತಂಬ್ರಹ್ಮಣಸ್ಪತೇ ತಸ್ಮಾತ್ಪವಿತ್ರಂತಲ್ಲಿಂಗಂಧಾರ್ಯಂ
ಮನಾಮಯಂ । ಯೇನಾತಪ್ತತನೂರಜ್ಞಸ್ತಲ್ಲಿಂಗಂನಾಪ್ನುಯಾತ್ಕ್ವಚಿತ್ ॥ ದೀಕ್ಷ
ಸಹಿತಸ್ಸ್ವಕ್ಷಾದಾಪ್ನುಯಾಲ್ಲಿಂಗಮುತ್ತಮಂ ॥ ತ್ಯಂತೇನಾಗಸ್ತ್ಯಂಪ್ರತಿ ರೇಣುಕೇನಪ
ಶ್ರುತಿರ್ಲಿಂಗಧಾರಣ ಪರತಯಾವ್ಯಾಖ್ಯಾತಾ । ತತ್ರಾಥರ್ವಣಶೀರ್ಷೋಪನಿಷದಿ ಆಮ್ನಾ
ಶ್ರುತಿರಿಯಮ್ ॥ ರುದ್ರ ಏಕತ್ವಮಾಹ ರುದ್ರಂಶಾಶ್ವತಂ ವೈಪುರಾಣಂ ಇಷ್ಟಮೂ
ತಪಸಾನುಯಚ್ಛತ ॥ ಇತಿ ಅಸ್ಯಾರ್ಥಃಯಃ ಪುರುಷಃ ಶಾಶ್ವತಂಧ್ರುವಂ ಪುರಾಣಂ ಪ್ರ
ವಂ ಊರ್ಜಂ ಉತ್ಕೃಷ್ಟಂ ಇಷ್ಟಂ ಇಚ್ಛಾವಿಷಯೀಭೂತಂ ಕ್ರಿಯಾಲಿಂಗಂ ತಪಸ್ಸ
ಶ್ಚರಣೇನ ಅನುಯಚ್ಛತೇ ಉಪಾಸ್ತೇ ಸಪುರುಷಃ । ರುದ್ರೇಶಿವೇ ಏಕತ್ವಂ ಐಕ್ಯ
ಯಚ್ಛತೇ ವೈಷ್ಣುಪ್ನೋತಿ ಪ್ರಸಿದ್ಧಮಿತಿ । ಮಂತ್ರಂದೃಷ್ಟ್ವಾ ಆಹ ॥ ವದತೀತಿ

ಬ್ರಹ್ಮೋಪನಿಷದ್ಗತೇಯಂಶ್ರುತಿಃ । ಯದಕ್ಷರಂಪರಂ ಬ್ರಹ್ಮತತ್ಸೂತ್ರಮಿತಿಧಾರಯೇತ್
ಸೂಚನಾತ್ಸೂತ್ರಮಿತ್ಯಾಹುಃ ಸೂತ್ರಂನಾಮಪರಂಪದಂ । ಧಾರಣಾದಸ್ಯಸೂತ್ರಸ್ಯನೋಚ್ಛಿ
ಷ್ಟೋನಾಶುಚಿರ್ಭವೇತ್ ॥ ಇತಿ ಅಸ್ಯಾರ್ಥಃ ॥ ವೇದಾಃಯತ್ ಅಕ್ಷರಂನಾಶರಹಿತಂ ಪರಂ
ಬ್ರಹ್ಮಪರಶಿವಾಖ್ಯಂ ತತ್ವಮಿತಿ ಆಹುಃ । ಯತ್ಪರಶಿವಾಖ್ಯಂ ತತ್ವಂಸೂಚನಾತ್ ಸರ್ವಾಗ
ಮೇಷು ಪ್ರತಿಪಾದನಾತ್ ಸೂತ್ರಮಿತಿ ಪರಮುತ್ಕೃಷ್ಟಂಪದಂ ಪ್ರಾಪ್ಯಂನಾಮ ಇತಿಚಾ
ಹುಃ ॥ ಪುರುಷಃತತ್ಸೂತ್ರಂಲಿಂಗಾತ್ಮಕಂಪರಶಿವಂ ಸ್ವಾಂಗೇಧಾರಯೇತ್ ॥ ಪುರುಷಃ ಅಸ್ಯ
ಸೂತ್ರಸ್ಯಧಾರಣಾತ್ ಉಚ್ಛಿಷ್ಟಸ್ಪರ್ಶಕೃತದೋಷವಾನ್ ಅಶುಚಿಃ ಅನ್ಯದೋಷಲಿಪ್ತೋಪಿ
ನಭವೇತ್। ಶಿವಲಿಂಗಂಸರ್ವದಾ ಶರೀರೇಧೃತವತಃ ಪುಂಸಃದೋಷಲೇಶೋಪಿ ನಾಸ್ತೀತಿಯಾ
ವದಿತಿ । ಅಥಸಾಮವೇದೇಚಾಮ್ನಾತಾಶ್ರುತಿರಿಯಂ । ಜ್ಯೋತಿರೇವಂಸಮ್ಯಕ್ಸದಧಾತ್ ।
ಸಪ್ರಸಿದ್ಧೋಮುಮುಕ್ಷುಃ । ಜ್ಯೋತಿರೇವಸ್ವಪ್ರಕಾಶಂ ಜ್ಯೋತಿರ್ಲಿಂಗಮೇವಸಮ್ಯಕ್
ಶಿವದೀಕ್ಷಾ ವಿಶಿಷ್ಟಸ್ಸನ್‍ದಧಾತಿ ಶರೀರೇಧಾರಯೇದಿತಿ ॥೧॥ ಅಥ ಶಿವಲಿಂಗಧಾರಣ ವಿಧಾತ್ರೀ
ಶ್ರುತಿರಥರ್ವಣ ವೇದೇಪಠ್ಯತೇ ।ಚತುರ್ವೇದಾ ಲಿಂಗಂಧಾರಯಂತಿ । ಅನಂತಾವೈ ವೇದಾಲಿಂ
ಗಂಧಾರಯಂತಿ । ತ್ರಯೋವೇದಂ ಲಿಂಗಂಧಾರಯಂತಿ ತಸ್ಮಾದ್ದೇವಾಃಶಿವಲಿಂಗಂಧಾರಯಂ
ತೀತಿ ॥ ಅಸ್ಯಾರ್ಥಃ ॥ ಋಗಾದಯಶ್ಚತ್ವಾರೋ ವೇದಪುರುಷಾಃ ಅನಂತಾವೇದಪುರುಷಾಃ
ತ್ರಯಶ್ಚವೇದಪುರುಷಾಃ ಭೃಗುಪ್ರಭೃತಯೋ ಋಷಯಃ ಅಜಾಃ ಸರ್ವಕಲ್ಪೀಯಾಬ್ರಹ್ಮಾ
ಣಃ ಹರಯಃಸರ್ವಕಲ್ಪೀಯಾವಿಷ್ಣವಶ್ಚ ಸುರೇಂದ್ರಾಃ ಚತುರ್ದಶಮನ್ವಂತರಾಧಿಪತಯೋ
ದೇವೇಂದ್ರಾಃ ದೈತ್ಯಾಃ ರಾವಣಬಾಣಪ್ರಭೃತಯಶ್ಚ ಶಿವಲಿಂಗಂಸ್ವಸ್ವ ಶರೀರೇಧಾರಯಂತಿ
ಯಸ್ಮಾತ್ತದಿತರೇದೇವಾ ಅಪಿ ಶಿವಲಿಂಗಂಧಾರಯಂತಿ ಯತೋತಃ ಸರ್ವೈರ್ಜ್ಞಾನಿಭಿಃ ಶಿವ
ಲಿಂಗಂಧಾರ್ಯಮಿತಿ ॥ ೧ ॥ ಯಜುರ್ವೇದೇಚಧೃತ ಲಿಂಗಜಂಗಮಪ್ರಶಂ ಸಾಪರಾಶ್ರುತಿರಿಯಂ॥
ದೇವಾನಾಂದೇವ ಅತಿಥಿರಿತಿ ಅಸ್ಯಾಶ್ರುತೇರಯಮರ್ಥಃ ॥ ತಿಥ್ಯಾದಿನಿಯಮಾ ಭಾವೇನ
ಅತಿಥಿನಾಮಕೋ ಜಂಗಮಾಖ್ಯೋದೇವಾನಾಂ ಬ್ರಹ್ಮಾದೀನಾಂದೇವಃಪೂಜ್ಯಃ ಇತಿ॥ ವ್ಯಾ
ಖ್ಯಾತಾಚೇಯಂ ಶ್ರುತಿರುಕ್ತಾರ್ಥತ್ವೇನ ಪಾವನಾಗಮೇ ॥ ಬ್ರಹ್ಮವಿಷ್ಣು ಸುರೇಂದ್ರಾ
ದ್ಯೈರ್ವಂದ್ಯ ಮಾನಪದದ್ವಯಂ । ವೇದಾಗಮಾರ್ಥನಿರತಮುತ್ತಮಂ ಜಂಗಮಸ್ಥಲಮಿತಿ
ಅಥ ಅಮೂರ್ತಬಿಂದೂ ಪನಿಷದ್ಗತೋಯಂ ಮಂತ್ರಃ । ವಿಶ್ವಾತೀತೋ ವಿಶ್ವಮಯೋ ವಿ
ಶ್ವಾತ್ಮಾ ವಿಶ್ವಸಂಭವಃ । ವಿಶ್ವಚಕ್ಷುಶ್ಚ ತತ್ಸರ್ವಂ ವೀರಮಾಹೇಶ್ವರೋಪುಮಾನ್ ॥ ಇತಿ
ಅಸ್ಯಾರ್ಥಃ ॥ ವಿಶ್ವಂಸರ್ವಂ ಅತೀತಃ ಅತಿಕ್ರಮ್ಯಸ್ಥಿತಃ ಸರ್ವೋತ್ತಮಃ ವಿಶ್ವಮಯಃ ಸರ್ವ
ವ್ಯಾಪೀವಿಶ್ವಾತ್ಮಾ ಸರ್ವಸ್ವಾಮೀ । ವಿಶ್ವಸ್ಯಸರ್ವಸ್ಯಸಂಭವಃ ಉತ್ಪತ್ತಿರ್ಯಸ್ಮಾತ್ ಸತಥಾ
ಸರ್ವೋತ್ಪಾದಕಃ । ವಿಶ್ವಂಸರ್ವವಿಷಯಕಂ ಚಕ್ಷುರ್ಜ್ಞಾನಂ ಯಸ್ಯಸ ತಥಾ ಏವಂ ವಿಧೋ
ಜ್ಞಾನೋಮಹೇಶ್ವರಃ। ವೀರಮಾಹೇಶ್ವರಃ ವೀರಶಿವದೀಕ್ಷಾನ್ವಿತಃಪುಮಾನ್ಪುರುಷಃ ತತ್ಶಿವಾಖ್ಯಂ
ಧಾಮಸ್ವಂಸಮಗ್ರಂವಸ್ತು ಭವತೀತಿಶೇಷಃ ॥ ವೀರಶೈವಾಃ ಶಿವೈಕ್ಯಂಲಭಂತೆ ಇತಿಯಾವದಿತಿ ।

ಅಥಸಾಮವೇದಗತಃ ಪರೋಮಂತ್ರಃ । ಯಸ್ಯಾಂತಸ್ಥಾನಿಭೂತಾನಿ ಯಸ್ಮಾತ್ಸರ್ವಂಪ್ರ
ರ್ತತೇ ॥ ಇತಿ ಅಸ್ಯಾರ್ಥಃ ॥ ಯಸ್ಯಶಿವಸ್ಯ ಅಂತಸ್ಥಾನಿಮಧ್ಯೇಸ್ಥಿತಾನಿ । ಭೂತೋಪ
ಕ್ಷಿತಃ । ಪ್ರಪಂಚ ಇತಿಯಾವತ್ಸರ್ವಂಜಗತ್ ಯಸ್ಮಾಚ್ಛಿವಾತ್ಪ್ರವರ್ತತೇ ॥ ತತ್ಪ್ರಸಿದ್ಧ
ವ್ಯಾಪ್ತಂ ವಾಪರಂಸರ್ವೋತ್ಕೃಷ್ಟಂ ತತ್ವಂ ಅನಾರೋಪಿತಸ್ವರೂಪಂಚ ಆಗಮೂ ಅ
ಸಮಹೇಶ್ವರ ಏವ ತತ್ಚರಲಿಂಗಸ್ಸ್ಯಾದಿತಿ ॥ ಋಗ್ವೇದಗತೋಮಂತ್ರೋ ಲಿಂಗಧಾರ
ಹಸ್ತೇವಿಧತ್ತೇ ॥ ಅಯಂಮೇಹಸ್ತೋ ಭಗವಾನ ಯಂಮೇ ಭಗವತ್ತರಃ । ಅಯಂ
ವಿಶ್ವಭೇಷಜೋಯಂ ಶಿವಾಭಿಮರ್ಶನಃ । ಅಯಂಮಾತಾಯಂ ಪಿತಾಯಂ ಜೀವಾತು
ಮತ್ । ಇದಂತವಪ್ರಸರ್ಪಣಂ ಸುಬಂಧವೇಹಿನಿರಿಹಿ ॥ ಅಸ್ಯಾಯಮರ್ಥಃ ॥ ಮೇ
ಮಕಃ ಅಯಂಪ್ರತ್ಯಕ್ಷ ಪ್ರಮಿತಲಿಂಗಾಧಿಷ್ಠಾನಭೂತೋ ಹಸ್ತಃಭಗವಾನ್ ಸಮಗ್ರೈ
ರ್ಯವೀರ್ಯಯಶಶ್ರೀ ಜ್ಞಾನವೈರಾಗ್ಯಾ ಭಿಧಷಡ್ಗುಣವಾನ್ ಮೇಮಾಮಕಃ । ಅಯಂ
ಗಾಧಾರಭೂತಃ ಹಸ್ತಃಪಾಣಿಃ । ಭಗವತ್ತರಃ ಅತಿಶಯೇನಪೂಜ್ಯಃ ಮೇಮಾಮಕೋ
ಲಿಂಗಾಧಿಕರಣಭೂತಃ ಹಸ್ತಃಕರಃ ವಿಶ್ವಭೇಷಜಃ ವಿಶ್ವಸ್ಯಭವರೋಗಸ್ಯ ಭೇಷಜಮಿ
ಷಜಃ । ತತ್ಪರಿಹಾರಕ ಇತಿಯಾವತ್ । ಲಿಂಗವ್ಯಸ್ತಯಃ ಛಾಂದಸಃ ಮೇಮಾಮಕಃ
ಯಂಹಸ್ತಃ ಶಿವಾಭಿಮರ್ಶನಃ । ಶಿವಲಿಂಗರೂಪಂ ಅಭಿತಃ ಸರ್ವತಃ ಮೃಶತೀತಿಶಿವಾಭಿ
ರ್ಶನಃ ॥ ಮಾಮಕೋಯಂ ಧೃತಶಿವಲಿಂಗೋ ಹಸ್ತಃಕರೋಭಜಕಾನಾಂ ಭಕ್ತಾನಾ
ತೇವಮಾತಾಪೋಷಕ ಇತಿಯಾವತ್ । ಮಾಮಕಃ ಅಯಾಲಿಂಗಧಾರೀಹಸ್ತಃಭಕ್ತಾನಾ
ಪಿತೇವಪಿತಾಪಾಲಕ ಇತ್ಯರ್ಥಃ । ಮಾಮಕೋಯಂಹಸ್ತಃ । ಜೀವಾತುಃಜೀವನ
ತ್ । ಜೀವನಪ್ರದತ್ವಂ ಅಗಮತ್ಪ್ರಾಪತ್ । ಜೀವಾತುರಿತಿಭಾವಪ್ರಧಾನೋನಿರ್ದೇ
ವಿಭಕ್ತಿವ್ಯಪ್ತಯಃ । ಛಾಂದಸಃಭೋ ಭಗವನ್ಸುಬಂಧೋ ಶೋಭನಮಿತ್ರಹೇ ಶಿ
ಇದಂಪ್ರಸರ್ಪಣಂ ಲೋಕೋತ್ಪಾದನಸಾಮರ್ಥ್ಯಂ । ಏಹಿ । ಆಪ್ನುಹಿ । ಭೋಸುಬಂ
ಶಿವತ್ವಂಮತ್ ಮತ್ತಃ ನಿರಿಹಿಮಾಗಾಃ ಮಾಮಾತ್ಯಾಕ್ಷೀರಿತಿಯಾವದಿತಿ ॥ ೧ ॥ ( ಅಥ
ವೇದಗತಮಂತ್ರ ವರ್ಣೋಯಂ) ರುದ್ರಸರ್ವೇಷಾಂ ಜಂಗಮಾನಾಂ ವಿತರತಚಕ್ಷುಸ್ತ
ಕುಲೇತೇಜಃ ಸ್ವಾಹಾ ॥ ಯಸ್ಸರ್ವೇಷಾಮಧಿಪತಿಃ ಪರಮಪುರಾಣಃಪರಿತೋ ಲೋ
ನಾಂಜಿತಿರ್ವಿಭು ವಿಭೂನಾಂಭವೋದ್ಭವಾಯಸ್ವಾಹಾ ॥ ಯಸ್ಸೂಕ್ಷ್ಮಸ್ಸರ್ವೇಷಾ
ರಾತ್ಮಾಸ್ತುತಸ್ತೇಷಾ ಯಧಿಪತಿರ್ಜಂಗಮಾನಾಂ ಭವತಿಸ್ವಾಹಾ ॥ ಯೋಬ್ರಹ್ಮಶಬ್ದ
ಣವಧ್ರುವಶಬ್ದ ಶಬ್ದೋಂತರಾತ್ಮಾಸರ್ವೇಷಾ ಮಧಿಪತಿರ್ಜಂಗಮೇಸ್ವಾಹಾ ॥ ಯ
ಭೂವ ಇತಿಯೋರುದ್ರಃ ಪರಶಿವಃ ಸರ್ವೇಷಾಂಜಂಗಮಾನಾಂ । ಜಂಗಮಶಬ್ದಿ ತದೇವ
ಚಕ್ಷುಸ್ತನುಕುಲೇ ಚಕ್ಷುರುಪಲಕ್ಷಿತ ಜ್ಞಾನೇಂದ್ರಿಯಲಕ್ಷಣ ಸೂಕ್ಷ್ಮರೂಪಾಣಾಂ
ಲೇಸಮೂಹೇ ವಿತರತ । ಆಚಾರಾದಿಮಹಾಲಿಂಗಾನಾಂ ತಲ್ಲಿಂಗರೂಪೈರ್ವ್ಯಾಪಕೋ
ರತೇತ್ರವರ್ಣಾನ್ವಪ್ತಯ ವಚನವ್ಯಪ್ತಯಾ ಬಾಹುಳಕಾದ್ವಿಜ್ಞೇಯಾ ತೇಜಃ

ರ್ಪಯತುಲ್ಯಂ ಶರೀರಾದಿಸ್ವಾಹಾ ಸಮರ್ಪಯಾಮಿ ॥ ಯೋರುದ್ರಃಸರ್ವೇಷಾಂ ಅಧಿಪತಿಃಸ್ವಾಮೀ ಪರಮಃ ಸರ್ವೋತ್ಕೃಷ್ಟಃ ಪುರಾಣೇಲಿಂಗವ್ಯಪ್ತ್ಯಯೇನಪುರಾಣಪುರುಷಃ ಪರಿತಃಲೋಕಾನಾಂ ಜಿತಿರ್ಜಯಶೀಲೋ ವಿಭೂನಾಮಾಕಾಶಾದೀನಾಂ ವಿಭುರ್ವ್ಯಾಪಕೋಯಃ ತಸ್ಮೈಭವೋದ್ಭವಾಯ ಭವಸ್ಯಜಗತೋ ಜನ್ಮನಃ ಮಂಗಲಸ್ಯಚ ಉದ್ಭವೋನಿರ್ಮಾಣಂಯಸ್ಮಾತ್ ಸತಥಾತಸ್ಮೈಜಗದುತ್ಪತ್ತಿಸ್ಥಿತ್ಯುಪಲಕ್ಷಿತಸರ್ವಕಾರಣಾಯಶರೀರಾದಿಸರ್ವಂ ಸ್ವಾಹಾ ಸಮರ್ಪಯಾಮಿ ॥ ಯೋರುದ್ರಃ ಸರ್ವೇಷಾಂ ವಿಶ್ವೇಷಾಂಜಂಗಮಾನಾಂಜಂಗಮಮೂರ್ತೀನಾಂಸುಸೂಕ್ಷ್ಮಃ ಅತಿಶಯೇನಸೂಕ್ಷ್ಮಃ ಅಂತರಾತ್ಮಾ ಪ್ರಾಣಲಿಂಗಸ್ವರೂಪೋ ಭವತಿಯೋರುದ್ರಃ ಅಧಿಪತಿರಿತಿ ಶ್ರುತಿಭಿಸ್ತುತಃ । ಯಃಪರಶಿವಃ ತೇಷಾಂ ಪ್ರಸಿದ್ಧಾನಾಂ ಜಂಗಮಾನಾಂಜಂಗಮದೇವಾನಾಂ ಮಧ್ಯೇಜಂಗಮಃ।ಜಂಗಮೋ ಜಂಗಮಲಿಂಗರೂಪೋ ಬಭೂವತಸ್ಮೈದಾನಾದಿ ವಸ್ತುಸ್ವಾಹಾ ॥ ಅರ್ಪಿತಮಸ್ತುಯಃ ಪರಶಿವಃ ಸರ್ವೇಷಾಮಶೇಷಾಣಾಂ ಜಂಗಮಾನಾಂ ಜಂಗಮಮೂರ್ತೀನಾಂ ಅಂತರಾತ್ಮಾ ಪ್ರಾಣಲಿಂಗರೂಪಃ ಅಧಿಪತಿಃ ಸ್ವಾಮೀ ಬ್ರಹ್ಮಶಬ್ದ ಪ್ರಣವ ಧ್ರುವಶಬ್ದಶಬ್ದಃ ಬ್ರಹ್ಮಶಬ್ದೋಪಲಕ್ಷಿತ ಪರಬ್ರಹ್ಮಪದ ಶಿವ ಮಹಾಲಿಂಗಶಬ್ದ ಪ್ರತಿಪಾದ್ಯಃ । ಪ್ರಣವಸಾಕಲ್ಯ ಪ್ರಣವಪೂರ್ವ ಪಂಚಪ್ರಣವಾಖ್ಯ ಧ್ರುವನಿತ್ಯಶಬ್ದಾಃ ಶಬ್ದಾಃವಾಚಕಾಃ ಯಸ್ಯಸತಥಾಬ್ರಹ್ಮ ಪ್ರಣವಾದಿಸರ್ವಶಬ್ದ ವಾಚ್ಯಃ ಬಭೂವ ಆಸೀತ್ । ತಸ್ಮೈಜಂಗಮೋ ಜಂಗಮಲಿಂಗರೂಪೇ ಪರಶಿವೇಮನಃ ಪ್ರಭೃತಿಸರ್ವಂವಸ್ತುಸ್ವಾಹಾ । ಸಮರ್ಪಿತಮಸ್ತು ॥ ಇತಿ ಲಿಂಗಧಾರಣ ಧೃತಲಿಂಗ ಜಂಗಮಮೂರ್ತಿ ಪ್ರಶಂಸಾದಿಪರಾಃ ಶ್ರುತಿಸ್ಮೃತಯಃ ಪರಸಹಸ್ರಂಸಂತಿತಥಾಪಿ ಗ್ರಂಥಗೌರವಭಿ ಯಾತಣೀಂಖನಮಲಂಕೃತಮಿತ್ಯಲಂ ॥ ಮಂಗಳಂ ಶ್ರೀ ॥ ... ... :

( ಕೈಚವ್ರಾಳಿ. )

ವೈಯ್ಯಾಕರಣ ನೀಲಕಂಠಶಾಸ್ತ್ರಿ,

ಸದಾಶಿವರಾಯುಲ ಮಠಾಧಿಕಾರಿ ನಂದಿಕೊಟುಕೂರು.

ಶ್ರೀ ಗಿರಿರಾಜ ಸೂರ್ಯಸಿಂಹಾಸನ ಪಂಡಿತಃ.

## ಆಂಧ್ರದೇಶೀಯರಾದ ಗಂಗಪಟ್ಟಣಂ ಸುಬ್ಬರಾಯದೇವರ ಎಂಬುವ ವೀರಶೈವ ಗೃಹಸ್ಥರು ಮಾಡಿದ ಧಾರ್ಮಿಕ ವಿಷಯದ ತೆನುಗು ಭಾಷಾಂತರೀ ಕರಣದ ಸಾರಾಂಶವು.

ಸಭ್ಯಗೃಹಸ್ಥರೇ? ನಾನು ಹೇಳುವ ವಿಷಯವು ನಿಯಮಿತ ವಿಷಯಗಳನ್ನನುಸ ರಿಸದೆ ಕೇವಲ ಧಾರ್ಮಿಕ ತತ್ವಗಳನ್ನು ಕುರಿತು, ಪ್ರತಿಪಾದನ ಮಾಡುವದಾಗಿದೆ. ನಾನು ಆಂಧ್ರದೇಶೀಯನು, ನಾನಾಡುವ ಮಾತುಗಳು ಶುದ್ಧಾಂಧ್ರಸರಣಿಯನ್ನನು ಕರಣಮಾ ತಕ್ಕವುಗಳು ॥ಸೂ॥ ಸ್ವಸ್ಥಾನವೇಷಭಾಷಾ ಭಿಮತಾಸ್ಸನ್ತೋರಸ ಪ್ರಲುಬ್ಧದಿಯಃ ಲೋ ಕೇಬಹುಮನ್ಯನ್ತೇ ವೈಕೃತಕಾವ್ಯಾನಿಚಾನ್ಯದಪಹಾಯ॥ ಎಂಬ ಪ್ರಮಾಣವನ್ನು ಹಿಡಿದು ಆಂಧ್ರದಲ್ಲಿ ಉಪನ್ಯಾಸಮಾಡಲಿಚ್ಛಿಸುವೆನು; ಬುದ್ಧಿಶಾಲಿಗಳಿದನ್ನು ಸ್ವದೇಶ ಭಾಷೆಗಳಲ್ಲಿ ತರ್ಜುಮಾ ಮಾಡಿಕೊಂಡು ವಿಷಯವನ್ನು ಗ್ರಹಿಸಬೇಕೆಂದು ಕೋರುತ್ತೇನೆ.

ಪೂರ್ವದಲ್ಲಿ ಚತುರ್ಮುಖ ಬ್ರಹ್ಮನು ಚತುರ್ದಶ ಭುವನಗಳನ್ನು ನಿರ್ಮಿಸಿದನೆಂ ತಲೂ, ಬ್ರಾಹ್ಮಣಾದಿ ಚಾತುರ್ವರ್ಣದವರು ಆ ವಿರಿಂಚಿಯ ಮುಖ ಬಾಹೂರುಪಾದಗಳಲ್ಲಿ ಜನಿಸಿದರೆಂತಲೂ, ಬ್ರಾಹ್ಮಣರು ನುಡಿಯುತ್ತಲಿರುವರು. ಇರಲಿ; ಈ ಬ್ರಹ್ಮನೇ ಮೊ ಲಾದ ಸುರಮುನಿ ಗರುಡಗಂಧರ್ವ ಯಕ್ಷರಾಕ್ಷಸಾದಿಗಳು, ಪಶುಪತಿಯಿಂದ ಜನಿಸಿದರೆಂ ವೇದೋಕ್ತಿಯನ್ನು ಯಾವಕಡೆಗೆ ಬೈಚಿಟ್ಟರೋ ತಿಳಿಯದು. ಪ್ರಮಾಣಗಳಾಗಿದ್ದ ಗ್ರಂ ಗಳಿಗೆ ಪೂರ್ಣಾನು ಸ್ವಾರಗಳನ್ನು ಸುತ್ತಿ, ಇವರು ತುಂಬಾ ನಿಪುಣರೆನಿಸಿ ಕೊಳ್ಳುತ್ತಿ ವರು ಬಮ್ಮೆರಪೋತನ್ನನೆಂಬ ಸ್ಮಾರ್ತಬ್ರಾಹ್ಮಣನು ವ್ಯಾಸರಚಿತ ಭಾಗವತವನ್ನಾಂಧ್ರೀ ಕರಿಸುವಲ್ಲಿ ಚತುರ್ಥಸ್ಕಂಧದಲ್ಲಿ ವೀರಭದ್ರವಿಜಯ ಕಥಾವಿಷಯವನ್ನು ಲೋಪಮಾಡಲಾ ವಾಗ್ದೋಷವು ಜನಿಸಿತು. ಅದರಿಂದ ತುಂಬಾ ಶಂಕಾಕುಲಮಾನಸನಾಗಿ ಮತ್ತು ವೀರಭದ್ರ ವಿಜಯವನ್ನು ಬೇರೆ ಗ್ರಂಥವಾಗಿ ಯಥಾರ್ಥ ರೀತಿಯಿಂದ ರಚಿಸಿರುವದು ಎಲ್ಲರಿಗು ತಿಳಿ ವಿಷಯವೇ ಆಗಿದೆ? ಇದರಿಂದ ಶಿವಪ್ರಶಸ್ತ್ಯವು ಅವರ್ಣನೀಯವೆಂಬುದು ಸ್ಪಷ್ಟವಾಗು ವಂತಿದೆ. ಶ್ಲೋ॥ ಕಲಶಸ್ಯಮುಖೇವಿಷ್ಣುಃ ಎಂತಲೂ, ಮಂ ಅಪವಿತ್ರಃಪವಿತ್ರೋವಾ।ಸ ರ್ವಾವಸ್ಥಾಂಗತೋಪಿವಾ । ಯಸ್ಮರೇದ್ವೀತಿಹೋತ್ರಾಕ್ಷಂ ಎಂಬ ಪ್ರಮಾಣವನ್ನು ತಪ್ಪಿಸಿ ಮಂ॥ ಯಸ್ಮರೇತ್ಪುಂಡರೀಕಾಕ್ಷಂ ಎಂತಲೂ, ಪ್ರಮಾಣಗಳನ್ನು ಅಪ್ರಮಾಣಗಳೆಂತಲು ಅಪ್ರಮಾಣಗಳನ್ನು ಪ್ರಮಾಣಗಳೆಂತಲು ನುಡಿಯುತ್ತಾ, ಲಿಂಗಪುರಾಣದಲ್ಲಿ ಲಿಂಗಧಾರಣ ವಿಷಯವನ್ನು ಕಿತ್ತುಹಾಕಿ, ಮಿಕ್ಕ ಕಥೆಯನ್ನು ಮುದ್ರಣಮಾಡಿಸಿರುವರು. ಇವರ ಮತ್ಕಾರವನ್ನು ಯಾವರೀತಿ ಶಾ ಘಿಸಬಹುದೋ ನೀವೇಯೂಹಿಸಿರಿ. ಇನ್ನು ಭಾರದ್ವಾಜ

ಗೋತ್ರ, ಅಯ್ಯಲಾಮಾತ್ಯ ಪುತ್ರನಾದ ಸಿಂಗನಾಮಾತ್ಯನು, ತಾನು ಪದ್ಮ ಪುರಾಣವನ್ನು ಆಂಧ್ರಭಾಷೆಯಲ್ಲಿ ರಚಿಸುವ ಸಂದರ್ಭದಲ್ಲಿ ಶಿವಗೀತೆಗಳನ್ನು ಲೋಪಮಾಡಿ ಮಿಕ್ಕ ಕಥೆಯನ್ನು ಸಂಪೂರ್ತಿ ಮಾಡಿರುವನು. ಇಂತಹ ಲೋಪಗಳು ಅನೇಕ ಗ್ರಂಥಗಳಲ್ಲಿ ಕಂಡು ಬರುತ್ತಿವೆ; ಹೀಗೆ ನಮ್ಮ ಮತದಲ್ಲಿ ಅತ್ಯಂತ ದ್ವೇಷಾಸೂಯೆಯನ್ನು ಹೊಂದಿರುವ ಬ್ರಾಹ್ಮಣ ವರ್ಗದವರಿಂದ ನಮ್ಮ ಮತ ತತ್ವಗಳು ಪುಷ್ಕಳವಾಗಿ ಸಮಸ್ತ ಗ್ರಂಥಗಳಲ್ಲಿ ಕಂಡು ಬಂದಾಗ್ಯು ಅಂತಹ ಮಹನೀಯರಿಗೆ ಶಿಕ್ಷಿ, ಹಾಳಾಗಿಹೋಗಿ ಈಗ ಅವರಿಂದಲೇ ತಿರಸ್ಕಾರ ಭಾವವನ್ನು ಹೊಂದುವಂತಾಗಿದೆ. ಇದಲ್ಲದೆ ಶಂಕರನು ಸಮಸ್ತ ಭುವನಗಳನ್ನು ಸೃಷ್ಟಿಸಿದಂತೆ ವಿಜಯತಂತ್ರದಲ್ಲಿಯು, ಏಕಾಕ್ಷರಾದಿ ಪಂಚಾಚಾರ್ಯರು ಪಂಚಾನನೋದ್ಭವರಾಗಿ, ಯುಗಭೇದಗಳಿಂದ ರೇವಣಾದಿ ನಾಮಾಂತರಗಳನ್ನು ಹೊಂದಿದರೆಂದು ಸುಪ್ರಭೇದಾಗಮದಲ್ಲಿಯು, ಭಕ್ತಮಾಹೇಶ್ವರರೆಲ್ಲರು ಭೂತಪತಿಯಿಂದಲೇ ಜನಿಸಿದರೆಂದು ಸ್ವಯಂಭುವಾಗಮದಲ್ಲಿಯು ವಿಸ್ತಾರವಾಗಿ ವಿಶದೀಕರಿಸುವರು. ಅಪರೆ ಕೆಲಬರು ಆಗಮಗಳು ಅಪ್ರಮಾಣಗಳೆಂದು ತಿಳಿದುಕೊಂಡಿರುವರು, ಇದು ಶುದ್ಧತಪ್ಪು. ಶಿವನಿಂದೆ ಹೇಳಲ್ಪಟ್ಟವುಗಳಾಗಿಯು, ನೀಲಕಂಠ ಭಾಷ್ಯದಲ್ಲಿ ತ್ರಿಂಶದುಪದೇಶದಲ್ಲಿಯು, ಸೂತಸಂಹಿತಾಂತರ್ಗತ ಶಿವಮಾಹಾತ್ಮ್ಯ ಖಂಡದಲ್ಲಿಯು, ಯಜ್ಞವೈಭವಖಂಡದ ವಿಂಶೋಧ್ಯಾಯದಲ್ಲಿಯು, ನೀಲಕಂಠಕಾರಿಕೆ ಎಂಬ ವ್ಯಾಸಸೂತ್ರಾರ್ಥದಲ್ಲಿಯು ಆಗಮಗಳು ಸಪ್ರಮಾಣಗಳೆಂಬುದಾಗಿಯು ಘಂಟಾಘೋಷವಾಗಿ ನುಡಿಯುತ್ತಲಿವೆ, ವಿಕಾರಿ ಸಂ॥ ಮಾಘ ಕೃಷ್ಣ ಚತುರ್ದಶಿ ದಿನ ಮೈಸೂರು ಸಂಸ್ಥಾನಕ್ಕೆ ಸೇರಿದ ಕೋಲಾರು ಸಮೀಪದಲ್ಲಿರುವ ಶತಶೃಂಗ ಪರ್ವತಸ್ಥ ಶ್ರೀಗಂಗಾಧರೇಶ್ವರ ಬ್ರಹ್ಮೋತ್ಸವ ಕಾಲದಲ್ಲಿ ತಿರುಚನಾಪಲ್ಲಿ ವಾಸ್ತವ್ಯ ತಪಕಮುಳ್ಳ ಬ್ರಹ್ಮಶ್ರೀ ವಿದ್ವಾನ್ ಶೇಷಗಿರಿ ಶಾಸ್ತ್ರಿಗಳಿಗು ಭಾರದ್ವಾಜಾನ್ವಯ ಪಯಃಪಾರಾವಾರ ರಾಕಾಸುಧಾಕರರಾದ ಮೈಸೂರು ಸಂಸ್ಥಾನದ ಮುಜರಾಯಿಲಾಖೆ ಆಗಮಿಕರು ದೇವರಹಳ್ಳಿ, ನಂಜುಂಡ ದೀಕ್ಷಿತ ಪುತ್ರರು ಸದ್ಯೋಜಾತ ಶಿವಾಚಾರ್ಯಾಭಿಧನಂದೀಶ್ವರ ದೀಕ್ಷಿತರಿಗುನಡೆದ ಉಪನ್ಯಾಸವನ್ನು ನೋಡಿದರೆ ಆಗಮಗಳು ವೇದತುಲ್ಯಗಳೆಂದು ಎಲ್ಲರಿಗುಸ್ಪಷ್ಟವಾಗುತ್ತಿವೆ. ಹೋಗಲಿ, ಆಗಮ ಧರ್ಮಗಳು ಅಪ್ರಮಾಣಗಳೆಂದರೆ ವಿಗ್ರಹಾರಾಧನ ಮತಧರ್ಮಗಳು ಸಕಲ ದೇವತಾಪ್ರತಿಷ್ಠಾ ಬ್ರಹ್ಮೋತ್ಸವಾದಿ ಕ್ರಿಯೆಗಳು ಯಾವವಿಧವಾಗಿ ನಡೆಯುವವೋ ಯೋಚಿಸಿರಿ. ಅದುಕಾರಣ ಆಗಮವಾಕ್ಯಗಳು ಅಪ್ರಮಾಣಗಳೆಂದು ತಿಳಿಯುವದು ದೊಡ್ಡ ಪೊರಪಾಟು; ಮತ್ತು ಪಾಪಹೇತುವೆಂಬುದಕ್ಕೆ ಸಂಶಯವಿಲ್ಲವು. ಇನ್ನು ಲಿಂಗಧಾರಣ ವಿಷಯದಕಡೆಗೆ ಹೋಗುತ್ತೇನೆ. ಪೂರ್ವದಲ್ಲಿ ಸುರಾಸುರರೆಲ್ಲರು ಧೂರ್ಜಟಿಯನ್ನರ್ಚಿಸಿ ತಮ್ಮ ಪದವಿಗಳನ್ನು ಸ್ಥಿರಮಾಡಿಕೊಂಡರೆಂತಲು, ಋಷಿಗಳನೇಕರು ಶಂಕರನನ್ನರ್ಚಿಸಿ ಬ್ರಹ್ಮತ್ವವನ್ನು ಹೊಂದಿದರೆಂದು ಪರ ಸಹಸ್ರಗ್ರಂಥ ಪ್ರಮಾಣಗಳಿವೆ. ಸೇ॥ ಭೋಗಿದಾಹರಿನೀಲಲಿಂಗಂಬುನರ್ಚಿಂಚಿ । ವಿಷ್ಣುಮುನ್ನೈಡಯುಡೇವಿಷ್ಣುಪದಮು ॥ ಶಶಿಕಾಂತಲಿಂಗಂಬು ಸದ್ಭಕ್ತಿ

ನರ್ಚಿಂಚಿ। ಬ್ರಹ್ಮಮುನ್ವಡಯುಡೇಬ್ರಹ್ಮಪದಮು ॥ ಲೀಲನಂಬುಜರಾಜಲಿಂಗಂಬುನರ್ಚಿಂ
ಇಂದ್ರುಂಡುವಡಯುಡೇ ಇಂದ್ರಪದಮು ॥ ಕಾಸ್ಯಪಲಿಂಗಂಬುಗರಮರ್ಥಿನರ್ಚಿಂಚಿ। ವ
ವುಲುವಡಯುರೇವಸುಪದಂಬು ॥ ಗಾನಹರುಡೆಯಾದಿಕರ್ತಯುನನುಟಕು । ನಚ್ಯುತಾ
ಶುಭೃತ್ಯುಲಗುಟ । ಲೀಲಪ್ರತ್ಯಯಂಬುಲೇಕಾಂಬ್ರಗುರುಚಿತ್ತ । ನಲಿನಭೃಂಗಸೋಮ
ಥಲಿಂಗ ॥ ಸೂರ್ಯತ್ವಮರ್ಥಿಂಚಿ ಸೂರ್ಯುಂಡುಬೂಜಿಂಚಿ । ತಾಮ್ರಲಿಂಗಂಬುನುದ್ಧಾ
ಕ್ತಿ ॥ ಸೋಮತ್ವಮರ್ಥಿಂಚಿಸೋಮುಂಡುಬೂಜಿಂಚಿ। ಮೌಕ್ತಿಕಲಿಂಗಂಬುಮಹಿತ
ವರುಣತ್ವಮರ್ಥಿಂಚಿ ವರುಣುಂಡುಬೂಜಿಂಚಿ । ರತ್ನಲಿಂಗಮುನಭಿರಮ್ಯಭಕ್ತಿ ॥ ಧ
ತ್ವಮರ್ಥಿಂಚಿ ಧನದುಂಡುಬೂಜಿಂಚಿ । ಹೇಮಲಿಂಗಂಬುನೆಹೀನಭಕ್ತಿ ॥ ಯಮುಚು
ಜದಿವಿಯೋಲೊಕೋಯಿಲಲಿಂಗ । ಬಾಹ್ಯಲೈಮಹೋಗ್ರಪಾತಕಮುಲ । ನೇಲಜೆ
ಳಲೇಕಾಂಬ್ರಗುರುಚಿತ್ತ ॥ ನಲಿನಭೃಂಗಸೋಮನಾಥಲಿಂಗ ॥ ಎಂದು ಅನ್ಯವಾದ ಕೋ
ಹಲದಲ್ಲಿಯು, ಶ್ಲೋ॥ ಏವಂವಿಷ್ಣುಮುಖಾದೇವಾಃ ಋಷಯೋಗೌತಮಾದಯಃ । ಸ್ವ
ಯಾಂಗೇಷುಸ್ವಲ್ಲಿಂಗಂ ಧೃತ್ವಾಸಂಪೂಜ್ಯಭಕ್ತಿತಃ ॥ ತ್ವತ್ಕಟಾಕ್ಷವಿಶೇಷೇಣ ಪ್ರಾಪ್ತಸ್ಸ್ವ
ಮುತ್ತಮಂ ॥ ಎಂದು, ಶೈವಧರ್ಮಕೌಮುದ್ಯಂತರ್ಗತವಾದ ಶಿವಧರ್ಮೋತ್ತರದಲ್ಲಿ ಹೇ
ಇಷ್ಟೇ ಅಲ್ಲದೆ ದಶಾವತಾರಗಳಲ್ಲಿ ಪ್ರಶಸ್ತವಾದ ರಾಮಾವತಾರದಲ್ಲಿ, ಮೊದಲು ಅಗಸ್ತ್ಯ
ನಿಂದ ಶಿವದೀಕ್ಷೆಯನ್ನು ಹೊಂದಿ ಶಿವಪೂಜೆಯನ್ನುಮಾಡಿ ತನ್ಮಹಾತ್ವದಿಂದ ದಶಕಂ
ನ್ನು ಜಯಿಸಿದನೆಂದು ಪದ್ಮಪುರಾಣಾಂತರ್ಗತಶಿವಗೀತೆಯಲ್ಲಿಯು ಮತ್ತು ರಾವಣಸಂ
ವಾದ ಹತ್ಯಕ್ಕೆ ಭಯವನ್ನು ಹೊಂದಿ, ಸೋಮೇಶ್ವರನೆಂಬ ಲಿಂಗವನ್ನು ಪ್ರತಿಷ್ಠೆ
ಡಿದನೆಂದು ಸ್ಕಾಂದಪುರಾಣಾಂತರ್ಗತ ಸೇತುಮಾಹಾತ್ಮ್ಯದಲ್ಲಿ ಪ್ರಸಿದ್ಧವಾಗಿದೆ. ಹೀಗಿ
ಕೆಲವರು ಪ್ರಾಕೃತರು ರಾಮನಾಮವನ್ನು ಶಿವನು ಪಾರ್ವತಿಗುಪದೇಶಿಸಿದನೆಂದು ಹೇ
ತ್ತಿರುವರು. ಅದಕ್ಕೆ ಪ್ರಮಾಣವು ಮೂಲಗ್ರಂಥವಾದ ವಾಲ್ಮೀಕಿ ರಾಮಾಯಣದಲ್ಲಿ ಯ
ಮೂಲೆಯಲ್ಲಿಯು ಇಲ್ಲವು. ಆಗ್ರಂಥದ ವಿನಾ ಇತರ ರಾಮಾಯಣಗಳಲ್ಲಿದ್ದರೂ ಅವು
ಮಾಣಗಳಲ್ಲ. ಅಸೂಯಾ ಭಾವದಿಂದ ಬರೆದವುಗಳೆಂದು ತಿಳಿಯಬೇಕು; ಎಂದಿಗಾ
ಧ್ಯಾನಮೂರ್ತಿ ಧ್ಯೇಯನಾಗುವುದುಂಟೇ! ಮತ್ತು;— ಶ್ಲೋ ॥ ಪಾಷಂಡಾಸ್ಸ
ಲಿಂಗಿನಃ ಎಂಬ ಅಮರಸಿಂಹನ ವಾಕ್ಯವುಂಟು. ಶಂಭುರಹಸ್ಯದಲ್ಲಿ ಶ್ಲೋ ॥ ಅಥ
ವಿಶೇಷೇಣ ಪಾಷಂಡಸ್ಯತುಲಕ್ಷಣಂ । ಪಾನ್ಯಂಡಯತಿಯೋವಿಪ್ರಸ್ಸಪಾಷಂಡ ಇತಿಸ್ಮ
ಎಂದು ಪಾಷಂಡಿಗಳು ವೀರಶೈವರಲ್ಲವೆಂದು ಅನೇಕ ಗ್ರಂಥ ಪ್ರಮಾಣಗಳಿರುವವು.
ವರು ಮೇಲಿನ ಪ್ರಮಾಣಗಳನ್ನನುಸರಿಸಿ, ಲಿಂಗಾರ್ಚನಾಸಕ್ತರಾಗದಿದ್ದರೆ ಮುಮು
[illegible] ಲ್ಲ. ಚಾತುರ್ವರ್ಣಾನಾಂ ಧಾರಣಂಕುರ್ಯಾತ್ ಶ್ರೌತಾನಾಂ ತಾಪಸ
[illegible] ಕುರ್ಯಾತ್ । ಚತುರಾಶ್ರಮನ್ಯಾಸಃ ಪಂಚಮೋಲಿಂಗಧಾರಣಂ ॥
ಲಿಂಗೋಪನಿಷತ್ತಿನಲ್ಲಿ ಹೇಳಿದೆ. ಮತ್ತು ಲಿಂಗಧಾರಣ ಚಂದ್ರಿಕೆಯಲ್ಲಿ ॥ಶ್ಲೋ॥

ಮಂತ್ರಂಹೃದಿಧ್ಯಾನಂ ಮಸ್ತಕೇಲಿಂಗಧಾರಣಂ । ಶಿಖಾಸೂತ್ರಂತಥಾಭಸ್ಮ ಹ್ಯೇತದ್ಬ್ರಾಹ್ಮಣಲಕ್ಷಣಂ ॥ ಎಂದು ಉಕ್ತವಾಗಿದೆ. / ಇದೇ ವಿಷಯವು ಗೌತಮಸ್ಮೃತಿಯಲ್ಲಿ ನಿರೂಪಿಸಲ್ಪಟ್ಟದೆ. ಸೋಮನಾಥ ಪ್ರೋಕ್ತವಾದ ಚಾತುರ್ವರ್ಣ್ಣ ದೀಕ್ಷಾವಿಲಕ್ಷಣ ಗ್ರಂಥವನ್ನವಲೋಕಿಸಿದರೆ ಬ್ರಾಹ್ಮಣಾದಿ ವರ್ಣಗಳಿಗೆ ಜಂಗಮದೀಕ್ಷೆಯು ಸಾರ್ಥಕವೆಂದು ಸಾರಿರುವದು ಜಂಗಮಾರ್ಜನ ಶಬ್ದವು ವೀರಶೈವ ಮತಗ್ರಂಥದಲ್ಲೇ ಅಲ್ಲದೆ ಸ್ಮಾರ್ತಸಂಬಂಧವಾದ ಧೂರ್ಜಟಿಕ ವಿಪ್ರಣೀತ ಕಾಳಹಸ್ತಿ ಮಾಹಾತ್ಮ್ಯದಲ್ಲಿ ॥ ಸೀ ॥ ಬಿಜಮಾಡುದೇವರ ನಿಜಕೃಪಾಮಹಿಮ ॥ ಎಂಬ ಪದ್ಯವನ್ನು ಓದಿದರೆ ಜಂಗಮಾರ್ಜನವನ್ನು ಅನೇಕರು ಸಪ್ರಮಾಣವಾಗಿಯು, ಪಾಪವಿಮೋಚನವನ್ನಾಗಿಯು ತೆಗೆದುಕೊಂಡಿದ್ದಾರೆಂಬುದು ತಿಳಿವುದು ಭಕ್ತಮಾಹೇಶ್ವರರು ಪಿಂಡಕಾಲೇವಾ ಜನನಕಾಲೇವಾ ಲಿಂಗಧಾರಣಮುಚ್ಯತೇ ಎಂಬ ಲಿಂಗೋಪನಿಷತ್ಪ್ರಮಾಣದಿಂದ ಲಿಂಗಧಾರಣವನ್ನು ಹೊಂದಿ ಕೃತಾರ್ಥರಾಗುವರು. ಈ ವೀರಶೈವರೇ ೨೧ ಮಹಾದೀಕ್ಷೆಗಳನ್ನು ಹೊಂದಿ ಅಷ್ಟಾವರಣ ಪಂಚಾಚಾರಾದಿಕ್ರಿಯೆಗಳನ್ನು ತಿಳಿದು ಇಷ್ಟಲಿಂಗ ನಿಷ್ಠಾಗರಿಷ್ಠರಾಗಿ ಷಟ್ಸ್ಥಲವಿಚಾರದಿಂದ ನವವಿಧಲಿಂಗಾರ್ಪಣರಹಸ್ಯ ವಿಶೇಷಜ್ಞತ್ವವನ್ನುಹೊಂದಿ ದಶವಿಧಪಾದೋದಕ, ಏಕಾದಶ ಪ್ರಸಾದ ಸಮಯಗಳನ್ನು ತಿಳಿದು ಧನ್ಯರಾಗುತ್ತಿರುವರು. ... ... ... ... *

ಮಹನೀಯರೇ? ಸದ್ಯಃ ಕರ್ನಾಟಕ ದೇಶದ ವೀರಶೈವ ಜನಾಂಗವು, ಮಹಾರಾಷ್ಟ್ರದೇಶದ ವೀರಶೈವ ಜನಾಂಗವು, ಪ್ರತಿಯೊಂದು ವಿಷಯದಲ್ಲಿಯು ಸುಧಾರಣೆ ಹೊಂದುತ್ತಿರುವದು ಪ್ರತ್ಯಕ್ಷವಾಗಿ ಕಾಣ್ಬರುತ್ತಿದೆ. ಆದರೆ ನಮ್ಮ ಆಂಧ್ರದೇಶವು ರಾಜಕೀಯ ಧಾರ್ಮಿಕ, ನೈತಿಕ, ವಿಷಯಗಳಲ್ಲಿ ತೀರ ಹಿಂದುಳಿದು ಕಂಡ ಕಂಡಂತೆ ಆಚರಿಸುವದಕ್ಕೆ ಆರಂಭವಾಗಿದೆ. ತಾವೆಲ್ಲರು ಸ್ವದೇಶಗಳಿಗಾಗಿ ಹೇಗೆ ಭಗೀರಥ ಪ್ರಯತ್ನ ಮಾಡುತ್ತಿರುವಿರೋ ಅದರಂತೆ ಆಂಧ್ರದೇಶದ ವೀರಶೈವರನ್ನು ಪ್ರಾಂತಿಕ ಸಭೆಗಳಿಂದಾಗಲಿ, ಉಪದೇಶಕರನ್ನು ಕಳುಹಿಸುವದರಿಂದಾಗಲಿ, ಸುಧಾರಣೆಯನ್ನು ಹೊಂದುವಂತೆ ಮಾಡುವದವಶ್ಯ ಕರ್ತವ್ಯವಾಗಿದೆ. ಆಂಧ್ರದೇಶದಲ್ಲಿದುವರೆಗೂ ಸಿಂಹಾಸನಾಧಿಪತಿಗಳ ಸುಳಿವೇಯಿಲ್ಲವು ಇನ್ನು ಧರ್ಮಾಧರ್ಮವಿಚಾರ ವೆಲ್ಲಿಂದಬಂದೀತು. ಅವರ ಸ್ಥಿತಿಯನ್ನು ನೀವು ನೋಡಿದರೆ ಪರಮತಸ್ಥರೆಂಬುವಂತೆ ಕಾಣುವದೆ ಹೊರ್ತು, ನಿಜವಾದ ವೀರಶೈವರ ಲಕ್ಷಣಗಳಿಲ್ಲ. ಇದನ್ನು ಹೋಗಲಾಡಿಸುವ ಉಪಾಯವನ್ನು ತಾವೇ ಯೋಚಿಸಿರಿ; ಹೇಳುವದೇನು. ಭಕ್ತನಿಂದ, ಜಂಗಮನಿಂದ, ಗುರುನಿಂದ ಇತ್ಯಾದಿಗಳು ಪ್ರಬಲವಾಗಿ ಅಧರ್ಮವು ಎಲ್ಲೆಲ್ಲಿಯು ಕಾಣಬರುವಂತಾಗಿದೆ. ಇದು ಅತ್ಯಂತ ದುಃಖಕರವಾದ ವಿಷಯವೆಂದು ತಾವೆಲ್ಲರು ಒಪ್ಪಿಕೊಳ್ಳಲೇಬೇಕು. ಈ ಸಭೆಯಾದ ಮಾರನೇ ದಿನದಿಂದಲೇ ಆಂಧ್ರದೇಶದ ವೀರಶೈವರ ವಿಪನ್ನಿವಾರಣಾರ್ಥ ಯಾವದಾದರೊಂದು ಉಪಾಯವನ್ನು ಕಲ್ಪಿಸಿ, ತದ್ವಾರಾ ಸುಧಾರಣೆಯನ್ನು

ಹೊಂದುವಂತೆ ಮಾಡಬೇಕೆಂದು ಪುನಃ ಪುನಃ ಪ್ರಾರ್ಥಿಸಿ, ನನ್ನ ಭಾಷಣವನ್ನು ಮು
ಸುತ್ತೇನೆ. ... ... ... ... ...

( ಕೈಜಪ್ಪಾಳೆ. )

ಗಂಗಪಟ್ಟಣಂ ಸುಬ್ಬರಾಯದೇವರ.

---

ಧಾರ್ಮಿಕ ವಿಷಯವನ್ನು ಕುರಿತು ಪಂಚಲಿಂಗಮಹೇಶ್ವರಸ್ವಾಮಿ
ಕೊಡೋಲಿ, ಇವರ ಮಹಾರಾಷ್ಟ್ರ ಭಾಷಣದ ಭಾಷಾಂ
ತರೀಕರಣವು ಇದರಡಿಯಲ್ಲಿ ಕೊಟ್ಟಂತೆ.

ಸಭ್ಯ ಮಹನೀಯರೇ ? ಆ ದಯಾಳಸಾದ ಪರಮೇಶ್ವರನು ನಮ್ಮನ್ನು ವೀರಶೈ
ಲೀಗಿ ಬ್ರಾಹ್ಮಣ ಧರ್ಮದಲ್ಲಿ ಮಾನವಜನ್ಮದಲ್ಲಿ ಉತ್ಪತ್ತಿಮಾಡಿರುವನು. ಆ ಪ್ರಭು
ಕೃಪೆಯಿಂದಲೇ ನಮಗಿಂತಹ ಸುದಿನಗಳು ಪ್ರಾಪ್ತವಾಗಿರುವವು. ಅಂತಹ ಪ್ರಭುವ
ಗುರುವರ್ಯನನ್ನು ಪ್ರಾರ್ಥಿಸಿ, ದಯಾಳುಗಳಾದ ಇಂಗ್ಲೀಷು ಸರ್ಕಾರದವರಿಂದ ಲಭಿಸಿ
ಭಗಳನ್ನು ಸ್ಮರಿಸಿ, ಆ ಯೆಶ್ವರ್ಯ್ಯ ಸಾರ್ವಭೌಮನ ದಿವ್ಯಚಿತ್ತಕ್ಕೆ ಅಭಿವಂದಿಸಿ, ಧ
ಸಂಬಂಧವಾದ ಎರಡು ಮಾತುಗಳನ್ನು ಹೇಳುತ್ತೇನೆ. ... ...

ಗೃಹಸ್ಥಾಶ್ರಮದಲ್ಲಿ ವೀರಶೈವರು ಶಿಖಾ, ಇಲ್ಲವೆ ಜಡೆಗಳನ್ನು ಬಿಡಿಸತಕ್ಕ
ವೀರಶೈವ ಧರ್ಮದಲ್ಲಿ ಆಚಾರವಿಚಾರ ಸಂಬಂಧವಾದ ಧರ್ಮ ಶಾಸ್ತ್ರ, ಪ್ರಮಾಣ ಪ್ರ
ಬಂದೇ ಹಾದಿಯನ್ನು ಹಿಡಿದು ಕರ್ಮಾಚರಣೆ, ಕ್ರಿಯಾದೀಕ್ಷೆ, ಸಂಸ್ಕಾರ, ಪುಣ್ಯಾ
ಚನ, ಪಂಚಕಲಶಸ್ಥಾಪನ, ಲಿಂಗಸ್ಥಾಪನ, ಕನಕಪಟ್ಟಾಭಿಷೇಕ ದತ್ತವಿಧಾನ, ಗೃಹ
ತಿ, ಗೃಹವಾಸ್ತು, ಸಮಾಧಿಕ್ರಿಯಾ, ಲಿಂಗಧಾರಣ ಮುಂತಾದ ಪೂಜಾವಿಧಾನಗಳು,
ಪ್ರಾಣಾಯಾಮಾದಿ ಕರ್ಮಗಳು, ಯಥಾವಿಧಿ ನಡೆಯುವದಿಲ್ಲ. ಗೃಹಸ್ಥಾಶ್ರಮಿಗಳಿಗೆ
ಧಿಯು ಅವಶ್ಯ ಕರ್ತವ್ಯವಾದದ್ದು; ಈ ಕರ್ಮವು ಪುರುಷಾರ್ಥ ದಾಯಕವಾದದ್ದು.
ರಿಗೆ ಕರ್ಮ ವಿನಾ ಶಿವಸಾಯುಜ್ಯವಿಲ್ಲವು. ಇದಕ್ಕೆ ಪ್ರಮಾಣ ಮಹಾಭಾರತೇ;—ಕೆ
ಆದೌಸ್ವವರ್ಣಾಶ್ರಮವರ್ಣಿತಾಃಕ್ರಿಯಾಃ। ಕೃತ್ವಾಸಮಾದಿತಶುದ್ಧಮಾನಸಃ। ಸಮಾಪ್ಯ
ರ್ವಮುಪಾತ್ತಸಾಧನಃ । ಸಮಾಶ್ರಯೇಸದ್ಗುರುಮಾತ್ಮಲಬ್ಧಯೇ ॥ ಟೀ ॥ ಅವರವರ
ಮಾನುಸಾರವಾಗಿ ಕರ್ಮಗಳನ್ನು ಮಾಡಿ, ಚಿತ್ತಶುದ್ಧಿಯನ್ನು ಹೊಂದಬೇಕು. ಅನ
ಸಮಾದಿ ಸಾಧನಗಳನ್ನು ಸಂಪಾದಿಸಿ, ಆತ್ಮಜ್ಞಾನಾರ್ಥ ಸದ್ಗುರುವುಗಳನ್ನು ಆಶ್ರಯಿ
ಕ್ಕದ್ದು, ಶಿವಸ್ಮರಣದಿಂದ ಕರ್ಮಸಮಾಪ್ತಿಯಾಗುವದು. ಇದಕ್ಕೆ ಪ್ರಮಾಣ ಸ್ಮೃತೆ ಶೆ
ಯಸ್ಯಸ್ಮೃತ್ಯಾಚನಾಮೋಕ್ತ್ಯಾ ತಪೋಯಜ್ಞ ಕ್ರಿಯಾದಿಷು । ನ್ಯೂನಂಸಂಪೂರ್ಣ

ಯಾತಿ ಸದ್ಯೋೀವಂದೇತವಮಚ್ಯುತಂ ॥ ಮಹಾಶಯರೇ! ಈ ವಿಷಯಗಳನ್ನು ನಿರ್ಧರಿಸು ವದಕ್ಕಾಗಿ ಈ ಮಹಾಸಭೆಯಲ್ಲಾಗಲಿ, ಅಥವಾ ಪ್ರತ್ಯೇಕ ಸಭೆಗಳನ್ನು ಕೂಡಿಸಾಗಲಿ, ವಿವೇಚನೆಮಾಡಿ ಇತ್ಯರ್ಥಪಡಿಸಿ ಧರ್ಮಬೋಧಕ ಪಾಠಶಾಲೆಗಳನ್ನೇರ್ಪಡಿಸಿ ನಿಶ್ಚಯವನ್ನು ತೋರಿಸಿ, ಸಮಸ್ತ ದೇಶದವರು ಬಂದೇ ವಿಧವಾದ ಆಚರಣೆಯನ್ನು ಹೊಂದುವಂತೆ ಕ್ರ ಮಪತ್ರಿಕೆಯನ್ನು ಪ್ರಚುರಪಡಿಸಿದರೆ ವಿಶೇಷಲಾಭವಾಗಬಹುದೆಂದು ನನ್ನ ಅಭಿಪ್ರಾಯ; ಇದಕ್ಕೆ ಪರೀಕ್ಷಕ ಕಮಿಟಿಯನ್ನು ಸಹಾ ನಿಯಮಿಸುವದು ಮತ್ತು ಬಳ್ಳೆಯದು. ಇದ ಲ್ಲದೆ ಹಳ್ಳಿಗಾಡಿನ ಜನಗಳಲ್ಲಿ ವಿಶೇಷ ವಿರುದ್ಧಾಚರಣೆಗಳು ಇರುವವಾದಕಾರಣ ಕಮಿಟ ಯಲ್ಲಿ ನಿಯಮಿತವಾದ ವಿಷಯಗಳನ್ನು ಉಪದೇಶಕರದ್ವಾರಾ ಪ್ರಸಿದ್ಧಪಡಿಸಿ ಏಕರೂಪತೆ ಯನ್ನು ಹೊಂದಿಸಬೇಕು. ಈ ಉಪದೇಶಕತ್ವವನ್ನು ಧರ್ಮಗುರುಗಳು ವಹಿಸುವದರಿಂದ ಮತ್ತಷ್ಟು ಪ್ರಯೋಜನವಾಗುವದು. ಧರ್ಮಗುರುಗಳು ಸುಮ್ಮನೆ ಕಾಣಿಕೆ ವಗೈರಾದಿಗಳು ತೆಗದುಕೊಳ್ಳದಂತೆಯು ಅವರಿಗೆ ಭಕ್ತರು ಉಪದೇಶದವಿನಾ ಕಾಣಿಕೆ ಸಲ್ಲಿಸಕೂಡದೆಂತಲು ಕಟ್ಟಪ್ಪಣೆಮಾಡದ ಹೊರ್ತು ಧರ್ಮವು ಸುಧಾರಿಸುವದಿಲ್ಲ. ಇದಲ್ಲದೆ ಸಮಸ್ತ ಹಿಂದುಸ್ಥಾ ನದ ವೀರಶೈವ ಗೃಹಸ್ಥರಿಗೆ ಶಿಖೆಯು ಇಲ್ಲ, ಜಡೆಯು ಇಲ್ಲ. ಕೆಲಬರುಮಾತ್ರ ಶಿಖೆಯ ನ್ನು ಬಿಡಿಸಿರುವರು. ನನಗೆ ಅನೇಕರು ಶಿಖಾವಿಷಯವಾಗಿ ಸೂಚಿಸುತ್ತಿರುವರು. ಅದುಕಾ ರಣ ಗೃಹಸ್ಥಾಶ್ರಮಿಗಳಾದ ವೀರಶೈವರು ಶಿಖೆಯನ್ನು ಬಿಡಿಸುವಂತೆ ನಿರ್ಣಯವನ್ನು ಪ್ರ ಕಟಿಸಬೇಕು. ಆದರೆ ಬ್ರಹ್ಮಚಾರಿಗಳು, ಪಂಚಮಠಾಧಿಕಾರಿಗಳು, ನಿರಂಜನಸ್ವಾಮಿಗಳು ಮುಂಡನವನ್ನು ಮಾಡಿಸಿಕೊಳ್ಳತಕ್ಕದ್ದು, ಇಲ್ಲವೆ ಜಡೆಗಳನ್ನು ಬಿಡಿಸತಕ್ಕದ್ದು. ವೀರ ಶೈವ ಮಾಹೇಶ್ವರರು ಲಗ್ನವಾಗುವ ಪರ್ಯಂತರ ಮುಂಡನಮಾಡಿಸಿಯೋ ಅಥವಾ ಜಡೆಗಳ ನ್ನು ಬಿಡಿಸಿಯೋ ಇರಬೇಕು. ಅನಂತರ ಶಿಖೆಯನ್ನು ಬಿಡಿಸತಕ್ಕದ್ದು. ಇದಕ್ಕೆ ಪ್ರಮಾಣ ಪಾರಮೇಶ್ವರಾಗಮದಲ್ಲಿ;—ಶ್ಲೋ॥ ಯದಿಸ್ಯಾದ್ಯೋಗಿನೀಯುಕ್ತಂಜಟೋಷ್ಣೀಷಾದಿಭೂ ಷಣಂ। ದೀಕ್ಷತೋವೀರಶೈವಾಯಾಂ ದೀಕ್ಷಾಯಾಂಧೃತಲಿಂಗಕಃ ॥೧॥ ಯದೀಚ್ಛಾಕುಸು ಮಂಧಾರ್ಯ ಜಟೋಷ್ಣೀಷಾದಿಭೂಷಣಂ। ದೀಕ್ಷತೋವೀರಶೈವಾಯಾಂ ದೀಕ್ಷಾಯಾಧೃತ ಲಿಂಗಕಃ ॥ ೨ ॥ ಶಿವಸಹಸ್ರನಾಮದಲ್ಲಿ, ಶಿಖಿನೇನಮಃ ಮುಂಡಾಯನಮಃ ಜಟನೇನಮಃ ಮುಂಡನೇನಮಃ ಯೆಂದುಕ್ತವಾಗಿದೆ. ಇದೇ ವಿಷಯದಲ್ಲಿ ಮಹಾಭಾರತ ಶಾಂತಿಪರ್ವದಲ್ಲಿ ಉದಹರಿಸಲ್ಪಟ್ಟಿದೆ. ಸ್ಕಾಂದದ ಶಿವಲೀಲಾಮೃತದಲ್ಲಿ, ಅಥವಾ ಷೋಡಶೇಜಾಣೆ ಬಾಂಧವೆ ರುದ್ರಾಕ್ಷೆಸುಲಕ್ಷಣಾ ಶಿಖೇಮಾಜೇ. ಏಕಬಾಂಧವೆಪೂರ್ಣಾ ಇತ್ಯಾದಿ ಪ್ರಮಾಣಗಳನೇಕ ವಿದ್ದಾಗ್ಯು ನನಗೆಕೊಟ್ಟವ್ಯಾಳ್ಯ ಕಿಂಚಿತ್ತಾದಕಾರಣ ನನ್ನ ಭಾಷಣವನ್ನು ವಿರಮಿಸುತ್ತೇನೆ.

ಪಂಚಲಿಂಗ ಮಾಹೇಶ್ವರಸ್ವಾಮಿ
ಶ್ರೀ ಅಮಣೇಶ್ವರಮಠ ಕೊಡೋಲಿ, ಪ್ಯಾಟ
ವನ್ನಾಳ, ಇಲಾಖಾ ಕರವೀರ.

ಸಭಾಪರವಾಗಿ ವೇ॥ ಮಲ್ಲಂಪಲ್ಲಿ ಮಲ್ಲಿಕಾರ್ಜುನ ಶಾಸ್ತ್ರಿಗಳು ರಚಿಸಿ,
ಪಠಿಸಿದ ಸಂಸ್ಕೃತ ಶ್ಲೋಕ ಮತ್ತು ಆಂಧ್ರಪದಗಳು.

ಶಾ॥ಶ್ಲೋ॥ ಯಸ್ಸಾನ್ನಿಧ್ಯಮುಪಾಸತೇಸುಮನಸಾಯೇನಾಮೃತಂದೀಯತೇ ।
ಯಸ್ಮೈಹ್ಯರ್ಪ್ಯತೇನಮಾಂಸಿನಿಗಮೋಯಸ್ಮಾನ್ನ ಚಾಣುರ್ಮಹಾನ್ ।
ಯಸ್ಯೇಚ್ಛಾಜಗತಃಪ್ರಸೂರ್ವಿಜಯತೇಯಸ್ಮಿನ್ ಜಗಲ್ಲೀಯತೇ ।
ಸೋಮಸ್ಸೋವತುಪಂಚಮೋಸದಸಿ ಸಂಸಕ್ತಾನ್ ಸ್ವಭಕ್ತಾನ್ ಸದಾ ॥

ಆರ್ಯಾ॥ ಜಂಗಮಗುರುಲಿಂಗಕೃಪಾ । ರಂಗದಪಾಂಗದ್ಯಗವಾಪ್ತತುಂಗ ಶ್ರೀಃ ।
ಪಂಚವ್ಯಾಚಂದ್ರಾರ್ಕಂ । ಪರಿಷದಿಯಂಜಯತು ವೀರಶೈವಾನಾಮ್ ॥

ಕ॥ ಓವೀರಶೈವುಲಾರಾ । ರೇವಣಮರುಲಾದಿಗುರುಚರೇಶ್ವರ ಪಾದಾಂ ।
ಭೋವನಜಮಧುಮಿಳಿಂದ । ದ್ಭಾವಸಹಿತುಲಾರಸುಗುಣಭಾಸಿತುಲಾರಾ ॥

ಗೀ॥ ಅವಧರಿಂಪುಡುನಾಯುಪನ್ಯಾಸಮಿಂದು । ಗೊನ್ನಿಸಂಘೀಭವನಶಕ್ತಿಗೂರ್ಚಿಕೊ
ಯರ್ಪಿತಾಸರ್ಪಿತಾನ್ನಗುಣಾಗುಣಮುಲ। ಗೂರ್ಚಿವಿವರಿಂತುಬ್ರಾತಪಲ್ಕುಲನುಜೇ

ಸೀ॥ ವರ್ಷಬಿಂದುವುಲಕುವಾ। ಗುಲೇಳ್ಳುಗ ಬಾರಿಕೊಂಡಪಿಂಡುಲದೆಗ ಗೋಯು
ಸುಥಜನಿಂಚೆಡುದನ್ಕಸುರದೈತ್ಯುಲಕು । ಗಲಶಾಂಬುಧಿಮಥಿಯಿಂಚುನಂತಶಕ್ತಿ ।
ಚಲಿಚೀಮಲಕುನುಗ್ರಸರ್ಪಮುನಟುನಿಟು ಗದಲಂಗನೀಕರಿಕಟ್ಟುಶಕ್ತಿ ।
ತೃಣಮುಲಕುಂಗೊಮ್ಮಟೇನುಂಗು ನೊಂಡೆಡಕೇ । ಗಂಗನೀಕಯಾಗಿಂಚುಶಕ್ತಿ
ಕಲುಗುಟಕುನೈಕಮತ್ಯಮೆಕತಮುದೈವ । ಬಲಮುಸತಮುಸಂಘಮುನಂದು
( ದನುಟಕ
ವೀರಶೈವುಲಸಭನಾಲ್ಗುಸಾರುಲಂತ । ರಾಯುಪಡಕಸಾಗುಟನಿದರ್ಶನಮುಗಾದೆ ॥

ಕ॥ ಏಮುವ್ವುರಿವಲನನುಮು । ನ್ನೀಮತಮುನಕ್ಕೈನಸದುಪಕೃತುಲನುದಲ ಪ
ಗಾಮಿಂತುರೊಯಾಮುವ್ವುರಿ । ನಾಮುಚರಿತ್ರಲುಸಮಾವಿನಂಬಡು ಗಾತನ್ ॥
ಗೀ॥ ಕೀರ್ತಿಶೇಷುಲನಾಮಸಂಕೀರ್ತನಂಬು। ಪಾಪಹರಮುವಾರಿವಲಂತುವಾರಲು
ಸಂಗಿದೇಶಾಯಿಗಾರುನುಸಕ್ಕರಿಕರಿ । ಡಪ್ಪಮೈಸೂರುವೀರಸಂಗಪ್ಪಗಾರ್ಲು ॥
ಸೀ॥ ಏವೀಟಲೋವೀರಶೈವಸಾಮಾಜಿಕುಲ್‌ವಿಡಿಸಿಕೂಡುದುರಾಯುವ್ವೀಟಕಿಂದ್ರ ।
ಭುವನಾದುಲೇನಿ ಬೋಲವಡೇಲಯನನಂದುಶೈವತತ್ತ್ವೋಪದೇಶಮುಲಾಲೆ

ಶಿವಸೂಕ್ತಿಜಾಲಮುಜ್ಜ್ವಡಿವೆಲ್ವಡಲೇದು ಜ್ಞಾನದಾಯಕಕಳಾಶಾಲಲುಂಚ ।
ಬಡಲೇದುವಿದ್ಯಾರ್ಥಿಬಾಲುರಕನ್ನವಸ್ತ್ರಂಬುಲೊ ಸಂಗುಪದ್ಧತುಲುಲೇವು ।
ಶಿಖರವರ್ಯನವೂತ್ರಾನಶ್ರೇಯಮಿಚ್ಚು ನೊಕ್ಕಶ್ರೀಗಿರಿಯವ್ವೀಟುಕುಪಮಿತಮುಗು ।
ನದಿಯೆಭೂಲೋಕಕೈಲಾಸಮುನಗ ಜೆಲ್ಲು ಬಸವಮಂದಿರಮುನೆದಗಿಪರಿಢವಿಲ್ಲು ॥

ಉ॥ ಎಪ್ಪುಡುಗಾನಿನಿಕ್ಕಮಿದಮಿತ್ಥಮಟಂಚುಸಭಾಸ್ಥಲಂಬುನನ್ ।
ಜೆಪ್ಪಗನೊಪ್ಪುಗಾನನಿಟ ಜೆಪ್ಪೆದವಾರದವಂಶ್ಯುಲೈನಮು ।
ಲ್ಲಪ್ಪಬಸಪ್ಪಗಾರ್ಲೊಕ ಮಹಾಸಭಗೂರ್ಚಿರಿಸೊನ್ನಲಾಪುರಿನ್ ।
ಜೆಪ್ಪಗಲಂಡೆ ತತ್ಸಭವಿಶೇಷಮುಶೇಷಮುಶೇಷು ಡೇನಿಯುನ್ ॥

ಮ॥ ಇಪುಡೀಯೈದವವೀರಶೈವಸಭಯೆಂತೇ ಶ್ಲಾಘ್ಯಮೈಯೊಪ್ಪೆಪೂ ।
ರ್ವಪುನಾಲ್ಗುನ್ವಲೆಸಾರ್ಥತಂ ಬಡಯುತನ್ ಬಳ್ಳಾರಿ ಸದ್ಭಕ್ತಸಂ ।
ಘಪುಟುದ್ದೇಶಮುಲೆಲ್ಲ ಜೇಕುರುತಮಿಂಕನ್ ಶೈವ ಧರ್ಮಂಬುಲ ।
ರ್ಥಪುರೀತಿಂಪನೆರಾರುತರ್ಕ ಶಿವಕೃಪಾರ್ದ್ರಾಪಾಂಗಸಾವ್ಯೇಕ್ಷಣನ್ ॥

ಚ॥ ಅಮಲಿನಚಿತ್ತತಂಬುರುಷು ಡಾರಸಿಸಾವರಣಾಷ್ಟಕಾರ್ಯಸಂ ।
ಘಮುನುಗಯಾಪ್ರಯಾಗಲಕು ಗಾಶಿಕಿಗಂಗಕುನೇಗನಬ್ಬುಪು ।
ಣ್ಯಮುಲ ಗಡಿಂಪಜಾಲುನೊಕಯಾವರಣದ್ವಯಿಗಲ್ಗಿಸಿದ್ಧಸ ।
ತ್ತಮುಬ್ರವರುಂಡುಗೊಲ್ಚಿಮರಿ ದತ್ವದಸತ್ತ್ವಮುನುಗ್ಗಡಿಂಪಡೇ ॥

ಶ್ಲೋ॥ ನಮಸ್ತಸ್ಮೈಶಿವಾಯಸ್ಯ ತನೂರನಘಕಾಶಿನೀ ।
ಕರಾಬ್ಜಪೀಠಸಂಪೂಜ್ಯೋ ಮಂತಮಂತ್ರಸ್ವರೂಪಿಣೀ ॥

( ಕೈಚಪ್ಪಾಳೆ. )

ಮಲ್ಲಂಪಲ್ಲಿ ಮಲ್ಲಿಕಾರ್ಜುನಶಾಸ್ತ್ರಿ
ಕೃಷ್ಣಾ ಡಿ॥ ಏಲೂರು.

---

ಅನಂತರ ಸೆಕಿಂದರಾಬಾದು ನಾಗಭೂಷಣಯ್ಯನವರು ಮತಸಿದ್ಧಾಂತವನ್ನು ಆಂಧ್ರಭಾಷೆಯಲ್ಲಿ ವಿವರಿಸಿದರು. ... ... *

---

## ೫ನೆಯದು—ವಿಷಯ ಸ್ತ್ರೀ ಶಿಕ್ಷಣದ ಅವಶ್ಯಕತೆ.

ಈ ವಿಷಯವನ್ನು ಕುರಿತು, ಶ್ರೀಮಂತ ಶಿವಲಿಂಗರಾವ ಜಗದೇವರಾವ ದೇಶಮುಖ ಪರಗಣೆ ಆಲಮೇಲ ಇವರು ಮಾಡಿದ ಭಾಷಣವು.

ಪರಮ ಪೂಜ್ಯರಾದ ಮಹಾಸ್ವಾಮಿಗಳೇ? ಅಧ್ಯಕ್ಷರೇ? ಬಂಧುಗಳೇ? ಮತ್ತು ಭಗಿನಿಯರೇ? ಸ್ತ್ರೀ ಶಿಕ್ಷಣದ ವಿಷಯವಾಗಿ, ಅವರ ಸುಧಾರಿಸುವ ವಿಷಯವಾಗಿ, ಅವ ಕಷ್ಟಗಳು ದೂರಾಗುವ ವಿಷಯವಾಗಿ ಈ ಮೊದಲೇ ಮಹಾಸಭೆಗಳಲ್ಲಿ ಅನೇಕ ಭಾಷ ಗಳು ಆಗಿ, ಠರಾವುಗಳು ಪಾಸಾಗಿರುತ್ತವೆ. ಆದರೂ ಸ್ತ್ರೀಯರನ್ನು ಮಹಾ ಸಭೆಗೆ ಬ ಗೊಡದಂತೆ ಬಳ್ಳಿ ಕಟ್ಟು ಮಾಡಲ್ಪಟ್ಟದೆ; ಈ ತರದ ಕಟ್ಟು, ಸೋಲಾಪುರದಲ್ಲಿ ಕೂ ಮಹಾಸಭೆಗೆ ಮಾತ್ರ ಇದ್ದಿಲ್ಲ. ಅದನ್ನು ಕಂಡು ನಾನು ನಮ್ಮ ಜನರು ಈ ವರ್ಷ ಈ ಷಯದಲ್ಲಿ ಒಂದು ಹೆಜ್ಜೆಯನ್ನು ಮುಂದಕ್ಕಿಟ್ಟರೆಂದು ಬಹು ಆನಂದಪಟ್ಟೆನು. ಆದರೆ ಭ್ರಮೆಯು ಬಹುಕಾಲ ಉಳಿಯಲಿಲ್ಲ. ಹೋದವರ್ಷದ ಬಾಗಲಕೋಟಿಯ ಮಹಾಸಭೆಯ ಅದು ಇಲ್ಲದಂತಾಯಿತು. ಅಂದಮೇಲೆ ಸೋಲಾಪೂರ ಮಹಾಜನರು ಅದರಲ್ಲಿ ವಿಶೇಷ ಈ ಸಭೆಯ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದ ರಾ॥ ಸಾ॥ ಅಪ್ಪಾ ಸಾ॥ ವಾರದ ಇವರ ಯತ್ನದಿಂದಲೇ ಈ ತರದ ಏರ್ಪಾಟು (ಸ್ತ್ರೀಯರಿಗೆ ಸಭೆಯಲ್ಲಿ ಕೂಡ್ರುವ ವ್ಯವಸ್ಥೆ) ಡಲ್ಪಟ್ಟತ್ತೆ ಹೊರ್ತು ಮಹಾಸಭೆಯು ಯಾವತ್ತು ಚಾಲಕರಿಂದಲ್ಲ ಅಲ್ಲವನ್ನಬೇಕೆ! ಮ ಸಭೆಯಲ್ಲಿ ನಮ್ಮ ಒಬ್ಬ ಮಹಾರಾಷ್ಟ್ರ ಭಗಿನಿಯು ಸ್ತ್ರೀವರ್ಗದ ಕೊರತೆಗಳನ್ನು ಭಾ ಣರೂಪದಿಂದ ಮಹಾಸಭೆಯ ಮುಂದೆ ಇಟ್ಟದ್ದಕ್ಕೆ ಯಾವತ್ತು ಸಭಿಕರು ಬಹು ಸಂತೋ ಷಪಟ್ಟರು. ಇದಲ್ಲದೆ ಆ ಸಭೆಯ ಅಧ್ಯಕ್ಷರಾದ ನಾ. ಕೆ. ಪಿ. ಪುಟ್ಟಣಶೆಟ್ಟರು ಮಹಾಸ ಯಲ್ಲಿ ಮಾತಾಡುವ ಮೊದಲನೇ ಮಾನವನ್ನು ಪಡೆದದ್ದಕ್ಕಾಗಿ ಒಂದು ಸುವರ್ಣ ಪ ವನ್ನು ಕೊಡುತ್ತೇವೆಂದು ಬಹುಸಂತೋಷದಿಂದ ವಚನಕೊಟ್ಟರು ಈ ಯಾವತ್ತು ಸಂ ಗಳಿಂದ ನಮ್ಮ ಜನರ ಬಹುಮತವು ಈ ವಿಷಯಕ್ಕೆ ಅನುಕೂಲವಿದ್ದಂತೆ ಕಂಡುಬರುತ್ತ

ಸ್ತ್ರೀಯರನ್ನು ಯಾಕೆ ಸಭೆಗೆ ಬರಗೊಡಬಾರದೆಂದು ಕೇಳಿದರೆ ಅವರು ಸ ಬರುವದರಿಂದ ಸಮಾಜಕ್ಕೆ ಏನೂ ಪ್ರಯೋಜನವಾಗುವದಿಲ್ಲೆಂದು ಕೆಲವರು ಅನ್ನುವ ಸ್ತ್ರೀಯರಿಂದ ಸಮಾಜಕ್ಕೆ ಏನೂ ಪ್ರಯೋಜನ ವಾಗುವದಿಲ್ಲೆಂದು ಅನ್ನುವವರಿಗೆ, ಪುರುಷರಿಂದಾದರೂ ಏನೂ ಪ್ರಯೋಜನವಾಗುವದಿಲ್ಲೆಂದು ಉತ್ತರ ಕೊಡಬೇಕಾಗುತ್ತ ಸ್ತ್ರೀ ಪುರುಷರ ಪರಸ್ಪರ ಸಹಾಯ, ಮತ್ತು ಪರಸ್ಪರಾವಲಂಬನ ಇಲ್ಲದೆ ಯಾವಕಾರ್ಯ ಸಾಗುವದಿಲ್ಲ. ಉದಾಹರಣಾರ್ಥ, ಒಂದು ಕುಟುಂಬವನ್ನು ತೆಗೆದುಕೊಳ್ಳುವಾ ಕುಟುಂ ದಲ್ಲಿ ಗಂಡ, ಮತ್ತು ಹೆಂಡತಿ, ಇಬ್ಬರು ಮುಖ್ಯ ಇರುವರು. ಬೇರೆಬೇರೆಯಾಗಿ ಒಬ್ ಬ್ಬರಿಗೆ ಕುಟುಂಬ ಸಂಜ್ಞೆಯು ಬರುವದಿಲ್ಲ. ಮನೆತನವು ನೆಟ್ಟಗೆ ನಡಿಯಬೇಕಾದರೆ

ಟುಂಬದ ಎಲ್ಲ ಜನರು ಸದ್ಗುಣಿಗಳೂ ಉದ್ಯೋಗಿಗಳೂ ದಕ್ಷರೂ ಇರಬೇಕಾಗುತ್ತದೆ.

ಬೇರೆ ಕೆಲವರು ಅನ್ನುವದೇನಂದರೆ; ಗಂಡಸರ ಕೆಲಸವು ಹೊರಗಿನದು ಮತ್ತು ದುಡ್ಡನ್ನು ಸಂಪಾದಿಸುವದು ಇದ್ದ ಕಾರಣ ಅವರಿಗೆ ವಿದ್ಯೆ ಮತ್ತು ಸಭೆಗಳುಬೇಕು. ಆದರೆ ಹೆಂಗಸರ ಕೆಲಸವು ಒಲಿಯವುರ್ತೆ ಇದ್ದ ಕಾರಣ ಅವುಗಳ ಅವಶ್ಯಕತೆಯು ಅವರಿಗೆ ಇಲ್ಲ; ಇಷ್ಟೆ ಇಲ್ಲ. ಸ್ತ್ರೀಯರ ಮನಸ್ಸು ಚಂಚಲ, ಅವರು ಸ್ವಾತಂತ್ರಕ್ಕೆ ಯೋಗ್ಯರಲ್ಲ. ಅವರ ವಿಚಾರ ಅಥವಾ ಮಾತು ಕೇಳದರೆ, ನಾವು ನಾಶಕ್ಕೆಕಾರಣವಾಗುವೆವು. ನೋಡಿರಿ ಕೂಸು ಹುಟ್ಟಿದಕೂಡಲೆ ಗಂಡು, ಹೆಣ್ಣು, ಎಂಬ ಭೇದಭಾವವು ಪ್ರಾರಂಭವಾಗುತ್ತದೆ. ಕೂಸು ಗಂಡಾದರೆ ಬಲು ಸಡಗರ, ಆದರೆ ಹೆಣ್ಣಾದರೆ ಎಲ್ಲರೂ ಮೂಗು ಎಳೆಯುವವರೇ, ನಮ್ಮ ದೇಶದ ಕೆಲವುಜಾತಿ ಜನರಲ್ಲಿ ಕೂಸು ಹೆಣ್ಣಾದರೆ ಕೊಲ್ಲುವರೂಢಿಯು ಸಹ ಇತ್ತು; ಆದರೆ ಈ ಕೆಟ್ಟರೂಢಿಯನ್ನು ದಯಾಳು ಇಂಗ್ಲೀಷ ಸರಕಾರದವರು ಮುರಿಯದೆಬಿಟ್ಟಿದ್ದರೆ ಅದು ಪ್ರಬಲವಾಗುತ್ತ ನಮ್ಮ ವೀರಶೈವ ಸಮಾಜವನ್ನು ಸಹ ಸೇರುತ್ತಿತ್ತು. ... *

ಸ್ತ್ರೀಪುರುಷರನ್ನು ದೇವರು ಹುಟ್ಟಿಸಿ ಪುರುಷರನ್ನು ಸದ್ಗುಣದ ಖಣಿಯನ್ನು, ಸ್ತ್ರೀಯರನ್ನು ದುರ್ಗುಣದ ತವರಮನೆಯನ್ನು ಮಾಡಿ, ಒಬ್ಬರು ಮತ್ತೊಬ್ಬರಮೇಲೆ ಬೇಕಾದಂತೆ ಧರ್ಮ ನಿಯಮಗಳನ್ನುಮಾಡಿ ಆ ನಿಯಮಗಳಿಂದ ಸ್ತ್ರೀಯನ್ನಷ್ಟೆ ಬಂಧಿಸಿ ಮನಬಲ್ಲಂತೆ ಕುಣಿಯುವ ಅಧಿಕಾರವನ್ನು ಗಂಡಸರಿಗೆ ಕೊಡುವದೆಂದರೆ ಆ ಹುಟ್ಟಿಸಿದವನ್ನಲ್ಲಿ ಭೇದಬುದ್ಧಿಯುಂಟೆಂದೂ ನ್ಯಾಯವಿಲ್ಲೆಂದೂ ಅನ್ನಬೇಕಾಗುತ್ತದೆ. ಈಗ್ಗೆ ಪುರುಷ ವರ್ಗವು ಕೆಲವು ವಿಷಯಗಳಲ್ಲಿ ಅಂದರೆ ಮಾನಸಿಕ, ಮತ್ತು ಶಾರೀರಿಕ, ( ಆದರೆ ನೈತಿಕ ವಲ್ಲ) ಮುಂತಾದ ವಿಷಯಗಳಲ್ಲಿ ಸ್ತ್ರೀವರ್ಗಕ್ಕಿಂತಲು ಶ್ರೇಷ್ಠವಿರಬಹುದು. ಆದರೆ ಈ ಭೇದವು ಅಬಲಾವರ್ಗದ ನೈಸರ್ಗಿಕ ಕಡಿಮೆ ಯೋಗ್ಯತೆಯನ್ನು ತೋರಿಸದೆ, ಪ್ರಬಲವರ್ಗದ ಸ್ವಾರ್ಥ ಪರಮಾವಧಿಯನ್ನೂ „ಹಮಕರೆಸೋಕಾಯಿದಾ„ ಎಂಬ ಗಾದೆಯ ಅರ್ಥವನ್ನು ತೋರಿಸುತ್ತದೆ. ದೇವರು ಸ್ತ್ರೀಪುರುಷ ಭೇದವನ್ನು ಈ ಹೆಚ್ಚುಕಡಿಮೆ ಎಂಬ ಭೇದಬುದ್ಧಿಯಿಂದ ಮಾಡದೆ, ಉತ್ಪತ್ತಿವಿಷಯವಾಗಿ ನಿರ್ಮಿಸಿರುವನು. ನಮ್ಮ ಪೂರ್ವಜರ ಕಾವ್ಯಗಳಲ್ಲಿ ಸ್ತ್ರೀಪುರುಷರಿಗೆ ರಥದ ಗಾಲಿಗಳ ಉಪಮೆಯನ್ನು ಕೊಟ್ಟಿರುತ್ತಾರೆ. ಇದರಿಂದ ಸ್ತ್ರೀ ಪುರುಷರ ಸಮತ್ವದ ವಿಚಾರವು ಅವರಲ್ಲಿತ್ತೆಂದು ತಿಳಿಯುತ್ತದೆ. ಸ್ತ್ರೀಪುರುಷರು ನಮ್ಮ ಎಡಗೈ ಬಲಗೈಯಂತೆ ಇರುವರು. ಬಲಗೈಯು ಬರಿಯುತ್ತದೆ, ಚಿತ್ರತೆಗೆಯುತ್ತದೆ, ವಾದ್ಯಬಾರಿಸುತ್ತದೆ, ಯುದ್ಧದಲ್ಲಿ ವೈರಿಯನ್ನು ಕತ್ತಿಯಿಂದ ಕತ್ತರಿಸುತ್ತದೆ. ಈತರದ ಕೆಲಸಗಳು ನಮ್ಮ ಎಡಗೈಗೆ ಬರುವದಿಲ್ಲ. ಇದರಲ್ಲಿ ಎಡಗೈಯತಪ್ಪೋ? ಅದರಲ್ಲಿ ನೈಸರ್ಗಿಕ ವಾಗಿ ಈ ಗುಣಗಳು ಇಲ್ಲವೋ? ಎಡಗೈಯ ಸಹಾಯವಿಲ್ಲದೆ ಬಲಗೈಯು ಬೇಕಾದಕೆಲಸವನ್ನು ಮಾಡಬಹುದೋ? ಒಂದು ಬರೆಯುತ್ತದೆ, ಮತ್ತೊಂದು ಕಾಗದವನ್ನು ಹಿಡಿಯು

ತ್ತದೆ. ಒಂದು ಕತ್ತಿಯಿಂದ ಕಡಿಯುತ್ತದೆ, ಮತ್ತೊಂದು ಢಾಲಿನಿಂದ ಸಂರಕ್ಷಿಸುತ್ತ
ಇವರಲ್ಲಿ ಹೆಚ್ಚು ಕಡಿಮೆ ಎಂದು ಆರಿಸುವದು ಉಚಿತವೊ; ವೀರಶೈವರಲ್ಲಿ ಸ್ತ್ರೀಯ
ಲಿಂಗಧಾರಣ ದೀಕ್ಷಾವಿಧಿ ಮುಂತಾದ ಸಂಸ್ಕಾರಗಳು ಪುರುಷರಂತೆ ಇದ್ದದರಿಂದ ಅಲ್ಲಿ ಸ
ಸಮತ್ವವು ಕಂಡುಬರುತ್ತದೆ. ಹಿಂದೂ ಧರ್ಮದಲ್ಲಿ ಎಷ್ಟೋದೇವತೆಗಳು ಕೂಡ, ಇ
ವವು. ವಿದ್ಯೆಯ ದೇವತೆಯು ಸರಸ್ವತಿಯು, ಸಂಪತ್ತಿಯದೇವತೆಯು ಲಕ್ಷ್ಮಿಯು, ಯು
ದ ದೇವತೆಯು ದುರ್ಗಾ, ಅಥವಾ ಕಾಳಿಯು, ಕೆಲವು ಅಜ್ಞಾನಜನರು ಮಾರಿಕಾ ಬೇನೆ
ಮರಗವ್ವನನ್ನು, ಮೈಲಿಬೇನೆಗೆ ದುರಗವ್ವನನ್ನು, ಗುಳ್ಳೆಬೇನೆಗೆ ಪ್ಲೇಗವ್ವನನ್ನು, ಪೂ
ಸುತ್ತಾರೆ. ಈ ಯಾವತ್ತು ಸಂಗತಿಗಳಮೇಲಿಂದ ಸ್ತ್ರೀವರ್ಗವು, ಪುರುಷವರ್ಗದ ಸಮ
ವೆಂಬ ತಿಳುವಳಿಕೆಯೂ, ಅದರಿಂದಲೆ ಸ್ತ್ರೀದೇವತೆಯ ವಿಷಯವಾಗಿ ಕಲ್ಪನೆಯೂ, ಪೂ
ಬುದ್ಧಿಯೂ, ಭೀತಿಯೂ ನೆಲೆಗೊಂಡಂತೆ ಕಂಡುಬರುತ್ತದೆ. ಇಂಥ ಬೇನೆಗಳ ಅ
ಯಾವದಾದರೊಂದು ಕಷ್ಟದ ನಿವಾರಣಾರ್ಥ ಮುತ್ತೈದೆಯರನ್ನು ಪೂಜಿಸಿ, ಉಣ್ಣಿ
ವಸ್ತ್ರಾಲಂಕಾರಗಳನ್ನು ಕೊಟ್ಟು, ಕಳಿಸುವ ಪದ್ಧತಿಯು ನಮ್ಮಲ್ಲುಂಟು. ಇದು ಅ
ನಮ್ಮಸಮಾನರೆಂಬ ಮಾತನ್ನೇ ತೋರಿಸುವದಿಲ್ಲವು;— ... ...

ಸ್ತ್ರೀಯರಿಗೆ ವಿದ್ಯೆಯು ಬೇಡವೆಂದು ಅನ್ನುವದಕ್ಕೆ ಯಾವಾಗಲೂ ಎರಡು ಕಾ
ಣಗಳನ್ನು ಮುಂದೆ ತರುವರು. ಯಾವವೆಂದರೆ;—ಸ್ತ್ರೀಯರು ಒಲೆಯಮುಂದೆ ಕೂ
ವವರು, ಅವರಿಗೆ ವಿದ್ಯೆಯು ಯಾತಕ್ಕೆಬೇಕು. ಮತ್ತು ವಿದ್ಯೆಕಲಿಸುವದರಿಂದ ಸ್ತ್ರೀಯ
ನೀತಿಯು ಕೆಡುವದು. ಮೊದಲನೇ ಆಕ್ಷೇಪಣೆಯ ಬಗ್ಗೆ ವಿಚಾರ ಮಾಡೋಣ; ಸ್ತ್ರೀಯ
ಕೆಲಸವು ಒಲೆಯ ಪೂರ್ತೆ ಎಂದು ಅಂಬೋಣಕ್ಕೆ ನಾವಾದರೂ ಒಪ್ಪುತ್ತೇವೆ. ಆದರೆ ಒ
ಯಪೂರ್ತೆ ಎಂದು ಶಬ್ದಗಳ ಅರ್ಥದಲ್ಲಿ ಎಷ್ಟುವಿಚಾರಗಳು ತುಂಬಿವೆನೋಡಿರಿ? ಒಲೆ
ಪೂರ್ತೆ ಅಂದರೆ ಮನೆಯಪೂರ್ತೆ, ಅಂದರೆ ಮನೆಯೊಳಗಿನ ಯಾವತ್ತು ಕೆಲಸಗಳ ಜವಾ
ದಾರಿಯು ಸ್ತ್ರೀಯರದೆಂದು ಒಪ್ಪಿದಂತಾಯಿತು. ಮನೆಯೊಳಗಿನ ಯಾವತ್ತು ಕೆಲಸಗ
ದರೆ;—ಅಡಿಗೆಮಾಡುವದು, ಮನೆಸ್ವಚ್ಛ ಇಡುವದು, ಮಿತವ್ಯಯ, ಹುಡುಗರ ಸಂರಕ್ಷ
ಮಾಡುವದು, ಮೊದಲಾದವುಗಳು. ಇವೆಲ್ಲ ಕೆಲಸಗಳು ಉತ್ತಮರೀತಿಯಿಂದ ಸಾಗಬೇ
ದರೆ ಸ್ತ್ರೀಯರು ಶಿಕ್ಷಣ ಹೊಂದಿದವರು ಇರಲಿಕ್ಕೇಬೇಕು. ಅಡಿಗೆ ಮಾಡುವದೆಂದರೆ ಪ
ಪದಾರ್ಥವನ್ನು ಬಿಸಿಮಾಡಿದರೆ ತೀರಲಿಲ್ಲ; ಆದರೆ ಎಲ್ಲಪದಾರ್ಥಗಳ ಗುಣ, ಧರ್ಮಗಳ
ಮತ್ತು ಅವುಗಳನ್ನು ಕಾಲಕಾಲಕ್ಕೆ ತಕ್ಕಹಾಗೆ ಉಪಯೋಗ ಮಾಡುವ ರೀತಿಗಳೂ, ತಿ
ದಿರಲಿಕ್ಕೇಬೇಕು. ಕುಟುಂಬದೊಳಗಿನ ಜನರು ಆರೋಗ್ಯದಿಂದ ಇರಬೇಕಾದರೆ ಮನೆ
ಮತ್ತು ಮನೆಯೊಳಗಿನಪದಾರ್ಥಗಳ ಸ್ವಚ್ಛತೆಯೂ ಉತ್ತಮಹವೆಯೂ ಬೆಳಕೂ ಅವ
ವಾಗಿರುವವು. ನೆಲದ ತಂಪಿನಕಾರಣದಿಂದ ಹುಡುಗರು ಬೇನೆಬಿದ್ದರೆ ಅಜ್ಞಾನ ತಾಯಿಯು
ಊರದೇವರಿಗೆ ಹರಿಕೆ ಹೊರುತ್ತಾಳೆ. ತಿಳಿದವಳಿದ್ದರೆ ವೈದ್ಯನನ್ನು ಕರಿಸಿ ಔಷಧ ಕೊ

ಸುತ್ತಾಳೆ. ಆದರೆ ಬೇನೆಗೆ ಕಾರಣವಾದ ನೆಲದ ತೇವನ್ನು ತೆಗೆಯುವ ವಿಚಾರವೇ ಬರುವದಿಲ್ಲ; ಆದರೆ ಆರೋಗ್ಯಶಾಸ್ತ್ರವನ್ನು ತಿಳಿದತಾಯಿಗೆ ಬಹಳಮಾಡಿ ಔಷಧೋಪಚಾರದ ಪ್ರಸಂಗವೇ ಬರುವದಿಲ್ಲ. ... ... ... ... *

ಹುಡುಗರ ಶಿಕ್ಷಣದ ಮುಖ್ಯಸೂತ್ರವು ತಾಯಿಯೇ ಆವಳ ಶಿಕ್ಷಣದಂತೆಯೇ ಹುಡುಗರು ಮುಂದೆ ಕೆಟ್ಟವರಾಗಲಿ ಒಳ್ಳೆಯವರಾಗಲಿ ಆಗುತ್ತಾರೆ. ಮನುಷ್ಯರಲ್ಲಿ ಶ್ರೇಷ್ಠತರವಾದ ಮನೋವೃತ್ತಿಗಳು ಸ್ಥಿರವಾಗಿ ನೆಲೆಗೊಳ್ಳಬೇಕಾದರೆ ಆ ಮನೋವೃತ್ತಿಗಳ ಬೀಜಾರೋಪಣವೂ, ಸಂಗೋಪನವೂ ಬಾಲ್ಯಾವಸ್ಥೆಯಿಂದಲೆ ಪ್ರಾರಂಭವಾಗಿರಲಿಕ್ಕೇಬೇಕು ಕೂಸು ಹುಟ್ಟಿದಕೂಡಲೇ ಮೊದಲನೇ ಶ್ವಾಸೋಚ್ಛ್ವಾಸದಿಂದ ಅದುನೋಡಿದ ಮೊದಲನೆ ದೃಷ್ಟಿಯಿಂದ, ಮತ್ತು ಅದುಕೇಳಿದ ಮೊದಲನೇ ಶಬ್ದದಿಂದ ಅದರಶಿಕ್ಷಣವು, ಪ್ರಾರಂಭವಾಗುತ್ತದೆಂಬು ಪ್ರಸಿದ್ಧ ಗ್ರಂಥಕರ್ತರಾದ ಸ್ಮಾಯಿಲ್ಸ ಧೊರೆಗಳು ಅಂದಿದ್ದಾರೆ. ಮೂರುವರ್ಷದಬುದ್ಧಿ ನೂರುವರ್ಷದ ತನಕ ಎಂಬ ಗಾದೆಯು ಅರ್ಥವಾದರೂ ಇದೇ ತಾಯಿಯು ಆಚಾರ ವಿಚಾರಗಳ ಪರಿಣಾಮವು ಚಿಕ್ಕಂದಿನಲ್ಲಿಯೇ ತನ್ನ ಮಕ್ಕಳಮೇಲೆ ಆಗುತ್ತದೆಂದು ಸ್ಪಷ್ಟವಾಗುತ್ತದೆ. ಇಷ್ಟೇ ಅಲ್ಲ, ಕೂಸು ತಾಯಿಯು ಹೊಟ್ಟೆಯೊಳಗೆ ಇದ್ದಾಗ್ಗೆ ಆವಳ ಆಚಾರವಿಚಾರಗಳ ಪರಿಣಾಮವು ಗರ್ಭದೊಳಗಿರುವ ಕೂಸಿನಮೇಲೆ ಸಹ ಆಗುತ್ತದೆಂದು ನಮ್ಮ ಶಾಸ್ತ್ರಜ್ಞರು ಹೇಳಿದ್ದಾರೆ. ಇದರಿಂದ ನೋಡಿರಿ, ಮಕ್ಕಳು ಸದ್ಗುಣಿಗಳೂ ಸುವಿಚಾರಿಗಳೂ ಆಗಬೇಕಾದರೆ ತಾಯಿಯು ಮೊದಲು ತಾನು ಹಾಗೆ ಇರಲಿಕ್ಕೇಬೇಕು. ಹುಡುಗರು ಸಣ್ಣವರಿರುವಾಗ ತಾಯಿಯ ಮಾತಿನಮೇಲೆ ನಂಬಿಗೆ ಇಟ್ಟಷ್ಟು ಎರಡನೆಯವರನ್ನು ನಂಬುವದಿಲ್ಲ. ಮಕ್ಕಳು ಕೀರ್ತಿವಂತರಾಗಬೇಕಾದರೆ ತಾಯಿಯು ಸದ್ಗುಣಿಯೂ ಸುಶಿಕ್ಷಿತಳೂ ಇರಬೇಕಾಗುತ್ತದೆ. ನನಗಿಂತ ಮೊದಲು ಭಾಷಣಮಾಡಿದ ವೇ॥ ವಿರಜಿ ಸಣ್ಣಿತಮ್ಮಪ್ಪಶಾಸ್ತ್ರಿಗಳು, ಹುಡುಗರ ಶಿಕ್ಷಣಕ್ಕಿಂತಲು ಶಿಕ್ಷಕರಿಗೆ ತಕ್ಕ ಶಿಕ್ಷಣವು ಮೊದಲು ಶಿಗುವದು ಹೆಚ್ಚು ಅವಶ್ಯವೆಂದು ವಿದ್ಯಾಖಾತೆಯುವರು ಟ್ರೇನಿಂಗ ಕಾಲೇಜಿಗಳನ್ನು ಸ್ಥಾಪಿಸಿರುವರೆಂದು ಹೇಳಿದರು. ಆದರೆ ಶಿಕ್ಷಕರನ್ನು ತಯಾರಮಾಡುವದಕ್ಕಿಂತ ಅವರನ್ನು ಹಡೆಯುವವರಿಗೆ (ತಾಯಂದಿರಿಗೆ) ಮೊದಲು ಶಿಕ್ಷಣಕೊಡುವದು ಹೆಚ್ಚು ಆವಶ್ಯವೆಂದು ನನಗೆ ಕಂಡುಬರುತ್ತದೆ. ಈ ವಿಷಯಕ್ಕೆ ಜಾರ್ಜ ಹರ್ಬರ್ಟ ಸಾಹೇಬರು ಅನ್ನುವದೇನಂದರೆ;— ,, ಒಬ್ಬ ಒಳ್ಳೆತಾಯಿಯು ನೂರುಜನ ಶಿಕ್ಷಕರ ಸಮಾನಳು ,, ಪೃಥ್ವಿಯಲ್ಲಿ ಹೆಸರಾದನೇಪೋಲಿಯನ್ ಬೋನಾಪಾರ್ಟ ಬಾದಶಹನು ನನ್ನ ಈ ಸ್ಥಿತಿಗೆ ನನ್ನತಾಯಿಯೇ ಕಾರಣ ಎಂದು ಮೇಲಿಂದಮೇಲೆ ಅನ್ನುತ್ತಿದ್ದನು. ಸಭ್ಯಗೃಹಸ್ಥರೇ ನೋಡಿರಿ; ಒಳ್ಳೆತಾಯಿಯು ಉಪಯುಕ್ತತೆಯು ಮಕ್ಕಳಿಗೆ ಎಷ್ಟಿರುವದು! ಒಮ್ಮೆತಾಯಿಯ ತೊಡೆಯಮೇಲೆ ಕೂತು ತೊದಲುಮಾತಾಡುವ ಕೂಸುಗಳೇ ಮುಂದೆ ರಾಷ್ಟ್ರದ ಮುಂದಾಳುಗಳು ಆಗುವರು

ಇನ್ನು ಎರಡನೇ ಆಕ್ಷೇಪಣೆಯು ವಿದ್ಯೆಯಿಂದ ಸ್ತ್ರೀಯರ ನೀತಿಯು ಕೆಡುವ ಅಂತ ಇರುತ್ತದೆ. ವಿದ್ಯೆಯಲ್ಲಿ ಸ್ತ್ರೀಯರ ನೀತಿಯನ್ನು ಕೆಡಿಸುವ ಗುಣವಿದ್ದ ಮೇಲೆ ಪುರುಷರ ನೀತಿಯನ್ನು ಸಹ ಕೆಡಿಸುವದು ಸಹಜವು. ಮತ್ತು ವಿದ್ಯೆಯಿಲ್ಲದ ಯಾವ ಸ್ತ್ರೀಯರು ನೀತಿವಂತರಾಗಿರಬೇಕಾಗಿತ್ತು. ಆದರೆ ನಿಜವಾದಸ್ಥಿತಿಯು ಹಾಗಿಲ್ಲ. ವಿದ್ಯೆ ನೀತಿಗೂ ವಿಶೇಷ ಸಂಬಂಧವಿಲ್ಲ. ವಿದ್ಯೆಯು ಬೆಂಕಿಯಂತೆ ಇದ್ದು, ಉಪಯೋಗಿಸಿದ ಸಕ್ಕೆ ಬರುತ್ತದೆ. ಸಭಿಕರೇ? ಯಾರಾದರೂ ವಿದ್ಯೆಯಿಂದ ಸ್ತ್ರೀಯರ ನೀತಿಯು ಕೆಡು ದೆಂದು ಅನ್ನುವವರಿದ್ದರೆ, ಅವರಿಗೆ ಸ್ತ್ರೀಯರ ನೀತಿಯು ಕೆಡುವದಕ್ಕೆ ಮುಖ್ಯವಾಗಿ ಷರೇ ಕಾರಣವೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಹೋಳಿ ಹುಣ್ಣಿವಿಯಂಥ ದಲ್ಲಿ ಪುರುಷರ ನಡೆನುಡಿಗಳ ಕಡೆಗೆ ಲಕ್ಷಗೊಟ್ಟು ನೋಡಿರಿ, ದೇವಸ್ಥಾನಗಳಂಥ ಸ್ಥಳಗಳಲ್ಲಿ ಪುರಾಣ ಪುಣ್ಯಕಥೆಗಳಂಥ ಪವಿತ್ರ ಕಾರ್ಯಗಳಲ್ಲಿ ಸಹ ವಾರಾಂಗನೆಯರ ನೃತ್ಯಗಳು ನಡೆಯುತ್ತ ಬಂದಿರುವ ಬಹುಪುರಾತನ ಪದ್ಧತಿಗಳನ್ನು ವಿಚಾರಮಾಡಿರಿ; ವಿಷಯಕ್ಕೆ ನಾನು ಹೆಚ್ಚಿಗೆ ಮಾತನಾಡುವ ಅವಶ್ಯಕತೆ ತೋರುವದಿಲ್ಲ ಒಟ್ಟಿಗೆ ಸ್ತ್ರೀ ಸುಶಿಕ್ಷಿತರಾಗಿರುವದು ಬಹಳೇ ಅವಶ್ಯವಿರುವದು. ... ...

ಪೂರ್ವಕಾಲದಲ್ಲಿ ಯುದ್ಧದಲ್ಲಿಯು ಉತ್ತೇಜ ಜನಕ ಕೂಗಾಟವು ‹ಜಯಮ ‹ಜಯಕಾಳಿ, ಅಂತ ಇತ್ತು. ನಾವು ಬೇನೆಬಿದ್ದು ನರಳುವಾಗ್ಯೆ, ಸೀತಾಗ್ಗೆ, ಮತ್ತು ಸ್ಮಾತ್ತಾಗಿ ಅಂಜಿದಾಗ್ಯೆ ಸಹ ಜಯವಾಗಿಯೇ ಅವ್ವಾ ಎಂಬಶಬ್ದವು ಬಾಯಿಂದ ಹೊ ತ್ತದೆ. ರೋಗಿಯು ಸಾಯುವಕಾಲದಲ್ಲಿ ಅವ್ವಾ ಅನ್ನುತ್ತಾನೆ, ಧರ್ಮ ಗುರುಗಳು ಅನ್ನಬೇಡ ಈ ಲೋಕದ ಹಂಬಲವನ್ನು ಬಿಡು, ಶಿವಶಿವಾ ಅನ್ನು ನಿನ್ನ ಮನಸ್ಸು ಲೋಕದ ಕಡಿಗೆ ಚಚ್ಚು ಎಂದು ಉಪದೇಶಿಸುತ್ತಾರೆ. ಆದರೂ ಆ ರೋಗಿಯು ತನ್ನ ಹಡೆದು ಸಂರಕ್ಷಿಸಿದ ತಪ್ಪಿ ಜ್ಜೆಗಳನ್ನು ಇಡ್ಸಿ ನೀತಿಯ ಕಥೆಗಳನ್ನು ನುಡಿಗಳನ್ನು ವಿದ್ಯೆಬುದ್ಧಿಯನ್ನು ಕಲಿಸಿ, ದೊಡ್ಡವನನ್ನಾಗಿ ಮಾಡಿದ ತಾಯಿಯನ್ನು ಮರೆಯದೆ ಧ್ಯಾನವಲ್ಲಿಯೇ ಜೀವಬಿಡುತ್ತಾನೆ. ಸಭಿಕರೇ! ಇಂಥ ತಾಯಿಯನ್ನು ನೀವು ಮ ತ್ತಿರೋ! ಇಂಥ ತಾಯಿಯನ್ನು ನೀವು ಅಜ್ಞಾನಸ್ಥಿತಿಯಲ್ಲಿ ಇಡಲಿಚ್ಛಿಸುವಿರೋ? ತಾಯಿಯನ್ನು ತೀರ ಪರತಂತ್ರಳನ್ನಾಗಿ ಮಾಡುವಿರೋ? ಇಂಥ ತಾಯಿಗೆ ಸೇವಕ ರೂಪವನ್ನು ಕೊಡುವಿರೋ? ನಮ್ಮ ಸಮಾಜೋನ್ನತಿಗೆ ಮುಂದಾಳುಗಳು ಬೇಡವೋ ಮುಂದಾಳುಗಳು ಎಲ್ಲಿಂದ ಬರುವರು? ಮುಂದಾಳುಗಳು ಬೇಕಾದರೆ ಮುಂದಾಳುಗಳ ಹಡೆಯುವ ಯೋಗ್ಯತೆಯ ತಾಯಂದಿರು ಮೊದಲುಬೇಡವೋ? ನಮಗೆ ಸಧ್ಯಕ್ಕೆ ಸರದೇಸಾಯಿಗಳೂ, ಅರಟಾಳ ಸಾ॥ ರ॥ ಗಿಲಗಿಂಚಿ, ಸಾ॥ ರ॥ ಅಪ್ಪಾ ಸಾ॥ ರ॥ ಬೇ ಇಂಥವರು ಹುಟ್ಟಬೇಕಾದರೆ ಒಳ್ಳೆ ತಾಯಂದಿರು ಬೇಡವೋ! ನೋಡಿರಿ, ವಿಚಾರಮ

ಬರೆ ಶಾಸ್ತ್ರಿಗಳನ್ನು ತಯಾರಮಾಡಲಿಕ್ಕೆ ಪಾಠಶಾಲೆಗಳಿಂದ ಯೋಗಿಗಳನ್ನು, ತಯಾರಮಾಡಲಿಕ್ಕೆ ಶಿವಯೋಗಮಂದಿರದಿಂದ ಇಂಗ್ಲೀಷಪಂಡಿತರನ್ನು, ತಯಾರಮಾಡಲಿಕ್ಕೆ ಫಂಡಿನಿಂದ ಈ ಕೊರತೆಯು ಪೂರೈಸುವದೋ; ಯಾವದಾದರೊಂದು ಕೆಲಸವು ಚನ್ನಾಗಿ ನಡೆಯಬೇಕಾದರೆ ಪಾಯಾ ಶುದ್ಧವಿರಲಿಕ್ಕೇಬೇಕು. ಇಲ್ಲಿ ಪಾಯಾ ಅಂದರೆ ತಾಯಿಯು ಎಲ್ಲರನ್ನು ಹಡೆಯುವಂಥವಳು. ಅವಳನ್ನೇ ಬಿಟ್ಟು, ಅಂದರೆ ಪಾಯಾಹಾಕದೆ ಕಟ್ಟಡದ ಶಿಖರ ಕಟ್ಟಹೋದರೆ ಇಮಾರತವು ಎಂದಾದರೂ ಸ್ಥಿರವಾಗಿ ನಿಲ್ಲುವದೋ! ಬಾಗಲಕೋಟೆಯ ಸಭೆಯ ಕಾಲಕ್ಕೆ ಸ್ತ್ರೀಯರನ್ನು ಸಭೆಗೆ ಬರಗೊಡುವ ಬಗ್ಗೆ ಒಂದು ಕಡೆಗೆ ಚರ್ಚೆನಡೆಯಲು, ಸ್ತ್ರೀಯರನ್ನು ಮಹಾ ಸಭೆಯವರೆಗೆ ತರಬಾರದು ಎಂದು ಕೆಲವರು ಅಂದರು. ಅದನ್ನು ಕೇಳಿ ನನಗೆ ಬಹಳವ್ಯಸನವಾಯಿತು. ಈ ವಿಷಯವನ್ನು ಬಳ್ಳಾರಿ ಮಹಾಸಭೆಯ ಮುಂದೆ ತಂದು ಸ್ತ್ರೀಯರಿಗೆ ಸಭೆಯಲ್ಲಿ ಕೂಡ್ರುವ ವ್ಯವಸ್ಥೆಯನ್ನೂ ಶಕ್ಯವಾದರೆ ಮಹಾ ಸಭೆಯ ನಂತರ ಒಂದು ಸ್ವತಂತ್ರ ಸ್ತ್ರೀಸಭೆಯನ್ನೂ ಕೂಡಿಸುವ ಯೋಜನೆಯವಿಷಯವಾಗಿ ಠರಾವು ಪಾಸಮಾಡಿಸಬೇಕೆಂದು ನನ್ನ ಮತ್ತು ವಿಜಾಪೂರದ ನನ್ನ ಮಿತ್ರ ಮಂಡಳಿಯ ವಿಚಾರವಿತ್ತು. ಆದರೆ ಸುದೈವದಿಂದ ನಾವು ಇಚ್ಛಿಸಿದ ಎಲ್ಲ ಏರ್ಪಾಟುಗಳನ್ನು ನಮ್ಮ ಬಳ್ಳಾರಿಯ ಬಂಧುಗಳು ಮಾಡಿಬಿಟ್ಟಿದ್ದಾರೆ. ಈ ವಿಷಯದಲ್ಲಿ ನಮ್ಮ ಬಳ್ಳಾರಿಯ ಬಂಧುಗಳ ವಿಚಾರವೂ ಧೈರ್ಯವೂ ಮನನ ಮಾಡುವಂತಿವೆ. ಸಭಿಕರೇ? ಈ ಮೇಲ್ಪಂಕ್ತಿಯನ್ನು ಇಷ್ಟಕ್ಕೆ ನಿಲ್ಲಿಸದೆ ಮುಂದೆ ಕೂಡುವ ಮಹಾಸಭೆಗಳಿಗೆ ವೀರಶೈವ ಮಹಿಲಾಪರಿಷತ್ತನ್ನು ಜೋಡಿಸುವ ವಿಷಯವಾಗಿ ಒಂದು ಠರಾವವನ್ನು ಆಗ್ರಹದಿಂದ ತಾವೆಲ್ಲರು ಸರ್ವಾನುಮತದಿಂದ ಪಾಸುಪಡಿಸಬೇಕೆಂದು ನನ್ನ ವಿನಂತಿಯುಂಟು; ಯಾಕಂದರೆ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಪುರಾತನ ಮಾನ್ಯವಾದ ನಡೆನುಡಿಗಳನ್ನು ಕಾಪಾಡುವವರು ಸ್ತ್ರೀಯರೇ, ಅವರಿಂದಲೇ ನಮ್ಮ ಪೂರ್ವಜರ ನೆನಪು ನಮ್ಮಲ್ಲಿ ಉಳದಿರುವದು. ಪುರುಷನು ರಾಷ್ಟ್ರದ ಮನವು, ಮತ್ತು ಬುದ್ಧಿಯು, ಆದರೆ ಸ್ತ್ರೀಯು ರಾಷ್ಟ್ರದ ಹೃದಯವು. ಹೃದಯವು ರೋಗಗ್ರಸ್ತವಾದರೆ ಮರಣವು ಸಮೀಪಿಸಿತೆಂದು ತಿಳಿಯತಕ್ಕದ್ದು. ಆದ್ದರಿಂದ ರಾಷ್ಟ್ರದ ಹೃದಯರೂಪವಾದ ಸ್ತ್ರೀಯರಿಗೆ ಪರದೇಶದ ಪದ್ಧತಿಗನುಸರಿಸದೆ ನಮ್ಮ ದೇಶದೊಳಗಿನ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗನುರೂಪವಾಗಿ ಶಿಕ್ಷಣವನ್ನು ಕೊಡತಕ್ಕದ್ದು. ಸಭ್ಯಗೃಹಸ್ಥರೇ? ಈ ಮಹತ್ವವಾದ ವಿಷಯವನ್ನು ತಾವೆಲ್ಲರು ಮೊದಲು ಕೈಕೊಳ್ಳುವಿರೆಂದು ನಂಬಿ ನನ್ನ ಭಾಷಣವನ್ನು ತಾವೆಲ್ಲರು ಶಾಂತಚಿತ್ತದಿಂದ ಕೇಳಿದ್ದಕ್ಕಾಗಿ ತಮ್ಮೆಲ್ಲರ ಆಭಾರವನ್ನು ಮನ್ನಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ. ... *

( ಕೈಚಪ್ಪಾಳೆ. )

ಶಿವಲಿಂಗರಾವ, ಜಗದೇವರಾವ,

ದೇಶಮುಖ ಆಲಮೇಲ.

## ಇದೇ ವಿಷಯವನ್ನು ಕುರಿತು ಹೆಚ್. ಜಿ. ಬಸವಪ್ಪನವರು ಈ ಕೆಳಗೆ ಕಂಡಂತೆ ಅನುಮೋದನವನ್ನಿತ್ತರು.

ಪೂಜ್ಯರೇ ! ಸಭಾಧ್ಯಕ್ಷರೇ ! ಸಭಿಕರೇ ! ಸ್ತ್ರೀ ವಿದ್ಯಾಭ್ಯಾಸವನ್ನು ಕು ಹೇಳಬೇಕಾದುದನ್ನೆಲ್ಲಾ ಆಲಮೇಲ ದೇಶಾಯಿಗಳೇ ಸಾಂಗವಾಗಿಯೂ ಸರಸವಾಗಿ ಹೇಳಿರುತ್ತಾರೆ. ಆದರೂ ಅದೇ ವಿಷಯದಲ್ಲಿ ನಾನೂ ಮಾತನಾಡಬೇಕಾಗಿ ಗೊತ್ತಾಗಿ ಕಾರಣ ಒಂದೆರಡು ಸಂಗತಿಗಳನ್ನು ಸಂಕ್ಷೇಪವಾಗಿ ವಿಜ್ಞಾಪಿಸುತ್ತೇನೆ. ದೇಶಾಯಿಗ ಮಗೆ ಮೃಷ್ಟಾನ್ನವನ್ನು ಇಟ್ಟು, ತೃಪ್ತಿಪಡಿಸಿರುತ್ತಾರೆ. ನಾನು ಅಲ್ಪ ಫಲಾಹಾರ ಅರ್ಪಿಸುತ್ತೇನೆ. ರಸಿಕವಾದ ಅವರ ಮಾತುಗಳಿಗೆ ಚಪ್ಪಾಳೆಗಳನ್ನು ಹೊಡೆಹೊ ಮ್ಮ ಕೈಗಳು ದಣಿದಿರುತ್ತವೆ. ಅದಕ್ಕೆ ಈಗ ನಾನು ವಿಶ್ರಾಂತಿಯನ್ನು ಕೊಡುತ್ತೇನೆ. ಭಾಷಣೆಯಲ್ಲಿ ನೀವು ಚರ್ವಿತ ಚರ್ವಣವನ್ನು (ಅಗಿಯಲ್ಪಟ್ಟುದನ್ನೇ ಅಗಿಯುವುದ ಮಾಡಬೇಕಾದುದಕ್ಕಾಗಿ ನಿಮ್ಮ ಕ್ಷಮೆಯನ್ನು ಪ್ರಾರ್ಥಿಸಿ, ಪ್ರಕೃತವಿಷಯವನ್ನು ರಂಭಿಸುತ್ತೇನೆ. ... ... ... ...

ವಿಷಯಾನಂದಕ್ಕಿಂತಲೂ ವಿದ್ಯಾನಂದವು ಸಹಸ್ರ ಗುಣಾಧಿಕವಾದದ್ದು. ಗಳು, ಎಷ್ಟು ಸವಿದರೂ ಅಜೀರ್ಣಮಾಡದ ಭಕ್ಷ್ಯಭೋಜ್ಯಗಳು, ಪ್ರಯಾಣ ವಿಲ್ಲದೆ ಪ್ರಪಂಚವನ್ನೆಲ್ಲಾ ತೋರಿಸುವ ಹೊಗೆಗಾಡಿಗಳು, ವಿಯೋಗ ದುಃಖಕ್ಕೆ ಡದ ಪ್ರಿಯಬಂಧುಗಳು, ಸಾವಿರಾರು ವರ್ಷಗಳ ಸುದ್ದಿಯನ್ನು ಹೇಳುವ ವಯೋ ಇಲ್ಲದ ವೃದ್ಧರು, ಇದ್ದಲ್ಲಿಯೇ ಇಂದ್ರಭವನವನ್ನು ತೋರಿಸುವ ಮಹೇಂದ್ರಜಾ ಇಂತಹ ಪುಸ್ತಕಗಳನ್ನು ಓದುವ ಸುಖವನ್ನು ತಾನುಮಾತ್ರ ಅನುಭವಿಸುತ್ತಾ ರ್ಧಾಂಗಿಗೆ ಇಲ್ಲದಂತೆ ಮಾಡುವ ಪುರುಷನು ಎಂತಹ ಸ್ವಾರ್ಥತತ್ಪರನು ಸ್ತ್ರೀಯರು ರುವುದು ಪಾಕಶಾಲೆಯ ಪದವಿ ಶಯನಾಗೃಹದ ಸನ್ಮಾನಗಳಿಗೆಮಾತ್ರವೋ ! ಹಾಗಾದ ರನ್ನು ಸೃಷ್ಟಿಸಿದಸ್ವಾಮಿ ಅಡಿಗೆಮನೆಗೆ ತಕ್ಕ ಅಬಲೆಯರನ್ನಾಗಿಯೂ, ಸಜ್ಜೆಮನೆ ಸುಂದರಿಯರನ್ನಾಗಿಯೂ ಮಾಡಿದ್ದರೆ ಸಾಕಾಗಿತ್ತು; ಶಾಸ್ತ್ರಾಭ್ಯಾಸಕ್ಕೆ ತಕ್ಕ ಸೂ ತಿಗಳನ್ನಾಗಿಯೂ, ಮಾಡಿರುವುದೇಕೆ ? ಸ್ತ್ರೀಪುರುಷರ ಸೃಷ್ಟಿಕ್ರಮವನ್ನು ನೋ ಅವರಿಬ್ಬರ ಶರೀರ ರಚನೆಗಳಲ್ಲಿ ತಾರತಮ್ಯವು ತೋರುವದೇ ಹೊರತು ಮೇಧಾ ಲ್ಲೇನೂ ಕಾಣುವುದಿಲ್ಲ. ವಿದ್ಯಾವ್ಯಾಸಂಗಕ್ಕೆ ಪುರುಷಗಿರುವಷ್ಟು ಕಾಲವೂ ಅನುಕೂ ಸ್ತ್ರೀಯರಿಗಿರುವುದಿಲ್ಲ. ಆದರೂ ವಿದ್ಯಾಭ್ಯಾಸಮಾಡಿದ ಸ್ತ್ರೀಯರಲ್ಲಿ ನೂರಕ್ಕೆಷ್ಟು ಗ್ರಂಥರಚನಾಶಕ್ತಿಯನ್ನು ತೋರಿಸಿರುವರು. ಪುರುಷರಲ್ಲೆಷ್ಟು ಎಂಬುವನ್ನು ನೋ ಸ್ತ್ರೀಯರ ಸಂಖ್ಯೆಯೇ ಹೆಚ್ಚಾಗುವುದು ಇಷ್ಟೇ ಅಲ್ಲ. ಉಭಯಪಕ್ಷದವರ ಕವಿತಾ

ಗಳನ್ನು ಪರೀಕ್ಷಿಸಿದರೆ ಯಾವಾಗಲೂ ಸ್ತ್ರೀಯಿಂದ ತಾಂಬೂಲವನ್ನು ಪರಿಗ್ರಹಿಸುತ್ತಿದ್ದ ಪುರುಷನೇ ಸ್ತ್ರೀಗೆ ಅಗ್ರತಾಂಬೂಲವನ್ನು ಕೊಡಬೇಕಾಗುವುದು. ಮೈಸೂರು ಚಿಕ್ಕದೇವ ರಾಜನು ಬಬ್ಬ ಆಸ್ಥಾನಕವಿಯು ಗ್ರಂಥವನ್ನು ಸಂಚಿಹೊನ್ನಮ್ಮನ ಹದಿಬದೆಯ ಧರ್ಮ (ಪತಿವ್ರತಾಧರ್ಮ) ದೊಂದಿಗೆ ಹೋಲಿಸಿ ನೋಡಿ ಹೊನ್ನಮ್ಮನ ಕೈಲಿದ್ದ ಸಂಚಿಯನ್ನು ಆ ಕವಿಗೆಕೊಡಿಸಿ ಅವನಕೈಲಿದ್ದ ಪುಸ್ತಕವನ್ನು ಆಕೆಗೆ ಕೊಡಿಸಿದನೆಂದು ಹೇಳುವುದುಂಟು ಇಂತಹ ಸ್ತ್ರೀಯರ ನಿದರ್ಶನಗಳನೇಕವನ್ನು ನೋಡುವದರಿಂದಲೂ ಕೇಳುವದರಿಂದಲೂ, ಈಶ್ವರನು ಪುರುಷರಿಗೆ ಕೊಟ್ಟಿರುವಷ್ಟೇ ಬುದ್ಧಿಶಕ್ತಿಯನ್ನು ಸ್ತ್ರೀಯರಿಗೂ ಕೊಟ್ಟಿರುವ ನೆಂದು ವ್ಯಕ್ತವಾಗುತ್ತದೆ. ಪುರುಷರು ಹೇಗೆ ಆ ಬುದ್ಧಿ ಶಕ್ತಿಯನ್ನು ವಿದ್ಯಾರ್ಜನೆಯಲ್ಲಿ ಉಪಯೋಗಿಸಿ ಸುಖಿಗಳಾಗುವರೋ ಹಾಗೆಯೇ ಸ್ತ್ರೀಯರೂ ಉಪಯೋಗಿಸಬೇಕೆಂಬುದು ಭಗವತ್ಸಂಕಲ್ಪವಾಗಿರಬೇಕು. ಆದುದರಿಂದ ಸ್ತ್ರೀ ವಿದ್ಯಾಭ್ಯಾಸ ವಿಷಯದಲ್ಲಿ ಯಾವ ಆಕ್ಷೇ ಪಣೆ ಮಾಡಿದರೂ ಅದು ಈಶ್ವರನ ಉದ್ದೇಶವನ್ನೇ ಆಕ್ಷೇಪಿಸಿದಂತಾಗುವುದು. *

ಕನ್ಯಾ ಪಾಣಿಗ್ರಹಣ ಕಾಲದಲ್ಲಿ ವರನು ,, ಈ ಕನ್ನೆಯನ್ನು ಧರ್ಮದಲ್ಲಿಯೂ ಅರ್ಥದಲ್ಲಿಯೂ, ಕಾಮದಲ್ಲಿಯೂ, ಮೋಕ್ಷದಲ್ಲಿಯೂ, ಅತಿಕ್ರಮಿಸುವದಿಲ್ಲವೆಂದು ,, ವಾಗ್ದಾನ ಮಾಡಬೇಕಾಗಿ ವಿವಾಹ ವಿಧಿಯಲ್ಲಿ ಹೇಳಿದೆ. ವಿದ್ಯಾವಿಹೀನೆಯಾದ ಅರ್ಧಾಂಗಿ ಇಹ ಪರ ಸಾಧನೆಗಳೆರಡರಲ್ಲಿಯೂ ತನ್ನ ಪತಿಯ ಸಹ ಚಾರಿಣಿಯಾಗಿರುವುದು ಹೇಗೆ! ಅಡಿಗೆಯನ್ನು ಮಾಡುವುದಕ್ಕೂ, ಮಕ್ಕಳನ್ನು ಹೆರುವುದಕ್ಕೂ, ಮಾತ್ರವೇ ಉಪಯೋಗವಾಗುವ ಸ್ತ್ರೀಯುಳ್ಳ ಪುರುಷನು ವಿವಾಹಕಾಲದ ವಾಗ್ದಾನವನ್ನು ಎಷ್ಟುಮಟ್ಟಿಗೆ ನೆರವೇರಿಸಿಕೊಳ್ಳುವನು? ಹೆಚ್ಚು ಮಾತೇನು;—ಯಾವವಿಧವಾಗಿ ವಿಚಾರಮಾಡಿದರೂ ಸ್ತ್ರೀಯರಿಗೆ ವಿದ್ಯೆಯನ್ನು ಕಲಿಸುವದು ನಮ್ಮ ಮುಖ್ಯಕರ್ತವ್ಯವೆಂದು ಸಿದ್ಧಾಂತವಾಗುವುದು. ಪರಮೇಶ್ವರನು ಯಾವಪದಾರ್ಥವನ್ನು ಯಾವ ಉಪಯೋಗಕ್ಕಾಗಿ ಸೃಷ್ಟಿಸಿರುವನೋ ಅದನ್ನು ಅದಕ್ಕೆ ಉಪಯೋಗಿಸುವುದು ನಮ್ಮ ಧರ್ಮ; ತನ್ನ ಹೆಂಡತಿ ಅಡಿಗೆಮಾಡಿಕೊಂಡಿದ್ದರೂ ಸಾಕೆಂದು ಯಾವಾತನು ಹೇಳುವನೋ ಆತನು ತನ್ನ ಕುದುರೆ ಮೂಟೆಗಳನ್ನು ಹೊರುತ್ತಿದ್ದರೂ ಸಾಕೆನ್ನುವನು. ... ... ... ... *

ತಾಯಿ ವಿದ್ಯಾವತಿಯಾದರೆ ಮಕ್ಕಳಿಗೆ ಸಕಾಲದಲ್ಲಿ ಅಕ್ಷರಾಭ್ಯಾಸ ಮಾಡಿಸುವಳು ಅಮ್ಮಾ ಸಕ್ಕರೆಕೊಡು ಎಂದು ಕೇಳಿದರೆ ಮಗು, ನೀನು ಕೇಳುವದನ್ನು ಬರೆದುತೋರಿಸಿದರೆ ಕೊಡುತ್ತೇನೆಂದು ಹೇಳಬಹುದು. ಹೀಗೆ ಮಕ್ಕಳಿಗೆ ಅಕ್ಕರಗಳನ್ನು ಅಕ್ಕರೆಯಿಂದಲೆ ಕಲಿಸುವಳು. ಶಾಸ್ತ್ರಾಭ್ಯಾಸ ಮಾಡುವ ವಯಸ್ಸಿನಲ್ಲಿ ಯಾರು ಅಕ್ಷರಾಭ್ಯಾಸವನ್ನು ಪ್ರಾರಂಭಿಸುವರೋ ಅವರು ಮುಂದೆ ಬಂದುಕೈಲಿ ಪುಸ್ತಕವನ್ನು ಇನ್ನೊಂದುಕೈಲಿ ತಮ್ಮ ಮಗುವನ್ನು ಹಿಡಿದುಕೊಳ್ಳಬೇಕಾಗುವುದು. ಸುಶಿಕ್ಷಿತಳಾದ ಸ್ತ್ರೀರತ್ನದಿಂದಾಗುವ ಅನಂತ

ಪ್ರಯೋಜನಗಳನ್ನು ನನಗೆ ಮೊದಲು ಮಾತನಾಡಿದ ದೇಶಾಯಿಗಳು ಚೆನ್ನಾಗಿ ವಿವರ
ವದರಿಂದ ಇಲ್ಲಿಗೆ ನನ್ನ ಭಾಷಣವನ್ನು ಸಮಾಪ್ತಿಗೊಳಿಸುತ್ತೇನೆ. ...

( ಕೈಚಪ್ಪಾಳೆ. )

ಹೆಚ್. ಜಿ. ಬಸಪ್ಪ, ಶಿವಮೊಗ್ಗೆ.

---

ಇದೇ ವಿಷಯದ ಪುಷ್ಟೀಕರಣಾರ್ಥವಾಗಿ ನಾಶಿಕದ ಶಿವಾ
ರವರು ಮಹರಾಷ್ಟ್ರ ಭಾಷೆಯಿಂದ ಗಂಭೀರವಾಗಿ ಭಾಷಣ ಮಾಡಿದರು.

---

೬ನೇ—ವಿಷಯ ಸಮಾಜ ಸುಧಾರಣೆಗೆ ಕೈಕೊಳ್ಳಬೇಕಾದ
ಕ್ರೋಢಾಯಗಳು. ... ... ... ...

ಈ ವಿಷಯದಮೇಲೆ ಶರಭಪ್ಪ ಮೆಣಸಿನಕಾಯಿ ಬಾಗಲಕೋಟೆ
ಇವರು ಮಾಡಿದ ಭಾಷಣವು.

ಮಾನಸ ಶಾಸ್ತ್ರಜ್ಞರು ಯಾವದೊಂದು ವಿಚಾರಕ್ಕೆ ಹತ್ತಬೇಕಾದರು ಮೊ
ವಿಚಾರ ವಿಷಯದ ಉದ್ದೇಶ ಆ ಉದ್ದೇಶಕ್ಕೆ ಅನುಸರಿಸಿದ ಹೇತುಗಳು ಆ ಹೇತುಗ
ಅನುಸರಿಸಿ ಹೊರಡುವ ಕಾರ್ಯಗಳು, ಆ ಕಾರ್ಯಗಳನ್ನು ಅನುಸರಿಸಿದ ಕಟ್ಟಳೆ
ಈ ಕ್ರಮದಿಂದ ಹೋಗಬೇಕೆಂದು ಉಪದೇಶಿಸಿದ್ದಾರೆ. ಈ ತತ್ವವು ಇಲ್ಲಿ ಬಹಳ
ಯೋಗ ಉಳ್ಳದ್ದದೆ. ಆದ್ದರಿಂದ ಈ ತತ್ವಕ್ಕೆ ಅನುಸರಿಸಿ ಈಗಿನ ವಿಚಾರವನ್ನು ಸ
ವಾಗಿತೋರಿಸುವ ಬಂದುವಿಚಾರದ ಬಳ್ಳಿಯನ್ನು ಮುಂದಿನಭಾಷಣದಲ್ಲಿ ತೋರಿಸು
ಆದರೆ ಈಗ ಆಖೈರ ವಿಚಾರವಾದ ಕಾರ್ಯ ಕಟ್ಟಳೆಗಳನ್ನು ಕುರಿತು ಕೆಳಗೆ ಹೇಳುತ್ತೇ

ಈಗಿನ ಸುಧಾರಣೆಯ ವಿಷಯಗಳೆಂದರೆ ಧರ್ಮ, ಉದ್ಯೋಗ, ಈ ಎರಡ
ನ್ನು ಸುಧಾರಿಸುವದಿರುತ್ತದೆ. ಈ ಎರಡು ಉದ್ದೇಶಗಳನ್ನು ಅನುಸರಿಸಿದ ಕೆಳಗೆ
ಸಿಥ ಹತ್ತು, ಮತ್ತೂ ಕೆಲವುಪ್ರಕಾರದ ಪ್ರತಿಬಂಧಕ ನಿವಾರಣದ ಉಪಾಯಗಳ
ಗಳು ಹೊರಡುತ್ತವೆ. ಆ ಹೇತುಗಳನ್ನು ಅನುಸರಿಸಿದ ಕೆಳಗೆ ವಿವರಿಸಿದ, ೮ ಪ್ರ
ಮುಖ್ಯಕಾರ್ಯಗಳು ಹೊರಡುತ್ತವೆ. ಆ ಕಾರ್ಯಗಳನ್ನು ಅನುಸರಿಸಿದ

ವಿವರಿಸಿದ ಕಟ್ಟಳೆಗಳು ಹೊರಡುತ್ತವೆ, ಈ ಕ್ರಮದಿಂದ ಮುಂದಿನ ಸೂಚನೆಗಳನ್ನು ನೋಡಬೇಕು. ... ... ... ... *

## ಈಗಿನ ವೀರಶೈವರ ಸುಧಾರಣೆಗೆ ಆಗಿರುವ ಅಡ್ಡಿಗಳು.

೧. ಸಿಂಹಾಸನಾಧಿಪತಿಗಳೂ, ನಿರಂಜನ ಮೂರ್ತಿಗಳೂ, ಬೇರೆ ಮಠಾಧಿಕಾರಿಗಳೂ, ಈಗಿನ ಸುಧಾರಣೆಯ ಕೆಲಸಕ್ಕೆ ಆಸಕ್ತಿಯಿಂದಲೂ, ಐಕ್ಯತ್ವದಿಂದಲೂ, ಧರ್ಮಾಭಿಮಾನ ಬುದ್ಧಿಯಿಂದಲೂ ಮನಗೊಡದಿರೋಣ. ... ... *

೨. ಗ್ರಾಮದ ಪಂಚಾಚಾರ್ಯರ, ಮತ್ತು ಭಕ್ತರ ಪ್ರಮುಖರು, ಈಗಿನ ಸಮಾಜ ಸುಧಾರಣೆಯ ಕಡೆಗೆ ದುರ್ಲಕ್ಷಿಸೋಣ. ... ... *

೩. ಈಗಿನ ವೀರಶೈವ ವಿದ್ವಾಂಸರೆಂಬುವವರು ಸಮಾಜ ಹಿತದೃಷ್ಟಿಯಿಂದ ಸಾಕಷ್ಟು ಮತ್ತು ಸಮಾಜಹಿತದ ಕೆಲಸಗಳನ್ನು ಇನ್ನೂ ಕೈಕೊಳ್ಳದಿರೋಣ. *

೪. ಧಾರ್ಮಿಕ ಔದ್ಯೋಗಿಕ ವಿಷಯಗಳನ್ನು ಮಿಶ್ರಮಾಡಿ ಕಲಿಸುವ ಶಾಲೆಗಳ ಪ್ರಸಾರ ಇಲ್ಲದಿರೋಣ. ... ... ... ... *

೫. ಈಗಿನ ಧರ್ಮಗ್ರಂಥಗಳೂ, ಬೇರೆಬೇರೆ ಪ್ರಾಂತಗಳ ರೂಢಿಯ ಆಚಾರಗಳೂ ಭಿನ್ನಭಿನ್ನ ಇರೋಣ, ಮತ್ತು ಶಿವಮತದವರ ಏಕಬಳಿಕಿ ಭೋಜನದ ಅಭಾವ.

೬. ಪಂಚಾಚಾರ್ಯರ ಮತ್ತು ಭಕ್ತರ ಮಕ್ಕಳನ್ನು ಧಾರ್ಮಿಕಶಾಲೆಗೆ ಕಳುಹಿಸದಿರೋಣ. ... ... ... ... *

೭. ಅಲ್ಪವಯದ ಜಂಗಮರ ಹುಡುಗರನ್ನು ಸಹಿತ ಭಿಕ್ಷಬೇಡಲಿಕ್ಕೆ ಹಚ್ಚೋಣ

೮. ಸಶಕ್ತರೂ, ಆರೋಗ್ಯರೂ, ಆದ ಜಂಗಮರು ಸಹಿತ ಲೌಕಿಕದ ಯಾವದೊಂದು ನಿತ್ಯ ಉದ್ಯೋಗದಲ್ಲಿ ತಮ್ಮ ಉದರ ನಿರ್ವಾಹವನ್ನು ಹುಡುಕದೆ ಭಿಕ್ಷುಕತನದಲ್ಲಿಯೇ ಹುಡುಕೋಣ. ... ... ... *

೯. ಈಗಿನ ಈ ಧರ್ಮಸಾಧುಗಳು, ಶರಣರು, ವೇದಾಂತಿಗಳು ಅನ್ನಿಸಿಕೊಳ್ಳುವವರು, ಪಾತ್ರಾಪಾತ್ರ ತಿಳಿಯದೆ ಕಂಡಕಂಡವರಿಗೆ ಭಿಕ್ಷದ ಅನ್ನ ರೊಕ್ಕ ಕೊಡಿಸುತ್ತಲೂ ಲೌಕಿಕ ವಿರುದ್ಧವಾದ ಉಪದೇಶವನ್ನು ಮಾಡುತ್ತಲೂ ಸಂಚರಿಸೋಣ. *

೧೦. ಭಿಕ್ಷೆ ಕೊಡುವವರು ಪಾತ್ರಾಪಾತ್ರ ತಿಳಿಯದೆ ಕೊಡೋಣ. *

ಈಗಿರುವ ಮುಖ್ಯವಾದ ಈ ಹತ್ತು ಪ್ರಕಾರದ ಅಡ್ಡಿಗಳ ವಿವರವನ್ನು ಬೇರೆ ಒಂದು ಪುಸ್ತಕರೂಪವಾಗಿ ಬರೆದಿರುತ್ತೇನೆ ಬೇಕಾದವರು ಅದನ್ನು ನೋಡಿಕೊಳ್ಳಬಹುದು

ಈ ಹತ್ತು ಪ್ರಕಾರದ ಅಡ್ಡಿಗಳು ಮುಖ್ಯವಾದ ೮ ಪ್ರಕಾರದ ಕಾರ್ಯಗಳಿಂದ ಹೋಗುತ್ತವೆ ಯಾವವೆಂದರೆ;— ... ... ... *

೧. ಮಹಾ ಸಭೆಗಳಲ್ಲಿ ಆದ ಠರಾವುಗಳನ್ನು ತೀವ್ರ ಅಮಲಿನಲ್ಲಿ ತರುವ ಉಪಾಯುಗಳನ್ನು ಹುಡುಕಿ, ತೀವ್ರ ಅಮಲಿನಲ್ಲಿ ತರೋಣ. ... ...

೨. ಎಲ್ಲ ಸಿಂಹಾಸನಾಧಿಪತಿಗಳೂ, ವಿರಕ್ತಸ್ವಾಮಿಗಳೂ, ಬೇರೆ ಆಚಾರವಂತರೂ ಐಕ್ಯರಾಗಿ, ಈಗಿನ ಸುಧಾರಣೆಯ ಕೆಲಸಗಳನ್ನು ತ್ರಿಕರಣ ಪೂರ್ವಕವಾಗಿ ಕೈಕೊಳ್ಳೋಣ. ... ... ... ...

೩. ಧಾರ್ಮಿಕ ಮತ್ತು ಔದ್ಯೋಗ ಶಾಸ್ತ್ರಜ್ಞಾನವರ್ಧಕ ಈ ಎರಡೂ ಪ್ರಕಾರದ ವಿಷಯ ಮಿಶ್ರಿತವಾದ ದೇಶಭಾಷೆಯ ಶಾಲೆಗಳನ್ನು ಎಲ್ಲಪ್ರಾಂತಗಳಲ್ಲಿ ಏಕತ್ವರೀತಿಯಿಂದ ಸ್ಥಾಪಿಸುವ ಮತ್ತು ಬೋಧಕರನ್ನು ನೇಮಿಸುವ ಮುಂತಾದ ವ್ಯವಸ್ಥೆ ಮಾಡೋಣ; ಇದರೆ ಅವರವರ ಸಂಬಂಧದ ನಿಯಮಗಳನ್ನು ಬರಿಸಿ, ಅಮಲಿನಲ್ಲಿ ತರೋಣ.

೪. ಈ ಮೇಲಿನ ಕೆಲಸಗಳಲ್ಲಿ ಮತ್ತು ಸಮಾಜ ಸುಧಾರಣೆಯ ಸಂಬಂಧದ ಬೇರೆ ಕೆಲಸಗಳಲ್ಲಿ ತ್ರಿಕರಣಪೂರ್ವಕವಾಗಿ ಕೆಲಸಮಾಡುವವರಿಗೆ ಬಹುಮಾನ ಕೊಡೋಣ.

ಈ ನಾಲ್ಕು ಪ್ರಕಾರದ ಮುಖ್ಯ ಕೆಲಸಗಳು ಹೊರಡುತ್ತಿದ್ದು ಅವುಗಳಸಂಬಂಧದ ಕಟ್ಟಳೆಗಳು ಕ್ರಮವಾಗಿ ಕೆಳಗೆ ಬರೆದ ಪ್ರಕಾರ;— ... ...

೧. ಮಹಾ ಸಭೆಗಳಲ್ಲಿ ಆದ ಠರಾವುಗಳನ್ನು ತೀವ್ರ ಅಮಲಿನಲ್ಲಿ ತರುವ ಉಪಾಯುಗಳನ್ನು ಹುಡುಕಿ ತೀವ್ರ ಅಮಲಿನಲ್ಲಿ ತರೋಣ. ... ...

ಇದರ ಸಂಬಂಧವಾದ ಸೂಚನೆಯು;—ಈ ವೀರಶೈವ ಮಹಾ ಸಭೆಗಳಲ್ಲಿ ಪಾಸಾಗುವ ಠರಾವುಗಳು ಧಾರ್ಮಿಕ, ಇಲ್ಲವೆ ಔದ್ಯೋಗಿಕ, ಈ ಎರಡೇ ವರ್ಗಕ್ಕೆ ಸೇರಿದವುಗಳಾಗುತ್ತವಲ್ಲದೆ ಬೇರೆ ವರ್ಗಕ್ಕೆ ಸೇರಿದವುಗಳು ಹೊರಡಲಿಕ್ಕೆ ಸಂಭವ ಇಲ್ಲ. ಈ ಎರಡು ಪ್ರಕಾರದ ಠರಾವುಗಳನ್ನು ಆಚಾರದಲ್ಲಿ ತರುವ ವ್ಯವಸ್ಥಾ ಆಗಬೇಕಾದರೆ ಸರಕಾರದವರು ಪೋಲೀಸ, ಮುಲ್ಕಿ ಮುಂತಾದ ಖಾತೆಗಳ ವಿಭಾಗದಿಂದ ತಮ್ಮ ಆಳಿಕೆಯ ಉದ್ಯೋಗಗಳನ್ನು ವರ್ಗೀಕರಣ ಮಾಡಿಸುವಂತೆ ಆ ಠರಾವುಗಳಲ್ಲಿ ಧಾರ್ಮಿಕ, ಔದ್ಯೋಗಿಕ ಎಂಬ ಎರಡು ಶಾಖೆಗಳು ಇದ್ದು, ಆಯಾಶಾಖೆಯ ಠರಾವುಗಳು, ಆಯಾಶಾಖೆಯ ಅಧಿಕಾರಿಗಳ ಕಡಿಗೆ ಆಚಾರದಲ್ಲಿ ತರಲಿಕ್ಕೆ ಕಳುಹಿಸಲ್ಪಡಬೇಕು. ಅಂದರೆ ಮೊದಲು ಆಯಾಶಾಖೆಯ ಕೆಲಸಗಳನ್ನು ಅಮಲಿನಲ್ಲಿ ತರುವ ಪಗಾರೀ ನೌಕರರೂ, ಅಥವ ತ್ರಿಕರಣಗಳನ್ನು ಸುಧಾರಣೆಗೆ ಅರ್ಪಿಸಿದ ಸುಧಾರಿಸಿದ ಸ್ವಾಮಿಗಳೂ, ಅವರಿಗೆ ಸಹಾಯಮಾಡುವ ಕಮಿಟಿಗಳೂ ಸ್ಥಾಪಿಸಲ್ಪಟ್ಟು, ರಾಜಪ್ರಜಾತ್ಮಕ ಆಳಿಕೆಯಪದ್ಧತಿಯಂತೆ ಕೆಲಸಗಳು ಆರಂಭವಾಗಬೇಕು. ಈ ಬಳಗಾಗಿ ಧಾರವಾಡ ಮುಂತಾದ ಮಹಾಸಭೆಗಳಲ್ಲಿ ಆದ ಠರಾವುಗಳು ಇದುವರೆಗೆ ಆಚಾರದಲ್ಲಿ ಬರದಿರಲಿಕ್ಕೆ ಇಂಥಪ್ರಕಾರದವ್ಯವಸ್ಥೆ ಆಗಿಲ್ಲದ್ದೇ ಕಾರಣವಾಗಿರುತ್ತದೆ.

ಧಾರ್ಮಿಕ ಸಂಬಂಧವಾದ ಠರಾವುಗಳನ್ನು ಸಿಂಹಾಸನಾಧಿಕಾರಿಗಳೂ, ಬೇರೆ ಮಠಾಧಿಕಾರಿಗಳೂ ಕೂಡಿ ಅಮಲಿನಲ್ಲಿ ತರುವದಕ್ಕಾಗಿ ಅವರು ಗ್ರಾಮ, ತಾಲೂಕ, ಜಿಲ್ಲಾ, ಪ್ರಾಂತಗಳ ಅಧಿಕಾರಿಗಳಾಗಿ ಪ್ರತ್ಯಕ್ಷ ಹೆಸರುನಿಸಿ ನೇಮಿಸಲ್ಪಡಬೇಕು. ಆಗತ್ಯ ಕಂಡರೆ ತಾಲೂಕ, ಜಿಲ್ಲಾ ಪ್ರಾಂತಗಳ ಅಧಿಕಾರಿ ಗಣಂಗಳಿಗೆ ಬಬ್ಬೊಬ್ಬ ಯೋಗ್ಯ ವಿದ್ವಾನ್ ಸಹಾಯಕರನ್ನು ಕೊಡಬೇಕು. ಈ ಪ್ರಕಾರದ ನೌಕರರ ಕಮಿಟಗಳ ವ್ಯವಸ್ಥೆಯನ್ನು ಮಾಡುವ ಕೆಲಸವನ್ನು ಖುದ್ದು ಸಿಂಹಾಸನಾಧಿಪತಿಗಳು, ಅಥವ ಪ್ರತಿನಿಧಿಗಳು, ಅಥವ ಬೇರೆ ಅಧಿಕಾರ ಇದ್ದವರು ಕೈಕೊಳ್ಳಬೇಕು. ... ... ... *

ಔದ್ಯೋಗ ಶಾಸ್ತ್ರಜ್ಞಾನವರ್ಧಕ ಠರಾವುಗಳನ್ನು ಅಮಲಿನಲ್ಲಿ ತರುವದಕ್ಕೆ ತಾಲೂಕ, ಜಿಲ್ಲಾ, ಪ್ರಾಂತಗಳಿಗೆ ಬಬ್ಬೊಬ್ಬ ಸಣ್ಣದೊಡ್ಡ ಅಧಿಕಾರಿಗಳು ಅವರವರ ಯೋಗ್ಯತೆಗೆ ಸರಿಯಾದ ಕಾರಕೂನರು ಬಂದೊದು ಕಮಿಟಿಯೂ ನಿಯಮಿಸಲ್ಪಡಬೇಕು. ಆ ಮೇಲೆ ಆ ಠರಾವುಗಳನ್ನು ಅವರಕಡಿಗೆ ಅಮಲಿನಲ್ಲಿ ತರಲಿಕ್ಕೆ ಕಳುಹಿಸಬೇಕು. *

ಈ ಪ್ರಕಾರ ಈ ಎರಡು ಶಾಖೆಯ ಠರಾವುಗಳನ್ನು ಬೇರೆಬೇರೆಯಾಗಿ ವ್ಯವಸ್ಥಾ ಮಾಡಲಿಕ್ಕೆ ಯಾವದಾದರೂ ಅನಾನುಕೂಲಿಯ ಕಾರಣದಿಂದ ಅಡ್ಡಿ ಇದ್ದರೆ, ಈ ಎರಡೂ ಪ್ರಕಾರದ ಮಿಶ್ರಜ್ಞಾನವುಳ್ಳಂಥ ಬೋಧಕರಸಂಖ್ಯೆಯನ್ನೇ ಹೆಚ್ಚುಮಾಡಿ ಅಂದರೆ ಎರಡು ಮೂರು ತಾಲೂಕಕ್ಕೆ ಬಬ್ಬರಂತೆ ನೇಮಿಸಿ ಬೋಧಕದ ಶಾಲಾಸ್ಥಾಪನೆಯ ಮತ್ತು ತಪಾಸಣೆಯ ಕೆಲಸಗಳನ್ನು ಅವರಿಗೇ ನಿಯಮಿಸಬೇಕು. ಹಾಗು ಅವರಿಗೆ ಬಬ್ಬ ನಿಯಮಿತ ಅಧಿಕಾರಿಯೂ ಬಂದು ಕಮಿಟಿಯೂ ಸಹಾಯಕ್ಕೆ ಇರಬೇಕು. ಈಗಿನ ಮುಖ್ಯ ಕಾರ್ಯಗಳೆಂದರೆ ಧಾರ್ಮಿಕ ವಿಷಯ ಸಹಿತವಾದ ಶಾಲೆಗಳನ್ನು ಸ್ಥಾಪಿಸೋಣ, ಅವುಗಳ ವ್ಯವಸ್ಥೆಯನ್ನು ನೋಡೋಣ, ಬೋಧ ಪರಕಮಿಟಗಳನ್ನು ಕೂಡಿಸಿ ಉಪದೇಶಿಸೋಣ, ವಿಚಾರ ಪರಕಮಿಟಗಳನ್ನು ಕೂಡಿಸಿ ವಿಚಾರಮಾಡಿಸೋಣ, ದ್ರವ್ಯಸಂಗ್ರಹಮಾಡಿಸೋಣ ಇವೇ ಮುಂತಾದ ಕೆಲಸಗಳು ಈಗಿನಕಾಲಕ್ಕೆ ನಿಯಮಿತ ಪ್ರವಾಸಮಾಡಿ ಮಾಡತಕ್ಕವುಗಳಾಗಿರುತ್ತವೆ. ಉಳಿದವುಗಳೆ ಬೈಠಕಿಯಿಂದ ಮಾಡತಕ್ಕವುಗಳಿರುತ್ತವೆ. ಪ್ರವಾಸಮಾಡಿ ಮಾಡತಕ್ಕ ಕೆಲಸಗಳದಸಿಯಿಂದ ಶಾಸ್ತ್ರಜ್ಞರ ಮತ್ತು ವ್ಯವಹಾರಜ್ಞಾನಗಳಲ್ಲಿ ಪ್ರೌಢರಾದ ವಿರಕ್ತಸ್ವಾಮಿಗಳು ಸಾಕಷ್ಟುಮೂರ್ತಿಗಳು ಸಿಕ್ಕರೆ ಬೇರೆ ವಿಶೇಷ ನೌಕರರ ಕಾರಣವಿದ್ದಿಲ್ಲ ಅಂಥಸ್ಥಿತಿಯು ತುರ್ತಿಗೆ ಇಲ್ಲದ್ದರಿಂದ ಜವಾಬದಾರಿ ಹೊತ್ತು ಕೆಲಸಮಾಡತಕ್ಕ. ಪಗಾರೀ ನೌಕರರ ಸಂಖ್ಯೆಯೇ ಈಗ ಹೆಚ್ಚುಬೇಕಾಗಿರುತ್ತದೆ. ... ... *

ಸಾರಾಂಶವೇನಂದರೆ;—ಸಭಾ ಠರಾವುಗಳು ತೀವ್ರ ಅಮಲಿನಲ್ಲಿ ತರಲ್ಪಡಬೇಕಾದರೆ ಪಗಾರೀ ನೌಕರರ ನೇಮಣೂಕೂ, ಕಮಿಟಗಳ ನೇಮ್ಣೂಕೂ ಮೇಲೆ ಸಭ್ಯ ಮ

ತ್ತು ತ್ರಿಕರಣಗಳನ್ನೂ ಈಗಿನ ಸುಧಾರಣೆಗೆ ಒಪ್ಪಿಸಿದ ಸ್ವಾಮಿಗಳ ನೇಮಣೂಕು ರುನಿಸಿ ಆಗಲಿಕ್ಕೇಬೇಕು. ಮತ್ತು ಆ ನೌಕರರ ಸಂಬಂಧವ ಕಾರ್ಯ್ದಿಯು ಬರಿಯ ರಾಜಪ್ರಜಾತ್ಮಕ ರಾಜ್ಯಪದ್ಧತಿಯಂತೆ ವ್ಯವಸ್ಥೆ ಆಗಲಿಕ್ಕೇಬೇಕು. ಈ ಉಪಾಯಗಳ ತರ್ಹ ಎರಡನೇ ಉಪಾಯಗಳು ಸದ್ಯಕ್ಕೆ ಸೂಚಿಸುವದಿಲ್ಲ. ... ...

೭. ಎಲ್ಲ ಸಿಂಹಾಸನಾಧಿಪತಿಗಳೂ, ವಿರಕ್ತಸ್ವಾಮಿಗಳೂ, ಬೇರೆ ಆಚಾರ ಳೂ ಐಕ್ಯರಾಗಿ ಈಗಿನ ಸುಧಾರಣೆಯ ಕೆಲಸಗಳನ್ನು ತ್ರಿಕರಣ ಪೂರ್ವಕವಾಗಿ ಕೈ ಳ್ಳೋಣ. ... ... ... ... ...

ಈ ಮೂರುವರ್ಗದ ಮಹನೀಯರಿಗೆ ಸ್ವಲ್ಪದರಲ್ಲಿ ಸವಿನಯ ಸೂಚಿಸುವ ದರೆ;—ತಮ್ಮ ವರ್ಗಗಳೊಳಗಿನ ವೈಷಮ್ಯವನ್ನು ನಿದಾನ ಈಗಿನ ಸಮಾಜ ಸುಧಾರ ರ್ಯದ ದೆಸೆಯಿಂದಾದರೂಬಿಟ್ಟು ಏಕಿ ಭಾವದಿಂದ ಸುಧಾರಣೆಯ ಕೆಲಸಗಳನ್ನು ಕೈ ಳ್ಳಬೇಕು. ಹಾಗೆ ಕೈಕೊಳ್ಳದಿದ್ದರೆ ಈಗ ತಮ್ಮಗೌರವವು ಬೆಳೆಯುವ ಎಲ್ಲ ಲಕ್ಷ ತೋರುತ್ತಿರುವದರ ಮೇಲಿಂದ „ಧರ್ಮವು ಕೊಟ್ಟದ್ದನ್ನು ಕರ್ಮವು ಕಚ್ಚಿಕೊ ಹೋಯಿತು ,, ಎಂಬುವ ಗಾದೆಯು ಹಾಸ್ಯಕ್ಕೆ ತಾವುಗಳು ಈಡಾಗದಿರಲಾರಿರೆಂದು ತೋಷದಿಂದ ಸೂಚಿಸುತ್ತೇನೆ. ಹಾಗೆ ಎಂದೂ ಆಗಲಿಕ್ಕಿಲ್ಲೆಂದು ಮತ್ತೊಮ್ಮೆ ಸಂ ಪಡುತ್ತೇನೆ. ಯಾಕೆಂದರೆ ಈ ಮಹನೀಯರನ್ನು ಬಿಟ್ಟು ಈಗಿನ ಸುಧಾರಣೆಯು ಸ ಲಿಕ್ಕೆ ಆಸ್ಪದವಿಲ್ಲೆಂಬ ತತ್ವವು ಅವರಿಗೆ ಅರಿಕೆಯೇ ಅದೆ. ... ...

ಈ ಮೂರು ಪ್ರಕಾರದವರೂ ಈಗ ಮಾಡಬೇಕಾಗುವ ಕೆಲಸಗಳು ಕೆಳಗಿ ಪ್ರಕಾರ;— ... ... ... ...

## ೧. ಪಂಚ ಸಿಂಹಾಸನಾಧಿಪತಿಗಳು ಈಗ ಮಾಡಬೇಕಾಗಿರುವ ಕೆಲಸ

೧. ಎಲ್ಲ ಸಿಂಹಾಸನಾಧಿಪತಿಗಳೂ ಈಗಿನ ಸಮಾಜಸುಧಾರಣೆಯ ಕೆಲಸಗ ಏಕಮನಸಿನಿಂದ ಕೈಕೊಳ್ಳೋಣ. ಮತ್ತೂ ಕೂಡಿ ಕೈಕೊಂಡಿರುವರೋ ಬೇರೆ ಯಾಗಿ ಕೈಕೊಂಡಿರುವರೋ ಈ ಪ್ರಶ್ನದ ಸಂಶಯವನ್ನು ಸಹಿನಿಸಿಯ ಜಾಹೀರಾ ವ್ಯಕ್ತಪಡಿಸೋಣ. ... ... ... ...

೭. ಆಚಾರದಲ್ಲಿ ತರತಕ್ಕ ಅಷ್ಟಾವರ್ಣದ ವಿಷಯಗಳನ್ನೂ, ವಿರಕ್ತ ಮ ಮಠಾಧಿಕಾರಿಗಳೂ ಮಾಡತಕ್ಕ ನಿತ್ಯವಾದ ಧಾರ್ಮಿಕ ಕರ್ತವ್ಯ ಕರ್ಮಗಳನ್ನೂ ಹಕ್ಕುಬಾಬುಗಳ ಪರಿಮಿತಿಯನ್ನೂ, ಸ್ಪಷ್ಟವಾಗಿ ತಿಳಿಯುವಂತೆ ವ್ಯವಹಾರೋಪ ದೃಷ್ಟಿಯಿಂದ ಪುಸ್ತಕಬರಸಿ ಅದಕ್ಕೆ ತಮ್ಮ ಸಹಿ ಮೊಹರಹಾಕಿ ಛಾಪಿಸೋಣ,

೩. ಧರ್ಮಾಚಾರದಲ್ಲಿ ತರತಕ್ಕ ಯಾವದೇ ಪುಸ್ತಕವಾದರೂ ಅದಕ್ಕೆ ತಮ್ಮ ಸಹಿಮೋಹರ ಹಾಕೋಣ, ಮತ್ತು ತಮ್ಮ ಸಹಿ ಮೋಹರಿಲ್ಲದ ಪುಸ್ತಕಗಳು ಆಚಾರಕ್ಕೆ ಒಪ್ಪತಕ್ಕದ್ದಲ್ಲಂತ ಜಾಹೀರ ಮಾಡೋಣ. ... ... *

೪. ಎಲ್ಲ ಪ್ರಾಂತಗಳಲ್ಲಿಯೂ ತಾವು ಮೋಹರಮಾಡಿದ ಪುಸ್ತಕಗಳನ್ನೇ ಈಗಿನ ವಿದ್ಯಾರ್ಥಿಗಳಿಗೆ ಕಲಿಸುವ ಒಂದೇ ಏರ್ಪಾಡು ಮಾಡೋಣ, ಹಾಗು ಬೇರೆಬೇರೆಕಡಿಗೆ ಬೇರೆಬೇರೆ ಬಗೆಯಾದ ಧರ್ಮ ಪುಸ್ತಕಗಳನ್ನು ಕಲಿಸುವ ಪದ್ಧತಿಯನ್ನು ತಪ್ಪಿಸೋಣ.

೫. ಆಚಾರದಲ್ಲಿ ತರತಕ್ಕ ಯಾವದಾದರೂ ಧಾರ್ಮಿಕಸಂಬಂಧಿ ಸಣ್ಣ ದೊಡ್ಡ ಪುಸ್ತಕಗಳನ್ನು ವಿದ್ವಾಂಸರು ಬರೆದು ತಮ್ಮಸನ್ನಿಧಿಗೆ ತಂದು ಪಾಸಾದನಂತರ ಅದನ್ನು ಪ್ರಚಾರದಲ್ಲಿ ಉಪಯೋಗಿಸಬೇಕೆಂತಲೂ, ಹಾಗೆ ಆಚಾರ ಉಪಯುಕ್ತ ಪುಸ್ತಕಗಳನ್ನು ದೇಶಭಾಷೆಯಲ್ಲಿ ಬರೆಯುವವರಿಗೆ ಸಂಭಾವನೆ ಕೊಡುವೆವೆಂತಲೂ ಜಾಹೀರಮಾಡಬೇಕು

೬. ಈ ಒಳಗಾಗಿಬರೆದ ಯಾವದಾದರೂ ಧರ್ಮಗ್ರಂಥವು ವ್ಯವಹಾರೋಪಯೋಗಿ ಇದ್ದು ಶಾಸ್ತ್ರಕ್ಕೂ, ಈಗಿನ ವಿಚಾರಕ್ಕೂ ಸಮ್ಮತವಾದದ್ದೆಂದು ತೋರಿಬಂದಿದ್ದರೆ ಅಂಥ ಪುಸ್ತಕಗಳನ್ನು ಹೆಸರುನಿಸಿ ಬೈಲಿಗೆತಂದು ಆ ಗ್ರಂಥವನ್ನು ಆಚಾರದಲ್ಲಿ ತರಲಿಕ್ಕೆ ನಮ್ಮ ಒಪ್ಪಿಕೆಯದೆಂದು ಜಾಹೀರಾತಿನಿಂದ ಪ್ರಕಟಿಸಬೇಕು. ... ... *

೭. ಧಾರ್ಮಿಕವಿಷಯ ಸಹಿತ ಕಲಿಸುವ ಶಾಲಾಸ್ಥಾಪಕರು ಆ ಸ್ಥಾಪನೆಯ ಸುದ್ದಿಯನ್ನು ಸಿಂಹಾಸನಾಧಿಕಾರಿಗಳಿಗೆ ಅಥವ ಅವರು ವ್ಯವಸ್ಥಾಮಾಡಿರುವ ಬೇರೆ ಅಧಿಕಾರಿಗಳಿಗೆ ತಿಳುಹಿಸುವ ಕಟ್ಟಳೆ ಮಾಡಬೇಕು. ... ... *

೮. ಎಲ್ಲ ಧಾರ್ಮಿಕಶಾಲೆಗಳ ಮೇಲ್ವಿಚಾರಣೆಯ ಏರ್ಪಾಡು ಮಾಡಬೇಕು.

೯. ಸಂಶಯ ಪರಿಹಾರಕ ಅಥವ ಅಡ್ಡಿನಿವಾರಣ ಪೀಠವೆಂಬ ಹೆಸರಿನಿಂದ ಒಂದು ಆಫೀಸನ್ನು ಪಂಚ ಸಿಂಹಾಸನಾಧಿಪತಿಗಳೂ ಸಮ್ಮತಿಸಿದ ಅಥವ ಬೇರೆಬೇರೆಯಾದ (ಹ್ಯಾಗೆ ಇದ್ದೀತು ಹಾಗೆ) ಊರುಗಳಲ್ಲಿ ಸ್ಥಾಪಿಸಿ ಆ ಊರನ್ನು ಜಾಹೀರ ಮಾಡಬೇಕು. *

೧೦. ಈಗಿನ ಸುಧಾರಣೆಯ ಕೆಲಸಗಳಲ್ಲಿ ತಾವೂ, ವಿರಕ್ತರೂ, ಬೇರೆ ಆಚಾರಪತಿಗಳೂ, ಯಾವಯಾವ ಕೆಲಸಗಳನ್ನು ಕೈಕೊಳ್ಳಲಿಕ್ಕೆ ಸಂಭವ ಇರುವದನ್ನು ಆಲೋಚಿಸಿ ಅವರವರ ಕೆಲಸಗಳನ್ನು ಪುಸ್ತಕರೂಪವಾಗಿ ಬರಿಸಿ ಅದಕ್ಕೆ ತಮ್ಮ ಸಹಿ ಮೋಹರ ಹಾಕಿ ಛಾಪಿಸಿ ಜಾಹೀರಮಾಡಬೇಕು; ಮತ್ತು ಅವುಗಳನ್ನು ಎಲ್ಲಕಡಿಗೂ ಹಂಚಬೇಕು.

೧೧. ಈಗಿನ ಮಹಾಸಭೆಗಳಲ್ಲಿ ವಿವಾದಿಸಲ್ಪಟ್ಟು ಪಾಸಾಗುವ ತಮ್ಮ ಧರ್ಮಾಚಾರಕ್ಕೆ ಸಂಬಂಧಿಸಿದ ಠರಾವುಗಳಿಗೆ ಮಾತ್ರ ತಮ್ಮಸಹಿ ತಕ್ಕೊಳ್ಳದೆ ಇನ್ನುಮುಂದೆ ರಿಪೋರ್ಟಿನಿಂದ ಜಾಹೀರ ಮಾಡಬಾರದೆಂಬ ಕಟ್ಟಳೆಮಾಡಬೇಕು. ... ... *

೧೨. ಧರ್ಮ ಸುಧಾರಣೆಯ ಸಂಬಂಧವ ಈಗಿನಕಾಲಕ್ಕೆ ಮಹತ್ವವಾದ ಕೆ ಳಲ್ಲಿ ಮುಂದ್ದಾಂದೆಯ ಮಾಡಿಸುವದು ಯೋಗ್ಯತೋರಿದ ದೂರ ಅಥವ ಸಮೀಪದ ಎಲ್ಲ ಗಳಿಗೂ ಜಾಗ್ರುತೆಯಿಂದ ಸ್ವಾರಿಮಾಡುವದನ್ನು ಕೈಕೊಳ್ಳೋಣ. ...

ಇವೇ ಮುಂತಾದ ಕೆಲಸಗಳನ್ನು ಸಿಂಹಾಸನಾಧಿಪತಿಗಳು ಕೈಕೊಳ್ಳಬೇಕ ರಾಂಶವೇನೆಂದರೆ;—ಭೂಮಿಯನ್ನು ಆಳುವ ರಾಜರು ಆ ಆಳಿಕೆಯ ಶಾಶ್ವತವಾದ ದೃಷ್ಟಿಯಿಂದ ಆಚರಿಸುವರೋ ಅದೇಪ್ರಕಾರ ಈ ಧರ್ಮದ ರಾಜರು ತಮ್ಮ ಧರ್ಮ ರಾಜ್ಯವನ್ನು ಆಳುವ ದೃಷ್ಟಿಯುವರಾಗಿರಬೇಕು. ... ...

## ೨. ವಿರಕ್ತ ಸ್ವಾಮಿಗಳ ಕೆಲಸಗಳು.

೧. ಶ್ರೀಮನ್ನಿರಂಜನ ಮೂರ್ತಿಗಳಾದ ಹಾನಗಲ್ ಹಾವೇರಿ, ಬಾಗಲಕೋ ಬೀಳೂರ ಸ್ವಾಮಿಗಳವರಂತೆ ತಮ್ಮತಮ್ಮ ಮಠಗಳ ಪೂರ್ಣವ್ಯವಸ್ಥೆಯನ್ನುಮಾಡಿ ಸುಧಾರಣೆಯ ಕೆಲಸಕ್ಕೆ ತ್ರಿಕರಣಗಳನ್ನೂ ಒಪ್ಪಿಸತಕ್ಕದ್ದು. ಹೀಗೆ ಒಪ್ಪಿಸಿದಬ ಯಿಯಿಂಆ ಜೂತಾಡಬೆ ಮಹಾಸಭೆಯ ಮುಂದೆ, ಅಥವ ಬೇರೆಕಮಿಟಿಯ ಮುಂದೆ ಪ್ರುತ್ಯಕ್ಷಕೆಲಸ ಕೈಕೊಂಡು ವಚನಕೊಟ್ಟು ತಮ್ಮ ಮನಸ್ಸನ್ನು ಮೊದಲು ಪ್ರ ಪಡಬೇಕು. ... ... ... ... ...

೨. ಧಾರ್ಮಿಕ ಸುಧಾರಣೆಯ ವಿಷಯದ ಸಂಬಂಧದಲ್ಲಿ ತಮ್ಮಸ್ಥಾನವನ್ನ ರ್ಮವ್ಯಕರ್ಮಗಳನ್ನೂ, ಶಾಸ್ತ್ರೋಕ್ತ ಅರಿಯದ ವಿರಕ್ತ ಮೂರ್ತಿಗಳು ಮೊದಲ ವನ್ನು ಬಿಟ್ಟು ಶಾಂತದಿಂದಲೂ, ಧರ್ಮಶಾಸ್ತ್ರಮುಖದಿಂದಲೂ ತಮ್ಮ ಸ್ಥಳವನ್ನೂ ವ್ಯಕರ್ಮಗಳನ್ನೂ ತಿಳುಕೊಂಡು ಅದರರಿತೆ ಶಾಂತರಾಗಿ ನಡಿಯುವ ಪದ್ಧತಿಯನ್ನ ಕೊಳ್ಳಬೇಕು. ... ... ... ...

೩. ತಾವು ಇರುವ ಗ್ರಾಮದಲ್ಲಿ ಮತ್ತು ತಮ್ಮ ಮಠಗಳು ಇರುವ ಗ್ರಾ ಧಾರ್ಮಿಕವಿಷಯ ಸಹಿತವಾದ ಶಾಲೆಗಳನ್ನು ಸ್ಥಾಪಿಸಬೇಕು. ...

೪. ಧರ್ಮೋಪದೇಶಕರು, ಅಥವ ಮಹಾಸಭೆಗಳು, ಸೂಚಿಸುವ ಎಲ್ಲ ಗಳನ್ನು ಆದಷ್ಟು ಹೆಚ್ಚುಕ್ರಮದಿಂದ ಅಮಲಿನಲ್ಲಿ ತರಲಿಕ್ಕೆ ಯತ್ನಿಸಬೇಕು.

೫. ಶಿವಯೋಗಮಂದಿರ ಮುಂತಾದ ಯಾವಲ್ಲಿ ಯಾದರೂ ವಿರಕ್ತಮೂ ಪುರವತೆಯು ಈಗಿನ ಸುಧಾರಣೆಗೆಬೇಕಾಗಿದೆ ಎಂದು ಈಗಿನ ಸುಧಾರಕಪ್ರಿಯರು ಸೂಚಿಸಿದರೆ ಅಲ್ಲಿಗೆ ಜಾಗ್ರುತೆಯಿಂದ ದಯಮಾಡಿಸಿ ಆ ಕೊರತೆಯನ್ನು ದೂರಮಾ

೬. ತಾವಿರುವ ಊರುಗಳಲ್ಲಿ ಈಗಿನ ಹೊಸಪದ್ಧತಿ ಪ್ರಕಾರ ವೀರಶೈವ ಮಕಮಿಟಿ ಸ್ಥಾಪಿಸಿ, ಆ ಕಮಿಟಿಯ ಮುಖಾಂತರವಾಗಿಯೇ ತಮ್ಮ ಸುಧಾರಣೆಯ ಗಳನ್ನು ಕೈಕೊಳ್ಳಬೇಕು. ... ...

೮. ಯಾವ ಸುಧಾರಣೆಯ ಕೆಲಸಕ್ಕಾದರೂ ತಮಗೆ ಅಸಾಧ್ಯವಾದ ಅಡ್ಡಿಯು ಬಂದರೆ ಈಗಿನ ಸುಧಾರಣೆಗೆ ಮುಖ್ಯ ಪೀಠಸ್ವರೂಪವಾಗಿ ಮುಂದೆ ಸ್ಥಾಪಿಸಲ್ಪಡತಕ್ಕಂಥಾದ ಪೀಠಕ್ಕೆ ಬರೆಯು ಅಥವ ತಮ್ಮಲ್ಲಿಯ ತಾಲೂಕ, ಜಿಲ್ಲಾ, ಕಮಿಟಿಗಳನ್ನು ಕೂಡಿಸಿ, ಅಲ್ಲಿ ಆ ಅಡ್ಡಿಗಳನ್ನು ದೂರಮಾಡಿಕೊಳ್ಳಬೇಕು. ... ... *

೮. ಗ್ರಾಮ ಕಮಿಟಿಯವರಿಗಾಗಿ ನಿಯಮಿಸಿದ ಕೆಲಸಗಳನ್ನು ಅವರು ಮಾಡುತ್ತಿರುವಾಗ ವಿರಕ್ತಸ್ವಾಮಿಗಳವರ ಸಹಾಯಬೇಕಾದ, ಮತ್ತು ತಮಗೆಸಾಧ್ಯವಿರುವ ಅಡ್ಡಿಗಳು ಆಗಬಹುದಾದವುಗಳನ್ನು ದೂರಮಾಡಬೇಕು. ... ... *

೯. ಧರ್ಮಶಾಸ್ತ್ರ ಮತ್ತು ಔದ್ಯೋಗಿಕಶಾಸ್ತ್ರಗಳನ್ನು ಓದಿ ಜ್ಞಾನಸಂಪಾದಿಸಿಕೊಂಡಿರದ ವಿರಕ್ತಸ್ವಾಮಿಗಳವರು ಅಂಥ ಜ್ಞಾನಿಗಳನ್ನು ಸೂಚನಾಕರ್ತರಾಗಿ ತಮ್ಮ ಸನ್ನಿಧಿಯಲ್ಲಿ ಸ್ಥಾಪಿಸಿಕೊಳ್ಳಬೇಕು. ... ... ... *

೧೦. ಸಮೀಪದ ಗ್ರಾಮದ ಅಥವ ಬಂದೇಊರಲ್ಲಿ ವಾಸಮಾಡಿರುವ ಎಲ್ಲವಿರಕ್ತ ಮಠಾಧಿಕಾರಿಗಳು ತಮ್ಮ ಮೊದಲಿನವೈರಭಾವವಿದ್ದರೆ ಅದನ್ನು ನಿದಾನ ಈ ಸುಧಾರಣೆಯ ಕೆಲಸದ ಪೂರ್ತಿಯಾದರೂ ಬಿಟ್ಟು ಏಕತ್ವದಿಂದ ಈಗಿನ ಸುಧಾರಣೆಯ ಕೆಲಸಕ್ಕೆ ಸಹಾಯ ಮಾಡಬೇಕಾದ ಪ್ರಯತ್ನಗಳನ್ನು ಮಾಡಬೇಕು. ... ... *

೧೧. ಈಗ ಉಪದೇಶಕ್ಕೆ ಹೊರಡುವ ಉಪದೇಶಕರು, ಭಕ್ತರೂ, ಪ್ರಾಪಂಚಕ ಗಣಂಗಳೂ ಇದ್ದರೆ ಅವರು ಗ್ರಾಮದ ಆರಂಭದ ಪ್ರವೇಶಕ್ಕೆ ಒಬ್ಬ ವಿರಕ್ತಮೂರ್ತಿಯು ಅವರಸಂಗಡ ಈಗ ಬೇಕಾಗುತ್ತದೆ. ಅದರಿಂದ ಅಂಥವರು ಸಮೀಪದಲ್ಲಿದ್ದ ಯಾವ ವಿರಕ್ತಸ್ವಾಮಿಗಳಿಗಾದರೂ ಸೂಚಿಸಿದರೆ ಅವರಸಂಗಡ ಜಾಗ್ರತೆಯಿಂದ ದಯಮಾಡಿಸಬೇಕು.

೧೨. ಪ್ರತಿ ಒಬ್ಬ ವಿರಕ್ತರು ಈಗಿನ ಸುಧಾರಣೆಯ ಕೆಲಸವು, ತಮ್ಮ ಪೀಠದ ಗೌರವವು, ಊರ್ಜಿತವಾಗುವ ಪರಶಿವನಪ್ರೇರಣೆಯೇ ಎಂದು ಭಾವಿಸಬೇಕಲ್ಲದೆ ಈಗಿನ ಮಾನವನನ್ನು ಭಾವಿಸಲಿಕ್ಕೆ ಕಾರಣವಿಲ್ಲ. ... ... *

ಇವೇ ಮುಂತಾದ ಕೆಲಸಗಳನ್ನು ಈಗಿನ ವಿರಕ್ತಮಹಾಸ್ವಾಮಿಗಳು ಕೈಕೊಳ್ಳಬೇಕಾಗಿದೆ. ... ... ... ... *

## ೩. ಬೇರೆ ಗ್ರಾಮದ ಆಚಾರಪತಿಗಳ ಕೆಲಸಗಳು.

೧. ಮಠಗಳ ಪಟುವಡಿಗಳಿದ್ದರೆ ಅವುಗಳನ್ನು ಹಿಡಿಯೋಣ ಆ ಸಂಬಂಧದಿಂದ ಗ್ರಾಮಕಮಿಟಿಯವರಿಂದ ಯೋಗ್ಯ ಆವಾರ್ಡ (ಪಂಚತರಾವ) ಬರೆಸಿ ಅದರಂತೆ ನಡೆಯುವದನ್ನು ಕೈಕೊಳ್ಳೋಣ. ... ... ... *

೨. ತಮ್ಮಗ್ರಾಮದಲ್ಲಿ ಸಭ್ಯಗೃಹಸ್ಥರ ಕಮಿಟಿಯನ್ನು ಸ್ಥಾಪಿಸಿ ಕೊಳ್ಳೋಣ.

೩. ಆ ಕಮಿಟಿಯು ಮುಖಾಂತರವಾಗಿ ಧಾರ್ಮಿಕವಿಷಯು ಸಹಿತವಾದ ಶಾಲೆಗಳ
ಕೇವಲ ವೀರಶೈವ ಹುಡುಗರ ಬಗ್ಗೆ ಸ್ಥಾಪಿಸೋಣ. ... ...

೪. ತಮ್ಮ ಮಕ್ಕಳನ್ನು ಸದರೀ ಶಾಲೆಗೆಹಾಕಿ ಧಾರ್ಮಿಕಶಿಕ್ಷಣ ಕೊಡಿಸ
ಹಾಗು ಉಳಿದ ವೀರಶೈವರಿಗೆ ಸಹ ಸದರಿಶಾಲೆಗೆ ತಮ್ಮ ಮಕ್ಕಳನ್ನು ಕಳುಹಿಸಲಿಕ್ಕೆ
ತ್ಸಾಹಿಸೋಣ. ... ... ... ...

೫. ಸದರಿ ಶಾಳಾಸ್ಥಾಪಕರಿಗೂ, ಗ್ರಾಮ ಕಮಿಟಿಯುವರಿಗೂ, ಬೋಧಕರಿ
ಬೇಕಾಗುವ ಸಹಾಯುವನ್ನು ತ್ರಿಕರಣ ಪೂರ್ವಕವಾಗಿ ಮಾಡೋಣ. ...

೬. ತಾವು ಪೂರ್ವದ ಹಕ್ಕಿನಿಂದ ಬೇಡುವ ಭಿಕ್ಷದ ಜೋಳಿಗೆಯುಸಂಗಡ
ವಿದ್ಯಾಸುಧಾರಣೆಯು ಜೋಳಿಗೆ ಎಂಬುವ ಎರಡನೇ ಜೋಳಿಗೆಯುನ್ನು ಹಾಕಿಕೊಂಡು
ರ ಉತ್ಪನ್ನವನ್ನು ಬತ್ತಟ್ಟಗೆ ಜಮೆಮಾಡಿ ಅಥವ ಗ್ರಾಮ ಕಮಿಟಿಯುವರು ನೇಮಿ
ಕೊಟ್ಟಂತೆ ಅಧ್ಯಾಪಕರಿಗೆ ಮುಟ್ಟಿಸೋಣ. ... ...

೭. ಬೇರೆ ಅಯೋಗ್ಯ ಜಂಗಮರ ಭಿಕ್ಷುಕತನವನ್ನು ಆದಷ್ಟು ಬಂದು ಪ
ಕ್ಕೆ ಯತ್ನಿಸುವ ಗ್ರಾಮಕಮಿಟಿಯುವರಿಗೆ ಅಥವ ಬೋಧಕರಿಗೆ ತಮ್ಮ ಕೈಯಿಂದಾ
ಹಾಯುವನ್ನು ಮಾಡಬೇಕು. ... ... ...

೮. ಅಷ್ಟಾವರ್ಣ ಯುಕ್ತರಾದ ಎಲ್ಲ ಒಳ ಭೇದದವರ ಬಳಿಕಿ ಭೋಜನ
ದೇ ಆಗಲಿಕ್ಕೆ ಶಾಸ್ತ್ರಸಮ್ಮತವೂ, ಸಿಂಹಾಸನಾಧಿಪತಿ ಮುಂತಾದ ಧರ್ಮಾಧಿಕಾರಿಗಳ
ತವೂ, ಆದೆಂಬ ಮಾತನ್ನು ಶೀಲವಂತ ಮುಂತಾದ ಇದಕ್ಕೆ ಅಡ್ಡಿಮಾಡುವ ಜನರಿಗೆ
ಧಿಸಿ, ಅದನ್ನು ಪ್ರಚಾರದಲ್ಲಿ ತರಬೇಕು. ... ...

೯. ಶೀಲವಂತ ಮುಂತಾದ ಹೆಚ್ಚಿಚ್ಚಿನ ಶೀಲದವರು, ಪಂಚಮಸಾಲಿ,
ಗಾಣಿಗ ಮುಂತಾದ ಅಷ್ಟಾವರ್ಣಯುಕ್ತ ರಾದವರ ಮನೆಯಲ್ಲಿ ಸಹ ಊಟಮಾಡದಿ
ನಿಮ್ಮ ಹೊಲಸಾಚಾರವೂ ಅಷ್ಟಾವರ್ಣಕ್ಕೆಸರಿಯಾಗಿ ನೀವು ನಡಕೊಳ್ಳುವದನ್ನು ಬಿಟ್ಟ
ಆಚಾರವೊ, ಕಾರಣವಾಗಿರುತ್ತದೆ ಎಂದು ಮುಂತಾದಬೋಧವನ್ನು ಅವರಮನೆಗೆ
ಅಥವ ಅವರ ಬೇರೆಕಮಿಟಿ ಕೂಡಿಸಿ, ಅಷ್ಟಾವರ್ಣಕ್ಕೆಸರಿಯಾದ ಆಚಾರದಂತೆ ನೀವ
ಕೊಳ್ಳಲಿಕ್ಕೆ ಹತ್ತಿದರೆ ಅವರೂ ನಿಮ್ಮಮನೆಗೆ ಊಟಕ್ಕೆ ಬರಲಿಕ್ಕೆ ನಿಯುಮವಾಗಿದೆ
ಅವರಿಗೆ ತಿಳುಹಿಸಬೇಕು. ಹಾಗು ಅವರ ಆಚಾರವನ್ನು ಲಕ್ಷ್ಯಪೂರ್ವಕ ತಿದ್ದಲಿಕ್ಕೆ
ತ್ನೈಸಬೇಕು. ಇದಕ್ಕೆ ಆಯಾಮನೆತನದ ಮುಖ್ಯಗುರುವು ಹೆಚ್ಚು ಲಕ್ಷ್ಯಕೊಟ್ಟರೆ
ಆಚಾರವು ತೀವ್ರ ಸುಧಾರಿಸಲಿಕ್ಕೆ ಹೆಚ್ಚು ಸಂಭವ ಅದೆ. ...

೧೦. ಪ್ರತಿನಿಯಮಿತ ದಿವಸಕ್ಕೊಮ್ಮೆ ಕೂಡುವ ಗ್ರಾಮಕಮಿಟಿಯಲ್ಲಿ ನಿತ್ಯವಾಗಿಯೂ ತಾಲೂಕ ಜಿಲ್ಲಾ ಕಮಿಟಿಗಳಲ್ಲಿ ಆದಷ್ಟು ಅನುಕೂಲ ಮಾಡಿಕೊಂಡು ಹಾಜರು ಇರಬೇಕು. ... ... ... ... . *

೧೧. ಲಿಂಗಧರಿಸದೆ ಮುಂತಾದ ಧರ್ಮವಿರುದ್ಧ ಆಚರಿಸುವವರನ್ನು ಅರಿಸಿ ಗ್ರಾಮಕಮಿಟಿಯಮುಂದೆ ವಿಚಾರಕ್ಕೆ ತಂದು ಸೌಮ್ಯದಿಂದ ಸದ್ವರ್ತನಕ್ಕೆ ಬೋಧಿಸಬೇಕು.

೧೨. ಯಾವಸುಧಾರಣೆಯ ಕೆಲಸಕ್ಕಾದರೂ ತಮಗೆ ಅಸಾಧ್ಯವಾದ ಅಡ್ಡಿ ಬಂದರೆ ಆ ಅಡ್ಡಿಯನ್ನು ತಮ್ಮಮೇಲಿನ ಸ್ವಾಮಿಗಳ, ಅಥವ ತಾಲೂಕ, ಕಮಿಟಿಯ ಮುಖಾಂತರವಾಗಿ ಹೋಗಲಾಡಿಸಿ ಕೊಳ್ಳಬೇಕು. ... ... ... *

ಇವೇ ಮುಂತಾದ ಕೆಲಸಗಳನ್ನು ಗ್ರಾಮದ ಆಚಾರಪತಿಗಳು ಮಾಡಬೇಕಾಗಿದೆ.

೩. ಧಾರ್ಮಿಕ ಮತ್ತು ಔದ್ಯೋಗ ಶಾಸ್ತ್ರಜ್ಞಾನವರ್ಧಕ ಈ ಎರಡೂ ಪ್ರಕಾರದ ವಿಷಯ ಮಿಶ್ರಿತಶಾಲೆಗಳನ್ನು ಎಲ್ಲಪ್ರಾಂತಗಳಲ್ಲಿ ಏಕತ್ವರೀತಿಯಿಂದ ಸ್ಥಾಪಿಸುವ ಮತ್ತು ಬೋಧಕರನ್ನು ನಿಯಮಿಸುವ ಮುಂತಾದ ವ್ಯವಸ್ಥೆ ಮಾಡೋಣ ಅಂದರೆ ಅವರವರ ಸಂಬಂಧ ನಿಯಮಗಳನ್ನು ಬರಿಸಿ ಅಮಲಿನಲ್ಲಿ ತರೋಣ. ... ... *

ಶಾಲಾಸ್ಥಾಪನೆಯ ಸಂಬಂಧವಾದ ವಿಷಯಗಳನ್ನೂ, ಕಟ್ಟಳೆಗಳ ಸೂಚನೆಯನ್ನು ೯-ನೇ ವಿಷಯವಾಗಿ ಸ್ವತಂತ್ರದಿಂದ ವಿಚಾರಿಸಿರುವದರಿಂದ ಇಲ್ಲಿ ಅದರವಿಚಾರವನ್ನು ಬಿಟ್ಟು ಬೋಧಕರ ಬಗ್ಗೆ ಮಾತ್ರ, ವಿಚಾರಮಾಡಲ್ಪಟ್ಟಿದೆ. ... *

೧. ಉಪದೇಶಕರ ಯೋಗ್ಯತೆ ೨, ಅವರ ಅಧಿಕಾರಿಗಳೂ, ಅವರ ಸಂಗಡ ಮಾಡುವ ಪತ್ರವ್ಯವಹಾರಗಳು ೩, ಅವರು ಮಾಡತಕ್ಕ ಕರ್ತವ್ಯ ಕರ್ಮಗಳು ೪, ಅವರ ಪಗಾರ ಮುಂತಾದ ಕಿರಕೂಳಸಂಗತಿಗಳು ಈ ಪ್ರಕಾರ ನಾಲ್ಕು ಬಗೆಯಾದ ನಿಯಮಗಳನ್ನು ಮಾಡಬೇಕಾಗುತ್ತದೆ; ಅವುಗಳ ವಿವರವು ಕೆಳಗೆ ಬರೆದಪ್ರಕಾರ. ... *

## ೧. ಉಪದೇಶಕರ ಯೋಗ್ಯತೆ.

ಈಗಿನ ಉಪದೇಶಕರಾಗುವವರಿಗೆ ಧಾರ್ಮಿಕ, ಮತ್ತು ಕೃಷಿ, ವ್ಯಾಪಾರ ಮುಂತಾದ ಔದ್ಯೋಗ ಶಾಸ್ತ್ರಜ್ಞಾನವಿರುವದಲ್ಲದೆ ಅಸ್ಖಲಿತವಾಗಿಯೂ ಭಾವಬೋಧಕವಾಗಿಯೂ ಸುಶ್ರಾವ್ಯವಾಗಿಯೂ, ಮಾತಾಡುವ ಶಕ್ತಿವಂತರಿರಬೇಕು. ಇದಲ್ಲದೆ ಸಭಾಕಂಪನ ಮುಖದೌರ್ಬಲ್ಯ ವೆಂಬ, ದುರ್ಗುಣರಹಿತರಿರಬೇಕು. ಆದ್ದರಿಂದ ತುರ್ತಿಗೆ ಈ ಎಲ್ಲಪ್ರಕಾರದ ಗುಣಗಳಿಂದ ಪೂರ್ಣತೆ ಹೊಂದಿದವರೆಂದು ಪರೀಕ್ಷಿಸಿ, ಅವರನ್ನು ಬೋಧದಕೆಲಸಕ್ಕೆ ನೇಮಿಸಲಿಕ್ಕೆ ಅನುಕೂಲವಿಲ್ಲ. ಕಾರಣ ಈಗ ಸಿಗುವ ಶಾಲಾಧ್ಯಾಪಕ ಮುಂತಾದವರಿಗೇ ಈ ಕೆಲಸವನ್ನು ನಿಯಮಿಸಿ, ಮುಂದೆ ಅಧ್ಯಾಪಕನು ಶಿಕ್ಷಣಕೊಡುವ ಶಾಸ್ತ್ರದಲ್ಲಿಯೂ ಬೇರೆ

ವಿಷಯಗಳಲ್ಲಿಯೂ ಪರೀಕ್ಷೆಯನ್ನು ಕೊಟ್ಟು ಅಧ್ಯಾಪಕನಕೆಲಸಕ್ಕೆ ನಿಯಮಿಸಲ್ಪಡುವ ಈ ಉಪದೇಶಕರೂ ಸಹ ಅವರಿಗೆ ಬೇಕಾದ ಎಲ್ಲವಿಷಯಗಳಲ್ಲಿಯೂ ವಕ್ತೃತ್ವದಲ್ಲಿಯೂ ಪರೀಕ್ಷೆಯನ್ನು ಕೊಟ್ಟು ನಿಯಮಿಸಲ್ಪಡಬೇಕು. ... ...

## ೨. ಉಪದೇಶಕರ ಅಧಿಕಾರಿಗಳು, ಮತ್ತು ಅವರ ಸಂಗಡ ಮಾಡುವ ಪತ್ರ ವ್ಯವಹಾರವು.

ಇವರಿಗೆ ನಿಯಮಿತವಾದ ಅಧಿಕಾರಿಗಳಿರಬೇಕು. ಅ ದರೆ ತಾಲೂಕ ಕಮಿಟಿ ಜಿಲ್ಲಾ ಕಮಿಟಿಗಳ ಶೆಕ್ರೆಟರಿಗಳು, ಅಥವಾ ಯಾವದೊಂದು ಈಗಿನ ಸುಧಾರಣೆಯ ಕೆಲಸಕ್ಕೆ ತ್ರಿಕರಣಗಳನ್ನು ಒಪ್ಪಿಸಿದ ಒಬ್ಬ ವಿರಕ್ತ ಸ್ವಾಮಿಗಳು ಇವರಿಗೆ ಅಧಿಕಾರಿಗಳೆಂದು ಹೆಸರುನಿಸಿ ನಿಯಮಿಸಲ್ಪಡಬೇಕು. ... ... ...

ಇವರು ತಮ್ಮ ಅಧಿಕಾರಿಗಳಿಗೆ ಒಪ್ಪಿಸುವ ಕೆಲಸಗಳು ಕೆಳಗೆ ಬರೆದಪ್ರಕಾರ.

೧. ತಾವು ತಿರುಗಿದ ಊರು, ಮಾಡಿದ ಕೆಲಸಗಳ ವಿವರಸಹಿತವಾದ ಒಂದು ಲಕ್ರಮದ ಡೈರಿಯನ್ನು, ಆಯಾಗ್ರಾಮದ ಕಮಿಟಿಯ ಶೆಕ್ರೆಟರಿಗಳ ಸಹಿನಿಸಿಯಿಂದ ಪ್ರತಿಯಿಟ್ಟು ಅದರ ನಕಲನ್ನು ( ಸದರಿ ಶೆಕ್ರೆಟರಿಗಳ ಸಹಿನಿಸಿಯಿಂದಲೇ ) ತಮ್ಮ ನಿಯಮಿತ ಅಧಿಕಾರಿಗಳ ಕಡಿಗೆ ಪ್ರತಿ ಪಕ್ಷಕ್ಕೊಮ್ಮೆ (೧೫ ದಿವಸಕ್ಕೊಮ್ಮೆ) ಅಥವ ನಿದಾನಗಳಿಗೊಮ್ಮೆ ಕಳುಹಿಸಬೇಕು. ... ... ...

೨. ತಮ್ಮಕಡಿಗೆ ನಿಯಮಿಸಿದ ಕೆಲಸಗಳಲ್ಲಿ ಯಾವಪ್ರಕಾರದ್ದಾದರೂ ಅಡ್ಡಿ ಅಥವ ಸಂಶಯಬಂದರೆ ಅದನ್ನು ತಮ್ಮ ನಿಯಮಿತ ಅಧಿಕಾರಿಗಳ ಮುಖಾಂತರವಾಗಿ ಪರಿಹರಿಸಿಕೊಂಡು ಕೆಲಸಮಾಡಬೇಕು. ... ... ...

೩. ತಮ್ಮ ನಿಯಮಿತ ಅಧಿಕಾರಿಗಳಿಗಿಂತ ಮೇಲ್ಪಟ್ಟ ಅಧಿಕಾರಿಗಳು ತಮಗೆ ಭೆಟ್ಟಿಯಾದಾಗ ಅಥವ ವಿಶೇಷಕಾರಣ ಉತ್ಪನ್ನವಾಗಿ ಏನಾದರೂ ಸೂಚನೆಯನ್ನು ಪತ್ರಿಯಿಂದ ಅಥವ ಬಾಯಿಯಿಂದ ಪರಭಾರೆ ತಿಳುಹಿಸಿದರೆ ಅದನ್ನು ಕೂಡಲೆ ಅಮಲಿನಲ್ಲಿ ತಂದು ವರ್ತಿಸುವದಲ್ಲದೆ, ಆ ಸಂಗತಿಯನ್ನು ತಮ್ಮ ನಿಯಮಿತ ಅಧಿಕಾರಿಗಳಿಗೆ ಲೇಖಿ ಲಕ್ಷಣವೇ ತಿಳುಹಿಸಬೇಕು. ... ... ...

೪. ಮಹಾಸಭೆಯ ಅಥವ ಬೇರೆಸಭೆಯ ಶೆಕ್ರೆಟರಿ ಮುಂತಾದ ತಮ್ಮ ನಿಯಮಿತ ಅಧಿಕಾರಿಗಳ ಹೊರ್ತಾದವರ ಕಡಿಗೆ ಯಾವದೊಂದು ಸಂಗತಿಯನ್ನು ಕುರಿತು ಪತ್ರವ್ಯವಹಾರಮಾಡುವ ಜರೂರ ಬಿದ್ದರೆ ಅವರ ನಿಯಮಿತ ಅಧಿಕಾರಿಗಳ ಮುಖಾಂತರವಾಗಿ ಕಳುಹಿಸಬೇಕು. ಅವರು ಅದನ್ನು ಅವರಿಗೆ ಕಳುಹಿಸುವದು ಯೋಗ್ಯತೋರಿದರೆ ಕಳುಹಿಸಬೇಕು, ಇಲ್ಲವಾದರೆ ತಾವೇ ಅದರ ಸಮಾಧಾನವನ್ನು ಮಾಡಬೇಕು.

೫. ಈ ನಿಯಮಿತ ಅಧಿಕಾರಿಗಳು ತಮ್ಮ ಕೈಕೆಳಗೆ ಇರುವ ಉಪದೇಶಕರಿಂದ ನಿಯಮಿತ ಹದ್ದಿನಲ್ಲಿ ಕೆಲಸತಕ್ಕೊಳ್ಳಲಿಕ್ಕೂ, ಅದರ ನಿಯಮಿತಸಂಬಳವನ್ನು ನಿಯಮಿತ ಕಾಲಕ್ಕೆ ಮುಟ್ಟಿಸಿ ಪಾವತಿಹೊಂದಲಿಕ್ಕೂ ಜವಾಬದಾರಿಯುಳ್ಳವರೆಂದು ತಿಳಿಯಬೇಕು.

## ೩. ಉಪದೇಶಕರು ಮಾಡತಕ್ಕ ಮುಖ್ಯ ಕರ್ತವ್ಯಕರ್ಮಗಳು.

೧. ಸಾಧಾರಣ ದೊಡ್ಡದೊಡ್ಡ ಊರುಗಳಿಗೆ ಮೊದಲುಹೋಗಿ ಸಭ್ಯಲಿಂಗಾಯತ ಭಕ್ತರ ಮತ್ತು ಪಂಚಾಚಾರ್ಯರ, ಮತ್ತು ವಿರಕ್ತರಿದ್ದರೆ ಅವರು ಸಹಿತರಾವ ಸಭೆನೆರಿಸಿ, ಧರ್ಮದ ಊರ್ಜಿತಸ್ಥಿತಿಯ ಮಹತ್ವವನ್ನೂ, ಊನಸ್ಥಿತಿಯ ಹಾನಿಯನ್ನೂ, ಮೊದಲು ಹೇಳಿ, ಪೂರ್ವದ ನಮ್ಮ ವೀರಶೈವ ಧರ್ಮದ ಘನತೆಯನ್ನೂ ಅದಕ್ಕೆ ಇಷ್ಟರಲ್ಲಿ ಬದಗಿರುವ ಗ್ಲಾನಿಯ ಕಾರಣಗಳನ್ನೂ ಹೇಳಿ, ತರುವಾಯ ಆ ಗ್ಲಾನಿಯನ್ನು ಹೋಗಲಾಡಿಸುವದಕ್ಕಾಗಿ ಮುಂದೆ ಸಮಾಜಹಿತ ಚಿಂತಕರೆಲ್ಲರೂ ಮಾಡಬೇಕಾದ ಕಾರ್ಯಗಳವೆ, ಅವುಗಳಲ್ಲಿ ಗ್ರಾಮದವರು ಮಾಡತಕ್ಕ ಕಾರ್ಯಗಳನ್ನು ವಿವರಿಸುತ್ತೇನೆಂದು ಹೇಳಿ, ಮುಂದೆ ಕೊಟ್ಟಿರುವ ಅವರ ಕಾರ್ಯಗಳನ್ನು ಹೇಳಬೇಕು. ... ... *

೨. ಮೊದಲು ತಿಂಗಳಿಗೆರಡಾವರ್ತಿ ನಿದಾನ ಒಂದಾವರ್ತಿಯಾದರೂ ದೊಡ್ಡದೊಡ್ಡ ಊರುಗಳಿಗೆಹೋಗಿ ತಾವು ಇಚ್ಛಿಸಿದ ಕೆಳಗೆ + ವಿವರಿಸಿದ ಕೆಲಸಗಳು ಗ್ರಾಮಕಮಿಟಿಯವರಿಂದ ತಕ್ಕರೀತಿಯಾಗಿ ತಕ್ಕ ಕಾಲಕ್ರಮದಂತೆ ನಡಿಯುವವೋ ಇಲ್ಲವೋ ಎಂಬದನ್ನು ನೋಡುತ್ತಲೂ ಅದರಲ್ಲಿ ಮಾಡಬಹುದಾದ ಸುಧಾರಣೆಯನ್ನೂ ಸಹಾಯವನ್ನೂ ಮಾಡುತ್ತಲೂ ಇರುವದು. ... ... ... *

೩. ಧರ್ಮಾರ್ಥವಾಗಿ ಹಂಚುವ ಬುಕ್ಕುಗಳನ್ನು ತಕ್ಕಸ್ಥಳದಲ್ಲಿ ಹಂಚುವದು.

೪. ಪ್ರತ್ಯೇಕ ಗ್ರಾಮದಲ್ಲಿ ಪೂರ್ವದ ಹಕ್ಕಿನಿಂದ ಭಿಕ್ಷೆಬೇಡುವವರ ಯಾದಿಯನ್ನು ಮಾಡಿ ಅವರು ಈ ಸಮಾಜದ ಈಗಿನ ಸುಧಾರಣೆಯ ಕಾರ್ಯಗಳಿಗೂ ತಮ್ಮ ಮನೆತನದೊಳಗಿನ ಹುಡುಗರನ್ನು ತಿದ್ದುವದಕ್ಕೂ ಮನಃ ಪೂರ್ವಕವಾಗಿ ಕೆಲಸಮಾಡುವವರು ಯಾರು ! ದುರ್ಲಕ್ಷಿಸುವವರು ಯಾರು ? ಎಂಬದನ್ನು ಅವರು ತಾವು ಹೋದಾಗ ಮತ್ತು ಹೋಗುವ ಮೊದಲುಮಾಡಿದ ಸಹಾಯಗಳಮೇಲಿಂದ ಗುರ್ತುಹಿಡಿದು ಒಂದು ಬುಕ್ಕಿನಲ್ಲಿ ದಾಖಲೆಯನ್ನು ಬರೆದಿಡಬೇಕು. ಅದು ಮುಂದಿನ ವಿಚಾರಿಗಳಾದ ಹಿರಿಯರಿಗೂ, ಮುಂದೆ ಬರುವ ಬೇರೆ ಬೋಧಕರಿಗೂ ಸಹಾಯಕೊಡುತ್ತದೆ. ... ... *

೫. ಅದರಂತೆ ಭಕ್ತಸಮೂಹದ ಪೈಕಿ ಈ ಸಮಾಜದ ಈಗಿನ ಸುಧಾರಣೆಗೆ ಹೆಚ್ಚುಸಹಾಯ ಕೊಡತಕ್ಕವರ ಹೆಸರುನಿಸಿ ದಾಖಲೆಯನ್ನು ಇಡಬೇಕು. ... *

೬. ಊರೊಳಗಿನ ನಮ್ಮವೀರಶೈವ ಭಕ್ತರಲ್ಲಿ ಪಟುವಡಿಗಳಿದ್ದರೆ ಅವ್ರುಗಳ ಖ್ಯಸ್ಥರ ಹೆಸರುಗಳನ್ನೂ, ಆ ಪಟುವಡಿಗಳ ಕಾರಣಗಳನ್ನೂ ಒಂದು ಬುಕ್ಕಿನಲ್ಲಿ ಬ ಬೇಕು. ಹಾಗು ಈ ಪಟುವಡಿಗಳನ್ನು ಮುರಿಯಲಿಕ್ಕೆ ಸಭೆಗೂಡಿಸಿ ಅವರಿಂದಾಗುವ ಪರಿಣಾಮವನ್ನೂ ಐಕ್ಯದಿಂದಾಗುವ ಲಾಭವಿಶೇಷತ್ವವನ್ನೂ ತಿಳುಹಿಸಿ ಅವುಗಳನ್ನು ರಿಯಲಿಕ್ಕೆ ಆದಷ್ಟು ಯತ್ನಿಸಬೇಕು. ಆ ವಾರ್ಡಿಗೆ (ಪಂಚತರಾವಿಗೆ) ಅನುಕೂಲಿರು ಕಾರೀಕಾಪ್ಸ್ದಿಯ ಕಲ್ಯಾಣಕರವಾದ ಮರ್ಮವನ್ನು ತಿಳುಹಿಸಿ ಹೇಳಬೇಕು.

೭. ವೀರಶೈವರ ಧರ್ಮದಲ್ಲಿ ಅಥವ ನಿತ್ಯವ್ಯವಹಾರದೊಳಗೆ ಸಮಾಜಿಕ ಧನ್ವೆನಿಸುವಲ್ಲಿ ಶಾಂತತಾ ಭಂಗ ಮಾಡಲಿಕ್ಕೆ ಕಾರಣರಾದ ಉದ್ಧಟಸ್ವಭಾವದವರ ಬಹುದಿವಸವಾದರೂ ತಮ್ಮ ಉದ್ಧಟತನಕ ವರ್ತಣೂಕಿಯನ್ನು ತಿದ್ದದವರ ಹೆಸ ನ್ನು ಬಹುದಿವಸದ ಅನುಭವದ ಉದಾಹರಣೆಗಳು ಸಹಿತವಾದ ಸಂಗತಿಗಳ ಮೇಲಿಂ ಕಾರದವರಿಗೆ ತಿಳುಹಿಸಲಿಕ್ಕೆ ಸರಕಾರದ ಕಾಯ್ದೆಯು ಆಧಾರ ಇರುವದನ್ನು ಅವರಿಗೆ ಹಿಸಿ ಹೇಳಬೇಕು. ... ... ...

೮. ಮೇಲಿಂದಮೇಲೆ ವೀರಶೈವ ಧರ್ಮಾಚಾರ ವಿರುದ್ಧವಾದ ಅಥವ ಧ ನೀತಿಯ ವಿರುದ್ಧವಾದ, ಅಥವ ಅದರಲ್ಲಿ ಶಾಂತತಾಭಂಗ ಪಡಿಸುವ ಯಾವನಾದರೂ ಷ್ಯನು ನಿದಾನ ಮೂರಕ್ಕಿಂತ ಕಡಿಮೆಯಲ್ಲದಷ್ಟು ಉದಾಹರಣೆಗಳಿಂದ ಸಿದ್ಧ ಟ್ಟವರಿದ್ದರೆ ಅಂಥವರನ್ನು ಧರ್ಮದ ಸಂಘದಮುಂದೆ ಅಥವ ಸರಕಾರದಮುಂದೆ ವಿ ತರಬೇಕು. ... ... ... ...

೯. ಆಯಾಗ್ರಾಮದಲ್ಲಿ ಸ್ಥಾಪಿಸಲ್ಪಟ್ಟಿರುವ ಧಾರ್ಮಿಕ ವಿಷಯಸಹಿತವಾ ಗಳವ್ಯವಸ್ಥಾ, ಮತ್ತು ಶಿಕ್ಷಣವನ್ನು ನೋಡಿ ಶರಾಬುಕ್ಕಿನಲ್ಲಿ ಅಭಿಪ್ರಾಯ ಬರೆ ಹಾಗು ವಾರ್ಷಿಕಪರೀಕ್ಷೆ ತೆಗೆದುಕೊಳ್ಳಲಿಕ್ಕೆ ಗ್ರಾಮಕಮಿಟಿಯವರು ಅಶಕ್ಯರಿದ್ದಲ್ಲಿ ಕ್ಷೆಯನ್ನು ತಕ್ಕೊಂಡು ಶರಾಬುಕ್ಕಿನಲ್ಲಿ ರಿಝುಲ್ಟು (ಪರಿಣಾಮ) ಬರಿಯೋಣ.

೧೦. ಉಳಿದ ವೇಳೆಯಲ್ಲಿ ಹಳ್ಳೀ ಊರುಗಳ ಧಾರ್ಮಿಕಶಾಲೆಗಾಗಿ ಯಾಗ ಸಮಾಜದೊಳಗಿನ ಈಗಿನ ಜನರ ಅಜ್ಞಾನವನ್ನು ದೂರಮಾಡಲಿಕ್ಕಾಗಲಿ, ಪುಸ್ತಕಗ ಬರಿಯಬೇಕು. ... ... ... ...

× ಉಪದೇಶಕರು ಗ್ರಾಮಕಮಿಟಿಯವರಿಗೆ ನಿಯಮಿಸಿ ಕೊಡುವ ಅಥವ ಮಕಮಿಟಿಯವರು ಮಾಡಬೇಕಾಗಿರುವ ಕೆಲಸಗಳು ಕೆಳಗೆ ಬರೆದಪ್ರಕಾರ;—

೧. ಲಗತಿನ ಪತ್ರಿಕೆಯ ಪ್ರಕಾರ ಲಿಂಗಾಯತರ ತಪಶೀಲವಾರ ಜನಸ ನ್ನು ತೆಗೆಯೋಣ. ... ... ...

೨. ಮುಷ್ಟಿಫಂಡ ಅಥವ ಎರಡನೇ ತರದ ಗ್ರಾಮದ ಫಂಡನ್ನು ಒತ್ತಟ್ಟಿಗೆ ಕೂಡಿಸಿ, ಶಾಲಾಧ್ಯಾಪಕನಿಗೆ ಕೊಡುವ ವ್ಯವಸ್ಥೆಯನ್ನು ಮಾಡೋಣ. ... *

೩. ಸದರಿ ಫಂಡಿನ ಸಹಾಯದಿಂದ ಅದೇ ಊರಲ್ಲಿಯೇ ಧಾರ್ಮಿಕ ವಿಷಯ ಸಹಿತ ಕಲಿಸುವ ಶಾಲೆಯನ್ನು ಸ್ಥಾಪಿಸೋಣ. ... ... *

೪. ಪಂಚಾಚಾರ್ಯರ ಮಕ್ಕಳು, ಮತ್ತು ಭಕ್ತರಮಕ್ಕಳು ಆ ಶಾಲೆಗೆ ಹೋಗದಿದ್ದರೆ ಅದರ ಕಾರಣಗಳನ್ನು ತಿಳುಕೊಂಡು ಅದಕ್ಕೆ ಅದಷ್ಟು ತಕ್ಕ ಸಹಾಯ ಕೊಟ್ಟು ಹೋಗುವಂತೆ ಮಾಡೋಣ. ... ... ... *

೫. ಸಶಕ್ತ ಅಯೋಗ್ಯರ ಮತ್ತು ಬಾಲಕರ ಭಿಕ್ಷುಕತನವನ್ನು ನಿಲ್ಲಿಸುವದರ ದಸಿಯಿಂದ ಅಂಥ ಭಿಕ್ಷುಕರಿಗೂ, ಅಂಥವರಿಗೆ ಭಿಕ್ಷೆಕೊಡುವವರಿಗೂ, ಅದರ ಮುಂದಿನ ದುಷ್ಟಪರಿಣಾಮವನ್ನು ತಿಳುಹಿಸಿ, ಹೇಳಿದ ಉಪದೇಶಕರ ಬೋಧದ ಆಚರಣೆಗೆ ಜಾಗ್ರತೆ ಕೊಡೋಣ, ಹಾಗು ಆಯಾ ಊರಲ್ಲಿ ಹಕ್ಕಿನಿಂದ ಭಿಕ್ಷೆಬೇಡುವವರ ಈಗಿನ ಸಮಾಜ ಸುಧಾರಣೆಯ ಸಹಾಯದ ಕರ್ತವ್ಯಗಳನ್ನು ಜಾಗ್ರತೆ ಗೊಳಿಸೋಣ. ... *

೬. ಅಷ್ಟಾವರ್ಣ ಯುಕ್ತರಾದ ಎಲ್ಲ ಬಗೆಯುವರೂ ಏಕಬಳಿಕಿ ಬೋಜನ ಮಾಡಲಿಕ್ಕೆ ಶಾಸ್ತ್ರಸಮ್ಮತವೂ, ಈಗಿನ ಧರ್ಮಾಧಿಕಾರಿಗಳ ಸಮ್ಮತವೂ, ಇರುವದೆಂದು ಬೋಧಕರು ಹೇಳಿದ್ದನ್ನು ಆದಷ್ಟುಹೆಚ್ಚು ಆಸಕ್ತಿಯಿಂದ ಆಚಾರದಲ್ಲಿ ತರೋಣ. *

೭. ತಾಲೂಕ ಅಥವ ಜಿಲ್ಲಾ ಕಮಿಟಿಯವರು, ಅಥವ ಉಪದೇಶಕರು, ಏನಾದರೂ ಸಹಾಯ ಬೇಡಿದರೆ ಅವರಿಗೆ ತಕ್ಕಸಹಾಯ ಕೊಡೋಣ. ... *

೮. ಪ್ರತಿನಿಯಮಿತ ವಾರದ ದಿವಸ ಸಭೆಗೂಡಿ, ಸಮಾಜಸುಧಾರಣೆಯ ಸಂಬಂಧದ ಮತ್ತು ಹೆಚ್ಚಿನ ವಿಷಯಗಳನ್ನು ಮಾಹೀತಿ ಮಾಡಿಕೊಳ್ಳುವದರ ಸಂಬಂಧದ ಕೆಲಸ ಮಾಡಬೇಕು. ... ... ... ... *

೯. ಲಿಂಗಧರಿಸದ ಮುಂತಾದ ಧರ್ಮವಿರುದ್ಧ ಆಚಾರ ಮಾಡುತ್ತಿದ್ದವರನ್ನು ಆರಿಸಿ, ಯಾದಿಯನ್ನು ಮಾಡಿ, ವಾರದ ಸಭೆಯಲ್ಲಿ ಅವರನ್ನು ಕರಿಸಿ, ಸದ್ವರ್ತನಕ್ಕೆ ಉಪದೇಶಿಸೋಣ. ... ... ... *

೧೦. ದರ ತಿಂಗಳಿಗೊಮ್ಮೆ ಸದರೀ ಧರ್ಮಾರ್ಥಶಾಲೆಗೆ ಹೋಗಿ ಅದರ ವ್ಯವಸ್ಥೆಯನ್ನೂ, ಶಿಕ್ಷಣವನ್ನೂ, ನೋಡಿ ತಕ್ಕಸಹಾಯ ಮಾಡುತ್ತಿರೋಣ, ಹಾಗು ಇಂಥ ಶಾಲೆಯ ವಾರ್ಷಿಕ ಪರೀಕ್ಷೆಯನ್ನು ಒಬ್ಬ ಹೆಚ್ಚು ಸುಧಾರಿಸಿದ ಗೃಹಸ್ಥನಿಂದ ಅಥವ ಧರ್ಮಬೋಧಕರಿಂದ ಮಾಡಿಸಿ ಆಯಾ ಇಯತ್ತೆಯ ಹುಡುಗರನ್ನು ಮುಂದೆಹಾಕಲಿಕ್ಕೆ ಅಪ್ಪಣೆ ಕೊಡೋಣ, ಮತ್ತು ಶರಾಬುಕ್ಕಿನಲ್ಲಿ ಆ ಶಾಲೆಯ ಸ್ಥಿತಿಯಬಗ್ಗೆ ಶರಾಬರಿಸೋಣ.

## ೪. ಉಪದೇಶಕರ ಪಗಾರ ಮುಂತಾದ ಕಿರಕೋಳ ನಿಯಮಗಳು.

೧. ಪರ ತಿಂಗಳಿಗೆ ಕನಿಷ್ಟ ಇಪ್ಪತ್ತಕ್ಕಿಂತ ಕಡಿಮೆಯುಲ್ಲದಷ್ಟು ನಿಯ... ಗಾರವೂ ೫ ರೂಪಾಯಿ ಕುದುರೆಯ ಭತ್ತೆಯೂ ಇರಬೇಕು. ...

೨. ಪ್ರತಿ ತಿಂಗಳಿಗೊಮ್ಮೆ ನಿಯಮಿತ ಅಧಿಕಾರಿಗಳಿಂದ ಸದರಿ ಪಗಾರವು ... ಸಲ್ಪಡಬೇಕು. ... ... ... ...

೩. ವಿಶೇಷ ಕಾರಣವಿಲ್ಲದೆ ತಮ್ಮ ನಿಯಮಿತ ಅಧಿಕಾರಿಗಳ ಲೇಖೀ ಮ... ರಿಯ ಹೊರ್ತು ರಜೆಯುಮೇಲೆ ಹೋಗಬಾರದು. ಸಮೀಪದ ಆಪ್ತರು ಸತ್ತರೆ ಮ... ವಿಶೇಷಕಾರಣಗಳಲ್ಲಿ ೭ ದಿವಸಕ್ಕಿಂತ ಕಡಿಮೆಯು ದಿವಸಗಳವರೆಗೆ ರಿಪೋರ್ಟುಮಾಡಿ... ಬಹುದು. ... ... ... ...

೪. ಉಪದೇಶಕರ ಕೆಲಸದ ಮೇಲ್ತರದಸ್ಥಿತಿಯುಬಗ್ಗೆ ಆಗಾಗ್ಗೆ ತಕ್ಕ ಬ... ತಕ್ಕ ಬಹುಮಾನವೂ ಕೊಡಲ್ಪಡುವದಲ್ಲದೆ ಇವರಿಗೆ ಕೆಲಸದಿಂದ ಮುಕ್ತರಾಗುವಾ... ಣವಾಗುವವರಿಗೆ ಯಾವಪ್ರಕಾರದ ತಲಬೂ ಕೊಡಲ್ಪಡುವದಿಲ್ಲ. ...

೫. ಯಾರಾದರೂ ಪಾರಮಾರ್ಥಬುದ್ಧಿಯಿಂದ ಯಾವದಾದರೂ ನಿಯ... ರವಿಲ್ಲದೆ ದೇಹರಕ್ಷಣದ ಪೂರ್ತಿಗೆ ಮಾತ್ರ ಸಮಾಜದ ಹಣವನ್ನು ಅಥವ ಅನ್ನ... ಳನ್ನು ತಕೊಂಡು ಜೀವಿಸಿ, ಈ ಉಪದೇಶದ ಕೆಲಸವನ್ನು ಮಾಡಿದರೆ ಅಂಥವ... ರು ಕೆಲಸಬಿಡುವಾಗ ಅವರ ಇಂದ್ರಿಯಾವಯುವಗಳು ಇನ್ನೂ ಕೆಲಸಮಾಡುವ... ಲ್ಲಿದ್ದರೆ (ಅವರು ಇಚ್ಛಿಸಿದರೆ) ತಕ್ಕಷ್ಟು ಹಣವನ್ನು ಕೊಡಲ್ಪಡುವದು. ಆಸ್ಥಿ... ದಿದ್ದರೆ ಅವರ ಜನ್ಮಾಂತ್ಯದವರಿಗೂ ಪೋಷಣೆಯು ಕೊಡಲ್ಪಡುವದು. ...

೬. ಇಂಥ ಉಪದೇಶಕರು ವಿರಕ್ತರಿದ್ದರೆ ಅಂಥವರಿಗೆ ಯಾವಪ್ರಕಾರದ... ಸಿಗಲಾರದು. ಅವರಿಗೆ ಬಹುಮಾನದ ಬಿರುದುಗಳು ಮಾತ್ರ ಸಮಾಜದಿಂದ ಕೊ... ವವು. (ಇದು ಸ್ವಲ್ಪವಿಚಾರ.) ... ... ...

೭. ಉಪದೇಶಕರ ಆಯಾವರ್ಷದ ಕೆಲಸದ ಸ್ಥಿತಿಯುನ್ನೂ, ಅವರ ಪ... ರಿಪೋರ್ಟನ್ನೂ, ಅವರಸಂಬಂಧವಾದ ಬೇರೆ ಯಾವಕೆಲಸಗಳನ್ನಾದರೂ ನೋಡತಕ್ಕ... ಟಿಯು ಅವರ ನಿಯಮಿತ ಅಧಿಕಾರಿಯ ಸಮ್ಮುಖದಲ್ಲಿ ಅವರಿಗಿಂತಲೂ ಮೇಲ್ಪಟ್ಟವ... ತಿಳಿದವರ ಅಧ್ಯಕ್ಷತೆಯ ಕೆಳಗೆ ಪ್ರತಿವರ್ಷ ನಿಯಮಿತ ಮುದ್ದತಿಗೆ ಮಾಡಲ್ಪಡ... ಕಮಿಟಿಯು ಕೂಡುವ ವ್ಯವಸ್ಥೆಯನ್ನು ಆಯಾ ಉಪದೇಶಕರ ನಿಯಮಿತ ಅಧಿಕಾ... ಮಾಡಬೇಕು. ... ... ... ...

ಈ ಕಮಿಟಿಯು ಮುಂದೆ ಬಂದ ಎಲ್ಲ ಸಂಗತಿಗಳಲ್ಲಿ ಯಾವದಾದರೂ ವಿ... ಗತಿಯು ಮುಂದೆ ಬಂದು ಅದರ ಸಂಬಂಧವಾದ ಸಾಧಾಸಾಧ ವಿಚಾರಮಾಡುವದು.

ಅದರಸಂಬಂಧ ಬೇರೆ ವೇಳೆಯನ್ನು ನಿಯಮಿಸಿ, ಮತ್ತೊಮ್ಮೆ ಕಮಿಟಿ ಕೂಡಿಸಿ, ಠರಾಯಿಸಬೇಕು. ... ... ... ... ... *

## ೪ ಸಮಾಜ ಸುಧಾರಣೆಯನ್ನು ಆಸಕ್ತಿಯಿಂದ ಮಾಡುವವರಿಗೆ ಬಹುಮಾನ ಕೊಡೋಣ.

ಇದರಲ್ಲಿ ಬಹುಮಾನ ಹೊಂದತಕ್ಕ ಸಮಾಜ ಶೇವಾಮಾಡುವ ವಿದ್ವಾನರ ವರ್ಗಗಳನ್ನೂ, ಬಹುಮಾನದ ಪರಿಮಿತಿಗಳನ್ನೂ, ಬಹುಮಾನ ಕೊಡತಕ್ಕ ಸ್ಥಳ, ಕಾಲ, ರೀತಿಗಳನ್ನೂ ನಿರ್ಣಯಿಸಬೇಕಾಗುತ್ತದೆ. ... ... *

## ವಿದ್ವಾನರ ವರ್ಗಗಳು.

ಇದರಲ್ಲಿ ಪ್ರತ್ಯಕ್ಷ, ಅಪ್ರತ್ಯಕ್ಷ ಕೆಲಸ ಮಾಡುವವರೆಂದು ಎರಡು ಮುಖ್ಯಭಾಗಗಳು ಹೊರಡುತ್ತವೆ. ಹ್ಯಾಗೆಂದರೆ;—ಪ್ರತ್ಯಕ್ಷ ಕೆಲಸಮಾಡುವವರು ೧ ಸಮಾಜ ಸುಧಾರಣಾ ಸಂಬಂಧವಾದ ಗ್ರಂಥಗಳನ್ನು ಬರೆಯುವವರು. ೨ ಧಾರ್ಮಿಕ ವಿಷಯ ಸಹಿತವಾದ ಶಾಲೆಗಳನ್ನು ಸ್ಥಾಪಿಸುವವರು. ೩ ಉಪದೇಶಕರು. ಅಪ್ರತ್ಯಕ್ಷ ಕೆಲಸಮಾಡುವವರು ೧ ಆಜೀವ ಸಭಾಸದರು. ೨ ಮಹಾಸಭೆಗಳಿಗೆ ಆಧಾರಭೂತರಾದ ಆಯಾಮಹಾಸಭೆಯ ಊರ ಪ್ರಮುಖರು. ೩ ಮಹಾಸಭೆ ಮುಂತಾದ ಸಭೆಗಳಲ್ಲಿ ಉಪನ್ಯಾಸಮಾಡಿ ತಮ್ಮ ವಿಚಾರಗಳನ್ನು ಆಚರಣೆಗೆ ಕೊಡುವವರು. ... ... ... . *

ಮುಖ್ಯವಾಗಿ ಇವರೇ ಮುಂತಾದ ಈಗಿನ ಸಮಾಜಶೇವೆಗೆ ಅನುಕೂಲಾಗಿರುವ ವಿದ್ವಾಂಸರೂ ಧನಿಕರೂ ಆಗಿರುತ್ತಾರೆ. ... ... *

## ಬಹುಮಾನದ ಪ್ರಕಾರಗಳು.

ಬಹುಮಾನ ಕೊಡುವದರಲ್ಲಿ ದ್ರವ್ಯರೂಪದ ಬಹುಮಾನವೆಂತಲೂ, ಶಾಬ್ದಿಕ ಬಹುಮಾನವೆಂತಲೂ ಎರಡು ಪ್ರಕಾರಗಳಿರುತ್ತವೆ. ದ್ರವ್ಯರೂಪದ ಬಹುಮಾನವೆಂದರೆ ಪ್ರತ್ಯಕ್ಷವಾದ ಚಲನೀ ನಾಣ್ಯಗಳನ್ನೂ, ಬಂಗಾರದ ಪದಕಮುಂತಾದ ಕಿಮ್ಮತ್ವಾನ್ ಜಿನಸುಗಳನ್ನೂ ಮುದ್ದಾಂ ಕೊಡೋಣ. ಶಾಬ್ದಿಕ ಬಹುಮಾನವೆಂದರೆ ರಾವಸಾಹೇಬ, ರಾವಬಹದ್ದೂರ, ರಾಜೇಶ್ರೀ ಮುಂತಾದ ಬಿರುದುಗಳೆಂದು ಅನ್ನಿಸಿಕೊಳ್ಳುವ ಬಕ್ಷಣಿಕೆಗಳ ಶಬ್ದಗಳನ್ನು ಮುದ್ದಾಂ ಕೊಡೋಣ. ... ... ... *

## ಬಹುಮಾನದ ಪರಿಮಿತಿ.

ಮೊದಲಿನ ಪ್ರತ್ಯಕ್ಷಕೆಲಸ ಮಾಡುವವರಿಗೆ ಮಾತ್ರ ದ್ರವ್ಯರೂಪದ ಮತ್ತು ಶಾಬ್ದಿಕರೂಪದ ಎರಡುಪ್ರಕಾರದ ಬಹುಮಾನಗಳನ್ನು ಕೊಡಬೇಕು. ೨ನೇ ತರದ ಅಪ್ರ

ತ್ಯಷ್ಟಕೆಲಸ ಮಾಡುವವರಿಗೆ ಕೇವಲ ಗೌರವಿಕ, ಶಾಬ್ದಿಕ, ಬಹುಮಾನಗಳನ್ನು ಬೇಕು. ದ್ರವ್ಯರೂಪದ ಬಹುಮಾನವನ್ನು ಅವರವರ ಕೆಲಸಯೋಗ್ಯತೆ ಮುಂ ಳನ್ನೂ ಹಣದ ಅನುಕೂಲತೆಯನ್ನೂ ನೋಡಿ ಗೊತ್ತುಪಡಿಸಬೇಕು. ಶಾಬ್ದಿಕ ಮಾನಗಳನ್ನು ಮಾತ್ರ ಅವರವರ ಕೆಲಸಗಳ ಹೆಸರಿನಿಂದಲೇ ಗರ್ಭೀಕರಿಸಿದ ಶಬ್ದಗಳಿಂದಲೇ ಕೊಡುವದು. ಈಗಿನ ಕಾಲಕ್ಕೆ ಹೆಚ್ಚು ಉತ್ತೇಜನ ಕೊಡತಕ್ಕ ವಾಗಿ ತೋರುತ್ತದೆ. ಹ್ಯಾಗಂದರೆ;—ವೀರಶೈವ ಧಾರ್ಮಿಕ, ಔದ್ಯೋಗಿಕ ಗ್ರಂಥಗ ಬರಿಯುವವರಿಗೆ ವೀರಶೈವ ಗ್ರಂಥೋದ್ಧಾರಕರೆಂತಲೂ, ವೀರಶೈವ ಧಾರ್ಮಿಕವಿಷಯ ವಾದ ಶಾಲೆಗಳನ್ನು ಸ್ಥಾಪಿಸಿದವರಿಗೆ ವೀರಶೈವಾಧ್ಯಯನೋದ್ಧಾರಕರೆಂತಲೂ ಉ ಕರಿಗೆ ವೀರಶೈವ ಧರ್ಮಪ್ರಸಾರೋದ್ಧಾರಕರೆಂತಲೂ, ಆಜೀವ ಸಭಾಸದರಿಗೆ ವೀ ಧರ್ಮೈಕ್ಯ ಶಿರೋಮಣಿಗಳೆಂತಲೂ, ಮಹಾಸಭೆಗಳನ್ನು ಸೇರಿಸಲಿಕ್ಕೆ ಆಧಾರ ಳಾದ ಆಯಾಗ್ರಾಮದ ಪ್ರಮುಖರಿಗೆ ವೀರಶೈವ ಧರ್ಮೋದ್ಧಾರಕ ಶಿರೋಮಣಿಗಳೆ ಕೇವಲ ಪದೇಪದೇ ಉಪನ್ಯಾಸಕರ್ತರಿಗೆ ವೀರಶೈವಾಕಾಶವಾಣಿ, ಅಥವ ವೀರಶೈವ ಸ್ಪತಿ, ಎಂತಲೂ ಹೀಗೆ ಅವರವರ ಮೇಲ್ತರದ ಕರ್ತವ್ಯಕರ್ಮಗಳನ್ನೇ ಸೂಚಿಸು ಷ್ಟಶಬ್ದಗಳನ್ನು ಕೊಡಬೇಕು. ... ... ...

## ಬಹುಮಾನ ಕೊಡತಕ್ಕ ಸ್ಥಳ.

ಬಹುಮಾನವನ್ನು ಕೊಡತಕ್ಕ ನಿಯಮಿತಸ್ಥಳವು ಆ ಬಹುಮಾನ ಹೊ ವರು ಬಹಳವಾಗಿ ಪರಿಚಯ ಉಳ್ಳವರಾಗಬೇಕು. ಯಾಕಂದರೆ;—ಈ ಬಹುಮಾ ವದರಲ್ಲಿ ಅವನನ್ನು ಸಂತೋಷಪಡಿಸುವ ಉದ್ದೇಶ ವಿರುವದಲ್ಲದೆ ಅವನಂತೆಯೇ ಸ ಶೇವೆಮಾಡಲಿಕ್ಕೆ ಎರಡನೇಯವರಿಗೆ ಸಹ ಪ್ರೋತ್ಸಾಹಿಸುವ ಉದ್ದೇಶ ವಿರುತ್ತದೆ. ಮಾನ ಹೊಂದತಕ್ಕವನ ಕಡಿಮೇತರದಸ್ಥಿತಿಯನ್ನು ಬಹಳವಾಗಿ ನೋಡಿದ ಜನ ಯೋ ಆ ಬಹುಮಾನವು ಕೊಡಲ್ಪಟ್ಟರೆ ಅವನಿಗೆ ಅಪರಿಚಯುದವರ ಜಾಗಾದಲ್ಲಿ ಕ್ಕಿಂತ ಬಹಳ ಹೆಚ್ಚು ಸಂತೋಷವಾಗುವದಲ್ಲದೆ, ಎರಡನೇ ಯವರಿಗೂ ಸಹ ಹೆಚ್ಚು ಪ್ರೋತ್ಸಾಹಬರುತ್ತದೆ. ಧಾರವಾಡ ಪ್ರಾಂತದಲ್ಲಿ ಸಮಾಜಶೇವೆಯನ್ನು ರಿಂದಾಗಲಿ, ಅಲ್ಲಿ ಬಹುದಿವಸ ಸಂಚರಿಸಿದ್ದದರಿಂದಾಗಲಿ ಅಲ್ಲಿಯವರಿಗೆ ವಿಶೇಷ ಪರಿಚ ನಾದ ಒಬ್ಬನನ್ನು ಮೈಸೂರಿಗೆ ವೈದು, ಬಹುಮಾನವನ್ನು ಮಾಡಿದರೆ ಅದರಿಂದ ಫಲದಾಯಕ ಪರಿಣಾಮವ್ರೂ ಆಗಲಾರದು. ಆದ್ದರಿಂದ ಅವರಿಗೆ ಬಹುಮಾನ ಅವರ ವಿಶೇಷ ಪರಿಚಯುದ್ದೇ ಆಗಬೇಕು. ... ...

## ಬಹುಮಾನ ಕೊಡುವ ಕಾಲ.

ಸಮಾಜ ಹಿತಕಾರ್ಯಗಳನ್ನು ಮಾಡಲಿಕ್ಕೆ ಆರಂಭಿಸಿದ ಸ್ವಲ್ಪ ದಿವಸಗಳಲ್ಲೇ ಅಥವ ಬಹಳ ವರ್ಷಗಳಮೇಲೆ ಗೌರವಿಸುವ ಉದ್ದೇಶವನ್ನು ಇಡುವದು ನಿರರ್ಥಕವಾಗದ್ದು. ಹ್ಯಾಗಂದರೆ;—ಒಂದು ಊರಿಗೆ ಮುಟ್ಟಬೇಕೆಂದು ಹೊರಟವನು ಹೊರಟ ಊರ ಹತ್ತರವೇ ವಿಶ್ರಮಿಸುವದೂ, ಮುಟ್ಟುವ ಊರಹತ್ತರ ವಿಶ್ರಮಿಸುವದೂ, ನಿರರ್ಥಕವಿರುವಂತೆ ಬಹುಮಾನವನ್ನು ಹೊಂದತಕ್ಕವರು ಒಂದುಪ್ರಕಾರದ ವಿಶ್ರಾಂತಿಗೊಂಡು ಅವರಿಗೆ ಮೊದಲಿನ ಶ್ರಮದ ದಣುವು ಹೋಗಿ, ಹೊಸಶಕ್ತಿಯು ಒದಗಲೆಂದು ಬಹುಮಾನ ಕೊಡುವದರಲ್ಲಿ ಒಂದೇ ಉದ್ದೇಶವಿರುತ್ತದೆ. ಅದರಿಂದ ಅವರು ನಿದಾನ ೮—೧೦ ವರ್ಷವಾದರೂ ಈಗ ಹೊಸದಿವಸ ಇದ್ದದರಿಂದ ನಿದಾನ ೩—೪ ವರ್ಷವಾದರೂ ಆಸಕ್ತಿಯಿಂದ ಕೆಲಸವನ್ನು ಮಾಡಿರಬೇಕು. ಇಂಥವರನ್ನು ಆರಿಸಿ ಬಹುಮಾನವನ್ನು ಕೊಡಬೇಕು.

## ಬಹುಮಾನ ಕೊಡುವ ರೀತಿ.

ಯಾವಪ್ರಕಾರದ ಬಹುಮಾನವನ್ನೇ ಕೊಡಲಿ, ಮೊದಲು ಇಂಥವರಿಗೆ ಇಂಥ ದಿವಸ ಇಂಥಸ್ಥಳದಲ್ಲಿ ಬಹುಮಾನ ಕೊಡುವ ಸಮಾರಂಭವು ನೆರವೇರುವದೆಂದು ಜಾಹೀರ ಮಾಡಬೇಕು. ಅವರ ಕೆಲಸದ ಮತ್ತು ಸ್ವಾಭಾವದ ಸ್ಥಿತಿಯನ್ನು ಬಲ್ಲವರಿಂದ ಮಾನಪತ್ರವನ್ನು ಬರಿಸಿ, ನಿಯಮಿತ ದಿವಸ ನಿಯಮಿತಸ್ಥಳದಲ್ಲಿ ಕಮಿಟಿಕೂಡಿಸಿ, ಆ ಕಮಿಟಿಯ ಅಧ್ಯಕ್ಷರು ಮೊದಲು ಅವರಅಭಿನಂದನ ಪರಭಾಷಣಮಾಡಿ ಆಮೇಲೆ ಆಮಾನಪತ್ರವನ್ನು ಓದಿ, ತರುವಾಯ ಅವರಿಗೆ ಕೊಡತಕ್ಕ ವಸ್ತುರೂಪದ ಅಥವ ಶಾಬ್ದಿಕರೂಪದ (ಹ್ಯಾಗೆ ಇದ್ದೀತು ಹಾಗೆ) ಬಹುಮಾನವನ್ನು ಕೊಟ್ಟು, ಶಾಬ್ದಿಕರೂಪದ ಬಹುಮಾನವಿದ್ದರೆ ಅಧ್ಯಕ್ಷರು ಸಹಿತ ಯಾವತ್ತರೂ ಏಕತ್ರವಾಗಿ ಆ ಬಹುಮಾನದ ಶಬ್ದದಿಂದಲೇ ಜಯಘೋಷವನ್ನು ಮಾಡಬೇಕು. ಅನಂತರ ಇನ್ನುಮುಂದೆ ಅವರಸಂಗಡ ಪತ್ರವ್ಯವಹಾರದ ಬಕ್ಕಣಿಕೆಯನ್ನು ಅದೇ ಬಹುಮಾನದ ಶಬ್ದದಿಂದಲೇ ಬರಿಯಬೇಕೆಂದು ಅಧ್ಯಕ್ಷರು ಎಲ್ಲಸಭಾಸದರಿಗೆ ಸೂಚಿಸಬೇಕು. ತರುವಾಯ ನಿಯಮದಂತೆ ಹಾರ, ತುರಾಯಿ, ಅತ್ತರ ವಗೈರೆಗಳಿಂದ ಸತ್ಕರಿಸಿ, ಸಭೆಯ ಕೆಲಸವು ಪೂರ್ಣವಾಗಬೇಕು. ... ... *

ಶರಭಪ್ಪ, ವೀರಪ್ಪ, ಮೆಣಶಿನಕಾಯಿ
ಧಾರ್ಮಿಕ ಮತ್ತು ಔದ್ಯೋಗ ಶಾಸ್ತ್ರಜ್ಞಾನವರ್ಧಕ
ಶಾಲಾಸ್ಥಾಪಕ ಬಾಗಲಕೋಟೆ.

## ಇದೇ ವಿಷಯದಮೇಲೆ ಮ॥ರಾ॥ರಾ॥ ಗಂಗಾಧರಪ್ಪ, ಭೋಜಪ್ಪ, ರಬಕವಿ ಇವರು ಮಾಡಿದ ಭಾಷಣವು.

ಸಮಾಜ ವೆಂಬ ಶಬ್ದವು ಸಣ್ಣದಿದ್ದಾಗ್ಯೂ ಅದರ ವ್ಯಾಪಕತೆಯುಳ್ಳ ಅರ್ಥ ಬಹಳ ದೊಡ್ಡದಾಗಿದೆ. ಹೇಗಂದರೆ;—ಸಮಾಜವು ಉಂಟಾಗಲಿಕ್ಕೆ ಕಾರಣ ರಾದ ಮ ಪ್ರಾಣಿಗಳಲ್ಲಿ ಸ್ತ್ರೀ, ಪುರುಷ, ವ್ಯಕ್ತಿಗಳು ತಮ್ಮಿಷ್ಟಕ್ಕೆ ವ್ಯಕ್ತಿ ವಿಷಯಕ ಸುಖದುಃ ವಿಚಾರ ಮಾಡಿಕೊಳ್ಳುವಂತೆ, ಆ ವ್ಯಕ್ತಿಗಳಲ್ಲಿ ವಿವಾಹ ಪದ್ಧತಿಯಿಂದ ಉಂಟಾಗಿರುವ ಟುಂಬಗಳು ಕೂಡ ಕೌಟಂಬಿಕ ವಿಷಯದ ಸುಖದುಃಖಗಳ ವಿಚಾರವನ್ನೇ ಮಾಡುತ್ತಿ ವದರಿಂದ ವ್ಯಕ್ತಿ, ಇಲ್ಲವೆ ಕುಟುಂಬಗಳಿಗೆ ಸಮಾಜ ವೆಂದೆನ್ನಲಿಕ್ಕೆ ಬರುವದಿಲ್ಲ. ಅ ಅನೇಕ ಕುಟುಂಬಗಳು ಕೂಡಿದ ಸಮೂಹಕ್ಕೆ ಸಮಾಜ ವೆಂತಲೂ ಆ ಸಮಾಜಕ್ಕೆ ಸೇ ಎಲ್ಲ ಜನರಲ್ಲಿಯೂ ಪರಸ್ಪರರಲ್ಲಿ ವ್ಯಾಪಾರುದ್ಯೋಗಗಳ ಮೂಲಕವಾಗಿ ಸುಖದುಃ ನಿಕಟ ಸಂಬಂಧವು ಉಂಟಾಗುತ್ತಿರುವದರಿಂದ ಆ ಎಲ್ಲ ಜನರ ಸುಖದುಃಖಗಳ ವಿಚಾ ನ್ನು ಒಕ್ಕಟ್ಟನಿಂದ ಒಂದೇಮಾರ್ಗವಾಗಿ ಮಾಡಿ ಎಲ್ಲರಿಗೂ ಸರಿಯಾಗಿ ರಾಜಕೀಯ ರ್ಮಿಕ, ಮತ್ತು ಔದ್ಯೋಗಿಕ ಮುಂತಾದ ಸುಧಾರಣೆಗಳಿಂದ ಹಿತವನ್ನುಂಟು ಮಾ ಪ್ರಯತ್ನಗಳಿಗೆ ಸಮಾಜ ಸುಧಾರಣೆ ಎಂತಲೂ ಹೇಳಬಹುದು. ಈ ಬಗೆಯ ಸುಧಾ ಯು ನಮ್ಮ ಹಿಂದೂದೇಶದಲ್ಲಿ ಆಗಲಿಕ್ಕೆ ಇಲ್ಲಿ ಮತಭೇದದಿಂದಲೂ ಧರ್ಮ ಭೇದದಿ ಜಾತಿಭೇದದಿಂದಲೂ. ಅನೇಕ ಪಂಗಡಗಳೂ ಅವುಗಳಲ್ಲಿ ಅನೇಕ ಒಳಭೇದಗಳೂ ವದರಿಂದ ತೊಂದರೆ ಯಾಗಿದೆ ಆ ಹುದರಿಂದ ಬೇರೆಬೇರೆ ಪಂಗಡದವರು ಅಂದರೆ ಜೈನ ಜ, ಬ್ರಾಹ್ಮಣ ಸಮಾಜ, ಮರಾಠಾ ಸಮಾಜ ವೊದಲಾದವರು ತಮ್ಮ ತಮ್ಮ ಸಮಾ ಳೇ ಸಮಾಜಗಳೆಂದು ತಿಳಿದು ತಮ್ಮಲ್ಲಿ ಸುಧಾರಣೆಗಳನ್ನು ಮಾಡುವ ಪ್ರಯತ್ನಗ ಮಾಡುತ್ತಿರುವಂತೆಯೇ ನಾವೂ ನಮ್ಮ ಸಮಾಜದಲ್ಲಿ ಸುಧಾರಣೆಗಳನ್ನು ಮಾಡಬೇಕ

ಸಮಾಜ ಸುಧಾರಣೆಗೆ ಸೇರ್ಪಡೆಯಾದ ರಾಜಕೀಯ, ಧಾರ್ಮಿಕ, ಔದ್ಯೋ ಮುಂತಾದ ಸುಧಾರಣೆಗಳ ಮುಖ್ಯ ಸ್ವರೂಪಗಳನ್ನೂ ಗೊತ್ತು ಮಾಡಿ ಕೊಂಡರೆ ಳಿಗೆ ಯಾವ್ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬುದು ಚೆನ್ನಾಗಿ ಗೊತ್ತಾಗುತ್ತಿ ದರಿಂದ ಆ ಸುಧಾರಣೆಗಳನ್ನು ವೊದಲು, ನೋಡುವಾ. ... ...

೧—ರಾಜಕೀಯ ಸುಧಾರಣೆ ಎಂದರೆ, ಪ್ರತಿಯೊಂದು ವ್ಯಕ್ತಿಯು ಶಿಕ್ಷಣ ದಿಂದ ತನ್ನ ಹಕ್ಕನ್ನು ಗೊತ್ತು ಮಾಡಿಕೊಂಡು ಆ ಹಕ್ಕಿನ ಅಮಲವು ರಾಜ್ಯಕಾರ ಲ್ಲಿ ನೆಲೆಗೊಳ್ಳುವಂತೆ ಪ್ರಯತ್ನ ಮಾಡಿ ರಾಜ್ಯಕಾರಭಾರದ ಸೂತ್ರಗಳನ್ನು ಸಮಾಜ ಕಾರಕ್ಕೆ ಬಳಸಿ ಸಮಾಜ ಸುಖಕ್ಕೂ, ವ್ಯಕ್ತಿ ಸುಖಕ್ಕೂ, ಬಾಧೆಯಾಗ ಉಂಟಾ

ವ್ಯವಸ್ಥೆಮಾಡಿ ರಾಷ್ಟ್ರೋನ್ನತಿಯನ್ನು ಮಾಡುವದಕ್ಕೆ ರಾಜಕೀಯ ಸುಧಾರಣೆ ಎಂದು ಅನ್ನಬಹುದು. ... ... ... ... *

೨. ಧಾರ್ಮಿಕ ಸುಧಾರಣೆ ಎಂದರೆ ನೀತಿಗೆ ಬಲಕೊಡುವದಕ್ಕಾಗಿಯೂ, ಪ್ರಾಣಿಮಾತ್ರ ದೊಳಗಿನ ಅಮರ ಅಂಶದ ಅತ್ಯಾಂತಿಕವಾದ ಶ್ರೇಯಸ್ಸನ್ನು ಸಾಧಿಸುವದಕ್ಕಾಗಿಯೂ, ಇಡತಕ್ಕ ವರ್ತನದ ಧೋರಣೆಗೆ ಧರ್ಮವೆಂತಲೂ, ಇಹದಲ್ಲಿ ವ್ಯಕ್ತಿಗಾಗಲೀ, ಕುಟುಂಬಕ್ಕಾಗಲೀ, ಸಮಾಜಕ್ಕಾಗಲೀ, ರಾಷ್ಟ್ರಕ್ಕಾಗಲೀ ಇಲ್ಲವೆ ಇಡೀ ಪೃಥ್ವಿಗೇ ಆಗಲೀ, ಕಲ್ಯಾಣವನ್ನುಂಟು ಮಾಡುವದಕ್ಕಾಗಿ ಇಡತಕ್ಕಂಥಾ ಆಚರಣೆಯಧೋರಣೆಗೆ ನೀತಿ ಎಂತಲೂ, ಹೇಳಬಹುದು. ಆದುದರಿಂದ ಐಹಿಕಸುಖ ಸಾಧ್ಯರ್ಥವಾಗಿ ನೀತಿ ತತ್ವಗಳನ್ನೂ ಮತ್ತು ಪಾರಮಾರ್ಥಿಕ ಸುಖವಾದ ಸ್ಥಿರವಾಗಿಯೂ, ದುಃಖದ ಲೇಶಾಂಸವೂ ಇಲ್ಲದಂಥಾದ್ದಾಗಿಯೂ ಇರುವ ಮೋಕ್ಷಸುಖವನ್ನು ಪಡೆಯುವದಕ್ಕಾಗಿ ಜ್ಞಾನತತ್ವಗಳನ್ನೂ ಎಲ್ಲರಿಗೂ ತಿಳಿಸುವ ಪ್ರಯತ್ನಗಳಿಗೆ ಧಾರ್ಮಿಕ ಸುಧಾರಣೆ ಎಂದು ಹೇಳಬಹುದು. ... *

೩. ಔದ್ಯೋಗಿಕ ಸುಧಾರಣೆ ಎಂದರೆ;—ವ್ಯಾಪಾರ ಉದ್ಯಮ, ಕೈಗಾರಿಕೆಯ ಕೆಲಸ, ಮೊದಲಾದವುಗಳಲ್ಲಿ ಪರದೇಶಗಳಲ್ಲಿ ಹುಟ್ಟಿರುವ ಹೊಸಯಂತ್ರಸಾಹಿತ್ಯಗಳನ್ನೂ ಸೃಷ್ಟಶಕ್ತಿಗಳನ್ನೂ ಉಪಯೋಗಮಾಡಿಕೊಂಡು ದಂಧೆಗಳನ್ನು ದೊಡ್ಡಪ್ರಮಾಣಗಳಿಂದ ಮಾಡಿ ಅವುಗಳ ಏಳಿಗೆಯನ್ನು ಚನ್ನಾಗಿಮಾಡುವ ಪ್ರಯತ್ನಗಳಿಗೆ ಔದ್ಯೋಗಿಕ ಸುಧಾರಣೆ ಎಂದು ಹೇಳಬಹುದು. ... ... ... *

ಈ ಬಗೆಯ ಸುಧಾರಣೆಗಳು ನಮ್ಮ ಸಮಾಜದಲ್ಲಿ ಆಗಲಿಕ್ಕೆ ಮುಖ್ಯವಾದ ಉಪಾಯಗಳು ಯಾವವೆಂದರೆ;— ... ... ... *

೧-ನೇ ಉಪಾಯವು ಶಿಕ್ಷಣ ಪ್ರಸಾರವೆಂಬದು;—ಇದು ಎಲ್ಲ ಸುಧಾರಣೆಗಳಿಗೂ ಮೂಲಕಾರಣವಾ ಗಿರುವದರಿಂದ ಸಮಾಜದಲ್ಲಿ ಶಿಕ್ಷಣವನ್ನು ಆದಷ್ಟು ತೀವ್ರವಾಗಿ ಬೆಳಸಬೇಕಾಗಿದೆ. ಈಗ ನಮ್ಮಲ್ಲಿ ಕಲಿತ ಜನರು ನೂರಕ್ಕೆ ಹತ್ತೆಂಟುಮಂದಿ ಸಹಾ ಹೊರಡುವದಿಲ್ಲ. ಮತ್ತು ಸ್ತ್ರೀಸಮೂಹವೆಂಬ ಸಮಾಜದ ಅರ್ಧಭಾಗದಲ್ಲಿ ಶಿಕ್ಷಣದ ಅಭಾವವೇ ಇರುತ್ತಿರುವದರಿಂದ ಎಲ್ಲ ನೋಡಿದರೂ ಅಜ್ಞಾನವೇ ಕಂಡುಬರುತ್ತದೆ. ಆದುದರಿಂದ ಸ್ತ್ರೀ ಪುರುಷರಿಬ್ಬರಿಗೂ ಸರಿಯಾಗಿ ಆಗ್ರಹದ ಶಿಕ್ಷಣವನ್ನು ಕೊಡುವದು ಅವಶ್ಯವಾಗಿದೆ. ಏಕೆಂದರೆ ಸಂಸಾರವೆಂಬ ಬಂಡಿಗೆ ಸ್ತ್ರೀಪುರುಷರಿಬ್ಬರೂ ಚಕ್ರಗಳೋಪಾದಿಯಲ್ಲಿರುವದರಿಂದಲೂ, ಬುದ್ಧಿ, ವಾಸನೆ, ಕರ್ತೃತ್ವ ಮೊದಲಾದವುಗಳಲ್ಲಿ ವಿಶೇಷ ಭೇದವಿಲ್ಲದೆ ಇದ್ದುದರಿಂದಲೂ, ಸೃಷ್ಟಿಕ್ರಮಕ್ಕೆ ಎರಡೂ ವ್ಯಕ್ತಿಗಳು ಸರಿಯಾದ ಅಗತ್ಯ ಉಳ್ಳವಾಗಿರುತ್ತವೆ ಎಂಬದು ಈಶ್ವರ ರಚನೆಯಿಂದಲೇ ಗೊತ್ತಾಗುತ್ತಲಿದೆ. ಇದನ್ನರಿತು ನಮ್ಮ ಮತಸ್ಥಾಪನಾಚಾರ್ಯರು ಸ್ತ್ರೀಪುರುಷರಿಬ್ಬರಿಗೂ ಸರಿಯಾಗಿ ಲಿಂಗಧಾರಣ, ದೀಕ್ಷೆ, ಅನುಗ್ರಹ, ಆಚಾರ, ಮೊದಲಾದವುಗಳಲ್ಲಿ ಸಮಾನಹಕ್ಕುಗಳನ್ನು ಕೊಟ್ಟಿರುವಂತೆಯೇ ಅವುಗಳನ್ನು ಕಾಪಾಡಿ

ಕೊಳ್ಳಲಿಕ್ಕೆ ಅತ್ಯಾವಶ್ಯಕವಾದ ಶಿಕ್ಷಣವನ್ನು ಕೂಡಾ ಸರಿಯಾಗಿ ಕೊಡಬೇಕಾಗಿದೆ. ಶಿ ದಿಂದ ಪುರುಷರು ಸುಸಂಸ್ಕೃತರಾಗಿ ವ್ಯವಹಾರ ಉದ್ಯೋಗಗಳಲ್ಲಿ ಧುರೀಣರಾಗು ಸ್ತ್ರೀಯರು ಕೂಡ ಶಿಕ್ಷಣದಿಂದ ಬಾಲಸಂಗೋಪನ ಬಾಲಶಿಕ್ಷಣ ಗೃಹಕೃತ್ಯ ಮೊದಲಾ ಗಳಲ್ಲಿ ದಕ್ಷತೆಯುಳ್ಳವರಾಗುತ್ತಾರೆ. ನೀತಿಶಿಕ್ಷಣದಿಂದಲೂ ಜ್ಞಾನಶಿಕ್ಷಣದಿಂದಲೂ ಸ್ತ್ರೀ ಷರು ಸದಾಚರಣಿಗಳೂ, ಸುಜ್ಞಾನಿಗಳೂ ಆಗುತ್ತಾರೆ. ಆದುದರಿಂದ ಶಿಕ್ಷಣಕ್ಕೆ ಉ ತಕ್ಕ ಬಾಲವಿವಾಹ, ಪರದೇಶಗಮನಕ್ಕೆ ಇರುವ ಬಹಿಷ್ಕಾರ ತೊಂದರೆಗಳನ್ನು ದೂ ಮಾಡಬೇಕಾಗಿದೆ. ಬಾಲವಿವಾಹವೆಂಬ ತೊಂದರೆಯಿಂದ ಬಾಲಕ ಬಾಲಿಕೆಯರಿಗೆ ಶಿಕ್ಷಣವು ದೊರೆಯಲಿಕ್ಕೆ ಅವಕಾಶವು ದೊರೆಯದ್ದರಿಂದ ಅವರು ಅಶಿಕ್ಷಿತರಾಗಿ ಉ ಪವಲ್ಲದೆ, ಅವಯವಗಳು ಪೂರ್ಣಾವಸ್ಥೆಯನ್ನು ಹೊಂದದೆ ಇದ್ದ ಬಾಲ್ಯಾವಸ್ಥೆಯ ಸೃಷ್ಟಿ ಕ್ರಮಕ್ಕೆ ಆರಂಭವಾಗುವದರಿಂದ ತಾವು ಅಶಕ್ತರಾಗುವದಲ್ಲದೆ ತಮ್ಮ ಸಂತ ನ್ನು ಕೂಡ ಅಶಕ್ತರನ್ನಾಗಿ ಮಾಡಲಿಕ್ಕೆ ಕಾರಣರಾಗುತ್ತಾರೆ. ಆದುದರಿಂದ ಬಾಲವಿ ಹವನ್ನು ಬಿಟ್ಟು ಪ್ರೌಢವಿವಾಹ ಅಂದರೆ ೧೬—೧೮ ವರ್ಷದ ಕನ್ಯೆಯರಿಗೂ ೨೪— ವರ್ಷದವರಗಳಿಗೂ ಲಗ್ನ ಮಾಡುವ ಪರಿಪಾಠವನ್ನಿಟ್ಟದ್ದಾದರೆ ಎಷ್ಟೋ ಲಾಭಗಳಾಗು ಈ ಪರಿಪಾಠವು ನಮ್ಮ ಸಮಾಜದಲ್ಲಿ ಎಲ್ಲಕಡಿಗೂ ಉಂಟಾದರೆ, ನಮ್ಮ ಬಾಲವಿಧವೆ ಆಗದಂತೆ ಆಗುವದಲ್ಲದೆ ಅಜ್ಞಾನಾವಸ್ಥೆಯಲ್ಲಿರುವ ಬಾಲಕ ಬಾಲಕಿಯರ ವಿವಾಹ ಕೇವಲ ತಿಳವಳಿಕೆಯಿಂದಲೂ, ಮನಸಿನ ಒಪ್ಪಿಗೆಯಿಂದಲೂ, ಆಗದೇ ಇರುವದರಿಂ ತಹ ಸಂಬಂಧಗಳಲ್ಲಿ ವಿಗಡತನವೇ ವಿಶೇಷ ವಾಗುತ್ತಿರುವದರಿಂದ ಬಿಡುಗಡೆ ಮೊ ಪ್ರಕಾರಗಳು ಆಗಲಿಕ್ಕೆ ಅವಕಾಶವೇ ಇಲ್ಲದಂತೆ ಯಾಗುತ್ತದೆ. ಆದುದರಿಂದ ಈ ಬಾ ವಾಹವೆಂಬ ತೊಂದರೆಯನ್ನು ದೂರಮಾಡಿ ಪ್ರೌಢವಿವಾಹವೆಂಬ, ಅನುಕೂಲತೆ ಉಂಟುಮಾಡಿಕೊಟ್ಟರೆ, ಬಾಲಕ ಬಾಲಿಕೆಯರ ಶಿಕ್ಷಣವುಪೂರ್ಣವಾಗಿ ಅವರು ಮನ ಸುಸಂಸ್ಕೃತರಾಗುವಂತೆ ಅವಯವಗಳಿಂದಲೂ ಪೂರ್ಣರಾಗಿ ಸಶಕ್ತ, ಮತ್ತು ಸುಶಿಕ್ಷಿ ತತಿಯನ್ನು ಹುಟ್ಟಿಸಲಿಕ್ಕೆ ಕಾರಣರಾಗುತ್ತಾರೆ. ಇನ್ನು ರಾಜಕೀಯ ಸಾಮಾಜಿಕ ರಣೆಗಳಿಗೆ ಬೇಕಾದ ಜ್ಞಾನವನ್ನೂ ಮತ್ತು ಔದ್ಯೋಗಿಕ ಸುಧಾರಣೆಗಾಗಿ ಹೊಸದಾ ಟ್ಟಿದ ಯಾಂತ್ರಿಕ ಮತ್ತು ಸ್ವಷ್ಟಸಾಮರ್ಥ್ಯದ ಶಿಕ್ಷಣವನ್ನೂ ದೊರಕಿಸುವದಕ್ಕಾಗಿ ಜನರು ಪರದೇಶಕ್ಕೆ ಹೋಗಲೇಬೇಕಾಗಿದೆ. ಯಾಕಂದರೆ; ಆ ಬಗೆಯ ಶಿಕ್ಷಣವು ಜ ಜರ್ಮನಿ, ಯುರೋಪ, ಅಮೇರಿಕಾ ಮೊದಲಾದ ದೇಶಗಳಲ್ಲಿದೊರೆದಂತೆ ಮತ್ತಾವ ದೊರೆಯುವದಿಲ್ಲ. ಆದುದರಿಂದ ಪರದೇಶಗಮನಕ್ಕೆ ಉಳಿದ ಎಲ್ಲ ಸಮಾಜದವರು ಸ ಕೊಟ್ಟಂತೆ ನಮ್ಮ ಸಮಾಜದವರೂ ಕೂಡ ಮಹಾಸಭೆಯಲ್ಲಿ ಎರಡು ಮೂರು ವರ್ಷ ವರಿಗೆ ಈ ವಿಷಯದ ಚರ್ಚೆಯು ನಡೆದು ಸಮ್ಮತಿಪಟ್ಟಂತೆ ಆಗಿರುವದರಿಂದ ಆ ವಿ ಪುನರಾವೃತ್ತಿಯನ್ನು ಮಾಡುವ ಕಾರಣವಿಲ್ಲ. ...

೨ನೇ ಉಪಾಯವು;—ಮಹಾಸಭೆಯವರ ಅಪ್ಪಣೆಗಳನ್ನು ಅಮಲಿನಲ್ಲಿ ತರುವದು. ನಮ್ಮ ಸಮಾಜದಲ್ಲಿ ಎಲ್ಲಬಗೆಯ ಸುಧಾರಣೆಗಳನ್ನು ಮಾಡುವ ಉದ್ದೇಶದಿಂದಲೇ ಈ ಮಹಾಸಭೆಯೆಂಬ ಸಂಸ್ಥೆಯು ಸ್ಥಾಪಿತವಾಗಿ ಇದರ ಸಂಬಂಧವು ಪ್ರತಿಯೊಬ್ಬ ವೀರಶೈವ ವ್ಯಕ್ತಿಗೆ ಉಂಟಾಗಿರುತ್ತದೆ. ಏಕೆಂದರೆ ಈ ಮಹಾಸಭೆಯಲ್ಲಿ ಪಾಸಾಗತಕ್ಕ ಠರಾವುಗಳು ವೀರಶೈವವ್ಯಕ್ತಿಯ ಇಲ್ಲವೆ ಕುಟುಂಬದ ಇಲ್ಲವೆ ಸಮಾಜದ ಹಿತವನ್ನೇಬಯಸುತ್ತಿರುತ್ತವೆ. ಆದುದರಿಂದ ಮಹಾಸಭೆಯ ಉದ್ದೇಶವು ಸರ್ವರಿಗೂ ಚನ್ನಾಗಿ ತಿಳಿಯುವಂತೆ ಸಭೆಗೆ ಸೇರಿದ ವಿದ್ವಾಂಸಮಂಡಳಿಯವರು ತಿರುಗಿ ತಮ್ಮ ತಮ್ಮ ಗ್ರಾಮಕ್ಕೆ ಸೇರಿದನಂತರ ವ್ಯಾಖ್ಯಾನಗಳನ್ನು ಕೊಟ್ಟು ಸಭೆಯಲ್ಲಿ ನಿರ್ಣಯಿಸಿದ ಠರಾವುಗಳನ್ನು ಅಮಲಿನಲ್ಲಿ ತರುವದಕ್ಕಾಗಿ ಅಲ್ಲಲ್ಲಿಗೆ ಗ್ರಾಮ ಕಮಿಟಿ, ತಾಲೂಕ ಕಮಿಟಿ, ಜಿಲ್ಲಾ ಕಮಿಟಿಗಳನ್ನು ಸ್ಥಾಪಿಸುವ ಪ್ರಯತ್ನಮಾಡಬೇಕಾಗಿದೆ. ಯಾಕೆಂದರೆ ಸುಧಾರಿಸಿದವರಾದ ನಮ್ಮ ಸಾರ್ವಭೌಮರು ಇಂಗ್ಲೀಷ ಸರಕಾರದವರ ದೇಶದಲ್ಲಿಯೂ ಸಹಾ ಇಂಥಾ ಸಭೆಗಳ ದ್ವಾರದಿಂದಲೇ ಎಲ್ಲಬಗೆಯ ಸುಧಾರಣೆಗಳನ್ನು ಮಾಡಿರುವದಲ್ಲದೆ ರಾಜ್ಯಕಾರ್ಯವನ್ನು ಸಹಾ ಪಾರ್ಲಮೇಂಟವೆಂಬ ಮುಖ್ಯಸಭೆಯಿಂದಲೇ ನಡಿಸುತ್ತಾರೆ. ಆದುದರಿಂದ ಅವರ ಅನುಕರಣೆಯನ್ನೇ ನಾವು ಮಾಡಬೇಕಾಗಿದೆ. ಆಯಾ ಕಮಿಟಿಯವರು ಮಹಾಸಭೆಯವರ ಅಪ್ಪಣೆಗಳೆಂಬ ಕಾನೂನಗಳನ್ನು ತಮ್ಮತಮ್ಮ ಗ್ರಾಮಗಳಲ್ಲಿಯೂ ತಾಲೂಕಗಳಲ್ಲಿಯೂ ಜಿಲ್ಲೆಗಳಲ್ಲಿಯೂ ಪ್ರಸಿದ್ಧಪಡಿಸಿ ಅವುಗಳಂತೆ ವರ್ತನಕ್ರಮವನ್ನಿಡಲಿಕ್ಕೆ ಪ್ರಯತ್ನಮಾಡಿದಾಗಳೇ ಮಹಾ ಸಭೆಯವರ ಉದ್ದೇಶಗಳು ಶಿದ್ಧಿಗೆ ಹೋಗುವವು. ಈ ಕಮಿಟಗಳವ್ಯವಸ್ಥೆಯು ಆಗದಲೇ ಹೀಗೇ ಎಷ್ಟುಸಭೆಗಳನ್ನು ಕೂಡಿಸಿದಾಗ್ಯೂ ವಿಶೇಷವಾದ ಹಣದ ವೆಚ್ಚವನ್ನೇ ಮಾಡಿದಂತಾಗುವದಲ್ಲದೆ ಹೇತುವು ಕೈಗೂಡಲಾರದು. ಮತ್ತು ಸಭೆಯಲ್ಲಿ ಸೇರಿದಾಗ ಜನರಲ್ಲಿ ಉಂಟಾದ ಕರ್ತವ್ಯದಕ್ಷತೆಯು, ಮರಳಿ ಮನೆಗೆ ತೆರಳಿದಾಗ ಕೂಡ ಉಳಿಯುವಂತೆ ಮಾಡುವದಕ್ಕಾಗಿ ಯಾಪರೂ ಈ ಕಮಿಟಿಗಳನ್ನು ಸ್ಥಾಪಿಸಬೇಕಾಗಿದೆ. ಮತ್ತು ಕಮಿಟಿಯವರು ತಮ್ಮಲ್ಲಿ ನಡೆದ ಕೆಲಸಗಳ ರಿಪೋರ್ಟನ್ನು ವರ್ಷಾಂತ್ಯಕ್ಕೆ ಮಹಾಸಭೆಯವರ ಕಡಿಗೆ ತಿಳಿಸಿ, ಅವರು ಹೊಸದಾಗಿ ನಿರ್ಣಯಿಸಿದ ಠರಾವುಗಳನ್ನು ದೊರಕಿಸಿಕೊಂಡು ಅವುಗಳನ್ನು ಅಮಲಿನಲ್ಲಿ ತರುವ ಪ್ರಯತ್ನಗಳನ್ನು ಮಾಡುವದರಿಂದಲೇ ಇಂಗ್ಲೀಷ ಶಿಕ್ಷಣದಬಲದಿಂದ ನಮ್ಮ ಇಂಡಿಯಾ ದೇಶದೊಳಗಿನ ಪ್ರಮುಖಜನರ ಏಕರಾಷ್ಟ್ರೀಯತ್ವದ ಕಲ್ಪನೆಯಿಂದಲೂ ರಾಜ್ಯಕಾರಭಾರದ ಬಂದೇ ಮಾರ್ಗದಿಂದಲೂ ನಮ್ಮೆಲ್ಲರಲ್ಲಿ ನಿಕಟವಾದ ಸಂಬಂಧವು ಉಂಟಾಗಿರುವದರಿಂದ ನಮ್ಮೆಲ್ಲರ ಹಿತವನ್ನೇಬಯಸುವ ರಾಷ್ಟ್ರೀಯ ಸಭೆಯಲ್ಲಿಯೂಕೂಡ ನಾವು ಪ್ರವೇಶವಾಗಲಿಕ್ಕೆ ಮಾರ್ಗವಾಗುತ್ತದೆ. ಮತ್ತು ಮಹಾಸಭೆಯ ಕರ್ತವ್ಯವಾದರೂ ಇದೇ ಇರುತ್ತದೆ. ಇದನ್ನರಿಯದೇ ಕೆಲವು ಜನರು ಮಹಾಸಭೆಯಿಂದೇನೂ ಪ್ರಯೋಜನವಿಲ್ಲದೆ ಇದರಿಂದ ಜನರು ವ್ಯರ್ಥವಾದ ದ್ರವ್ಯದಹಾನಿಗೆ ಪಾತ್ರರಾಗುತ್ತಾರೆಂದು ದೂಷಣಮಾಡು

ತ್ತಾರೆ ಅಪರೆ ಅವರು ಅದೂರದರ್ಶಿಗಳೂ ಅವಿಚಾರಿಗಳೂ ಆಗಿರುವರೆಂದು ಹೇಳಬ...

೩ನೇ ಉಪಾಯ;—ಉಪದೇಶಕರನ್ನು ನಿಯಮಿಸುವದು. ಈ ಉಪದೇ... ಮಹಾಸಭೆಯ ಉದ್ದೇಶವನ್ನು ಎಲ್ಲರಿಗೂ ವ್ಯಾಖ್ಯಾನದಿಂದ ತಿಳಿಸಿ, ಅದರಲ್ಲಿ ಪಾಸಾ... ವುಗಳನ್ನು ಕಮಿಟಿಯವರು ತೀವ್ರವಾಗಿ ಅಮಲಿನಲ್ಲಿ ತರುವಂತೆ ಅವರನ್ನು ಪ್ರೋ... ಗೊಳಿಸಿ ಅವರುಮಾಡಿದ ಕೆಲಸಗಳನ್ನು ತಾವು ನಿರೀಕ್ಷಣಮಾಡಿ ತಮ್ಮ ಅಭಿಪ್ರಾಯ... ವ್ಯಕ್ತಪಡಿಸಿ ನಮ್ಮಮತ ತತ್ವಗಳನ್ನು ಉಪದೇಶಿಸುತ್ತ ಹಳ್ಳಿಪಳ್ಳಿಗಳಲ್ಲಿ ಸಂಚಾ... ಕಮಿಟಿಗಳಲ್ಲಲ್ಲಿ ಜನರಿಗೆ ಬೋಧಮಾಡಿ, ಅಲ್ಲಲ್ಲಿಗೆ ಕಮಿಟಿಗಳನ್ನು ಸ್ಥಾಪಿಸೇ ಮ... ಸಾಗಬೇಕು. ಈ ಉಪದೇಶಕರು ಶಾಂತಚಿತ್ತರಾಗಿಯೂ, ಸತ್ಯಜ್ಞಾನಿಗಳಾಗಿಯೂ, ... ಸಾಶ್ರಮಕ್ಕೆ ಸರಿಯಾದವರಾಗಿಯೂ, ಸದಾಚರಣಿಗಳಾಗಿಯೂ ಇರಬೇಕು. ಶಿಥಿ... ಗಳೂ, ಅವಿಚಾರಿಗಳೂ, ಡಂಭಾಚಾರಿಗಳೂ ಆಗಿರಬಾರದು. ಯಾಕಂದರೆ ಮತಕ್ಕೆ... ಮಹಾಸಭೆಗೆ ವಿರುದ್ಧವಾದ ಭಾಷಣದಿಂದಲೂ, ಆಚರಣೆಯಿಂದಲೂ ಎಷ್ಟೋ ... ಗಳು ಉರ್ಮಟತನದಿಂದ ಉಪದೇಶಕರನ್ನು ತೊಂದರೆ ಪಡಿಸಬಹುದು. ಆದುದರಿಂ... ಬಲ್ಲವರೂ ಯೋಗ್ಯರೂ ಆಗಿದ್ದರೆ ಅವರನ್ನು ಚೆನ್ನಾಗಿ ಶಾಸನಗೊಳಿಸಿ ಜ್ಞಾನೋ... ದಿಂದ ಅವರ ಅಜ್ಞಾನವನ್ನು ದೂರಮಾಡುವರು. ... ...

೪ನೇ ಉಪಾಯ;—ನಮ್ಮ ಮತಸ್ಥಾಪನಾಚಾರ್ಯರಾದ ಸಿಂಹಾಸನಾಧಿಪ... ಕರ್ತವ್ಯ ಜಾಗರೂಕತೆಯನ್ನು ಹುಟ್ಟಿಸುವದು. ಮಿಕ್ಕ ಸಮಾಜಗಳ ಜಗದ್ಗು... ತಮ್ಮತಮ್ಮ ಸಮಾಜಗಳಲ್ಲಿ ತಮ್ಮ ಅಧಿಕಾರವನ್ನು ಪೂರ್ಣವಾಗಿ ಕಾಯಿದುಕೊ... ಚೆನ್ನಾಗಿ ಧಾರ್ಮಿಕ ಶಿಕ್ಷಣವನ್ನು ಪಡೆಕೊಂಡು ಕಾಲಮಾನಕ್ಕನುಸಾರವಾಗ ಸಮಾ... ಬಲಿವಿನಂತೆ ಧರ್ಮಶಾಸ್ತ್ರದ ನಿಯಮಗಳಲ್ಲಿ ಸುಧಾರಣೆಮಾಡುವ ಪ್ರಯತ್ನಪಟ್ಟು... ರಾಗುವಂತೆ, ನಮ್ಮ ಮತಸ್ಥಾಪನಾಚಾರ್ಯರ ಈಗಿನ ಪೀಠಾಧಿಕಾರಿಗಳು ಧರ್ಮ... ಚೆನ್ನಾಗಿ ಪಾರಂಗತರಾಗಿ ಪೂರ್ವದವರು ಮಠದಲ್ಲಿ ವಿದ್ಯಾಪ್ರಸಾರಾರ್ಥವಾಗಿ ಅಲ್ಲಲ್ಲಿ... ಮಠಗಳನ್ನು ಸ್ಥಾಪಿಸಿ, ಜಂಗಮರನ್ನು ಶಿಕ್ಷಕರನ್ನಾಗಿ ನಿಯಮಿಸಿ, ಎಲ್ಲ ಭಕ್ತ... ಶ್ವರರಿಗೂ ಶಿಕ್ಷಣವು ದೊರೆಯುವಂತೆ ಮಾಡಿದ ಪ್ರಯತ್ನಗಳನ್ನು ನಿರೀಕ್ಷಿಸಿ ತಾ... ತಹ ಪ್ರಯತ್ನಗಳನ್ನು ಮಾಡಬೇಕು. ಪೂರ್ವದಲ್ಲಿ ಸ್ಥಾಪಿಸಲ್ಪಟ್ಟ ಸಾಲೀ ಮಠಗ... ಈಗ ಶಿಕ್ಷಣಹೊಂದಿದ ಶಿಕ್ಷಕರು ಇರದೆ ಗುರುಗಳು ಅಥವಾ ಅಯ್ಯನವರೆಂದೆನ್ನಿ... ಅಯೋಗ್ಯರಾದ ಅಶಿಕ್ಷಿತ ಜನರು ಬರೇ ಭಿಕ್ಷಾವೃತ್ತಿಯನ್ನು ಸ್ವೀಕರಿಸಿ, ತಮ್ಮ... ವನ್ನು ಕಳಕೊಂಡು ಇರುತ್ತಿರುವದರಿಂದ ಅವರಮರ್ಯಾದೆಗೆ ಕೊರತೆಯಾಗಿದೆ... ಅಲ್ಲ. ಇದರಿಂದ ಇಡೀ ವೀರಶೈವ ಸಮಾಜದ ಗೌರವವೇ ಇಲ್ಲದಂತಾಗಿದೆ. ಆದ... ವೀರಶೈವ ಸಮಾಜದ ಮಸ್ತಕಕ್ಕೆ ಮುಕುಟಗಳಂತೆ ಶೋಭಿಸುವ ಮಠಾಧಿಕಾರಿಗಳು...

ಸದಾಚರಣೆಗಳಿಂದಲೂ, ಸದುಪದೇಶಗಳಿಂದಲೂ, ತಮ್ಮ ಜಂಗಮ ವರ್ಗಕ್ಕೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟು ಅವರ ಕರ್ತವ್ಯವನ್ನೂ ಅಧಿಕಾರವನ್ನೂ ಗೊತ್ತುಮಾಡಿಕೊಟ್ಟು ಸಮಾಜವಲ್ಲಿ ಲಿಂಗಧಾರಣೆ, ದೀಕ್ಷಾ, ಆಚಾರ, ಅನುಗ್ರಹ, ಮೊದಲಾದವುಗಳನ್ನು ವಿಧಿಯುಕ್ತವಾಗಿಯೂ ಕ್ರಮಯುಕ್ತವಾಗಿಯೂ ಮಾಡಿಸುವ ವ್ಯವಸ್ಥೆಯನ್ನು ಮಾಡಿಸಿ ನಮ್ಮ ಮತ ತತ್ವಗಳಲ್ಲಿ ಇಲ್ಲದೇ ನಮ್ಮ ಅಜ್ಞಾನದಿಂದುಂಟಾಗಿರುವ ಭೇದಬುದ್ಧಿಯನ್ನು ಸಮೂಲವಾಗಿ ನಷ್ಟಪಡಿಸಿ ಐಕ್ಯಭಾವವನ್ನು ವೃದ್ಧಿಗೊಳಸಬೇಕಾಗಿದೆ. ... *

ನಮ್ಮ ಮತಗ್ರಂಥಗಳಲ್ಲಿ ಜಾತಿಭೇದವನ್ನು ನಿರಾಕರಿಸಿ, ಆಚಾರಭೇದದಿಂದ ನಮ್ಮಲ್ಲಿ ಸಾಮಾನ್ಯ, ವಿಶೇಷ, ನಿರಾಭಾರಿ ಎಂಬ ಮೂರುಭೇದಗಳನ್ನೇ ಹೇಳಿದ್ದು ನಮ್ಮ ಅಜ್ಞಾನ ಮತ್ತು ಮಾತ್ಸರ್ಯದಿಂದ ನಮ್ಮಲ್ಲಿ ಅನೇಕ ಒಳಭೇದಗಳು ಹುಟ್ಟಿ ಅನ್ನ ಕನ್ಯಾ ವ್ಯವಹಾರಗಳನ್ನು ಬಿಟ್ಟು ಉಚ್ಚ ನೀಚ ಭಾವವನ್ನು ಕಲ್ಪಿಸಿ, ಇಲ್ಲದ ವೈರವನ್ನುಂಟು ಮಾಡಿಕೊಂಡಿರುತ್ತೇವೆ. ಅದರೂ ನಮ್ಮ ಪೂರ್ವಿಕರು ದೂರದೃಷ್ಟಿಯಿಂದ ಎಂದೆಂದಿಗೂ ಭೇದಬುದ್ಧಿಗೆ ಅವಕಾಶವೇ ದೊರೆಯಬಾರದೆಂದು ನಮ್ಮಲ್ಲಿಹಾಕಿದ ಕರುಣಪ್ರಸಾದದ ಕ್ರಿಯಾಪದ್ಧತಿಯು ಐಕ್ಯವನ್ನೇ ತೋರಿಸುತ್ತದೇ ಹೊರ್ತು ಭೇದಭಾವವನ್ನು ತೋರಿಸುವದಿಲ್ಲ. ಅದುದರಿಂದ ಈ ಆಚರಣೆಗೆ ಎಂದೂ ಯಾರಿಂದಲೂ ಅತಂಕವು ಬರಲಾರದು ಮತ್ತು ನಮ್ಮ ಗುರುಗಳಾದ ಜಂಗಮರು ನಮ್ಮೊಳಗಿನ ಎಲ್ಲ ಒಳಭೇದಗಳವರಲ್ಲಿಯೂ ಅನ್ನವ್ಯವಹಾರವನ್ನು ಮಾಡುತ್ತಿರುವದರಿಂದಲೂ, ಮತ್ತು ಜಂಗಮರ ಮಠಗಳಲ್ಲಿ ಎಲ್ಲ ಒಳಭೇದದವರೂ ಒಂದೇ ಪಂಕ್ತಿಯಲ್ಲಿಕೂತು ಅನ್ನವ್ಯವಹಾರ ಮಾಡುವದರಿಂದಲೂ, ನಮ್ಮಸಮಾಜದಲ್ಲಿ ಎಲ್ಲರಲ್ಲಿಯೂ ಅನ್ನವ್ಯವಹಾರವು ನಡೆದಿರುವದೆಂತಲೇ ಹೇಳಬೇಕಾಗಿದೆ. ಹೀಗಿದ್ದು ಭಕ್ತವರ್ಗದವರು ನಾಹೆಚ್ಚು ನೀಹೆಚ್ಚು ಎಂಬ ಅಜ್ಞಾನವನ್ನು ಅನ್ಯರ ಅನುಕರಣೆಯಿಂದ ತಮ್ಮಲ್ಲಿ ಸೇರಿಸಿಕೊಂಡು ಅನ್ನಕನ್ಯಾ ವ್ಯವಹಾರಗಳನ್ನು ಬಿಡುವ ಪ್ರಯತ್ನಗಳನ್ನು ಮಾಡಿದರೂ ಬಿಡಲಿಕ್ಕೆ ಬಾರದಂಥಾ ಮಹದಾಚರಣೆಗಳನ್ನು ನಮ್ಮ ಪೂರ್ವಜರು ಸ್ಥಾಪಿಸಿರುತ್ತಾರೆ. ಇದಲ್ಲದೆ ಮನುಷ್ಯಪ್ರಾಣಿಗಳಾದ ಎಲ್ಲ ಮತದವರಿಗೂ ನಮ್ಮ ಮತದಲ್ಲಿ ಸೇರ್ಪಡೆಯಾಗಲಿಕ್ಕೆ ಬರುವಂಥಾ ಉದಾರ ತತ್ವಗಳು ನಮ್ಮ ಮತದಲ್ಲಿರುವದರಿಂದಲೇ ಪೂರ್ವದಲ್ಲಿ ಅನ್ಯಮತದ ಅನೇಕರು ಈ ಮತವನ್ನು ಸ್ವೀಕರಿಸಿದಂತೆ ಶ್ರೀ ಬಸವೇಶ್ವರನು ಸಹಾ ಈ ಮತವನ್ನು ಸ್ವೀಕಾರಮಾಡಿ ಮತೋದ್ಧಾರಾರ್ಥವಾಗಿ ಅನೇಕ ಮಹತ್ಕಾರ್ಯಗಳನ್ನು ಮಾಡಿ ಘನ ಕೀರ್ತಿಯನ್ನು ಸಂಪಾದಿಸಿದನು. ಆತನಕಾಲದಲ್ಲಿಯ ಗ್ರಂಥಗಳನ್ನು ನೋಡಿದರೆ ಆತನು ಜಾತಿಭೇದವನ್ನು ಸಮೂಲವಾಗಿ ಮುರಿದುಬಿಡುವ ಪ್ರಯತ್ನ ಮಾಡಿದ್ದು, ಕಂಡುಬರುತ್ತದೆ. ಇಷ್ಟೇ ಅಲ್ಲ ಈಗಿನ ಸುಧಾರಿಸಿದ ಕಾಲದಲ್ಲಿ ಈ ದೇಶದ ಎಲ್ಲಭಾಗದ ಪ್ರಮುಖ ಸಾಮಾಜಿಕ ಸುಧಾರಕರು ಕೂಡಿ ಪ್ರಯತ್ನಮಾಡಿದರೂ ಆಗದೇ ಇದ್ದ ಕಾರ್ಯ

ವನ್ನು ಆತನು ಬಳ್ಳೇ ಅಶಿಕ್ಷಿತಕಾಲದಲ್ಲಿ ಮಾತ್ಸರ್ಯವು ಪೂರ್ಣಾವಸ್ಥೆಯನ್ನು ಹೊ
ಸ್ಥಿತಿಯಲ್ಲಿ ಮಾಡಿದನೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಆದುದರಿಂದ ಈಗಿನ ಕಾಲದಲ್ಲಿ
ಸಮಾಜದಲ್ಲಿ ವಿದ್ಯಾಪ್ರಸಾರವಾಗಿ ಭಕ್ತಮಾಹೇಶ್ವರರಲ್ಲಿ ಸರ್ವಸುಧಾರಣೆಯೂ ಉ
ವಂತೆ ಯಾವ್ಯಾವ ಅನುಕೂಲತೆಗಳನ್ನು ಉಂಟುಮಾಡಬೇಕೆಂಬುವದನ್ನೂ ಅಡ್ಡ
ಟಾಗುವ ಯಾವ್ಯಾವ ತೊಂದರೆಗಳನ್ನು ದೂರಮಾಡಬೇಕೆಂಬುವದನ್ನೂ ಮಹಾಸ
ನಿರ್ಣಯಿಸಿಕೊಂಡು ಸಮಾಜದಲ್ಲಿ ಧರ್ಮ ಜಾಗ್ರುತಿಯನ್ನು ಉಂಟುಮಾಡುವ ಪ್ರ
ಗಳನ್ನೇ ಅವರು ಕೈಕೊಳ್ಳಬೇಕೆಂದು ಅವರಿಗೆ ವಿನಯ ಪೂರ್ವಕವಾಗಿ ಪ್ರಾರ್ಥಿಸು

(ಕೈಜಪ್ಪಾಳೆ,)

ಗಂಗಾಧರಪ್ಪಾ, ಭೋಜಪ್ಪ, ರಬಕವಿ.

---

## ಇದೇ ವಿಷಯದಮೇಲೆ ವೇ॥ ಮಣೂರು ಮಲ್ಲಿಕಾರ್ಜುನ ಶಾಸ್ತ್ರಿಗಳು ಮಾಡಿದ ಭಾಷಣವು.

### —( ಧರ್ಮಗುರುಗಳ ಜೀವಿತ. )—

ಪೂರ್ವದಲ್ಲಿ ಧರ್ಮಪರತಾ ಜ್ಞಾನ, ವಿದ್ಯಾ, ಉದಾತ್ತ, ಮತ್ತು ಶುದ್ಧತ
ನವ ಮಹತ್ವಾಕಾಂಕ್ಷಾ, ಮತ್ತು ತತ್ಪ್ರೀತ್ಯರ್ಥ ಪ್ರಯತ್ನ, ಇವುಗಳನ್ನು ಸರ್ವ
ಡುತ್ತಿರುವ ಪೂರ್ವಜ ಧರ್ಮಗುರುಗಳ' ಧರ್ಮ ( ಬ್ರಹ್ಮ ) ತೇಜಸ್ವಿತಾ ನಮ್ಮ ಸ
ಸುಧಾರಣೆಗೆ ಪ್ರಬಲವಾಗಿತ್ತು, ಇದುಸುಳ್ಳಲ್ಲ, ಸತ್ಯವೆ ಇರುವದು. ಈಗ್ಯೆ ನಮ್ಮ
ಧರ್ಮಗುರುಗಳ ಅಗಾಧ ಜ್ಞಾನವನ್ನು ಈಗಿನ ಅಶಿಕ್ಷಿತ ಧರ್ಮಗುರುಗಳು, ಮತ್ತು
ಮಾಹೇಶ್ವರರು ಬಂದು ವೇಳೆಯಲ್ಲಿ ಯಾವರೂ ಮನಸಿನಲ್ಲಿ ತಾರದೆ ನಮ್ಮ ಸಮಾಜ
ಅತ್ಯಂತ ಹೀನಸ್ಥಿತಿಯಲ್ಲಿ ತಂದಿರುವರು. ಆದಕಾರಣ ಈಗಿನ ಧರ್ಮಗುರುಗಳು ಆ
ವಾದ ಪೂರ್ವಜ ಧರ್ಮಗುರುಗಳ ಧರ್ಮಜ್ಞಾನವನ್ನು ಅವಲಂಬಿಸಿದ ಹೊರ್ತು ಸ
ಸುಧಾರಣೆಯು, ಸಮಾಜಹಿತವು, ಸಮಾಜಕಲ್ಯಾಣವು, ಸಮಾಜೋನ್ನತಿಯು ಸಮ
ಸೌಖ್ಯವು ಉಂಟಾಗಲಾರದು. ಧರ್ಮಗುರುಗಳೆಂದರೆ;—ಧರ್ಮ, ಶಾಸ್ತ್ರ, ವೇದ, ಶಿ
ಪುರಾಣೇತಿಹಾಸ, ವಿದ್ಯಾನೀತಿ ಇವೆ ಮೊದಲಾದವುಗಳಿಗೆ ಅಧಿಷ್ಠಾನರು, ಅಂದರೆ ಜ್ಞ
ಯರು ಎಂದು ಕ್ರಿಯಾಸಾರದಲ್ಲಿ ನೀಲಕಂಠಾಚಾರ್ಯರು ಹೇಳಿರುವರು. ಈ ನಮ್ಮ
ಗುರುಗಳಲ್ಲಿ ಧಾರ್ಮಿಕ ಸಾಮರ್ಥ್ಯವು ನಷ್ಟವಾದಕಾರಣ ನಮ್ಮ ಸಮಾಜವು ಧರ

ದಲ್ಲಿ ಇರುವದೋ ಇಲ್ಲವೋ ಎಂಬ ಶಂಕೆಯು ಅನ್ಯಮತದವರಿಗೆ, ಮತ್ತು ನಮ್ಮ ಪ್ರಜಾಳು ಇಂಗ್ಲೀಷ ಸರಕಾರಕ್ಕೆ ಬಂದಿರುವದು. ಆದಕಾರಣ ನಷ್ಟವಾದ ಧರ್ಮಸಾಮರ್ಥ್ಯವು ನಮ್ಮ ಧರ್ಮಗುರುಗಳಲ್ಲಿ ಬಾರದ ಹೊರ್ತು ಸಮಾಜಕ್ಕೆ ಸುಸ್ಥಿತಿಯು ಎಂದಿಗೂ ಬರಲಿಕ್ಕಿಲ್ಲ. ಧಾರ್ಮಿಕ ಸಾಮರ್ಥ್ಯವು ನಮ್ಮ ಸಮಾಜ ಸಂರಕ್ಷಣೆಯಗೋಸ್ಕರ ಅವಶ್ಯವಾಗಿರುವದು. ಇಂಥಾ ಅತ್ಯುತ್ತಮವಾದ ಧರ್ಮದ ಮಹತ್ತ್ವಾಕಾಂಕ್ಷೆಯನ್ನು ತಮ್ಮಗೋಸ್ಕರ ಮತ್ತು ಸಮಾಜಗೋಸ್ಕರ ಮಾಡುವದನ್ನು ಬಿಟ್ಟು ಆಲಸ್ಯವನ್ನು ಮತ್ತು ತಮ್ಮ ವೈಭವವನ್ನು ಸ್ವೀಕರಿಸುವವರ ಕಡೆಗೆ ಸ್ವಭಾವತಃ ಪ್ರವೃತ್ತಿಯು ಧರ್ಮಗುರುಗಳಿಗೆ ಉಂಟಾದ ಮೇಲೆ ಧರ್ಮಬುದ್ಧಿಯು ನಷ್ಟವಾಗುತ್ತದೆ. ಧರ್ಮಬುದ್ಧಿಯು ನಷ್ಟವಾದ ಬಳಿಕ ಸಮಾಜ ಸುಧಾರಣೆಯು ಆಗುವದು ಹ್ಯಾಗೆ! ತತ್ಪ್ರಯುಕ್ತ ನಮ್ಮ ಧರ್ಮ ಗುರುಗಳು ಆಲಸ್ಯವನ್ನು ಮತ್ತು ಸ್ವತಃದ ವೈಭವ ವಿಶೇಷಗಳನ್ನು ಬಿಟ್ಟು ಧರ್ಮಸುಧಾರಣೆಯ ಸಲುವಾಗಿ ತಮ್ಮ ಕರ್ತವ್ಯಕರ್ಮವಾದ ಧರ್ಮಶಿಕ್ಷಣವನ್ನುಹೊಂದಿ ಶಿಷ್ಯರಿಗೆ ಧರ್ಮಬುದ್ಧಿಯನ್ನು ಹೇಳಿ ಸಮಾಜ ಸುಧಾರಣೆಗೆ ತರಬೇಕು. ಅಂದರೆ ನಮ್ಮ ವೀರಶೈವ ಸಮಾಜವು ಸ್ವಲ್ಪದಿವಸದಲ್ಲಿಯೇ ಊರ್ಜಿತ ಸ್ಥಿತಿಗೆ ಬರುವದು. ... ...

*

೨. ಇನ್ನೂವರೆಗೂ ನಮ್ಮ ಧರ್ಮಗುರುಗಳಲ್ಲಿ ಮತ್ತು ವೀರಶೈವಭಕ್ತರಲ್ಲಿ ಜ್ಞಾನವು ಸ್ಪಷ್ಟಕಲ್ಪನೆಯು, ದೂರದೃಷ್ಟಿಯು ಬಂದಿಲ್ಲ ಮೊದಲು ನಾವು ಯಾರಿದ್ದೆವು, ಈಗ ಯಾರಿದ್ದೇವೆ, ಮುಂದೆ ಏನಾಗತಕ್ಕವರಿದ್ದೇವೆ ಎಂಬ ಜ್ಞಾನವು ಇನ್ನೂವರಿಗೂ ಬಂದಿಲ್ಲ, ಅದರ ವಿವೇಚನೆಯನ್ನು ಮಾಡಿ ಹಿಂದೇನುಮಾಡಿದೆವು, ಈಗ್ಯ ಏನುಮಾಡಬೇಕು, ಮುಂದೇನು ಮಾಡತಕ್ಕದ್ದು, ನಮ್ಮ ಪೂರ್ವಜರ ಪರಂಪರಾ ಹ್ಯಾಗಿತ್ತು, ಮತ್ತು ಪರಮೇಶ್ವರನು ನಮ್ಮಗೆ ಯಾವಕಾರ್ಯನಿಮಿತ್ತ ನಿರ್ಮಿಸಿರುವನು ಎಂಬ ಕಲ್ಪನೆಯು ಹ್ಯಾಗೆಬರಬೇಕೋ, ಅದರಂತೆ ನಮ್ಮಲ್ಲಿ ಬಂದಿಲ್ಲ. ಈ ಜ್ಞಾನಕಲ್ಪನೆಯನ್ನು ಸಂಪಾದಿಸಿ ವೀರಶೈವಸಮಾಜಕ್ಕೆ ಈ ಜ್ಞಾನವನ್ನುಂಟುಮಾಡಿಕೊಟ್ಟು, ಯಾವರೀತಿಯಿಂದ ಸಮಾಜವೃದ್ಧಿಯಾಗಿ ಜ್ಞಾನಸಂಪನ್ನವಾದೀತು ಆರೀತಿ ಮಾಡತಕ್ಕ ಕರ್ತವ್ಯಕರ್ಮ ಧರ್ಮಗುರುಗಳ ದಾಗಿದೆ. *

೩. ಮೇಲೆ ಬ್ರಹ್ಮತೇಜಸ್ವಿತಾ ಗುರುಗಳಲ್ಲಿರಬೇಕೆಂದು ಹೇಳಿದೆನು. ಬ್ರಹ್ಮತೇಜವೆಂದರೆ ಸಾಧುವೃತ್ತಿಯು ಯಾವದಿವ್ಯಶಕ್ತಿಯಿಂದ ಜಗತ್ತಿನ ತಾದಾತ್ಮ್ಯವನ್ನುಮಾಡಿ ವಿಚಾರದಿಂದಲೂ ಕಾರ್ಯದಿಂದಲೂ ನಮ್ಮಲ್ಲಿ ಯಾವಸಾಮರ್ಥ್ಯ ಉಂಟಾಗುವದೋ ಅದಕ್ಕೆ ಬ್ರಹ್ಮತೇಜ ವೆಂದೆನಬೇಕು. ಇದು ಎಲ್ಲಾಕಡಿಗೂ ಹೆಚ್ಚುಗೊಳ್ಳಲಿಕ್ಕೇ ಬರುತ್ತದೆ. ಈ ಬ್ರಹ್ಮತೇಜಸ್ಸಿನಿಂದಲೆ ಜ್ಞಾನ, ಭಕ್ತಿ, ಮತ್ತು ಸೇವಾ, ಇವುಗಳ ಕಾರ್ಯಕ್ರಮವು ಜರಗುತ್ತದೆ. ಇದು ಪರಮೇಶ್ವರನ ಸಾಮರ್ಥ್ಯವು. ಅಂದಬಳಿಕ ಸರ್ವ ವೀರಶೈವ ಸಮಾಜಕ್ಕೆ ಇಂಥಾಸಾಮರ್ಥ್ಯವುಂಟುಮಾಡಿ ಕೊಡಬೇಕೆಂದು ನಮ್ಮ ಸದುದ್ದೇಶವಿರುವದು. *

೪. ಧರ್ಮವೆಂದರೆ;—ಸಾಧುವೃತ್ತಿ, ಕಲ್ಪನಾಮಯವೃತ್ತಿ, ಪರೋಪಕಾರ, ಭಕ್ತಿ ಪೂರ್ಣತಾಮಾಡುವದಕ್ಕೋಸ್ಕರ ತಳಮಳ ಇವು ಮನುಷ್ಯಜಾತಿಯ ಅಂ... ಳಾಗಿದ್ಧಾವೆ. ಇವುಗಳ ತ್ಯಾಗಮಾಡಲಿಕ್ಕೆ ಬರುವದಿಲ್ಲ, ಇವು ಎಲ್ಲಾ ಜಾತಿಯ ಜನರು ಕರಿಸಲಿಕ್ಕೆಬೇಕು. ಇಂಥಾ ಬೋಧಮಾಡಿ ಅವುಗಳ ತತ್ವಗಳನ್ನು ನಮ್ಮ ಧರ್ಮಗುರು ಸಮಾಜಕ್ಕೆ ತಿಳಿಸಿ ಮುಂದಕ್ಕೆ ತಂದು ಉನ್ನತಿಪದವಿಗೆ ಹೊಂದಿಸಬೇಕು. ...

೫. ಇವುಗಳನ್ನು ಬೋಧಮಾಡುವದು ಬಿಟ್ಟು ಆತ್ಮಹಿತಾರ್ಥವ ತಮ್ಮ ಕುಟುಂಬ ಪೋಷಣಾರ್ಥ ಗುರುದಕ್ಷಿಣಾ ಸ್ವೀಕರಿಸಿ ಚೈನಭೋಗಿಸಿದರೆ ನಮ್ಮ ಸಮಾ ಹ್ಯಾಗೆ ಸುಧಾರಣೆಗೆ ಬಂದೀತು. ಆದಕಾರಣ ಗುರುಗಳು ಮೇಲೆಹೇಳಿದ ತಮ್ಮ ಕ ಕರ್ಮಗಳನ್ನು ಮಾಡಲಿಕ್ಕೇಬೇಕು. ಹೀಗೆ ಮಾಡದಹೊರ್ತು ಧರ್ಮಗುರುಗಳೆಂದು ಅನ್ನಲಿಕ್ಕೆಬರುವದಿಲ್ಲ ಗುರುಗಳೆಂದರೆ ಗುರುಗಳಲಕ್ಷಣ ಪುರಶ್ಚರ್ಯಾರ್ಣವೆ (ಕು...

ಶ್ರೀಗುರುಃಪರಮೇಶಾನಿಶುದ್ಧವೇಷೋಮನೋಹರಃ ।
ಸರ್ವಲಕ್ಷಣಸಂಪನ್ನಃ ಸರ್ವಾವಯವಶೋಭಿತಃ ॥
ಸರ್ವಾಗಮಾರ್ಥತತ್ವಜ್ಞಃ ಸರ್ವಮಂತ್ರಾರ್ಥತತ್ವವಿತ್ ॥
ಲೋಕಸಮ್ಮೋಹನಾಕಾರೋ ದೇವವತ್ಪ್ರಿಯದರ್ಶನಃ ॥
ಇಂಗಿತಾಕಾರಚೇಷ್ಟಾಭಿರ್ದೂರತಃಕೃತದುರ್ಜನಃ ।
ಅಂತರ್ಮುಖೋದೂರದೃಷ್ಟಿಃ ಸರ್ವಜ್ಞೋದೇಶಕಾಲವಿತ್ ॥
ಅಜ್ಞಾಸಿದ್ಧಸ್ತ್ರಿಕಾಲಜ್ಞೋ ನಿಗ್ರಹಾನುಗ್ರಹಕ್ಷಮಃ ।
ವೇದವೇದಾಂಗವಿಚ್ಛಾಂತಃ ಸರ್ವಜೀವದಯಾಪರಃ ॥
ಸ್ವಾಧೀನೇಂದ್ರಿಯಸಂಚಾರಃ ಷಡ್ವರ್ಗವಿಜಯಕ್ಷಮಃ।
ಅಗ್ರಗಣ್ಯೋತಿಗಂಭೀರಃ ಪಾತ್ರಾಪಾತ್ರವಿಶೇಷವಿತ್ ॥
ನಿರ್ಮಲೋನಿತ್ಯಸಂತುಷ್ಟೋ ನಿರ್ದ್ವಂದ್ವೋನಿತ್ಯಶಕ್ತಿಮಾನ್ ।
ಸದ್ಭಕ್ತವತ್ಸಲೋಧೀರಃ ಕೃಪಾಳುಃ ಶಿಷ್ಯಶಾಸಿತಾ ॥
ಸ್ವೇಷ್ಟದೇವಗುರುಃಪ್ರಾಜ್ಞೋ ವನಿತಾಪೂಜನೋತ್ಸುಕಃ ।
ನಿತ್ಯನೈಮಿತ್ತಿಕೇಕಾಮ್ಯೇ ರತಃಕರ್ಮಣ್ಯನಿಂದಿತೇ ॥
ರಾಗದ್ವೇಷಭಯಕ್ರೋಧ ದಂಭಾಹಂಕಾರವರ್ಜಿತಃ ।
ಸ್ವವಿದ್ಯಾನುಷ್ಠಾನತಪೋ ವಿದ್ಯಾನಾಂಚಪ್ರಕಾಶಕಃ ॥
ಯದೃಚ್ಛಾಲಾಭಸಂತುಷ್ಟೋ ಗುಣದೋಷವಿಭೇದಕಃ ।
ಸ್ತ್ರೀಧನಾದಿಷ್ಟನಾಸಕ್ತೋ ದುಃಸಂಗವ್ಯಸನೋಜ್ಝಿತಃ ॥

ಅಲೋಲುಪೋಽಹಿಂಸಕಶ್ಚ ಪಕ್ಷಪಾತೀವಿಚಕ್ಷಣಃ ।
ವಿತ್ತವಿದ್ಯಾದಿಭಿರ್ಮಂತ್ರ ಯಂತ್ರತಂತ್ರಾದ್ಯವಿಕ್ರಯಿ॥
ನಿಃಸಂಕಲ್ಪೋನಿರ್ವಿಕಲ್ಪೋ ನಿರ್ಣೀತಶಾಸ್ತ್ರಾರ್ಥಧಾರ್ಮಿಕಃ ॥
ತುಲ್ಯನಿಂದಾಸ್ತುತಿಸ್ತ್ಮಾನೀ ನಿರಪೇಕ್ಷೋನಿಯಾಮಕಃ।
ಇತ್ಯಾದಿಲಕ್ಷಣೋಪೇತಃ ಕಥಿತಃಶ್ರೀಗುರುಃಪ್ರಿಯೆ ॥

ಇತ್ಯಾದಿ ಲಕ್ಷಣದಿಂದ ಕೂಡಿದವರೇ ಧರ್ಮಗಳು ಅವರು ಯಾರಂದರೆ ಸುಪ್ರಭೇದಾಗಮದಲ್ಲಿ;— ... ... ... ... *

ಸಾಮಾನ್ಯವೀರಶೈವಾನಾಂ ದೀಕ್ಷಾಲಿಂಗಸ್ಯಬಂಧನೆ ।
ವೀರಶೈವಾಶ್ಚಗುರವಃ ಶಿಕ್ಷಣೆರಕ್ಷಣೆತಥಾ ॥
ಆಚಾರಪ್ರಾಯಶ್ಚಿತ್ತಾದೌ ಶುಭಾಶುಭವಿಧೌತಥಾ ॥
ಪಂಚಪೀಠಾಧಿಪತಯಃ ಪಂಚಸಂಸ್ಥಾನಮಾಶ್ರಿತಾಃ ॥

ಎಂದು ಹೇಳಿದಕಾರಣ ಪಂಚಸಿಂಹಾಸನಾಧಿಪತಿಗಳೇ ಧರ್ಮಗುರುಗಳು, ಈ ಸಿಂಹಾಸನಾಧಿಪತಿಗಳ ಮುಖ್ಯ ಕರ್ತವ್ಯವು. ... ... ... *

೧. ನಮ್ಮ ವೀರಶೈವ ಸಮಾಜದಲ್ಲಿ ಧರ್ಮವೃದ್ಧಿ, ಧರ್ಮಜಾಗೃತಿ, ಧರ್ಮಪ್ರಸಾರವು ಈ ನಮ್ಮ ಜಗದ್ಗುರುಗಳ ಕರ್ತವ್ಯದಕ್ಷತೆಯಿಂದಲೂ ಕಾಳಜಿಯಿಂದಲೂ ಪ್ರಯತ್ನಮಾಡಿ ದೇಶದಲ್ಲಿ ಸಂಚರಿಸಿ, ಶಿಕ್ಷಣವಂಕೊಡುವದರಿಂದಲೂ ಆಗುವದು. ... *

೨. ಸಿಂಹಾಸನಾಧಿಪತ್ಯಕ್ಕೆ ವಟು (ಮರಿ)ಗಳನ್ನು ನಿಯಮಿಸುವ ಕಾಲಕ್ಕೆ ಪೂರ್ವಾಧಿಕಾರಿ ಗುರುಗಳು ಮತ್ತು ಪ್ರಮುಖ ವೀರಶೈವರು ಇಂಥಾ ಯೋಗ್ಯಸ್ಥಲಕ್ಕೆ ಪೂರ್ವೋಕ್ತ ಗುರುಲಕ್ಷಣ ಸಂಪನ್ನರಾದ ಯೋಗ್ಯಪುರುಷರಿಗೆ ಅಧಿಕಾರವನ್ನು ಕೊಡಬೇಕು.

೩. ನಮ್ಮ ಸಮಾಜದಲ್ಲಿನ ಧರ್ಮವಿಷಯದಲ್ಲಿ ಎಲ್ಲವರಕಿಂತಲೂ ಜಗದ್ಗುರುಗಳ ಅಧಿಕಾರವು ಪ್ರಬಲವಾಗಿರುವದು. ನಮ್ಮ ಜಗದ್ಗುರುಗಳು ಧರ್ಮರಾಜ್ಯದಲ್ಲಿನ ರಾಜರೆ ಇದ್ದಾರೆ ಹ್ಯಾಗೆ, ರಾಜ್ಯದಲ್ಲಿ ರಾಜರಯೋಗ್ಯತೆಯು ದೊಡ್ಡದಾಗಿರುವದೋ ಮತ್ತು ಆ ರಾಜರಿಗೆ ರಾಜ್ಯಸುಧಾರಣೆಯ ಗೋಸ್ಕರ ಯಾವದೊಂದು ಕಾಯದೆ ಮಾಡಲಿಕ್ಕೆ ಅಧಿಕಾರವಿರುವದೋ ಅದರಂತೆಯೇ ನಮ್ಮ ಧರ್ಮಗುರುಗಳಾದ ಜಗದ್ಗುರುಗಳ ಯೋಗ್ಯತೆಯಾದರೂ ನಮ್ಮವೀರಶೈವ ಸಮಾಜದ ಸುಧಾರಣೆಯ ಸಲುವಾಗಿ ಮತ್ತು ಧರ್ಮೋನ್ನತಿಯಸಲುವಾಗಿ ಅವಶ್ಯಬೇಕಾದ ನಿರ್ಬಂಧ (ಕಾಯದೆಕಿಂವಾ ನಿಯಮ) ಮಾಡುವ ಅಧಿಕಾರವುಂಟು ಪರಂತು ಶಾಸ್ತ್ರೋಕ್ತವಾದ ಗುಣಗಳಿಂದ ಕೂಡಿದ್ದರೆ ಅವರಯೋಗ್ಯತಾ ದೊಡ್ಡದಾಗುತ್ತದೆ. ಧರ್ಮ

ಗುರುಗಳು ಅಂದರೆ ಸಿಂಹಾಸನಾಧಿಪತಿಗಳು ಮಾಡಿದ ಕಾಯದೆಯನ್ನು ಶಿರಸಾವಹಿಸಿ ರಂತೆ ನಮ್ಮ ಸಮಾಜದವರು ನಡಿಯಲಿಕ್ಕೆಬೇಕು. ... ...

೪. ಸಿಂಹಾಸನಾಧಿಪತಿಗಳ ಕರ್ತವ್ಯ. ... ...

೧. ಧರ್ಮಶಾಸ್ತ್ರಗಳನ್ನು ತಿಳಿದು ಸಾಧಾರಣ ಜನಸಮೂಹಕ್ಕೆ ಧರ್ಮಶಿಕ್ಷಣ ಕೊಟ್ಟು ಅವುಗಳ ರಹಸ್ಯ (ತತ್ವ)ಗಳನ್ನು ತಿಳಿಸಿಕೊಡುವದು. ...

೨. ಧರ್ಮಮಾರ್ಗಚ್ಯುತರಾಗತಕ್ಕವರಿಗೆ ಧರ್ಮತತ್ವವನ್ನು ತಿಳಿಸಿ ಪುನಃ ಧರ್ಮಮಾರ್ಗಕ್ಕೆ ಹಚ್ಚುವದು. ... ... ...

೩. ಬೇರೆಬೇರೆ ಸ್ಥಲಗಳಲ್ಲಿ ಧರ್ಮೋಪದೇಶಕರನ್ನು ಕಳುಹಿಸಿ ಧರ್ಮಪ್ರ ವನ್ನು ಮತ್ತು ಲೋಕಜಾಗ್ರುತಿಯನ್ನು ಮಾಡಿಸುವದು. ... ...

೪. ಸಮಾಜದಲ್ಲಿನ ರೀತಿ ಆಚಾರವಿಚಾರ ಕೆಟ್ಟದ್ದರೆ ಅದರಲ್ಲಿ ಯೋಗ್ಯ ಣೆಯು ಮಾಡಿ ಅದರಂತೆ ಅವರಿಗೆ ಆಚರಣೆಯಲ್ಲಿ ತರುವದು. ...

೫. ಇಂಥಾ ಸಮಾಜದಲ್ಲಿ ವಿದ್ಯಾಭಿರುಚಿಯನ್ನು ಮತ್ತು ಧರ್ಮಶ್ರದ್ಧೆ ಹುಟ್ಟಿಸುವದು. ... ... ... ...

೬. ಸಮಾಜ ಸುಧಾರಣೆಯ ಸಲುವಾಗಿ ಯೋಗ್ಯಕಾಯದೆಯನ್ನು ಮಾಡಿ ಮತ್ತು ಅದನ್ನು ಪ್ರಚಾರದಲ್ಲಿ ತರುವ ವ್ಯವಸ್ಥೆಯನ್ನಿಡುವದು. ...

೭. ಧರ್ಮಸಂಬಂಧಿ ಕಲಹ ಉತ್ಪನ್ನ ಮಾಡಗೊಡಬಾರದು. ಯದ್ಯಪಿ ಆ ಅದನ್ನು ಆಪ್ರಸಕ್ತಿನಲ್ಲೆ ಯೋಗ್ಯರೀತಿಯಿಂದ ನಿಕಾಲ ಮಾಡುವದು. ...

೮. ಸಮಾಜದ ಕಡಿಯಿಂದ ಧರ್ಮಶಾಸ್ತ್ರದಲ್ಲಿ ಹೇಳಿದಪ್ರಕಾರ ಆಚರಣೆ ಮಾಡಿಸುವದು. ... ... ... ...

೯. ಧರ್ಮಾಧಿಕಾರಿ ಉಪಾಚಾರ್ಯ ಮತ್ತು ಕಟ್ಟಮನಿಯವರು ಪ್ರತ್ಯೇ ಮದಲ್ಲಿ ಇವರಕಡಿಗೆ ಇದ್ದ ಧರ್ಮಾಧಿಕಾರಿ ಕೆಲಸವು ಚನ್ನಾಗಿ ನಡದದೆಯೋ ಇಲ್ಲೋ ಅದನ್ನು ತಿಳಿದುಕೊಳ್ಳುವದರಗೋಸ್ಕರ ಮತ್ತು ಆ ಕೆಲಸವನ್ನು ಯೋಗ್ಯ ಯಿಂದ ನಡಿಸುವದಕ್ಕೋಸ್ಕರ ಸರ್ವದಾ ದೇಶಸಂಚಾರ ಮಾಡುವದು. ಇಲ್ಲದೆ ಅಂಥಾ ಅಧಿಕಾರವನ್ನು ಯೋಗ್ಯಪುರುಷರಿಗೆ ಕೊಟ್ಟು, ದೇಶಸಂಚಾರ ಮಾಡಿಸುವದು.

೧೦. ಈ ಪ್ರಕಾರ ತಮ್ಮ ಧರ್ಮದ ಉನ್ನತಿಯನ್ನು ಮಾಡಿ ಸಮಾಜದ ರಣೆಯುಂ ಮಾಡುವದು. ... ... ... ...

ಇವೇ ಮೊದಲಾದ ಧರ್ಮಾಧಿಕಾರ ಕೆಲಸವನ್ನು ಮಾಡಿದರೆ ಸಿಂಹಾಸನ ಗಳಿಗೆ ಧರ್ಮಗುರುಗಳೆಂದು ಹೆಸರು ಸಲ್ಲುವದು. ... ...

೫. ಸಿಂಹಾಸನಾಧಿಪತಿಗಳು, ಮುಖ್ಯ ಧರ್ಮಶಾಸ್ತ್ರ ಶಿವಾಗಮಬಲ್ಲ ಶಾಸ್ತ್ರಜ್ಞರಾದ ಆಚಾರ ಸಂಪನ್ನರಾದವರಿಗೆ ಅಧಿಕಾರವನ್ನು ಕೊಡಬೇಕು. ಇಲ್ಲದಿದ್ದರೆ ವರ್ಣಾಶ್ರಮಕ್ಕೆ ವಿರುದ್ಧವಾಗಿ ನಡಿದು ಮೂರ್ಖಗುರುಗಳು ಧರ್ಮಭ್ರಷ್ಟರಾಗಿ ಸಮಾಜಕ್ಕೆ ಹೀನಸ್ಥಿತಿಯನ್ನುಂಟುಮಾಡುವರು. ಆದಕಾರಣ ಯೋಗ್ಯ ಸುಶೀಲರಿಗೆ ಅಧಿಕಾರ ಕೊಡುವ ನಿರ್ಬಂಧವನ್ನು ಮಾಡಬೇಕು. ಅವರು ವರ್ಣಾಶ್ರಮಕ್ಕೆ ಸರಿಯಾಗಿ ನಡದಿದ್ದಾರೋ ಇಲ್ಲೋ ಇಪರ ಪರೀಕ್ಷೆಯನ್ನು ಮಾಡಿ ಅವರ ಆಚಾರ ವಿಚಾರಗಳಲ್ಲಿ ನೆಟ್ಟಗಿಲ್ಲದಿದ್ದರೆ ಅವರನ್ನು ಆ ಅಧಿಕಾರದಿಂದ ದೂರಮಾಡಿ ಆ ಸ್ಥಲದಲ್ಲಿ ಮತ್ತೊಬ್ಬ ಯೋಗ್ಯರನ್ನು ನಿಯಮಿಸುವ ಕಾಯದೆಯನ್ನು ಮಾಡಬೇಕು. ಮತ್ತು ಆ ಅಧಿಕಾರದಿಂದಚ್ಯುತರಾದವರಿಗೆ ಬೇರೆ ವ್ಯವಸ್ಥೆಯನ್ನು ಹಚ್ಚಬೇಕು. ಈ ಪ್ರಕಾರ ಸಿಂಹಾಸನಾಧಿಪತಿಗಳು ಮಾಡಿದರೆ ಜಾಗ್ರುತಿಯಾಗಿ ಕ್ರಮಕ್ರಮದಿಂದ ಸಮಾಜಸುಧಾರಣೆಯು ಆಗಿ ಆ ಶ್ರೇಯಸ್ಸು ಜಗದ್ಗುರುಗಳಿಗೆಬರುವಹು

೬. ಉಪಾಚಾರ್ಯರಿಗೆ ಧರ್ಮಶಾಸ್ತ್ರದ ಜ್ಞಾನವಿಲ್ಲದಕಾರಣ ದೀಕ್ಷಾ, ಲಗ್ನ ಮುಂತಾದ ಧರ್ಮಕಾರ್ಯಗಳಲ್ಲಿ ಮಂತ್ರತಂತ್ರವಿಲ್ಲದೆ ನಮ್ಮಸಮಾಜದಲ್ಲಿ ಧರ್ಮವಿರುದ್ಧವಾಗಿ ಕಾರ್ಯಗಳು ಜರಗುವವು. ಆದಕಾರಣ ಅವರಿಗೆ ನಿದಾನ ಷೋಡಶಕರ್ಮ ಜ್ಞಾನವನ್ನಾದರೂ ಉಂಟಾಗುವಂತೆ ಸಕ್ತು ಹುಕುಂ ಸಿಂಹಾಸನಾಧಿಪತಿಗಳು ಮಾಡಬೇಕು. ... *

೭. ನಮ್ಮಸಮಾಜದಲ್ಲಿ ನಾನಾವಿಥಬಲ್ಲ ಪಂಡಿತರಿದ್ದರೆ ನಮ್ಮ ಸಮಾಜಸುಧಾರಣೆಯಾಗುವ ಸಂಭವವದೆ. ನಮ್ಮ ಸಮಾಜದಲ್ಲಿ ವಿದ್ಯಾಭಿರುಚಿಯನ್ನು ಹಚ್ಚಿಸುವದು ಜರೂರವಿಧೆ. ಎಷ್ಟೋ ವಿದ್ಯಾರ್ಥಿಗಳು ಉಚ್ಚತಮ ಶಿಕ್ಷಣೆಯಂ ಹೊಂದುವ ಇಚ್ಛೆಯು ಪೂರ್ಣನಿರುತ್ತದೆ. ಪರಂತು ದ್ರವ್ಯಸಹಾಯವಿಲ್ಲದಕಾರಣ ಅವರ ಇಚ್ಛಾಪೂರ್ಣವಾಗುವದಿಲ್ಲ ಆದಕಾರಣ ಅಂಥಾ ವಿದ್ಯಾರ್ಥಿಗಳ ಇಚ್ಛೆಯನ್ನು ಪರಿಪೂರ್ಣ ಮಾಡಿಸುವದಕ್ಕೋಸ್ಕರ ನಮ್ಮ ಸಮಾಜದವರು ಅವರ ಆಶಾಭಂಗವಾಗದಂತೆ ದ್ರವ್ಯಸಹಾಯ ಮಾಡುವದಕ್ಕೋಸ್ಕರ ಅಲ್ಲಲ್ಲಿ ದ್ರವ್ಯಫಂಡವನ್ನು ಮಾಡಿಡಬೇಕು. ಲಗ್ನಾದಿಕಾರ್ಯಗಳಲ್ಲಿ ಮದ್ದು ನಾಚು ಮುಂತಾದ ಕಾರ್ಯಗಳಿಗೆ ದ್ರವ್ಯಖರ್ಚನ್ನು ಮಾಡುವದು ಬಿಟ್ಟು ಆ ದ್ರವ್ಯವನ್ನು ಜ್ಞಾನದಾನಾರ್ಥ ಕೊಡುವದಕ್ಕೋಸ್ಕರ ಸಮಾಜದವರು, ಉಪಾಚಾರ್ಯರು, ಮತ್ತು ಸಿಂಹಾಸನಾಧಿಪತಿಗಳು, ಪ್ರಯತ್ನಮಾಡಬೇಕು. ಧರ್ಮಗುರುಗಳಾದ ಸಿಂಹಾಸನಾಧಿಪತಿಗಳು ದೇಶಸಂಚಾರಕ್ಕೆ ಹೊರಟಕಾಲದಲ್ಲಿ ಪ್ರತ್ಯೇಕ ಗ್ರಾಮದಲ್ಲಿ ಸಭೆಯನ್ನು ತುಂಬಿಸಿ, ಆ ಗ್ರಾಮದವರಿಗೆ ಧರ್ಮಶ್ರದ್ಧೆಯುಂಟಾಗುವಂತೆ ಉಪದೇಶವಂ ಮಾಡಿ ಸಾರ್ವಜನಿಕ ಕಾರ್ಯಾರ್ಥ ದ್ರವ್ಯ ಫಂಡನ್ನು ಮಾಡಿಸುವದು ಅವರ ಕರ್ತವ್ಯಕರ್ಮವಾಗಿಧೆ. ಅವರು ಧರ್ಮಗುರುಗಳಾದ ಕಾರಣ ಅವರ ಆಜ್ಞಾಭಂಗವನ್ನು ಯಾವ ವೀರಶೈವ ಸಮಾಜದವನೂ ಮಾಡಲಿಕ್ಕೆ ಬರುವದಿಲ್ಲ. ಅಂದಬಳಿಕ

ಈ ವ್ಯವಸ್ಥೆಯನ್ನು ಸದರಿ ಗುರುಗಳು ಸ್ವೀಕರಿಸಿದರೆ ಶೀಘ್ರ ಅಮಲದಲ್ಲಿ ಬಂದು ವೃಥಾ ಡಿನ ಕಾರ್ಯವು ಜಾರಿಯಲ್ಲಿ ಬರುವದು. ... ...

೮. ಅದರಂತೆ ಸಮಾಜ ಸುಧಾರಣೆಯಗೋಸ್ಕರ ಪುನರ್ವಿವಾಹ ಪ್ರೌಢ ಧಾರ್ಮಿಕ ಕಲಹ ರೀತಿ ಮತ್ತು ಆಚಾರವಿಚಾರ ಇವುಗಳ ವಿಷಯದಲ್ಲಿ ಒಂದು ಕಾಯ ನಿರ್ಬಂಧವನ್ನು ಮಾಡುವದು ಅವಶ್ಯವಿರುವದು. ಈ ಕಾಯದೆಯನ್ನು ಮಾಡುವ ಛಾಸನಾಧಿಪತಿಗಳ ಯೋಗ್ಯ ಕರ್ತವ್ಯವದೆ. ಯಾಕಂದರೆ ಅವರಿಗೆ ಧರ್ಮಶಾಸ್ತ್ರಜ್ಞಾನ ವ ಧರ್ಮಾಧಿಕಾರವಿದ್ದ ಕಾರಣ ಆ ಕೆಲಸವನ್ನು ಯೋಗ್ಯರೀತಿಯಿಂದ ಮಾಡುವ ಸಾಮ ಪೂರ್ಣವಿರುವುದು. ... ... ... ...

೯. ಸಣ್ಣವಯಸ್ಸಿನಲ್ಲಿ ವಿವಾಹವನ್ನು ಮಾಡುವದರಿಂದ ವಿದ್ಯಾಭ್ಯಾಸಕ್ಕೆ ದರೆಯು ಬರುತ್ತದೆ. ಆದಕಾರಣ ಬಾಲಬಾಲಕಿಯರಿಗೆ ಪ್ರೌಢ ವಿವಾಹವನ್ನು ಮ ನಿರ್ಬಂಧವಾಗಬೇಕು. ... ... ... ...

೧೦. ಪುನರ್ವಿವಾಹಗಳಿಂದ ಪುಷ್ಕಳ ಅನರ್ಥಗಳಾಗುತ್ತವೆ ಆದಕಾರಣ ಶಾಸ್ತ್ರದಲ್ಲಿರಲಿ, ಇಲ್ಲದಿರಲಿ, ರೂಢಿಯಲ್ಲಿ ಪ್ರೌಢವಿವಾಹವು ಪ್ರಬಲವಾಗುವವರೆಗೂ ವಿಧವೆಯು ಪುನಃ ಒಬ್ಬನ್ನೇ ಪುನರ್ವಿವಾಹ ಮಾಡಿಕೊಳ್ಳಬೇಕೆಂದು ಸಿಂಹಾಸನಾಧಿಪ ನಿರ್ಬಂಧವನ್ನು ಮಾಡಬೇಕು. ಹೆಚ್ಚಿಗೆಮಾಡಿದರೆ ಅವರಿಬ್ಬರನ್ನು ಸಮಾಜದಿಂದ ಹಾಕುವ ಕಾಯದೆಯನ್ನು ಕೂಡಾ ಮಾಡಬೇಕು. ಹೀಗೆ ಮಾಡದಿದ್ದರೆ ಮೊದಲಿನ ನು ಇರಲಿಕ್ಕೆ ..... ಪುನರ್ವಿವಾಹವನ್ನು ಸ್ತ್ರೀಯರು ಬಂದು ನೆವದಿಂದ ಳ್ಳುವದು ದೃಷ್ಟಿಗೋಚರವಾಗುತ್ತದೆ. ಅದನ್ನು ತಪ್ಪಿಸುವ ಯತ್ನವನ್ನು ಮಾಡಿದ ಜದಲ್ಲಿ ಕಲಹವಿಲ್ಲದೆ ಬಂದೊಂದುಕಾಲದಲ್ಲಿ ಈ ಪುನರ್ವಿವಾಹ ವಿಷಯಕ ಕಲಹ ರ್ಟನವರ್ಯಂತ ಹೋಗಿ ದ್ರವ್ಯಖರ್ಚುಮಾಡುವದು ಬಂದಾಗಿ ಸಮಾಜಕ್ಕೆ ಕಲ್ಯಾಣ ಹುದೆಂದು ತೋರುತ್ತದೆ. ಆದಕಾರಣ ಪ್ರಮುಖ ವೀರಶೈವರ ಮತ್ತು ಪಂಡಿತರ ಸ ಯನ್ನು ತೆಗಿದುಕೊಂಡು ಸಿಂಹಾಸನಾಧಿಪತಿಗಳು ಮೇಲೆ ತೋರಿಸಿದ ವಿಷಯದಲ್ಲಿ ನಿರ್ಬಂಧವನ್ನು ಮಾಡಿಡಬೇಕು. ... ... ...

೧೧. ಆಚಾರವಿಚಾರ ವಿಷಯದಲ್ಲಿ ಸಮಾಜದ ಕಲಹವು ಸಂಭವಿಸಬಹು ಚಾರವಿಚಾರ ವಿಷಯದಲ್ಲಿ ಒಂದು ರೂಪವನ್ನು ಮಾಡಿಕೊಡುವ ವಿಷಯದಲ್ಲಿ ಸಿಂಹಾ ಧಿಪತಿಗಳಿಗೆ ಜರೂರಾಗಿ ಒಪ್ಪಿಸಿಕೊಡಬೇಕು. ಅವರಿಗೆ ಶಾಸ್ತ್ರಜ್ಞಾನವಿದ್ದ ಕಾರಣ ಮಾಡಿದ ಏಕರೂಪತೆಯು ಕಾಯದೆಯನ್ನು ಸಮಾಜದವರು ಮಾನಿಸಲಿಕ್ಕೆ ಬೇಕು.

೧೨. ಯಾರಾದರು ಸಿಂಹಾಸನಾಧಿಪತಿಗಳು ಜಾಗಜಾಗೆಯಲ್ಲಿ ಹೋಗಿ ಜನರಿಗೆ ಉಪದೇಶಮಾಡುವದು ನೆಟ್ಟಗಲ್ಲೆಂದು ಅನ್ನಬಹುದು. ಪರಂತು ಅವರು ಮಠಪಲ್ಲಿ ಕೂಂತುಮಾಡುವದೇನು? ಅವರ ವಿದ್ವತ್ತೆಯು ಉಪಯೋಗವು ಸಮಾಜದಲ್ಲಿ ಹ್ಯಾಗೆಬೀಳುವದು ಆದಕಾರಣ ಪೂರ್ವಪದ್ಧತಿಯ ಪ್ರಕಾರ ಅಂದರೆ ಶ್ರೀ ರೇವಣಸಿದ್ಧ ಮೊದಲಾದ ಸಿಂಹಾಸನಾಧಿಪತಿಗಳು, ಮತ್ತು ಶ್ರೀಮನ್ನಿರಂಜನ ಜಗದ್ಗುರು ಅಲ್ಲಮಪ್ರಭು ಮಹಾಸ್ವಾಮಿಗಳು, ದೇಶಸಂಚಾರಮಾಡಿ ಪೊನ್ನಲಾಪುರದ ಮುದ್ದಗೌಡ ಮತ್ತು ಇತರಜನರಿಗೆ ಬಸವೇಶ್ವರ ಮೊದಲಾದ ಪ್ರಮಥಗಣ, ಮತ್ತು ಯರಡನೆಯು ಜನರಿಗೆ ತತ್ವೋಪದೇಶವನ್ನು ಮಾಡಿ ತಮ್ಮ ವಿದ್ವತ್ತೆಯು ಮತ್ತು ತಮ್ಮ ಕರ್ತವ್ಯಕರ್ಮವನ್ನು ಪಯೋಗಮಾಡಿದಂತೆ ಈಗಿನ ಸಿಂಹಾಸನಾಧಿಪತಿಗಳಾದರೂ ಕಾಲಕ್ಕನುಸರಿಸಿ ಸ್ವತಃದೇಶಸಂಚಾರಮಾಡಿ ಸಮಾಜಕ್ಕೆ ಧರ್ಮೋಪದೇಶವನ್ನು ಮಾಡಬೇಕು. ಮತ್ತು ಧರ್ಮತತ್ವವನ್ನು ಬಲ್ಲ ವಿದ್ವಾಂಸರಾದ ಪಂಡಿತ ಧರ್ಮೋಪದೇಶಕರಿಗೆ ದೇಶದೇಶದಲ್ಲಿ ಕಳುಹಿಸಿ ವೀರಶೈವಸಮಾಜಕ್ಕೆ ಧರ್ಮೋಪದೇಶವನ್ನು ಮಾಡಿಸಬೇಕು. ಈ ಪ್ರಕಾರ ಮಾಡುವವರಿಂದ ಧರ್ಮೋನ್ನತಿಯು ಕೆಲಸದಲ್ಲಿ ಸಿಂಹಾಸನಾಧಿಪತಿಗಳ ದೇಶಸಂಚಾರದ ಉಪಯೋಗವು ಸಮಾಜಕ್ಕೆ ಬಹಳೇ ಉಪಯೋಗವಾಗುವದು.

೧೩. ಹ್ಯಾಗೆ ರಾಜ್ಯಕಾರಭಾರವು ಸುರಳತರೀತಿಯಿಂದ ನಡಿಯುವದಕ್ಕೋಸ್ಕರ ರಾಜನು ಬೇರೆಬೇರೆ ಪ್ರದೇಶದಲ್ಲಿ ಬೇರೆಬೇರೆ ಅಧಿಕಾರಿಗಳನ್ನು ನೇಮಿಸುತ್ತಾನೋ ಅದರಂತೆ ಧರ್ಮೋನ್ನತಿಯಾಗಬೇಕೆಂದು ಧಾರ್ಮಿಕ ವಿಷಯದಲ್ಲಿ ಲಕ್ಷವನ್ನಿಡುವ ಮತ್ತು ಸುಧಾರಣೆಯು ಮಾಡುವ ಕೆಲಸವನ್ನು ನಮ್ಮ ಸಿಂಹಾಸನಾಧಿಪತಿಗಳು ಬೇರೆ ಬೇರೆ ದೇಶದಲ್ಲಿ ಮತ್ತು ಗ್ರಾಮಗಳಲ್ಲಿರುವ ಯೋಗ್ಯಪುರುಷರ ಕಡಿಗೆ ಮತ್ತು ಉಪಾಚಾರ್ಯರ ಕಡಿಗೆ ಒಪ್ಪಿಸಬೇಕು. ಧರ್ಮಾಧಿಕಾರ ನಿರ್ಬಂಧದಕೆಲಸವು ಸಿಂಹಾಸನಾಧಿಪತಿಗಳಗೇನೆ ಯಾಕೆಂದು ಕೆಲವರು ಪ್ರಶ್ನಮಾಡಬಹುದು. ಪರಂತು ದೇಶೋನ್ನತಿಯು ಸಲುವಾಗಿ ಪ್ರತ್ಯೇಕ ದೇಶದಲ್ಲಿ ಪ್ರತ್ಯೇಕ ಸಮಾಜದಲ್ಲಿ ನಾಲ್ಕುವರ್ಗಗಳರಲಿಕ್ಕೆಬೇಕು. ಅವು ಯಾವೆಂದರೆ;—ಶೇತಕಿವರ್ಗ ೧, ವ್ಯಾಪಾರಿವರ್ಗ ೨, ರಾಜವರ್ಗ ೩, ಧರ್ಮವರ್ಗ ೪, ಈ ಪ್ರಕಾರವಿದ್ದರೆ ದೇಶಕಲ್ಯಾಣವಾಗುವದು. ಒಬ್ಬರ ಕೆಲಸವನ್ನು ಮತ್ತೊಬ್ಬರು ಮಾಡಿದರೆ ಆ ಕಾರ್ಯವು ಸಾಧಿಸುವದಿಲ್ಲ. ಆದಕಾರಣ ನಮ್ಮ ಪೂರ್ವಜ ವೀರಶೈವ ಸಮಾಜದವರು ಸಿಂಹಾಸನಾಧಿಪತಿಗಳಿಗೆ ಧರ್ಮಾಧಿಕಾರ ನಿರ್ಬಂಧಿಸುವ ಅಧಿಕಾರವನ್ನು ಪೂರ್ವದಲ್ಲಿಯೆ ವಂಶಪರಂಪರೆಯಿಂದ ಕೊಟ್ಟು ಅದರಂತೆ ಅವರುಮಾಡಿದ ನಿರ್ಬಂಧವನ್ನು ಮಾನಿಸುತ್ತಬಂದಿರುವರು. ಆದಕಾರಣ ಮತ್ತು ಆ ಸಿಂಹಾಸನಾಧಿಪತಿಗಳಿಗೆ ಎಲ್ಲರಕಿಂತಲೂ ಶಾಸ್ತ್ರಜ್ಞಾನ ವಿಶೇಷವಾಗಿರುವದು. ಮತ್ತು ಯಾವವಿಷಯದಲ್ಲಿ ತಮ್ಮಗೆ ಶಾಸ್ತ್ರೋಕ್ತರೀತಿಯಿಂದ ನಡಿಯಬೇಕೆಂದಿರುವದು, ಆ ವಿಷಯದಲ್ಲಿ ಧರ್ಮೋನ್ನತಿಯ ಸಲುವಾಗಿ, ಮತ್ತು ಸಮಾಜಸುಧಾರಣೆಯು ಸಲುವಾಗಿ, ಅವಶ್ಯ ಬೇಕಾದ

ನಿರ್ಬಂಧವನ್ನು ಮಾಡುವ ಕೆಲಸದಲ್ಲಿ ಸಿಂಹಾಸನಾಧಿಪತಿಗಳಿಗೆ ಎಷ್ಟು ಯೋಗ್ಯತೆಯು ಅಷ್ಟು ಯಾರಿಗೂ ಇಲ್ಲ. ಆದಕಾರಣ ಪಟ್ಟಕ್ಕೆ ನೇಮಿಸುವ ಮಠಿಗಳ ಆರಿಸುವ ವಿಷ ಆಚಾರವಿಚಾರ ವಿಷಯದಲ್ಲಿ ಪುನರ್ವಿವಾಹ, ಪ್ರೌಢವಿವಾಹ, ಮತ್ತು ಧಾರ್ಮಿಕ ಮೊದಲಾದ ವಿಷಯಗಳಲ್ಲಿ ನಿರ್ಬಂಧವನ್ನು ನಮ್ಮ ಜಗದ್ಗುರು ಸಿಂಹಾಸನಾಧಿಪತಿಗ ಡಿತ ವೀರಶೈವರ ವಿಚಾರದಿಂದಲೂ ಅವರ ಸಮ್ಮತಿಯಿಂದಲೂ ಮಾಡಬೇಕು. ಯಾಗಿ ಸಿಂಹಾಸನಾಧಿಪತಿಗಳು ತಮ್ಮ ಕರ್ತವ್ಯಕರ್ಮವನ್ನು ಮಾಡುತ್ತ ಹೋದರೆ ಧರ್ಮೋನ್ನತಿಯು ಮತ್ತು ಸಮಾಜ ಸುಧಾರಣೆಯ ಕೆಲಸದಲ್ಲಿ ಪುಷ್ಕಳ ಉಪ ಆದಂತೆ ಆಗುವದು. ಈ ಪ್ರಕಾರವಾದರೆ ಅನಾಯಾಸದಿಂದ ಸಮಾಜಸುಧಾರಣೆಯಾ ತ ಲೋಪವಾದ ಧರ್ಮವು ಊರ್ಜಿತಸ್ಥಿತಿಗೆ ಶೀಘ್ರವಾಗಿ ಬರುವದೆಂದು ಭಾವಿಸುತ್ತೇ

## —( ಸಮಾಜ ಸುಧಾರಣೆಗೆ ಸರ್ವರು ಐಕ್ಯರಾಗಿರಬೇಕು. )—

ಶ್ಲೋ॥ ಸಂಹತಿಃಶ್ರೇಯಸೀಪುಂಸಾಂ ಸ್ವಕುಲೈರಲ್ಪಕೈರಪಿ । ;
ತುಷೇಣಾಪಿಪರಿತ್ಯಕ್ತಾ ನಪ್ರರೋಹಂತಿತಂಡುಲಾಃ ॥೧॥

ನಾವು ದೊಡ್ಡವರು ಎಂದು ಭಾವಿಸಿ, ತಮ್ಮಕುಲದ ಬಡವ್ರ ಜನರನ್ನು ಕಾರ್ಯವನ್ನು ಮಾಡಿದರೆ ಅದು ಸಿದ್ಧಿಗೆ ಹೋಗಲಿಕ್ಕಿಲ್ಲ. ಆದಕಾರಣ ಅತ್ಯಂತ ಗರೀ ತಮ್ಮಕುಲದ ಜನರಿಂದ ಕೂಡಿ ಸಮಾಜ ಸುಧಾರಣೆಯ ಕೃತ್ಯವನ್ನು ಮಾಡಿದರೆ ಜನರಿಗೂ ಆ ಕೃತ್ಯದ ಸಿದ್ಧಿಯುಂಟಾಗಿ ಕೀರ್ತಿಯು ಬರುತ್ತದೆ. ಹ್ಯಾಗೆಂದರೆ; ಹೊ ಅಕ್ಕಿಗಳನ್ನು ಬಿತ್ತಿದರೆ ಭತ್ತವು ಬರುವದಿಲ್ಲ ಎಂಬ ಪ್ರಮಾಣದಿಂದ ನಮ್ಮ ವೀ ಐಕ್ಯಮತ್ಯದಿಂದ ಸರ್ವದೇಶದಲ್ಲಿ, ಹೃದಯದಲ್ಲಿ ಕಪಟವಿಲ್ಲದೆ ನಡೆದರೆ ಶೀಘ್ರ ನಮ್ಮ ಸಮಾಜವು ಉತ್ತಮಸ್ಥಿತಿಗೆ ಬರುತ್ತದೆ. ಆದಕಾರಣ ಯಾವತ್ತು ವೀರಶೈವ ಮತ್ಯದಿಂದ ಯಾವತ್ತು ಕಾರ್ಯದಲ್ಲಿ ನಡೆಯುವಂತೆ ಮಹಾಸಭೆಯವರಿಂದ ಬಂದು ವಾಗಬೇಕು. ... ... ... ... ...

( ಕೈಚಪ್ಪಾಳೆ. )

ಮಣೂರ ಮಲ್ಲಿಕಾರ್ಜುನಶಾಸ್ತ್ರೀ,
ಮುಕ್ಕಾಂ ಸೋಲಾಪುರ.

ಬಳಿಕ ಶ್ರೀಮನ್ ಆನರಬಲ್ ಬಂಟಮುರಿ ಸರದೇಸಾಯಿ ಯವರ ತಮ್ಮನ ಕುಮಾರನಾದ ೧೦ ವರ್ಷದ ಬಾಲಕನು, ವಿದ್ಯಾ ವಿಷಯಕವಾಗಿ ಬರೆದು ತಂದಿದ್ದ ಭಾಷಣವನ್ನು ಉನ್ನತಾಸನದಮೇಲೆ ನಿಂತು ಓದಿ ಹೇಳಿದನು. ಸಭಿಕರೆಲ್ಲರೂ ಆನಂದದಿಂದ ಕರತಾಡನ ಮಾಡಿದರು. ಆತನ ಬುದ್ಧಿಶಕ್ತಿಗೆ ಮೆಚ್ಚಿ ಅಧ್ಯಕ್ಷರು ಒಂದು ಭಂಗಾರದ ಪದಕವನ್ನು ಆತನಿಗೆ ಬಹುಮಾನ ಕೊಡುವದಾಗಿ ಅಪ್ಪಣೆ ಕೊಡಿಸಿದರು. ಆತನ ಭಾಷಣವು ಈ ಕೆಳಗೆ ಕಂಡಂತೆ;— ... ... ... ... *

## —(ವಿದ್ಯಾ.)—

ಮಹಾ ಸ್ವಾಮಿಗಳೇ? ಅಧ್ಯಕ್ಷರೇ? ಮತ್ತು ಸಭ್ಯಗೃಹಸ್ಥರೇ! ಈ ಹೊತ್ತು ತಾವೆಲ್ಲರು ನನಗೆ ವಿದ್ಯೆಯನ್ನು ಕುರಿತು, ಅಲ್ಪ ವಿಚಾರಗಳನ್ನು ಹೇಳಲಿಕ್ಕೆ ಅಪ್ಪಣೆಕೊಟ್ಟಬಗ್ಗೆ ನಾನು ತಮ್ಮೆಲ್ಲರ ಉಪಕಾರವನ್ನು ನೆನೆಯುತ್ತೇನೆ. ಈ ವಿಷಯವು ಅತಿ ಗಹನವಾದದ್ದು, ಬಹು ವಿಸ್ತೃತವಾದದ್ದು, ಮತ್ತು ಬಹಳ ಜನರಿಂದ ಚರ್ಚಿಸಲ್ಪಟ್ಟದ್ದಾದ್ದರಿಂದ ನಾನು ವಿಶೇಷವಾಗಿ ಹೇಳಲಿಕ್ಕೆ ಸಮರ್ಥನಲ್ಲ. ವಿದ್ಯೆಯನ್ನು ಪ್ರತಿಯೊಬ್ಬ ಮನುಷ್ಯನು ಸಂಪಾದಿಸತಕ್ಕದ್ದು. „ವಿದ್ವಾನ್ ಸರ್ವತ್ರಪೂಜ್ಯತೆ,, ಎಂಬ ಗಾದಿಯುಮಾತು ತಮ್ಮೆಲ್ಲರಿಗೆ ತಿಳಿದದ್ದೇ ಅದೆ. ಎಲ್ಲಸುಖಗಳಿಗೂ ಈ ವಿದ್ಯೆಯೇ ಕಾರಣವಾದದ್ದೆಂದು ನಾನು ನಂಬುತ್ತೇನೆ. ಈ ವಿದ್ಯೆಯ ಪ್ರಭಾವವನ್ನು ನಮ್ಮ ಸಮಾಜವು ಅರಿಯದೆ ಇದ್ದಕಾರಣ ಎಲ್ಲ ತರದ ಸುಧಾರಣೆಗಳಲ್ಲಿ ಹಿಂದುಳಿದಿರುತ್ತದೆ. ಈ ವಿಷಯವು ಮಹಾ ಸಭೆಯವರಿಗೆ ಗೋಚರವಾದ ಕಾರಣ ಎಲ್ಲ ಪ್ರಕಾರದಿಂದ ವಿದ್ಯೆಯನ್ನು ಸಂಪಾದಿಸಲಿಕ್ಕೆ ಪ್ರೋತ್ಸಾಹಗೊಳಿಸುತ್ತಲಿದ್ದಾರೆ. ಈ ಸಂಗತಿಯು ತಿಳಿದು ನನ್ನ ಮನಸ್ಸಿಗೆ ಆಹ್ಲಾದವಾಯಿತು. ವಿದ್ಯೆಯನ್ನು ಸಂಪಾದಿಸದೇ ಇರತಕ್ಕ ಪ್ರಾಣಿಗಳು ಕೇವಲಪಶುಗಳೇ ಎಂದು ತಿಳಿಯತಕ್ಕದ್ದು „ವಿದ್ಯಾವಿಹೀನಃಪಶುಃ ,, ಎಂಬ ಗಾದಿಯೇ ಹೇಳುತ್ತದೆ. ಅದಕಾರಣ ಎಲ್ಲ ಬಾಲಕರು ವಿದ್ಯೆಯನ್ನು ಕಲಿಯಲಿಕ್ಕೆ ಅತಿ ಉತ್ಸುಕತೆಯುಳ್ಳವರಾಗಿ ದೀರ್ಘ ಪ್ರಯತ್ನಗಳನ್ನು ಮಾಡಬೇಕು. ವಿದ್ಯೆಯನ್ನು ಕಲಿಯುವದಕ್ಕೆ ಚಿಕ್ಕವಯಸ್ಸೇ ಸರಿಯಾದದ್ದು. ಹ್ಯಾಗಂದರೆ;—ಚಿಕ್ಕವಯಸ್ಸಿನಲ್ಲಿ ಕಲಿತರೆ ಹಸಿಯಗೋಡೆಯಲ್ಲಿ ಹರಳು ಚುಚ್ಚಿದರೆ ಯಾವಪ್ರಕಾರ ಸ್ಥಿರವಾಗಿ ನಿಲ್ಲುವದೋ ಅದರಂತೆ ಸ್ಥಿರವಾಗಿ ನಿಲ್ಲುವದು. ವಿದ್ಯೆಯು ತಾಯಿಯಂತೆ ರಕ್ಷಣಮಾಡುವದಕ್ಕೂ, ತಂದೆಯಂತೆ ಪಾಲನಮಾಡುವದಕ್ಕೂ, ಅಣ್ಣ ತಮ್ಮಂದಿರಂತೆ ಸಹಾಯ ಮಾಡುವದಕ್ಕೂ, ಮುಖ್ಯವಾಗಿದ್ದದ್ದರಿಂದ ವಿದ್ಯೆಯನ್ನು ಪ್ರತಿಯೊಬ್ಬರು ಕಲಿಯಬೇಕು. ತಮ್ಮ ಮಕ್ಕಳಿಗೆ ಚಿಕ್ಕತನದಲ್ಲಿ ಲಗ್ನಮಾಡಿ ಏನೂ ಅರಿಯದ ನನ್ನಂಥ ಬಾಲಕರಿಗೆ ಸಂಸಾರದ ಭಾರ ಹಾಕುವದನ್ನು ಬಿಟ್ಟು, ಮಕ್ಕಳನ್ನು ಪೂರ್ಣ ವಿದ್ವಾಂಸರನ್ನಾಗಿ

ನ್ನಾಗಿ ಮಾಡಬೇಕೆಂಬುವದೇ ನನ್ನ ಕೋರಿಕೆಯು. ತಮ್ಮೆಲ್ಲರ ಉಪಕಾರವನ್ನಿಸ್ಮ ನಿಮ್ಮ ಅಪ್ಪಣೆಯನ್ನು ಬೇಡುತ್ತೇನೆ. ... ... ... ...

(ಕೈಚಪ್ಪಾಳೆ.)

ಶಂಕರಗೌಡ, ಬಾಳಗೌಡ, ಪಾಟೀಲ.

---

ಅನಂತರ ಫಲಹಾರಾರ್ಥವಾಗಿ ಅರ್ಧ ಗಂಟೆಯುವರೆಗೆ ಸಭೆಗೆ ವಿಶ್ರಾಂತಿಯು ಕೊಡಲ್ಪಟ್ಟಿತು. ... ... ... ...

ಬಳಿಕ ಶ್ರೀಮದ್ವೀರಶೈವ ಮಹಾಸಭೆಗೆ ಕಾರ್ಯನಿರ್ವಾಹಕ ಸಂಘಗಳ ರಿಪೋರ್ಟು ಮಿ॥ ಫಕೀರಪ್ಪ, ಗುರುಬಸಪ್ಪ ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರಿಂದ ಓದಲ್ಪಟ್ಟಿತು.

—(ವಿಜಾಪುರ ಜಿಲ್ಲಾ ಕಮಿಟಿಯ ರಿಪೋರ್ಟು.)—

ಸೊಲ್ಲಾಪುರ ೩-ನೆಯ ಶ್ರೀಮದ್ವೀರಶೈವ ಮಹಾಸಭೆಯಲ್ಲಿ ಕಾರ್ಯನಿರ್ವಾಹಕ ಸಂಘಗಳನ್ನು ಸ್ಥಾಪಿಸಬೇಕೆಂದು ೧೯೦೭-ರಲ್ಲಿ ನಿರ್ಣಯಿಸಲ್ಪಟ್ಟದ್ದು. ಆ ಮೇರೆಗೆ ವಿಜಾಪುರ ಜಿಲ್ಲೆಯಲ್ಲಿ ಏರ್ಪಾಟುಮಾಡುವ ಉದ್ದೇಶ್ಯ ಮೊದಲು ೧—೧—೧೯೦೮-ನೆಯ ವಿಜಾಪುರ ಪಟ್ಟಣಸ್ಥರ ಒಂದು ಸ್ಥಾನಿಕ ಕಮಿಟಿಯು ಸ್ಟ್ಯಾಂಡಿಂಗ್‌ಕಮಿಟಿಯ ಮತಿಯ ಮೇರೆಗೆ ನೇಮಿಸಲ್ಪಟ್ಟಿತು. ಮತ್ತು ಆ ಪ್ರಕಾರ ವಿಜಾಪುರ ಜಿಲ್ಲಾ ಕಮಿಟಿಯನ್ನು ಏರ್ಪಾಡು ಮಾಡುವದಕ್ಕೋಸ್ಕರ ಮಿ॥ ಫಕೀರಪ್ಪ ಹಳಕಟ್ಟಿ ಇವರು ಈ ಕಮಿಟಿಗೆ ಚೇರಮನ್ನರಾಗಿ ನೇಮಿಸಲ್ಪಟ್ಟರು. ... ...

ತಾಲೂಕು ಕಮಿಟಿಗಳ ಸ್ಥಾಪನೆ.

ತರುವಾಯ ಈ ಸ್ಥಾನಿಕ ಕಮಿಟಿಯವರು ವಿಜಾಪುರ ಜಿಲ್ಲೆಯೊಳಗಿನ ತಾಲೂಕುಗಳಲ್ಲಿ ವಿಜಾಪುರ, ಆಲಮೇಲ, ಮುದ್ದೇಬಿಹಾಳ, ಬಾಗಲಕೋಟೆ, ಹುನಗುಂದ ಮತ್ತು ಗುಳೇದಗುಡ್ಡ ಎಂಬ ೬ ವಿಭಾಗಗಳನ್ನು ಮಾಡಿ, ಇವುಗಳಲ್ಲಿ ಒಂದೊಂದು ತಾಲೂಕು ಕಮಿಟಿಯನ್ನು ಸ್ಥಾಪಿಸಬೇಕೆಂದು ನಿಶ್ಚಯಿಸಿ, ಆ ಮೇರೆಗೆ ಆಸ್ಥಳಗಳ ಪ್ರಸಿದ್ಧರ ಕೂಡ ಪತ್ರವ್ಯವಹಾರ ನಡಿಸಿದರು. ಇದಕ್ಕನುಗುಣವಾಗಿ ಶ್ರೀಮಂತ ಶಿವಲಿಂಗಪ್ಪ

ದೇವರಾವ, ದೇಶಮುಖ ಆಲಮೇಲ ಇವರು ಇಂಡಿ, ಮತ್ತೂ ಸಿಂದಗಿ ತಾಲ್ಲೂಕುಗಳಲ್ಲಿಯ ಪ್ರಮುಖಜನರಿಗೆ ಆಮಂತ್ರಣ ಕೊಟ್ಟು, ತಮ್ಮಲ್ಲಿ ಒಂದು ತಾಲ್ಲೋಕುಸಭೆಯನ್ನು ೧೦ ಮೇ ೧೯೦೮ ದಿವಸ ನೆರೆಸಿದರು. ಆಗ ೨೦ ಗ್ರಾಮಗಳಿಂದ ಸಭೆಗೆಜನರು ಬಂದಿದ್ದರು ಈ ಸಭೆಯಲ್ಲಿ ಮಹಾಸಭೆಯ ನಿರ್ಣಯಗಳನ್ನು ಅಮಲಿನಲ್ಲಿ ತರಲು ೧೦ ಜನರ ಒಂದು ವ್ಯವಸ್ಥಾಪಕ ಕಮಿಟಿಯೂ ೩೫ ಜನರ ಒಂದು ಜನರಲ್ ಕಮಿಟಿಯೂ ನೇಮಿಸಲ್ಪಟ್ಟವು ಈ ತಾಲ್ಲೋಕು ಕಮಿಟಿಯಲ್ಲಿ ೯ ಪೋಟಭಾಗಗಳು ಅಂದರೆ ಸರ್ಕಲ್ಲುಗಳು ಅಥವಾ ಟಿಕ್ಕೆಗಳು ಮಾಡಲ್ಪಟ್ಟವು. ಇದೇ ಪ್ರಕಾರ ಮುದ್ದೇಬಿಹಾಳದ ಪ್ರಮುಖ ಗೃಹಸ್ಥರಿಂದ ಮೇ ೨೧ ತಾ॥ ದಿವಸ ಬಾಗೇವಾಡಿ ಮತ್ತೂ ಮುದ್ದೇಬಿಹಾಳ ತಾಲ್ಲೋಕುಗಳ ವತಿಯಿಂದ ಒಂದು ತಾಲ್ಲೋಕು ಸಭೆಯು ಸೇರಿಸಲ್ಪಟ್ಟು ಆಗ ೧೯ ಜನರುಳ್ಳ ಒಂದು ವ್ಯವಸ್ಥಾಪಕ ಕಮಿಟಿಯೂ ೪೨ ಜನರುಳ್ಳ ಒಂದು ಜನರಲ್ ಕಮಿಟಿಯೂ ನೇಮಿಸಲ್ಪಟ್ಟವು. ಈ ತಾಲ್ಲೋಕು ಕಮಿಟಿಯಲ್ಲಿ ೧೧ ಸರ್ಕಲ್ಲುಗಳು ಮಾಡಲ್ಪಟ್ಟವು. ಆದೇಮೇರೆಗೆ ವಿಜಾಪುರ ತಾಲ್ಲೋಕಿನ ವತಿಯಿಂದ ೮-೮-೧೯೦೮ ದಿವಸ ಒಂದು ತಾಲ್ಲೋಕು ಸಭೆಯು ನೆರೆದು ೧೩ ಜನರುಳ್ಳ ಒಂದು ವ್ಯವಸ್ಥಾಪಕ ಕಮಿಟಿಯೂ, ೩೨ ಜನರುಳ್ಳ ಒಂದು ಜನರಲ್ ಕಮಿಟಿಯೂ ನೇಮಿಸಲ್ಪಟ್ಟವು. ಈ ಸಭೆಯಲ್ಲಿ ೪೦ ಗ್ರಾಮಗಳಿಂದ ಪ್ರತಿನಿಧಿಗಳು ಬಂದಿದ್ದರು ಈ ಕಮಿಟಿಯಲ್ಲಿ ೬ ಸರ್ಕಲ್ಲುಗಳು ಮಾಡಲ್ಪಟ್ಟವು. ಇದರಂತೆಯೇ ಗುಳೇದಗುಡ್ಡದ ನಿವಾಸಿಗಳಾದರೂ ಪ್ರಯತ್ನಿಸಿ, ತಮ್ಮಲ್ಲಿ ತಾ॥ ೨೧—೧೨—೮ ದಿವಸ ಒಂದು ತಾಲ್ಲೋಕುಸಭೆಯನ್ನು ಸೇರಿಸಿ, ಅಲ್ಲಿ ೧೩ ಜನರುಳ್ಳ ಒಂದು ಕಮಿಟಿಯನ್ನು ಮತ್ತೂ ೮೦ ಜನರುಳ್ಳ ಒಂದು ಜನರಲ್ ಕಮಿಟಿಯನ್ನೂ ತಮ್ಮತಾಲ್ಲೂಕಿನ ವತಿಯಿಂದ ಸ್ಥಾಪಿಸಿದರು. ಇದರಲ್ಲಿ ಸರ್ಕಲ್ಲುಗಳು ಗೊತ್ತುಮಾಡಲ್ಪಟ್ಟುವು. ಹುನಗುಂದ ಮತ್ತು ಬಾಗಲಕೋಟೆಯ ತಾಲ್ಲೂಕ ಕಮಿಟಿಗಳು ಅಲ್ಲಿಯ ಪ್ರಮುಖಗೃಹಸ್ಥರ ಒಪ್ಪಿಗೆಯಿಂದ ಸೆಪ್ಟಂಬರು ತಿಂಗಳನಲ್ಲಿ ಜಿಲ್ಲಾ ಕಮಿಟಿಯ ಜನರಲ್ ಕಮಿಟಿಯಿಂದಲೇ ನೇಮಿಸಲ್ಪಟ್ಟವು. ಈ ಮೇರೆಗೆ ವಿಜಾಪುರ ಜಿಲ್ಲೆಯ ಆಯಾಭಾಗಗಳಲ್ಲಿ ತಾಲ್ಲೂಕ ಕಮಿಟಿಗಳನ್ನು ಏರ್ಪಡಿಸಿದ ತರುವಾಯ ಸೆಪ್ಟಂಬರ ತಿಂಗಳಲ್ಲಿ ಗವರ್ನರ ಸಾಹೇಬರು ವಿಜಾಪುರಕ್ಕೆ ಬಂದ ಸಮಯದಲ್ಲಿ ಈ ಆರೂ ತಾಲ್ಲೂಕು ಕಮಿಟಿಗಳ ೮೩ ಮೆಂಬರು ಜನರನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಈ ಪ್ರಕಾರ ಜನರಲ್ಲಿ ಕಮಿಟಿಯನ್ನು ಸೇರಿಸಿದರು. ಆಗ ಇದಕ್ಕೆ ೧೩ ಜನರುಳ್ಳ ಒಂದು ವ್ಯವಸ್ಥಾಪಕ ಕಮಿಟಿಯು ನೇಮಿಸಲ್ಪಟ್ಟು ಆದಕ್ಕೆ ಮಿ॥ ಫಕೀರಪ್ಪ ಹಳಕಟ್ಟಿ, ಇವರು ಶೆಕ್ರೆಟರಿಗಳಾಗಿ ಮಾಡಲ್ಪಟ್ಟರು. ಈ ಪ್ರಕಾರ ಸ್ಥಾಪಿಸಲ್ಪಟ್ಟ ಈ ಜಿಲ್ಲಾ ಕಮಿಟಿಯವರು ಜಿಲ್ಲೆಯ ಆಯಾ ಭಾಗಗಳಲ್ಲಿ ಚಿಕ್ಕಸಭೆಗಳನ್ನೂ ಗ್ರಾಮಕಮಿಟಿಗಳನ್ನೂ ಏರ್ಪಡಿಸಬೇಕೆಂತಲೂ ಈ ಕಮಿಟಿಗಳ ದ್ವಾರದಿಂದ ಸಮಾಜ ಸುಧಾರಣೆಯ ಕಾರ್ಯಗಳನ್ನು ಮಾಡಬೇಕೆಂತಲೂ ನಿಶ್ಚಯಿಸಿದರು.

* * * * *

ಈ ಪ್ರಕಾರ ಜಿಲ್ಲಾ ಕಮಿಟಿಯನ್ನು ಸ್ಥಾಪಿಸುವ ಮುಖ್ಯ ಉದ್ದೇಶಗಳು ಯಾವುವೆಂದರೆ;— ... ... ... ...

೧. ಸ್ಟ್ಯಾಂಡಿಂಗ್ ಕಮಿಟಿಗೆ ಬಳಗಾಗಿ ಮಹಾ ಸಭೆಯ ನಿರ್ಣಯಗಳನ್ನು ಉಪಕಮಿಟಿಗಳ ಮುಖಾಂತರವಾಗಿ ಪ್ರಚಾರದಲ್ಲಿ ತರುವುದು. ...

೨. ವಿಜಾಪುರ ಜಿಲ್ಲೆಯೊಳಗಿನ ಆಯಾ ಭಾಗಗಳಲ್ಲಿಯ ಪ್ರಮುಖಗೃಹಸ್ಥರು ಪರಸ್ಪರ ಬಳಿಕೆ ಸ್ನೇಹಸಂಬಂಧ, ಒಕ್ಕಟ್ಟು ಸಮಾಜ ಸುಧಾರಣೆಯ ಪ್ರೀತಿಯನ್ನು ಹುಟ್ಟಿಸುವುದು. ... ... ... ...

೩. ವೀರಶೈವ ಸಮಾಜದವರು ಪಡುತ್ತಿರುವ ನ್ಯೂನತೆಗಳನ್ನು ಸರ್ಕಾರಕ್ಕೆ ತಿಳಿಸಿ, ಅವುಗಳನ್ನು ಹೋಗಲಾಡಿಸುವುದೂ, ಸರ್ಕಾರದವರಿಗೂ ನಮ್ಮ ಸಮಾಜದವರಿಗೂ ಪರಸ್ಪರ ನಂಬಿಗೆ ಪ್ರೀತಿಯನ್ನು ಹುಟ್ಟಿಸುವುದೂ, ಇತರರು ವೀರಶೈವ ಸಮಾಜದ ಹಕ್ಕುಗಳಿಗೆ ಬಾಧೆ ತರದಂತೆ ಯತ್ನಿಸುವುದೂ ಇವೇ ಇರುತ್ತವೆ. ...

## ೧೯೧೮ ನೆಯ ಇಸವಿಯಲ್ಲಿ ಆದ ಕಾರ್ಯಗಳು.

೧. ಮಹಾಸಭೆಯ ನಿರ್ಣಯಗಳ ಪ್ರಸಾರ;—ಈ ಕಾರ್ಯವು ಮೇಲ್ಕಂಡ ರೀತಿಗೆ ತಾಲ್ಲೂಕು ಸಭೆಗಳನ್ನು ಆ ಆ ತಾಲ್ಲೂಕಿನ ಪ್ರಮುಖ ಜನರಿಂದ ನೆರೆಯಿಸುವುದರಿಂದಲೂ, ಈ ಪ್ರಕಾರ ಸಭೆಗೆ ಬರಲಾರದಂಥವರಿಗೆ ಈ ತಾಲ್ಲೂಕು ಸಭೆಗಳಲ್ಲಾದ ನಿರ್ಣಯಗಳನ್ನು ಅಚ್ಚುಮಾಡಿಸಿ ಅವುಗಳನ್ನು ಆ ತಾಲ್ಲೂಕಿನ ಗ್ರಾಮಗಳಲ್ಲಿ ಹಂಚುವುದರಿಂದಲೂ ಈ ಪ್ರಯತ್ನವು ಮಾಡಲ್ಪಟ್ಟದೆ. ... ... ...

೨. ಗ್ರಾಮ ಕಮಿಟಿಗಳ ಸ್ಥಾಪನೆ;—ಈ ಕಮಿಟಿಗಳು ೪ ಕಡೆಗೆ ಅಂದರೆ ಮೇಲ, ವಿಜಾಪುರ, ಕೋರಹಳ್ಳಿ, ಸಿಂದಿಗಿ ಈ ಸ್ಥಳಗಳಲ್ಲಿ ಮಾತ್ರ ಸ್ಥಾಪಿಸಲ್ಪಟ್ಟವು. ಯಾಕೆಂದರೆ ತಾಲ್ಲೂಕು ಕಮಿಟಿಗಳನ್ನು ಸ್ಥಾಪಿಸುವುದೇ ಈ ವರ್ಷದ ಮುಖ್ಯಕಾರ್ಯವಾದುದರಿಂದ ಹೆಚ್ಚಿಗೆ ಗ್ರಾಮಕಮಿಟಿಗಳನ್ನು ಸ್ಥಾಪಿಸಲು ಅವಕಾಶವಿರಲಿಲ್ಲ. ...

೩. ಗವರ್ನರ ಸಾಹೇಬರಿಗೆ ಮಾನಪತ್ರ;—ಇದರಲ್ಲಿ ವಿಜಾಪುರ ಜಿಲ್ಲಾ ಕಮಿಟಿಯ ಸ್ಥಾಪನೆ, ಅದರ ಕಾರ್ಯಾರಂಭ, ವೀರಶೈವ ಸಮಾಜದ ಮಹತ್ವ ಇವುಗಳು ತಿಳಿಸಲ್ಪಟ್ಟು, ಅವರ ಪ್ರಯತ್ನಗಳಿಗೆ ಸರ್ಕಾರದವರಿಂದ ಸಹಾನುಭೂತಿಯು ಅಪೇಕ್ಷಿಸಲ್ಪಟ್ಟಿತು. ಇದಕ್ಕೆ ಗವರ್ನರ ಸಾಹೇಬರಾದರೂ ತಕ್ಕ ಉತ್ತರವನ್ನು ದಯಪಾಲಿಸಿರುವರು.

೪. ಸೊಲ್ಲಾಪುರ ಮಹಾಸಭೆಯಲ್ಲಿ ಆಜೀವ ಸಭಾಸದರನ್ನೂ, ಮಹಾಸಭಾಸದರನ್ನೂ ಹೆಚ್ಚಿಸಬೇಕೆಂದು ನಿರ್ಣಯಿಸಲ್ಪಟ್ಟದ್ದು. ಆ ಪ್ರಕಾರ ಪ್ರಯತ್ನಗಳನ್ನು

ದಿದ್ದು, ಆ ಪ್ರಕಾರ ಹೋದವರ್ಷ ವಾರ್ಷಿಕ ೧೦ರೂಪಾಯಿ ವರ್ಗಣಿಕೊಡತಕ್ಕ ೨೫ಜನ ಮಹನೀಯರೂ ೧೦೦ ರೂಪಾಯಿಕೊಟ್ಟಿರುವ ಒಬ್ಬ ಆಜೀವ ಸಭಾಸದರೂ ಆಗಿರುವರು.

೫. ಶುಭಾಶುಭ ಕಾರ್ಯಗಳಲ್ಲಿ ಕಾಣಿಕೆಗಳನ್ನು ಎತ್ತಿದ್ದು;— ಈ ಕಾರ್ಯವು ವಿಜಾಪುರ, ಆಲಮೇಲ, ಮೊರಟಗಿ ಗ್ರಾಮದವರಿಂದ ಪ್ರಾರಂಭವಾಡಲ್ಪಟ್ಟಿತು. *

೬. ಬಿಲ್ಲಿ ಫಂಡು;—ಇದು ವಿಜಾಪುರ ಗ್ರಾಮಕಮಿಟಿಯಲ್ಲಿ ಮಾತ್ರ ನಡೆದಿದೆ. ಇದೇ ಹಣದಿಂದಲೇ ವಿಜಾಪುರದಲ್ಲಿಯ ಬಡವಿದ್ಯಾರ್ಥಿಗಳಿಗೆ ಶಾಲಾ ಫೀ ಮೊದಲಾದ ಸಹಾಯವು ಮಾಡಲ್ಪಡುತ್ತಲಿದೆ. ... ... ... *

## ೧೯೦೯ ನೆಯ ಇಸವಿಯಲ್ಲಿ ಆದ ಕಾರ್ಯಗಳು.

ವೀರಶೈವ ಮಹಾಸಭೆಯ ನಿರ್ಣಯಗಳ ಪ್ರಸಾರ;— ಹೋದವರ್ಷ ೪ ಗ್ರಾಮ ಕಮಿಟಿಗಳು ಮಾತ್ರ ಸ್ಥಾಪಿಸಲ್ಪಟ್ಟಿದ್ದು, ಈ ವರ್ಷ ೪೫ ಗ್ರಾಮ ಕಮಿಟಿಗಳು ಸ್ಥಾಪಿಸಲ್ಪಟ್ಟಿರುತ್ತವೆ. ಇದಲ್ಲದೆ ಸಿಂದಿಗಿಯಲ್ಲಿ ೨ನೇ ಆಲಮೇಲ ತಾಲ್ಲೂಕುಸಭೆಯೂ ನಾಗರಾಳ ಮತ್ತು ಪಟ್ಟದಕಲ್ಲಿನಲ್ಲಿ ಟಕ್ಕಾ ಅಂದರೆ ತಾಲ್ಲೂಕಿನ ಪೋಟಭಾಗದಸಭೆಗಳೂ ಆಗಿರುತ್ತವೆ. ಅವುಗಳ ವಿವರ;— ... ... ... *

ಆಲಮೇಲ ತಾಲ್ಲೂಕಿನ ೨-ನೆಯ ಸಭೆ ಈ ಸಭೆಯು ಸಿಂದಿಗಿಗ್ರಾಮದಲ್ಲಿ ೨ನೇ ಸೆಪ್ಟಂಬರ ದಿವಸ ನೆರೆಯಿತು. ಮೊದಲನೆಯ ಸಭೆಗೆ ೨೦ ಗ್ರಾಮಗಳಿಂದ ಪ್ರತಿನಿಧಿಗಳು ಬಂದಿದ್ದು, ಈಸಾರೆ ೩೦ ಗ್ರಾಮಗಳಿಂದ ಪ್ರತಿನಿಧಿಗಳು ಬಂದಿದ್ದರು. ಆ ಕಾಲಕ್ಕೆ ಹೊಸದಾಗಿ ತಾಲ್ಲೂಕು ಕಮಿಟಿಯ ಮೆಂಬರರು ಆರಿಸಲ್ಪಟ್ಟರು. ಇದಲ್ಲದೆ ಸಭೆಯ ಕಾಲಕ್ಕೆ ಅನೇಕ ಸದ್ಗೃಹಸ್ಥರು ಇಂಥಿಂಥ ಗ್ರಾಮಗಳಿಗೆ ಹೋಗಿ ಉಪದೇಶಮಾಡಿ, ಗ್ರಾಮಕಮಿಟಿಗಳನ್ನು ಸ್ಥಾಪಿಸಿ, ಸುಧಾರಣೆಯ ಕಾರ್ಯಗಳನ್ನು ಮಾಡುವೆವೆಂದು ವಚನಕೊಟ್ಟರು. ಆ ಪ್ರಕಾರ ಗೋಲಗೇರಿಯಲ್ಲಿರುವ ಮ॥ ರಾ॥ ರಾ॥ ಮರಿಯಪ್ಪ ಹೊಳೆಸಾಗರ, ಇವರು ತಮ್ಮ ಗ್ರಾಮದಲ್ಲಿಯ ಪ್ರಮುಖಜನರನ್ನೊಡಗೂಡಿ ಸೆಪ್ಟಂಬರ, ಆಕ್ಟೋಬರ, ತಿಂಗಳುಗಳಲ್ಲಿ ತಮ್ಮ ಸರ್ಕಲ್ಲಿನಲ್ಲಿಯ ಗ್ರಾಮಗಳಲ್ಲಿ ಸಂಚರಿಸಿ, ಜನರಿಗೆ ಮಹಾಸಭೆಯ ವಿಷಯವಾಗಿ ಬೋಧಿಸಿ, ಅಲ್ಲಿ ಸಮಾಜಕಾರ್ಯಗಳನ್ನು ಮಾಡಲು ೯ ಗ್ರಾಮ ಕಮಿಟಿಗಳನ್ನು ಸ್ಥಾಪಿಸಿದರು. ಅವು ಯಾವುವೆಂದರೆ:—ಹಿರೇ ಅಲ್ಲಾಪುರ, ಚಿಕ್ಕಅಲ್ಲಾಪುರ, ಮಾಗನಗೇರಿ ಬೈನೂರು, ಮುರಡಿ, ಸುಂಗಠಾಣ, ಗೋರಗುಂಡಿಗಿ, ನೆಂದಿಗೇರಿ, ಡಂಬಳ ಇದೇ ಪ್ರಕಾರ ಮೊರಟಗಿಯಲ್ಲಿರುವ ಮ॥ ರಾ॥ ರಾ॥ ಕಲ್ಲಪ್ಪ ಶ್ರೀಗಿರಿ, ರಾಮಚಂದ್ರಪ್ಪ ಬೋನಾಳ, ಲಿಂಗಪ್ಪ ಪಾಟೀಲ, ಗುಂಡಪ್ಪ ಶಾಬಾದಿ, ಈ ಸಭ್ಯಗೃಹಸ್ಥರು ತಮ್ಮ ಗ್ರಾಮದಲ್ಲಿಯ ಇತರ ಪ್ರಮುಖರನ್ನು ಕೂಡಿಕೊಂಡು ಮೇಲ್ಕಂಡ ಮೇರೆಗೆ ತಮ್ಮ ಸರ್ಕಲ್ಲು ಅಥವಾ ಟಕ್ಕೆಯ

ಲ್ಲಿ ಸಂಚರಿಸಿ ೪ ಗ್ರಾಮ ಕಮಿಟಿಗಳನ್ನು ಸ್ಥಾಪಿಸಿರುವರು. ಅವು ಯಾವುವೆಂದರೆ;— ಲೀಕುಮಟಿಗಿ, ಕಕ್ಕರ, ಆಲಮೇಲ, ಗುತ್ತರಿಗಿ, ಛಟನೂರ, ಅದೇಪ್ರಕಾರ ಮಿ॥ ವಿ. ಕಲ್ಹಾಳ ಶ್ರೀಮಂತ (ಶಿವಲಿಂಗರಾವ ದೇಶಮುಖರವರ ಕಾರಭಾರಿ) ಇವರು ತ ರ್ಕಲ್ಲಿನಲ್ಲಿಯ ೮ ಹಳ್ಳಿಗಳಿಗೆ ಹೋಗಿ, ಮಹಾಸಭೆಯ ವಿಷಯವಾಗಿ ಬೋಧಿಸಿ, ಗ್ರಾ ಮಿಟಿಗಳನ್ನು ಸ್ಥಾಪಿಸಿರುವರು. ಅವು ಯಾವುವೆಂದರೆ;—ಆಲಮೇಲ, ಸಿಂದಿಗಿ, ಕೋ ಳ್ಳಿ, ಮೊರಟಗಿ, ಗೋಲಗೇರಿ, ಛಂಕಲಿಗಿ, ವಿಭೂತಿಹಳ್ಳಿ, ನಾಗರಹಳ್ಳಿ, ಈ ಪ್ರ ಪ್ರಯತ್ನಗಳು ಸಿಂದಿಗಿತಾಲ್ಲೂಕಿನಲ್ಲಿ ಅಲ್ಲದೆ ಬೇರೆ ತಾಲ್ಲೂಕುಗಳಲ್ಲಿಯೂ ಕೆಲವು ನಡೆದವೆ. ಅವು ಯಾವುವೆಂದರೆ;—ಶ್ರೀ ಬಸವೇಶ್ವರನ ಜನನಸ್ಥಾನವಾದ ಬಾಗೇವಾ ಲ್ಲೂಕಿನಲ್ಲಿ ಎರನಾಳದ ಶ್ರೀ ವಿರಕ್ತಮಠದ ಪಂಪಾರ್ಯಸ್ವಾಮಿಗಳು ತಮ್ಮ ಆಶ್ರಮ ಕ್ಕನುಗುಣವಾಗಿ ತಮ್ಮ ಸರ್ಕಲ್ಲಿನಲ್ಲಿಯ ಎರನಾಳ, ಮಸಿಬಿನಾಳ, ಕೂಡಿಗಿ, ಗೋ ಈ ಗ್ರಾಮಗಳಿಗೆ ಹೋಗಿ ಬೋಧಿಸಿ ೪ ಗ್ರಾಮ ಕಮಿಟಿಗಳನ್ನು ಸ್ಥಾಪಿಸಿದರು. ಈ ಈ ಕಾರ್ಯದಲ್ಲಿ ಶಿ॥ ಮೂ॥ ವೀರಯ್ಯ, ಬಸವಯ್ಯ, ಶಾಲಾಮಾಸ್ತರ ಕೂಡಿಗಿ ಈ ಮದಾಪುರ ಇವರು ಅತ್ಯಂತವಾಗಿ ಸಹಾಯ ಮಾಡಿರುವರು. ಅದೇಪ್ರಕಾರ ಶ್ರೀಮ ಮಾಚಿದೇವನ ಜನನಸ್ಥಾನವಾದ ಹಿಪ್ಪರಿಗಿ ಗ್ರಾಮದ ಶಿ॥ ಮೂ॥ ಸಂಗನಬಸವಯ್ಯ, ವೀರಯ್ಯ, ಇವರು ಇದೇ ತಾಲ್ಲೂಕಿನ ಬೇರೊಂದು ಸರ್ಕಲ್ಲಿನಲ್ಲಿಯ ಗ್ರಾಮಗಳಾ ನಾಳ ಮತ್ತು ಹೂವಿನಹಿಪ್ಪರಿಗಿಯಲ್ಲಿ ಇದೇ ನವಂಬರ ತಿಂಗಳಲ್ಲಿ ಹೋಗಿ ಗ್ರಾಮಕ ಗಳನ್ನು ಸ್ಥಾಪಿಸಿ, ಮುಷ್ಟಿಫಂಡಿನ ಪ್ರಯತ್ನಗಳನ್ನು ಮಾಡುತ್ತಲಿರುವರು. ಹೀ ವಿಜಾಪುರ ಮತ್ತು ಇಂಡಿ ತಾಲ್ಲೂಕುಗಳಲ್ಲಿಯೂ ಬೋಧನೆಯ ಕ್ರಮಗಳುನಡೆದಿವೆ: ಹೇಗಂದರೆ;—ನಾಗಠಾಣವು ವಿಜಾಪುರ ತಾಲ್ಲೂಕು ಕಮಿಟಿಯ ಒಂದು ಟಕ್ಕೆ ಇದ್ದು ಯ ಗೌಡರಾದ ರಾ॥ ರಾ॥ ಚಂದನಗೌಡ ಪಾಟೀಲ, ಇವರು ಏಪ್ರೆಲ್ ತಿಂಗಳನಲ್ಲಿ ಟಕ್ಕೆಯಲ್ಲಿಯ ಪ್ರಮುಖ ಗ್ರಾಮಸ್ಥರನ್ನು ತಮ್ಮಲ್ಲಿ ಒರಮಾಡಿಕೊಂಡು ಒಂದು ಸಭೆಯನ್ನು ಸೇರಿಸಿದರು. ಮತ್ತು ಅದೇಕಾಲಕ್ಕೆ ತಮ್ಮಲ್ಲಿಯೂ ಒಂದು ಗ್ರಾಮಕ ಯನ್ನು ಸ್ಥಾಪಿಸಿದರು. ಈ ಸಭೆಗೆ ಈ ಟಕ್ಕೆಯಲ್ಲಿಯ ೧೩ ಗ್ರಾಮಗಳ ಜನರು ಬ ರು. ಮತ್ತು ಅವರೆಲ್ಲರೂ ಮಹಾಸಭೆಯ ನಿರ್ಣಯಗಳ ಬಗ್ಗೆ ತಮ್ಮತಮ್ಮ ಗ್ರಾಮ ಯತ್ನಿಸುವೆವೆಂದು ಆಗ ತಮ್ಮ ಅಪೇಕ್ಷೆಯನ್ನು ತೋರಿಸಿದರು. ಇದೇಪ್ರಕಾರ ಗು ಗುಡ್ಡದ ಪ್ರಮುಖ ಗೃಹಸ್ಥರಾದ ರಾ॥ ರಾ॥ ಸಿದ್ದಪ್ಪ ನಾಯನೇಗಲ, ಇವರ ಪ್ರೇರಣೆ ತ್ತು ಪ್ರಯತ್ನದಿಂದ ಪಟ್ಟದಕಲ್ಲಿನ ಪ್ರಮುಖರು ತಮ್ಮಲ್ಲಿ ಒಂದು ಗ್ರಾಮಕಮಿಟಿ ಸ್ಥಾಪಿಸಿದ್ದಲ್ಲದೆ ತಮ್ಮ ಸರ್ಕಲ್ಲಿನಲ್ಲಿಯ ಗ್ರಾಮಗಳಲ್ಲಿಯ ಪ್ರಮುಖಜನರ ಸಭೆಸೇರಿ ಈ ಸಭೆಗಾಗಿ ಸುತ್ತಲಿನ ೬ ಹಳ್ಳಿಗಳ ಜನರು ಬಂದಿದ್ದು, ಅವರಾದರೂ ತಮ್ಮ ತ ಗ್ರಾಮಕಮಿಟಿಗಳನ್ನು ಸ್ಥಾಪಿಸುವೆವೆಂಬದಾಗಿ ಹೇಳಿದರು. ಇಂಡಿತಾಲ್ಲೂಕಿನಲ್ಲಿ ಶಿವ

ಸಿದ್ಧರಾಮಶಾಸ್ತ್ರಿಗಳವರು ಪಾಠಶಾಲಾ ವಿಜಾಪುರ, ಮತ್ತು ರಾ॥ ರಾ॥ ಮಲ್ಲಪ್ಪ ಹತ್ತಿ ಪು ಸಳಿ ಇವರೂ ಬೋಧಮಾಡುವ ಕಾರ್ಯಗಳನ್ನು ಕೈಕೊಂಡು ಬೇರೆ ಬೇರೆ ಹಳ್ಳಿಗಳಲ್ಲಿ ಗ್ರಾಮಕಮಿಟಿಗಳನ್ನು ಸ್ಥಾಪಿಸಿ, ಒಂದು ಸ್ವತಂತ್ರವಾದ ತಾಲ್ಲೂಕು ಕಮಿಟಿಯನ್ನು ಏ ರ್ಪಡಿಸಬೇಕೆಂಬುದಾಗಿ ಯೋಜಿಸುತ್ತಿರುವರು. ಆ ಪ್ರಕಾರ ಇವರು ಈವರೆಗೆ ಇಂಡಿ ತಾ ಲ್ಲೂಕಿನ ಕೆಳಗಿನ ಗ್ರಾಮಗಳಿಗೆ ಹೋಗಿ ಕಮಿಟಿಗಳನ್ನು ಸ್ಥಾಪಿಸಿರುವರು. ಅವು ಯಾವು ವೆಂದರೆ;—ಹತ್ತರಿಕಿ. ತಡವರಿಗಿ, ತಾಂಬೆ, ಮಸಳಿ, ಹೋರ್ತಿ, ಚಡಚಾಣ, ನಿಂಬರಿಗಿ, ಲೋಣಿ, ಛತಕಣಿಕಿ, ನಿಂಬಾಳ, ಭೋರಣಗಿ ಈ ಪ್ರಕಾರ ೧೧ ಗ್ರಾಮಗಳಿಗೆ ನವಂಬರ ಡಿಶಂಬರ ತಿಂಗಳಲ್ಲಿ ಹೋಗಿ, ಉಪದೇಶ ಮಾಡಿರುವರು. ಈ ಪ್ರಕಾರ ಮೇಲ್ಕಂಡ ಸಭ್ಯ ಗೃಹಸ್ಥರು ತಮ್ಮ ತಮ್ಮ ಗ್ರಾಮಗಳಲ್ಲಿ ಬೋಧಮಾಡಿದ್ದಲ್ಲದೆ ಅತ್ಯಂತ ಪ್ರೇಮವನ್ನು ವ ಹಿಸಿ, ತಮ್ಮ ಟಕ್ಕೆಗಳಲ್ಲಿಯ ಇತರ ಗ್ರಾಮಗಳಿಗೂ ಹೋಗಿ ಬೋಧಮಾಡಿ ಗ್ರಾಮಕಮಿ ಟಿಗಳನ್ನು ಸ್ಥಾಪಿಸಿರುವರು. ಇದಲ್ಲದೆ ಗುಳೇದಗುಡ್ಡ, ದೆಳ್ಳೀಗುಡ್ಡ, ಹುನಗುಂದ, ಸಾರ ವಾಡ, ಗಲಗಲಿ, ಈ ಗ್ರಾಮಗಳ ಪ್ರಮುಖರು ತಮ್ಮ ತಮ್ಮ ಗ್ರಾಮಗಳಲ್ಲಿ ಸಭೆಗಳನ್ನು ಸೇರಿಸಿ, ಸಮಾಜ ಕಾರ್ಯಗಳನ್ನು ಮಾಡಲು ಪ್ರಯತ್ನಿಸುತ್ತ ಲಿರುವರು. ಈ ಪ್ರಕಾರ ಈ ವರ್ಷ ವಿಜಾಪುರ ಜಿಲ್ಲೆಯಲ್ಲಿ ಮುಖ್ಯವಾಗಿ ಉತ್ತರ ತಾಲ್ಲೂಕುಗಳಲ್ಲಿ ಬೋಧನೆಯ ಕ್ರಮಗಳು ನಡೆದು ಈವರೆಗೆ ೪೫ ಗ್ರಾಮಗಳಲ್ಲಿ ಗ್ರಾಮಕಮಿಟಿಗಳು ಮಾಡಲ್ಪಟ್ಟು ಅವು ಗಳ ಮುಖಾಂತರವಾಗಿ ಮಹಾಸಭೆಯ ನಿರ್ಣಯಗಳೂ, ಸಮಾಜ ಸುಧಾರಣೆಯ ಆವಶ್ಯ ಕತೆಯೂ ಆ ಆ ಗ್ರಾಮಗಳಲ್ಲಿಯ ಜನರ ತಿಳುವಳಿಕೆಗೆ ತರಲು ಯತ್ನವು ಮಾಡಲ್ಪಟ್ಟಿತು

೨. ಈ ಗ್ರಾಮಕಮಿಟಿಗಳು ಮಾಡುತ್ತಲಿರುವ ಇತರ ಕಾರ್ಯಗಳು ವಿದ್ಯಾಪ್ರ ಸಾರ;—ವಿಜಾಪುರ ಮತ್ತು ಕೊಡಿಗಿ ಗ್ರಾಮ ಕಮಿಟಿಯವರು ಬಡ ವಿದ್ಯಾರ್ಥಿಗಳಿಗೆ ಫೀ, ಊಟದ ವ್ಯವಸ್ಥೆ ಮೊದಲಾದ ರೀತಿಯಿಂದ ಸಹಾಯ ಮಾಡುತ್ತಲಿರುವರು. ... *

೩. ಲೈಬ್ರರಿಗಳು—ಮೊರಟಗಿ ಮತ್ತು ಹುನಗುಂದ ಗ್ರಾಮಕಮಿಟಿಯವರು ತ ಮ್ಮಲ್ಲಿ ವಾಚನಾಲಯಗಳನ್ನು ಸ್ಥಾಪಿಸಿರುವರು. ... ... *

೪. ಪಂಚಾಯತ ಕಮಿಟಿ—ಈ ಕಮಿಟಿಯು ಗಲಗಲಿಯಲ್ಲಿ ಶ್ರೀಮಂತ ಮಲ್ಲಪ್ಪ ಬಸಪ್ಪ, ದೇಶಾಯಿ ಎಡೇಹಳ್ಳಿ ಇವರ ಪ್ರೇರಣೆ ಮತ್ತು ಪ್ರಯತ್ನದಿಂದ ಸ್ಥಾಪಿಸಲ್ಪಟ್ಟ ದ್ದು. ಈ ಗ್ರಾಮದ ಬಹುತರ ಎಲ್ಲ ವ್ಯಾಜ್ಯಗಳು ಈ ಕಮಿಟಿಯವರಿಂದಲೇ ಈ ೮—೯ ತಿಂಗಳುಗಳಿಂದ ತೀರ್ಮಾನ ಮಾಡಲ್ಪಡುತ್ತಲಿವೆ. ಸಿಂದಗಿಯ ಗ್ರಾಮ ಕಮಿಟಿಯವರಾವರೂ ಹೋದ ತಿಂಗಳಿಂದ ಹೀಗೆಯೇ ವ್ಯವಸ್ಥೆಯನ್ನು ಮಾಡಿ, ಒಂದು ವ್ಯಾಜ್ಯವನ್ನು ಬಗೆಹರಿ ಸಿರುವರು. ... ... ... ... *

೫. ಲಿಂಗಧಾರಣೆ— ಈ ನಿರ್ಣಯವು ಬಾಗಲಕೋಟೆಯ ಮಹಾ ಸಭೆ... ಮಾಡಲ್ಪಟ್ಟದ್ದು. ಈ ವಿಷಯವು ಪ್ರತಿಯೊಂದು ಗ್ರಾಮಕಮಿಟಿಯಲ್ಲಿ ಅತ್ಯಂತವಾಗಿ... ಧಿಸಲ್ಪಟ್ಟು, ಅದರ ಪರಿಣಾಮವು ಈ ಎಲ್ಲ ಗ್ರಾಮಗಳಲ್ಲಿ ಬಹು ಸಮಾಧಾನಕ... ನಡೆದಿರುತ್ತದೆ. ... ... ... ...

೬. ಹೋದವರ್ಷ ೨೫ ಜನ ಮಹನೀಯರು ಆಗಿದ್ದು ಈ ವರ್ಷ ೧೬... ಮಹನೀಯರು ಆಗಿ, ಈ ೨ನೇ ವರ್ಷ ಸಹ ಪುನಃ ಹಣವನ್ನು ಕೊಟ್ಟಿರುವರು.

೭. ಶುಭಾಶುಭ ಕಾರ್ಯಗಳಲ್ಲಿ ದಕ್ಷಿಣೆ—ಇದು ಹೋದವರ್ಷ ೩ ಗ್ರಾಮ... ಪ್ರಾರಂಭಿಸಲ್ಪಟ್ಟದ್ದು, ಈ ವರ್ಷ ೪ ಗ್ರಾಮಗಳಲ್ಲಿ ಪ್ರಾರಂಭಿಸಲ್ಪಟ್ಟದೆ. ...

೮. ಧಾನ್ಯನಿಧಿ—ಹೂವಿನ ಹಿಪ್ಪರಗಿ, ಮತ್ತು ಬಿಸನಾಳ, ಈ ಗ್ರಾಮ... ಹೋದ ತಿಂಗಳು ಏರ್ಪಾಡು ನಡೆದದೆ. ... ...

೯. ಸರ್ಕಾರೀ ಅಧಿಕಾರಸ್ಥರಿಗೆ ನಮ್ಮ ನ್ಯೂನತೆಗಳನ್ನು ತಿಳಿಯಪಡಿಸು... ಹೋದವರ್ಷ ಗವರ್ನರರಿಗೆ ಮಾನಪತ್ರ ಕೊಟ್ಟದ್ದಲ್ಲದೆ, ಈ ವರ್ಷ ವಿಜಾಪುರಕ್ಕೆ ಬಯಿ ಶೇತಕೀಖಾತೆಯ ಡೈರೆಕ್ಟರರಾದ ಮೆ॥ ಕೇ. ಬಿಂಜ್ಮಿಧೊರೆಗಳು ಶೇತಕೀಖಾ... ಪ್ರಿನ್ಸಿಪಾಲರಾದ ಡಾ॥ ಮ್ಯಾನ್ ಸಾಹೇಬರು, ವಿದ್ಯಾಖಾತೆಯ ಡೈರೆಕ್ಟರರಾದ ಮೆ... ಸಾಹೇಬರವರು ಬಂದ ಕಾಲಕ್ಕೆ ಒಕ್ಕಲತನದ ಮತ್ತೂ ವಿದ್ಯಾ ಈ ವಿಷಯಗಳಿಗೆ... ವರ ಸಂಬಂಧ ಇವುಗಳ ವಿಷಯವಾಗಿ ಮಾನಪತ್ರ ಜಿಲ್ಲಾ ಕಮಿಟಿಯವರು ಕೊಟ್ಟ... ಅವರೆಲ್ಲರೂ ನಮ್ಮ ಜಿಲ್ಲಾ ಕಮಿಟಿಯ ವಿಷಯವಾಗಿ ಸಹಾನುಭೂತಿಯನ್ನು ವ್ಯ... ಸಿದರು. ... ... ... ...

೧೦. ನಿಷೇಧ ಪ್ರದರ್ಶಕ ಸಭೆಗಳು—ಮೆ॥ ಕರ್ಜ್ಗಿವಾಯಲಿ ಮತ್ತು... ಲಕಾಕಾ ಇವರ ಕೊಲೆಯ ಸಂಬಂಧವಾಗಿ ನಿಷೇಧಪ್ರದರ್ಶನ ಸಭೆಗಳು ವಿಜಾಪುರ... ಸಿಂದಿಗಿಯಲ್ಲಿ ಸೇರಿಸಲ್ಪಟ್ಟವು. ... ... ...

೧೧. ಸ್ಟ್ಯಾಂಡಿಂಗ್ ಕಮಿಟಿಯವರು ಬಳ್ಳಾರಿ ಮಹಾಸಭೆಯ ವಿಷಯವಾ... ಳಿದ ಸಂಗತಿಗಳ ಬಗ್ಗೆ ವಿಜಾಪುರ, ಆಲಮೇಲ, ಗುಳೇದಗುಡ್ಡ, ಮೊರಟಗಿ, ಮ... ಸ್ಥಳಗಳಲ್ಲಿ ಸಭೆಗಳು ಸೇರಿಸಲ್ಪಟ್ಟು, ಅವರ ಅಭಿಪ್ರಾಯಗಳು ಬಳ್ಳಾರಿ, ಮತ್ತು... ವಾಡಕ್ಕೆ ತಿಳಿಸಲ್ಪಟ್ಟವು. ... ... ... ...

೧೨. ವ್ಯಾಪಾರ ಶಾಲೆ—ರಾ॥ ರಾ॥ ಶರಭಪ್ಪ ಮೆಣಸಿನಕಾಯಿ ಇವರು... ವಣಸಿದ್ಧಸ್ವಾಮಿಗಳವರ ಸಹಾಯದಿಂದ ಬಾಗಲಕೋಟೆಯಲ್ಲಿ ಒಂದು ವ್ಯಾಪಾರ...

ನ್ನು ಸ್ಥಾಪಿಸಿರುವರು. ಆದರೆ ಇದರ ಯೋಗ್ಯವ್ಯವಸ್ಥೆಯು ಮುಂದಿನ ವರ್ಷ ಚೆನ್ನಾಗಿ ನಿಶ್ಚಯಿಸಲ್ಪಡುವುದೆಂಬುದಾಗಿ ಜಿಲ್ಲಾ ಕಮಿಟಿಯವರ ಆಶೆ ಇದೆ. ... *

ಈ ಪ್ರಕಾರ ಸ್ಟ್ಯಾಂಡಿಂಗ್ ಕಮಿಟಿಯವರ ಅನುಮತಿಯ ಮೇರೆಗೆ ವಿಜಾಪುರ ಜಿಲ್ಲಾ ಕಮಿಟಿಯು ಸ್ಥಾಪಿಸಲ್ಪಟ್ಟದ್ದು. ಆದರ ಕಡೆಯಿಂದ ಮೇಲ್ಕಂಡ ಮೇರೆಗೆ ಅಲ್ಪ ಸ್ವಲ್ಪ ಕಾರ್ಯಗಳು ಸಾಗಿವೆ. ನಮ್ಮ ಜಿಲ್ಲೆಯು ಪುರಾತನಕಾಲದಲ್ಲಿ ಬಹುಖ್ಯಾತಿಯನ್ನು ಹೊಂದಿದ್ದರೂ ಈ ಕಾಲಕ್ಕೆ ಮುಂಬಯಿ ಇಲಾಖೆಯ ಎಲ್ಲ ಜಿಲ್ಲೆಗಳಲ್ಲಿ ಇದು ವಿದ್ಯೆ ಮತ್ತು ನಾಗರಿಕತೆಯಲ್ಲಿ ಬಹಳ ಹಿಂದುಳಿದುದಾಗಿದ್ದು ಇದಕ್ಕೆ ನಮ್ಮ ಇಲಾಖೆಯಲ್ಲಿ 'ಕತ್ತಲೆಯ ಜಿಲ್ಲೆ' ಎಂಬ ಹೆಸರು ಬಿದ್ದಿದೆ. ಇದು ತೀರ ನಿಜವಿದೆ. ಅದ್ದರಿಂದ ಮೇಲ್ಕಂಡ ಮೇರೆಗೆ ಗ್ರಾಮಗಳಲ್ಲಿ ಬೋಧಿಸಿ ಅಲ್ಲಲ್ಲಿ ಗ್ರಾಮಕಮಿಟಿಗಳನ್ನು ಸ್ಥಾಪಿಸಿದ ಜನರು ಕಷ್ಟಪಟ್ಟದ್ದನ್ನು ತಾವು ಸಹಜವಾಗಿಯೇ ಊಹಿಸಬಹುದು. ಈ ಹಳ್ಳಿಗಳಲ್ಲಿಯ ಜನರಿಗೆ ಮತವೆಂದರೇನು? ಸಭೆಯೆಂದರೇನು! ಸಮಾಜಸುಧಾರಣೆ, ವಿದ್ಯಾ ಧರ್ಮ ಇವು ಏಕೆ? ಎಂಬುದರ ಕಲ್ಪನೆಯು ಸಹ ಇಲ್ಲ. ಇದರಿಂದ ಗ್ರಾಮಕಮಿಟಿಗಳನ್ನು ಮಾಡಿರುವವರಲ್ಲಿ ಹಲವರಿಗೆ ಅನೇಕಸಾರೆ ಒಕ್ಕಲಿಗರ ಮನೆಮನೆಗೆ ಹೋಗಿ ಬರಮಾಡಿಕೊಳ್ಳುವ ಪ್ರಸಂಗ ಬರಗುತ್ತಿತ್ತು. ಇವರ ಪ್ರಯತ್ನಗಳಿಂದಲೇ ನಾನು ಮೇಲೆ ವಿವರಿಸಿದ ಕಾರ್ಯಗಳು ನಡೆದಿವೆ. ಆದರೆ ವಿಜಾಪುರ ಜಿಲ್ಲೆಯ ದಕ್ಷಿಣ ತಾಲ್ಲೂಕುಗಳಲ್ಲಿ ಇನ್ನೂ ಯಾವಪ್ರಯತ್ನಗಳೂ ನಡೆದಿಲ್ಲೆಂಬುದನ್ನು ತಿಳುಹಿಸಲು ನಾವು ಖೇದಪಡುತ್ತೇವೆ. ಈ ಕಾರ್ಯನಿರ್ವಾಹಕ ಸಂಘಗಳೂ, ಸಭೆಗಳೂ ಧ್ಯೇಯವಸ್ತುಗಳಲ್ಲ. ಆದರೆ ಅವುಗಳ ಸಹಾಯದಿಂದ ಜನರಲ್ಲಿ ಉತ್ತೇಜನ ಹುಟ್ಟಿಸಿ, ತಮಗೆ ಅವಶ್ಯಕಂದ ಸುಧಾರಣೆಗಳನ್ನು ಮಾಡಿಸಿಕೊಳ್ಳತಕ್ಕ ಸಾಧನವಸ್ತುಗಳಾಗಿವೆ. ಇದನ್ನು ತಿಳಿದುಕೊಂಡು ಇತರ ತಾಲ್ಲೂಕಿನಲ್ಲಿಯ ಮತ್ತೂ ಸರ್ಕಲ್ಲುಗಳಲ್ಲಿಯ ಮಹನೀಯರು ಮುಂದಿನ ಪ್ರಯತ್ನಗಳನ್ನು ಮಾಡುವರೆಂದು ನಾವು ಕೋರುತ್ತೇವೆ. ಮತ್ತೂ ಈವರೆಗೂ ಜಿಲ್ಲಾ ಕಮಿಟಿಯವರಿಗೆ ಸಹಾಯ ಮಾಡಿದ ಗೃಹಸ್ಥರೆಲ್ಲರಿಗೂ ನಾವು ಅತ್ಯಂತ ಆಭಾರಿ ಆಗಿರುವೆವು. ... ... ... *

ತಮ್ಮ ವಿಧೇಯರಾದ ವಿಜಾಪುರ ಜಿಲ್ಲಾ ವ್ಯವಸ್ಥಾಪಕ ಕಮಿಟಿಯ ಮೆಂಬರರು ೧, ಶ್ರೀ ಜಗದೇವರಾವ ದೇಶಮುಖ, ೨. ಶ್ರೀ ಸಂಗಪ್ಪ, ಗದಿಗೆಪ್ಪ, ದೇಶಾಯಿ ಜೈನಾಪುರ, ೩. ಶ್ರೀ ಬಸಲಿಂಗಪ್ಪ ದೇಶಾಯಿ ನಾಲತವಾಡ, ೪. ಶ್ರೀ ಗಂಗಪ್ಪಾ ದೇಶಾಯಿ ಸೊನ್ನ, ೫. ಶ್ರೀ ಮಲ್ಲಪ್ಪ ದೇಶಾಯಿ ಎಡೇಹಳ್ಳಿ, ೬. ಶ್ರೀ ಸಂಗಪ್ಪ ದೇಸಾಯಿ ರಕ್ಕಸಗಿ, ೭. ರಾ॥ರಾ॥ ಅಣ್ಣಪ್ಪಾ ಪಾಟೀಲ ಇಂಡಿ, ೮. ಮಲ್ಲಿಕಾರ್ಜುನಪ್ಪ ಚಿನಿವಾರ ಮುದ್ದೇಬಿಹಾಳ, ೯. ಸಿದ್ದಪ್ಪ ಜಿಗಜಿನ್ನಿ ಬಾಗಲಕೋಟೆ, ೧೦. ದೊಡ್ಡಪ್ಪಾ ನಾಗರಾಳ ಹುನಗುಂದ, ೧೧. ಸಿದ್ದಪ್ಪಾ ನಾಯನೇಗಲ ಗುಳೇದಗುಡ್ಡ, ೧೨. ಫಕೀರಪ್ಪ, ಗುರುಬಸಪ್ಪ ಹಳಕಟ್ಟಿ ಶಿಕ್ರಿಪರಿ

೨. ಅಬ್ಬಿಗೇರಿ ಗ್ರಾಮಕಮಿಟಿ—ಸರ್ವರೂ ಲಿಂಗಧಾರಿಗಳಾಗಿರುವಂತೆಯು ಪಿತರು ಅಲಿಂಗಿಗಳ ಕ್ಷೌರವನ್ನು ಮಾಡದಂತೆಯೂ, ಅಲಿಂಗಿಗಳನ್ನು ಬೆರಿಸಿ ಬ ಯಲ್ಲಿ ಲಿಂಗಿಗಳು ನೀರು ಸೇದದಂತೆಯೂ ಏರ್ಪಾಟು ಮಾಡಿದುದಲ್ಲದೆ, ಮುಷ್ಟಿ ಮತ್ತು ಧರ್ಮಕಾರ್ಯಗಳಲ್ಲಿ ಕಾಣಿಕೆಗಳು ಎತ್ತಲ್ಪಟ್ಟವು ಈಗ್ಗೆ ಜಮೆ ೧೧೫ ರೂಪಾ

೩. ಮುಂಡರಗಿ ಗ್ರಾಮಕಮಿಟಿ—ಮುಷ್ಟಿಫಂಡು ಎತ್ತಲ್ಪಟ್ಟದ್ದು, ದಾಯ ೬೩-೫-೦ ಇದರಲ್ಲಿ ಐವರೋದುಗರು ವಿದ್ಯಾಧ್ಯಯನ ಮಾಡುತ್ತಿರುವರು ಜನಿಸಿದಾಗಲೇ ಲಿಂಗಧಾರಣೆ, ನಾಭಿಯ ಮೇಲ್ಭಾಗದಲ್ಲಿ ಗುರುದತ್ತ ಲಿಂಗಧಾರಣೆ, ನಕ್ಕೆ ಹೋಗುವ ಮುಂದೆ ತಂಬಿಗೆ ಮತ್ತು ಮಡಿಯಿಂದ ಹೋಗುವುದು, ಇವುಗಳ ಲಿನಲ್ಲಿ ತರಲ್ಪಟ್ಟದ್ದಲ್ಲದೆ ಊರೊಳಗಿನ ಇತ್ತಂಡವು ಮುರಿದು ಇಬ್ಬಗೆಯ ಜನ ಪರಸ್ಪರ ತೊಂದರೆಗಳನ್ನು ಭೋಜನೈಕ್ಯದಿಂದ ಮುರಿಯಲ್ಪಟ್ಟವು. ...

೪. ಅಣ್ಣಿಗೇರಿ ಗ್ರಾಮಕಮಿಟಿ—ಸರ್ವದಾ ಲಿಂಗಧಾರಣೆ ಮಾಡುವುದೂ, ಗಿಗಳಿಂದ ನೀರು ಸೇದುವುದಕ್ಕೆ ಹಿಡಿಸಿಕೊಳ್ಳದಿರುವುದೂ, ಹುಟ್ಟಿದ ಕೂಡಲೇ ರಣೆ, ಕುಂಬಾರರು ಕತ್ತೆಗಳನ್ನು ಉಪಯೋಗಿಸದಿರುವುದೂ ಅಮಲಿನಲ್ಲಿ ತರಲ್ಪ ದಲ್ಲದೆ ಮುಷ್ಟಿ ಧಾನ್ಯನಿಧಿಯೂ ಏರ್ಪಡಿಸಲ್ಪಟ್ಟದೆ. ... ...

೫. ಶಿವಪುರ (ಕೊಂಡಿಕೊಪ್ಪ) ಗ್ರಾಮಕಮಿಟಿ—ಮುಷ್ಟಿಫಂಡು ಪ್ರಾ ಟ್ಟದ್ದು ೧೯ ರೂಪಾಯಿಗಳು ಜಮೆಯಾಗಿರುತ್ತವೆ. ... ...

೬. ನರೇಗಲ್ಲು ಗ್ರಾಮಕಮಿಟಿ—ಮುಷ್ಟಿಫಂಡು ಪ್ರಾರಂಭ ಮಾಡಲ್ಪ ೨೨—೧೨—೬ ಜಮೆ ಆಗಿರುತ್ತದೆ. ಇದರಿಂದ ಬಡ ವಿದ್ಯಾರ್ಥಿಗಳಿಗೆ ಸಹಾಯ ಡಲ್ಪಡುತ್ತದೆ. . ... ... ... ...

ಬಳಿಕ ವೀರಶೈವರು ರಾಜದ್ರೋಹ ಕಾರ್ಯದಲ್ಲಿ ಸೇರಕೂಡದು ಎಂಬ ಗವು ನಡೆಯಿತು. ... ... ... ...

ಇಷ್ಟರೊಳಗೆ ಬಬ್ಬ ತರುಣನು ರಾಜಕೀಯ ವಿಷಯದಲ್ಲಿ ತೊಡಗಿ, ಗಿರುವ ಸಂಗತಿಯು ಮಹಾಸಭೆಯ ಮುಂದೆ ಗೋಚರವಾಯಿತು. ಅವರಾರೆಂದರೆ— ರಾವತಿಯಲ್ಲಿನ ಒಂದು ಮಾಹೇಶ್ವರ ಕುಟುಂಬದಲ್ಲಿ ಜನಿಸಿದ ಬಬ್ಬ ತರುಣನು ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಎಂ. ಏ. ಪರೀಕ್ಷೆಗಾಗಿ ಕಲಕತ್ತೆಯಲ್ಲಿ ಓದುತ್ತಿ ಆತನು ರಾಜಕೀಯ ವ್ಯವಹಾರಗಳಲ್ಲಿ ತೊಡಗಿ ಒಂದು ರಾಜದ್ರೋಹಾತ್ಮಕವಾದ ವನ್ನು ಒಂದು ಪತ್ರಿಕೆಗೆ ಬರೆದಿದ್ದನು. ಅದರಿಂದ ಅವನು ವಿಚಾರಣೆಗೆ ಗುರಿಯಾ ರೂಪಾಯಿಗಳ ಅರ್ಥ ದಂಡವನ್ನು ವಿಧಿಸಲ್ಪಟ್ಟನು. ಮೇಲಣ ನ್ಯಾಯಮಂದಿರದ

ಆ ಶಿಕ್ಷೆಯು ಸ್ವಲ್ಪಮಟ್ಟಿಗೆ ತಗ್ಗಿಸಲ್ಪಟ್ಟಿತು. ಇದರಿಂದ ಆತನು ಮುಂದೆ ವಿದ್ಯಾಭ್ಯಾಸ ಮಾಡುವದಕ್ಕಾಗಲಿ, ಸರ್ಕಾರದ ಅಧಿಕಾರದಲ್ಲಿ ಸೇರುವದಕ್ಕಾಗಲಿ, ಅವಕಾಶವಿಲ್ಲದಂತೆ ಮಾಡಲ್ಪಟ್ಟನು. ವಿದ್ಯಾವಂತರ ಸಂಖ್ಯೆಯೇ ಕಡಿಮೆಯಾಗಿರುವ ನಮ್ಮ ಸಮಾಜದಲ್ಲಿ ಸಣ್ಣವಯಸ್ಸಿನಲ್ಲೇ ಉತ್ತಮ ಪರೀಕ್ಷೆಗಳಲ್ಲಿ ಉತ್ತೀರ್ಣನಾಗಿದ್ದ ಈ ಕುಶಲಮತಿಯು ಹೀಗೆ ಪುರೋನ್ನತಿಯ ವಿಚ್ಛೇದವನ್ನು ಈ ರೀತಿಯಾಗಿ ಪಡೆದುಕೊಂಡು ಒಂದು ಕಳಂಕವನ್ನು ನಮ್ಮ ಸಮಾಜಕ್ಕೆ ಉಂಟುಮಾಡಿದುದು ಸಾಮಾನ್ಯದ ಸಂಗತಿಯಾಗಿರುವದಿಲ್ಲ. ಇಂಥ ಪ್ರವರ್ತನದಲ್ಲಿ ಸಿಕ್ಕಿದ ಆ ಯುವಕನು ಮಹಾಸಭೆಗೆ ಈಗ ಬಂದು ತನ್ನ ಆಚರಣೆಯನ್ನು ಸಮಾಜ ಬಾಂಧವರೆಲ್ಲರ ಮುಂದೆಯು ಇಟ್ಟು, ಇತಃಪರಃ ತಾನು ಇಂಥ ಆಚರಣದಲ್ಲಿ ತೊಡಗುವದಿಲ್ಲವೆಂತಲು, ಇದುವರೆಗೆನಡೆಯಿಸಿದ ಅಪರಾಧಕ್ಕೆ ಪ್ರಾಯಶ್ಚಿತ್ತರೂಪವಾಗಿ ತನಗೆ ಬೇರೆ ನಾಮಕರಣವನ್ನು ಮಾಡಿ ಉದ್ಧರಿಸಬೇಕೆಂತಲು ಮಹಾರಾಷ್ಟ್ರ ಭಾಷೆಯಲ್ಲಿ ಸಭಿಕರನ್ನು ಪ್ರಾರ್ಥಿಸಿಕೊಂಡನು. ಮುಂದೆ ತಾನು ಎಂದೂ ರಾಜದ್ರೋಹಪ್ರಸಂಗಗಳಲ್ಲಿ ತೊಡಗುವದಿಲ್ಲವೆಂದು ಶಪಥಮಾಡಿ ಶ್ರೀ ಶ್ರೀ ಗುರುವರ್ಗಕ್ಕೆ ನಮಸ್ಕರಿಸಿದನು. ಎಲ್ಲರು ಕನಿಕರಗೊಂಡು ಅವನಿಷ್ಟದಂತೆ ಅವನಿಗೆ ನೂತನವಾಗಿ (ಮಹದೇವ) ಎಂದು ನಾಮಕರಣವನ್ನು ಮಾಡಿದರು. ಈ ಯೌವನಸ್ಥನು ಈಗ ಉಮರಾವತಿಯಲ್ಲಿ ಮರಾಠಿಯ ಭಾಷೆಯಲ್ಲಿ ಹೊರಡುವ (ವೀರಶೈವ ಸಂಜೀವಿನಿ) ಎಂಬ ಮಾಸಪತ್ರಿಕೆಯ ಸಂಪಾದಕನಾಗಿರುತ್ತಾನೆ. ಈತನ ಪತ್ನಿಯು ಮೆಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಉತ್ತೀರ್ಣಳಾಗಿ ಉತ್ತಮವಾದ ಕವಿತೆಯನ್ನು ಬರೆಯುವವರಲ್ಲಿ ಪ್ರಸಿದ್ಧಳಾಗಿರುವಳು. ಈ ಮಹದೇವಯ್ಯ ಬಿ. ಎ. ಇವರ ಉದಾಹರಣೆಯನ್ನಿಟ್ಟು ಇದರಂತೆ ಇನ್ನು ಮುಂದೆ ನಮ್ಮ ಸಮಾಜದಲ್ಲಿ ಯಾರು ರಾಜದ್ರೋಹ ದೋಷದಲ್ಲಿ ಸಿಲ್ಕಬಾರದೆಂಬುದಕ್ಕೆ ಸಭಾಮಧ್ಯದಲ್ಲಿ ಸಮಸ್ತರ ಅನುಮೋದನೆಯನ್ನು ತೆಗದುಕೊಂಡು ಖಂಡಿತವಾದ ಒಂದು ನಿರ್ಧಾರವು ಮಾಡಲ್ಪಟ್ಟಿತು. *

---

## ಅನಂತರ ಕೊಲ್ಹಾಪುರದ ಮೆ॥ ವೀರಬಸಪ್ಪ ಶ್ರೇಷ್ಠಿ ಬಿ. ಏ. ಇವರು ವೀರಶೈವ ವಿದ್ಯಾರ್ಥಿನಿಲಯಗಳವಶ್ಯಕತೆಯನ್ನು ಕುರಿತು ಈ ಕೆಳಗೆ ಕಂಡಂತೆ ಭಾಷಣ ಮಾಡಿದರು.

ಪರಮಪೂಜ್ಯ ಶ್ರೀಮನ್ನಿರಾಭಾರಿ ಮಂಡಲ ಶ್ರೀಗುರುವರ್ಯವೃಂದ, ಅಧ್ಯಕ್ಷ ಮಹಾರಾಜ ಮತ್ತು ಸಭ್ಯ ಭಗಿನಿಬಾಂಧವರೇ? ... ... *

ಹೋದವರ್ಷ ವಿಜಾಪೂರ ಜಿಲ್ಲೆಯಲ್ಲಿ ಜಿಲ್ಹಾ ಕಮಿಟಿ, ತಾಲೂಕು ಕಮಿಟಿ, ಮುಂತಾದ ಸಂಸ್ಥೆಗಳನ್ನುಸ್ಥಾಪಿಸಿ, ಮ॥ರಾ॥ರಾ॥ ಫಕೀರಪ್ಪಾ ಅಣ್ಣಾ ಹಳಕಟ್ಟಿ ಮತ್ತು

ಶ್ರೀಮಂತ ಆಲಮೇಲ ದೇಸಾಯಿ ಮುಂತಾದ ಪ್ರಮುಖ ಜನರಿಂದ ಜರಗಿಸ ಮಾಜಕಾರ್ಯದ ರಿಪೋರ್ಟನ್ನು ಇದೇ ಈಗ ರಾ|| ರಾ|| ಫಕೀರಪ್ಪಾ ಹಲಕಟ್ಟಿ ಓದಿ ತೋರಿಸಿದರು. ಮತ್ತು ಅದನ್ನು ಕೇಳಿ ನಮ್ಮೆಲ್ಲರಿಗೆ ಪರಮಸಂತೋಷವಾಗ ಯಾಕೆಂದರೆ; „ವೀರಶೈವೋತ್ಕರ್ಷ ವಿಚಾರಮಾಲೆ,, ಯ ಪ್ರಥಮಾಂಕದಲ್ಲಿ ಸಾ ಈ ಪ್ರಕಾರ ಹಲವು ಸ್ಥಲಗಳಲ್ಲಿ ಜರಗಿಸಲ್ಪಟ್ಟ ಸಮಾಜಕಾರ್ಯದ ರಿಪೋರ್ಟದ ಮಹಾಸಭೆಯ ಮುಖ್ಯ ಮತ್ತು ಆವ್ಯಶಕರ್ತವ್ಯವೆಂದು ಹೇಳಬಹುದು. ತಮ್ಮ ಸ ಳಗಿನ ಎಷ್ಟೋಜನರು ಏಕತ್ರವಾಗಿ ನೆರೆದು, ಮೂರುದಿವಸ ಏನಾದರೂ ಮಾತಾ ಕೊಂಡು ನಾಲ್ಕನೇ ದಿವಸ ಯಾತ್ರೆಯೊಡೆದು ತಮ್ಮತಮ್ಮ ಮನೇಹಾದೀ ಹಿಡಿ ಮತ್ತು ಸಭೆಯು ಹ್ಯಾಗಾಯಿತೆಂದು ಯಾರಾದರೂ ಕೇಳಿದರೆ ‹ ಅಬ್ಬಬ್ಬ, ಜನ ಎಷ್ಟುಮಂದಿ ನೆರೆದಿದ್ದರು? ಇಳುಕೊಳ್ಳುವ ವ್ಯವಸ್ಥೆಯಾದರೂ ನೆಟ್ಟಗಿತ್ತು; ಮ ಅತಿ ವಿಸ್ತಾರವಾಗಿ ಹಾಕಲ್ಪಟ್ಟಿತ್ತು, ಮತ್ತು ಊಟದ ವ್ಯವಸ್ಥೆಯು ಉತ್ಕೃಷ್ಟ ಇವನ್ನೇ ಹೇಳುತ್ತ ತಿರುಗುವದೇನು! ... ... ...

ನಿಜವಾಗಿ ಮಹಾಸಭೆ ಕೂಡಿಸುವದರಲ್ಲಿ ಇಂಥ ಪ್ರಕಾರದ ನಮ್ಮ ಉ ಇಲ್ಲವೇ ಇಲ್ಲ, ಇದು ಸಮಸ್ತರಿಗೆ ಮಾನ್ಯವಿರಲಿಕ್ಕೇ ಬೇಕು. ಮತ್ತು ಇಂಥ ಇಲ್ಲವೆಂದು ಅಲ್ಲಲ್ಲಿಯ ಪ್ರಚಲಿತ ಕಾರ್ಯಗಳಮೇಲಿಂದ ಸ್ಪಷ್ಟವಾಗುತ್ತದೆ. ಮ ಎಂಬ ಈ ಹೆಸರನ್ನು ಅನ್ವರ್ಥಕ ಮಾಡುವದಕ್ಕೋಸ್ಕರ ಅಲ್ಲಲ್ಲಿಗೆ ಸಣ್ಣ ಸಣ್ಣ ಸ್ಥಾನಿಕ, ಶಾಖೆ, ಉಪಶಾಖೆ ಮುಂತಾದ ಸಭೆಗಳು ನಿಯಮದಿಂದ ಕೂಡುತ್ತ ಬ ಗಳಿಂದ ಒಂದು ವರ್ಷದಲ್ಲಿ ವೀರಶೈವ ಉನ್ನತ್ಯರ್ಥವಾಗಿ ಆದ ಕೆಲಸಗಳ ಸಾ ಮಹಾಸಭೆಯಲ್ಲಿ ವಿದಿತ ಮಾಡಬೇಕು. ಮತ್ತು ಆಯಾ ಸಭೆಗಳ ಯೋಗ್ಯವಾದ ಗೌರವವನ್ನು ಮಾಡಬೇಕು, ಅಂದರೆ ಅವುಗಳ ಕಾರ್ಯಗಳಿಗೆ ಪ್ರೋತ್ಸಾಹನ ಪ್ರತಿವರ್ಷ ಸಮಾಜದ ಹೆಜ್ಜೆಯು ಮುಂದಕ್ಕೆ ಬೀಳುವದು. ಆದ್ದರಿಂದ ರಾ|| ಕಟ್ಟಿ ಇವರು, ತಾವು ವರ್ಷದಲ್ಲಿ ಸಭೆದ್ವಾರಾ ಮಾಡಿದ ಕೆಲಸಗಳ ರಿಪೋರ್ಟ ತೋರಿಸಿದರು. ಮತ್ತು ಹೀಗೆ ಮಾಡುವದೇ ಮಹಾಸಭೆಯ ಮುಖ್ಯ ಕರ್ತವ್ಯ ಮಗೆ ಖಾತ್ರಿಯಾಗಿರಬೇಕು. ... ... ...

ಈಗ ವಿಜಾಪೂರ ಜಿಲ್ಲೆಯಲ್ಲಿ ಸಮಾಜ ಕಾರ್ಯವು ಮಾಡಲ್ಪಟ್ಟಿರುವ ಇತರತ್ರ ಹೆಚ್ಚು ಕಡಿಮೆ ಪ್ರಮಾಣದಿಂದ ಸಮಾಜ ಕಾರ್ಯಗಳು ಮಾಡಲ್ಪ ಇದರ ವಿಷಯವಾಗಿ ನಾನು ತಮಗೆ ಸ್ವಲ್ಪದರಲ್ಲಿ ಮಾಹಿತಿ ಕೊಡುತ್ತೇನೆ. ನನ್ನ ಮಿಕ ಶಿಕ್ಷಣವೆಲ್ಲ ಮರಾಠಿ ಭಾಷೆಯಲ್ಲಿ ಯಾದ್ದರಿಂದ ನಾನು ಕನ್ನಡ ಭಾಷೆಯಲ್ಲಿ ಡುವದೆಂದರೆ ಇದೇ ಮೊದಲನೆಯ ಪ್ರಸಂಗವು. ಆದಾಗ್ಯೂ ತಾವು ಶಾಂತಚಿತ್ತದಿ

ಗೊಡುವಿರೆಂದು ಪೂರ್ಣವಾಗಿ ನಂಬಿದ್ದೇನೆ. ವಿಜಾಪೂರ ಜಿಲ್ಲೆಯಲ್ಲಿ ಜಿಲ್ಲಾ ಸಭೆ, ತಾಲೂಕು ಸಭೆ ಮುಂತಾದ ಸಭೆಗಳನ್ನು ಸ್ಥಾಪಿಸಿ, ಸಮಾಜದಲ್ಲಿ ಜಾಗೃತಿಯನ್ನು ಹುಟ್ಟಿಸುವ ಕೆಲಸವು ಸುರು ನೆಡೆದದೆ. ಆದರೆ ಎರಡನೇ ಕಡಿಗೆ ಸಭೆ ವಗೈರೆ ಕೂಡಿ, ಕೆಲವು ಮೂರ್ತ ಕಾರ್ಯಗಳಾದವದ್ದು ಸ್ಪಷ್ಟವಾಗಿ ಕಂಡು ಬರುತ್ತದೆ. ... ... *

ಕೊಲ್ಲಾಪುರದಲ್ಲಿ ದಕ್ಷಿಣ ಮಹಾರಾಷ್ಟ್ರ ವೀರಶೈವ ಸಮಾಜದ ಸ್ಥಾಪನೆಯಾಗಿ ಈಗ ನಾಲ್ಕುವರ್ಷಗಳಾಗುತ್ತ ಬಂತು, ಮೊದಲು ಸನ್ ೧೯೦೭ರ ಆರಂಭದಲ್ಲಿ ಶ್ರೀ ಕಾಡಸಿದ್ಧೇಶ್ವರ ಯಾತ್ರೆಯ ಪ್ರಸಂಗದಲ್ಲಿ ಈ ದಕ್ಷಿಣ ಮಹಾರಾಷ್ಟ್ರ ವೀರಶೈವ ಸಮಾಜದ ಮೊದಲನೇ ಜನರಲ್ ಮೀಟಿಂಗ್ ಕೂಡಿತ್ತು. ಮತ್ತು ಈ ಕಾರ್ಯವೆಲ್ಲ ಶ್ರೀಮನ್ಮಹಾರಾಜ ಛತ್ರಪತಿ ಸಾಹೇಬ ಸರಕಾರ ಕರವೀರ ಇವರ ಪೂರ್ಣ ಸಹಾನುಭೂತಿಯಿಂದಲೂ, ಸಹಾಯದಿಂದಲೂ ಜರಗಿತ್ತಿಷ್ಟೇ ಅಲ್ಲ. ಆದರೆ ಈ ಮೊದಲನೇ ಜನರಲ್ ಮೀಟಿಂಗದ ವೇಳೆಯಲ್ಲಿ ಸ್ವತಃ ಶ್ರೀಮನ್ಮಹಾರಾಜ ಛತ್ರಪತಿಯವರು ಸಿದ್ಧಗಿರಿಗೆ ಬಂದಿದ್ದರು. ಮತ್ತು ಕೇವಲ ಅವರ ಪ್ರೋತ್ಸಾಹನೆದಿಂದಲೇ ಈ ಸಮಾಜದ ಮಾರ್ಫತವಾಗಿ ಕರವೀರದಲ್ಲಿ ವೀರಶೈವ ಬೋರ್ಡಿಂಗ ಹಾವುಸ್ ವಿದ್ಯಾರ್ಥಿ ವಸತಿಗೃಹವು ಸನ್ ೧೯೦೭ರ ಮಾರ್ಚಿ ತಿಂಗಳಲ್ಲಿ ಸ್ಥಾಪಿಸಲ್ಪಟ್ಟಿತು. ಮತ್ತು ಈ ಸಮಯಕ್ಕೆ ಶ್ರೀಮಂತ ನಾಮದಾರ ಸರದೇಶಾಯಿ ವಂಟಮುರಿಕರ, ಮತ್ತು ರಾವಬಹದ್ದೂರ ರುದ್ರಗೌಡ ಅರಟಾಳ ಸಾಹೇಬ ಮುಂತಾದವರಿಂದ ಸಮಾಜ ಕಾರ್ಯಕ್ಕೆ ಬಹಳೇ ಸಹಾಯವುಂಟಾಯಿತು. ಸದ್ಯಕ್ಕೆ ಈ ವಿದ್ಯಾರ್ಥಿ ವಸತಿ ಗೃಹದಲ್ಲಿ ಸುಮಾರು ನಾಲ್ವತ್ತು ವಿದ್ಯಾರ್ಥಿಗಳಿರುತ್ತಿದ್ದು ಇನ್ನೂ ಎಷ್ಟೋ ವಿದ್ಯಾರ್ಥಿಗಳು ಕೂಡುವ ಸಂಭವವಿದೆ. ಅನ್ಯ ಮತಾನುಯಾಯಿಗಳಿದ್ದರೂ ಸಹ ಕ್ಷತ್ರಿಯ ಕುಲಾವತಂಸ ಶ್ರೀಮನ್ಮಹಾರಾಜ ಸಾಹೇಬರು ವೀರಶೈವ ಸಮಾಜದಲ್ಲಿ ವಿದ್ಯಾಪ್ರಸಾರ ಮಾಡುವದಕ್ಕೋಸ್ಕರ ಇಷ್ಟು ಸಹಾನುಭೂತಿಯನ್ನು ಕಳಕಳಿಯನ್ನು ತೋರಿಸುತ್ತಾರೆ. ಇದರಿಂದ ನಮ್ಮ ಸಮಾಜದೊಳಗೆ ವಿದ್ಯಾಪ್ರಸಾರ ಮಾಡುವ ಅವಶ್ಯಕತೆಯು ಎಷ್ಟಿರುತ್ತದೆಂಬದು ತಮಗೆ ಸಹಜವಾಗಿ ತಿಳಿಯ ಬರುವದು. (ಕೈಜಪ್ಪಾಳೆ) ... ... *

ಸುಜ್ಞರೇ! ನಾನು ವಿಷಯಾಂತರ ಮಾಡುತ್ತಿದ್ದೇನೆಂದು ತಮಗೆ ತೋರಬಹುದು; ಆದರೆ ಇದು ವಿಷಯಾಂತರ ವಿರದೆ ಸಮಾಜ ಪ್ರಗತಿಯ ಸಲುವಾಗಿ ವಿದ್ಯಾಪ್ರಸಾರ, ಶಿಕ್ಷಣಪ್ರಸಾರ, ಮಾಡುವದೇ ಮಹಾಸಭೆಯ ಮುಖ್ಯಕಾರ್ಯವು. ಆದ್ದರಿಂದಲೇ ಕ್ಷತ್ರಿಯರು ತಮ್ಮ ಪರಿಷದಕ್ಕೆ ‹ ಮರಾಠಾ ಶಿಕ್ಷಣ ಪರಿಷದ › ವೆಂಬ ಹೆಸರನ್ನು ಕೊಟ್ಟಿರುವರು. ಕೊಲ್ಲಾಪೂರದಲ್ಲಿ ಮರಾಠಾ ಬೋರ್ಡಿಂಗ ಹಾವುಸಿನೊಳಗೆ ಉಪದೇಶ ಮಾಡುವಾಗ

ಸಮಶೇರ ಬಹಾದ್ದೂರ ಸೇನಾಖಾಸಖೇಲ ಶ್ರೀಮಂತ ಸಯಾಜಿರಾವ ಮಹಾರಾಜ
ವಾಡ ಸರಕಾರ ಬಡೋದೆ ಇವರು ಸರ್ವಪ್ರಗತಿಯ ಮೂಲವೇಂದರೆ ,,ಶಿಕ್ಷಣ,, ,,ಶಿಕ್ಷ
,,ಶಿಕ್ಷಣ,, ವೆಂಬ ತ್ರಿವಾರ ಮಂತ್ರನುಡಿದರು. ಅದರ ಜಪವನ್ನು ಸರ್ವರೂ ಜಾಗ್ರ
ಮಾಡಿ ಪುರಶ್ಚರಣಾರ್ಥ ಸ್ವಾರ್ಥಾಹುತಿ ಕೊಡಲಿಕ್ಕೆ ಸಿದ್ಧರಾದಾಗ್ಯೆಯೇ ಸಮಾಧಾರ
ಜ್ಜಿಯು ಮುಂದೆ ಬೀಳುವದು. ಬೋರ್ಡಿಂಗ ಹಾವುಸ್ ವಿದ್ಯಾರ್ಥಿ ವಸತಿಗೃಹ ಜೈನ
ಆಯಾ ಸಮಾಜದ ,ಸಣ್ಣಜಗತ್ತೇ, ಎಂಬ ಮಹಾರಾಜ ಸರಕಾರರು ಹೇಳಿದ ಮಾತು
ಕೇವಲ ಅನ್ವರ್ಥಕವಾದದ್ದು. ಕೊಲ್ಹಾಪೂರದಲ್ಲಿಯ ನಮ್ಮ ವಿದ್ಯಾರ್ಥಿ ವಸತಿ ಗೃಹದ
ಅನುಭವದಮೇಲಿಂದ ಈ ಮಾತು ಸಹಜವಾಗಿ ಪ್ರತ್ಯಯಕ್ಕೆ ಬರದೆ ಇರಲಾರದು.
ರಣವಾಗಿ ತಮ್ಮ ತಮ್ಮಲ್ಲಿ ಜನಿಸಿದ ಅಥವಾ ಜನ್ಮಿಸಿದ ಭೇದಭಾವವು ಈ ಸ್ಥಳದಲ್ಲಿ
ದಹೊಂದಿ ಪರಸ್ಪರ ಬಂಧುಭಾವವು ಬೆಳೆಯುತ್ತದೆ. ಮತ್ತು ತಮ್ಮ ಸಮಾಜದ
ತಮ್ಮ ಧರ್ಮವ್ಯಾವದು! ಸಮಾಜ ಸಂಬಂಧವಾಗಿ ತಮ್ಮಮೇಲಿನ ಜವಾಬದಾರಿಕೆ,
ಇತ್ಯಾದಿ ಉದಾತ್ತ ವಿಚಾರಗಳ ಜಾಗೃತಿಯು ತನ್ನಿಂದ ತಾನೇ ತಲೆದೋರ
ಬಹಳವೇಕೆ? ನಿಜವಾದ ಮುಂದಾಳುಗಳು ಸಹ ಇಂಥ ವಿದ್ಯಾರ್ಥಿ ವಸತಿ ಗೃಹ
ದಲೇ ನಿರ್ಮಾಣವಾಗುವರೆಂದು ಬಲವತ್ತರ ಆಶೆಯದೆ. ಒಂದುವರ್ಷದೊಳಗಾಗಿ
ವಿದ್ಯಾರ್ಥಿಗಳ ವಿಚಾರವು ಯೋಗ್ಯರೀತಿಯಿಂದ ತಿದ್ದಲ್ಪಟ್ಟು ಸ್ವಾರ್ಥತ್ಯಾಗಿ ಸಮಾ
ಪ್ರವೃತ್ತಿಯು ಅವರಲ್ಲಿ ತುಂಬಿ ತುಳುಕುವದರಿಂದ ,,ನಾವು ನಾಲ್ಕೈದುಮಂದಿ
ಕಿದ್ದು, ಎಲ್ಲರೂ ಗೃಹಪ್ರಪಂಚದಲ್ಲಿಯೇ ತೊಡಕಿಕೊಂಡಿರುವದಕ್ಕಿಂತ ನನ
ಸೇವೆಮಾಡಲಿಕ್ಕೆ ತಾವು ಅಪ್ಪಣೆಕೊಟ್ಟರೆ ಒಳ್ಳೇದಾಗುವದು. ಕೂಳುನೀರಿನ
ನ್ನು ಹ್ಯಾಗಾದರೂ ಮಾಡಿ ಸಮಾಜಕಾರ್ಯ ಮಾಡಬೇಕೆಂದು ನನ್ನ ಇಚ್ಛೆ
ಈ ಅರ್ಥದ ಪತ್ರಗಳನ್ನು ತಮ್ಮ ಪಾಲಕರಿಗೆ ಬರೆದು ಅವರ ಸಮ್ಮತಿಯನ್ನು
ನಿಗಿಯನ್ನೂ ದೊರಕಿಸಿಕೊಂಡು ಸಮಾಜಸೇವೆಮಾಡುವ ಬುದ್ಧಿಯು ಇಷ್ಟರ
ದ್ಯಾರ್ಥಿ ವರ್ಗದೊಳಗೆ ದೃಗ್ಗೋಚರವಾಗಲಾರಂಭಿಸಿತು. ಇದರಮೇಲಿಂದ ಇ
ಳೊಳಗಿಂದಲೇ ನಮ್ಮ ನಿಜಮುಂದಾಳುಗಳು ಹೊರಬೀಳುವರೆಂದು ತಮ್ಮ
ಇರಲಾರದು. (ಕೈಚಪ್ಪಾಳೆ) ವಸ್ತುತಃ, ಇಂಥ ಆಯಾಸ್ಥಳಗಳ ವಿದ್ಯಾರ್ಥಿ ವಸ
ರಿಪೋರ್ಟದ ವಾಚನವು ಯಾವದಿವಸ ಮಹಾಸಭೆಯಲ್ಲಿ ದುಮುದುಮಿಸುವದೋ
ಯಾಸಂಸ್ಥೆಗಳಲ್ಲಿ ತಯಾರಾದ ವಿದ್ಯಾರ್ಥಿಗಳು ಮಹಾಸಭೆಯಲ್ಲಿ ಬಂದು
ಮೂರ್ತಿಮಂತ ನಿಂತು ,,ನಾನೊಬ್ಬನು ತಮ್ಮ ಸೇವಕನಿದ್ದೇನೆ. ನನ್ನ
ನಾದರೂ ಸಮಾಜಕಾರ್ಯ ಮಾಡುವವನಿರುತ್ತನೆ, ತಮ್ಮೆಲ್ಲರ ಕೃಪಾದೃಷ್ಟಿ
ಹೀಗೆನ್ನುತ್ತ ಸಮಾಜಕಾರ್ಯ ಮಾಡುವದಕ್ಕೆ ಸಿದ್ಧರಾಗುವರೋ ಅದೇ ಸುದಿನ
ಚಪ್ಪಾಳೆ) ಸಾಂಪ್ರತಕ್ಕೆ ದಯಾಳುಗಳಾದ ಇಂಗ್ಲೀಷ ಸರಕಾರದವರ ಅನುಕೂ

ಶಾಂತತೆಯೂ, ಸಮದೃಷ್ಟಿಯೂ ಇವುಗಳ ಸಾಮ್ರಾಜ್ಯ ವಿರುತ್ತಿದ್ದು, ವಿದ್ಯಾರ್ಥಿ ವಸತಿ ಗೃಹಗಳನ್ನು ಸ್ಥಾಪಿಸಿ, ವಿದ್ಯಾಪ್ರಸಾರ ದ್ವಾರಾ ಯೋಗ್ಯಮಾರ್ಗದಿಂದ ನಾವು ನಮ್ಮ ಸುಧಾರಣೆಮಾಡಿಕೊಳ್ಳದಿದ್ದರೆ ನಮ್ಮಂಥ ದುರ್ಭಾಗಿಗಳು ನಾವೇ? ಪಾರಸಿ, ಮುಸಲಮಾನ, ಜೈನ, ಮುಂತಾದ ಸಮಾಜದವರು ಇದೇ ಮಾರ್ಗವನ್ನವಲಂಬಿಸಿರುತ್ತಾರೆ. ಮತ್ತು ಬಸವೇಶ್ವರ ಕಾಲಕ್ಕೆ ಶ್ರೀ ಅಲ್ಲಮಪ್ರಭುವು ಇದನ್ನೇ ಸಿದ್ಧಮಾಡಿ ತೋರಿಸಲಿಲ್ಲವೇ? „ಜಂಗಮಾಸ್ತು ಷ್ಯಂತು„ ಎಂದು ಬಸವೇಶ್ವರರು ಉದರ ಸಿಂಹಾಸನದ ಕಡೆಗೆ ಮಾಡುವ ಖರ್ಚಿನ ಓಘನ್ನು ಶೂನ್ಯಸಿಂಹಾಸನದ ಕಡೆಗೆ, ವಿದ್ಯಾಸಿಂಹಾಸನದ ಕಡೆಗೆ ತಿರುಗಿಸುವ ಪ್ರೇರಣೆಯನ್ನು ಬಸವೇಶ್ವರರ ಮನಸಿನಲ್ಲಿ ಅಲ್ಲಮಪ್ರಭುವು ಉತ್ಪನ್ನಮಾಡಿಕೊಟ್ಟು ಆ ಖರ್ಚೆಲ್ಲ ಅಪೂರ್ತಿಯಾಗಿ ಕಂಡುಬಂದದರಿಂದ ಬಸವೇಶ್ವರರು ತಮ್ಮ ಪಟ್ಟದರಾಣಿ ಗಂಗಾಂಬಿಕೆ, ಇವರಿಂದ ಸಹಿತರಾಗಿ ಆತ್ಮಾಹುತಿಕೊಡಲಿಕ್ಕೆ ಸಿದ್ಧರಾದರು. ಇದರಮೇಲಿಂದ ವಿದ್ಯಾಸಿಂಹಾಸನದ ಅಂದರೆ ಶಿವಯೋಗ ಮಂದಿರದ ವಿದ್ಯಾರ್ಥಿ ವಸತಿಗೃಹದ ಬೋರ್ಡಿಂಗ ಹಾವುದರ ಮಹತ್ವವು ನಿಮಗೆ ತಿಳಿಯಬರುವದಿಲ್ಲವೇ? ಪುರಾಣಕಾಲದ ಹಳೆ ಉದಾಹರಣೆಗಳಾದರೂ ಏಕೆ? ವರ್ತಮಾನ ಕಾಲದವು ನಿನ್ನೆ ಮೊನ್ನಿನ ನೂತನ ಉದಾಹರಣೆಗಳು, ಶ್ರೀ ಬಸವೇಶ್ವರ ಗಂಗಾಂಬಿಕೆಯರಂತೆ ಆಧುನಿಕ ವೀರಶೈವ ನರನಾರೀಯರಲ್ಲಿಲ್ಲವೇ! ತಮ್ಮ ಸಮಾಜದ ಉದ್ಧಾರವಾಗಬೇಕೆಂದು ಯೋಗ್ಯ ವಿದ್ಯಾಪ್ರಸಾರ ಮಾಡುವದಕ್ಕೋಸ್ಕರ ಕೈಲಾಸವಾಸಿ ಶ್ರೀಮಂತ ನಾಡದಾರ ಶಿರಸಂಗಿಕರ ಇವರು ತಮ್ಮ ಸರ್ವಸ್ವವನ್ನು ಅರ್ಪಿಸಲಿಲ್ಲವೇ? (ಕೈಚಪ್ಪಾಳೆ) ಅದರಂತೆ ಕೈಲಾಸವಾಸಿ ಶ್ರೀ ಸಕಲ ಸೌಭಾಗ್ಯವತಿ ಬಸವಾಬಾಯಿಯವರು ಮಾತೆಯಹಾಗೆ ಸರಸ್ವತೀ ಮಂದಿರದ ಸಂಗೋಪನಮಾಡಲಿಲ್ಲವೇ! (ಕೈಚಪ್ಪಾಳೆ) ರಲಿ ಈ ರೀತಿಯಾಗಿ ಕೊಲ್ಹಾಪೂರದಲ್ಲಿಯ ವಿದ್ಯಾರ್ಥಿ ವಸತಿಗೃಹದ ಮಾಹಿತಿಯನ್ನು ತಗೆ ಸ್ವಲ್ಪದರಲ್ಲಿ ಹೇಳಿದೆನು. ಈಗ ಅನ್ಯರೀತಿಯಿಂದ ಸಮಾಜಕಾರ್ಯವು ಹ್ಯಾಗೆ ನಡೆದಿತ್ತೆಂಬದನ್ನು ಸ್ವಲ್ಪದರಲ್ಲಿ ಹೇಳುತ್ತೇನೆ. ಶ್ರೀ ಸಂಸ್ಥಾನ ನಿಡಸೋಸಿಯಲ್ಲಿ ಪ್ರತಿ ವರ್ಷ ಭಾದ್ರಪದ ಮಾಸದೊಳಗೆ ದಾಸೋಹ ಉತ್ಸವವಾಗುತ್ತಿರುತ್ತದೆ. ಅಲ್ಲಿ ಪ್ರತಿವರ್ಷ ನೂರು ಹತ್ತುಸಾವಿರ ವೀರಶೈವರು ಪ್ರಸಾದಾರ್ಥವಾಗಿ ನೆರೆಯುತ್ತಾರೆ. ಆದ್ದರಿಂದ ಈ ಸಂಧಿಯನ್ನು ಸಾಧಿಸಿ, ಹೋದ ಭಾದ್ರಪದಮಾಸದೊಳಗೆ ಕೊಲ್ಹಾಪುರದಿಂದ ರಾವಸಾಬ ಚೌಗುಲೆ ಮುನಸಫ ಮೊ॥ ಬಿಡಾಲೆ ಇತ್ಯಾದಿಜನರುಹೋಗಿದ್ದೆವು ಮತ್ತು ಸಹಜ ಕ್ಕಾ ವೀರಶೈವ ಸಮಾಜವು ಕೂಡುತ್ತಿರುತ್ತದೆ. ಅದರ ಫಾಯದೆಯು ವೀರಶೈವ ಧರ್ಮ ವಿವೇಚನದಿಂದ ತಕ್ಕೊಳ್ಳಲ್ಪಟ್ಟಿತು. ಈ ಕಾಲಕ್ಕೆ ಶ್ರೀ ನಿಡಸೋಸಿಯಲ್ಲಿಯ ಶ್ರೀಮದ್ರು ಮಠಾಧಿಪತಿ ಕಾರಭಾರಿ ಮುಂತಾದಜನರು ಸಭೆಯಕೆಲಸಕ್ಕೆ ಉತ್ತಮರೀತಿಯಾಗಿ ಯಮಾಡಿದರು. ಮತ್ತು ಇದೇಕ್ರಮವು ದಾಸೋಹಕಾಲಕ್ಕೆ ಪ್ರತಿವರ್ಷನಡೆಯಲಾಗಿ

ಸಮಾಜಕಾರ್ಯವು ಸಹಜವಾಗಿ ಆಗುವಂತಿದೆ. ನಿಡಸೋಸಿಯಿಂದ ಬರುವಾಗ್ಗೆ ನ
ನಿಪ್ಪಾಣಿಯಲ್ಲಿಯು ವೀರಶೈವ ಧರ್ಮಾಭಿಮಾನಿ ಮುಂದಾಳುಗಳಿಗೆ ಭೆಟ್ಟಿಯಾದ್ದ
ಸಮಾಜದಲ್ಲಿ ವಿದ್ಯಾ ಪ್ರಸಾರ ಮಾಡುವದಕ್ಕಾಗಿ ಅಲ್ಲಿ ಕೈಲಾಸವಾಸಿ ಸೋನ
ಕೋಟವಾಲೆ, ಇವರ ಮಹತ್ಪ್ರಯತ್ನದಿಂದ ವ್ಯಾಪಾರಿವರ್ಗದೊಳಗೆ ವಿದ್ಯಾ
ಪಿಸಲ್ಪಟ್ಟು ಕೊಲ್ಲಾಪೂರದಲ್ಲಿಯ ವಿದ್ಯಾರ್ಥಿ ವಸತಿಗೃಹದ ಸಲುವಾಗಿ ಪ್ರತಿ ಮ
ಳಿಗೆ ಸುಮಾರು ೧೦೦ ರೂಪಾಯಿ ಕಳಿಸುವ ಅಭಿವಚನ ಕೊಟ್ಟದ್ದು, ಅದರಂ
ಒಂದು ತ್ರಿಮಾಹಿಗೆ ೧೦೦ ರೂಪಾಯಿ ಕಳಿಸಿಕೊಟ್ಟಿರುತ್ತಾರೆ. ಈ ನಿಪ್ಪಾಣಿ
ಶೈವ ವ್ಯಾಪಾರಿವರ್ಗದವರ ದೃಷ್ಟಾಂತವು ಅತ್ಯಂತ ಅನುಕರಣೀಯವಾದದ್ದು (ಕೈ
ಎಲ್ಲ ಠಿಕಾಣದ ವೀರಶೈವ ವ್ಯಾಪಾರಸ್ಥರು ಧರ್ಮಾದಾಯದ ಉಪಯೋಗವನ್ನು
ದಾಯದ ಕಡೆಗೆ ಮಾಡದೆ, ಈ ನಿಪ್ಪಾಣಿಕರ ವೀರಶೈವರು ಹಾಕಿಕೊಟ್ಟ ಅತ್ಯಂ
ನೀಯವಾದ ಪಾಠವನ್ನು ಅನುಕರಣ ಮಾಡಿದರೆ ನಮ್ಮ ಸಮಾಜದ ಉನ್ನತಿಯ
ಯಿಂದ ಹಾಂ ಹಾಂ ಅನ್ನುವದರಲ್ಲಿ ಆಗುವದು. (ಕೈಚಪ್ಪಾಳೆ.) ಅದರಂತೆ ಸ
ಲ್ಲಿಯ ವೀರಶೈವ ವ್ಯಾಪಾರಸ್ಥರು ಕೆರವೀರಸ್ಥ ವಿದ್ಯಾರ್ಥಿ ವಸತಿಗೃಹಕ್ಕೆ ದ
ಸಿನಕಾಯಿ ಮೊದಲಾದ್ದನ್ನು ಕೊಟ್ಟು ಸಹಾಯ ಮಾಡುತ್ತಲಿದ್ದಾರೆ. ಅದರಂ
ಪೂರ ವೀರಶೈವ ಬೋರ್ಡಿಂಗ ಹಾವುಸಿನೊಳಗಿನ ಒಬ್ಬ ಬಡವಿದ್ಯಾರ್ಥಿಯು
ದರೂ ಸಹಾಯ ದೊರೆಯಬೇಕೆಂದು ಚಿಕ್ಕೋಡಿಗೆ ಹೋದಾಗ ಅಲ್ಲಿಯ ಮ
ಕಚೇರಿಯೊಳಗಿನ ಕಾರಕೂನ ರಾ॥ ರಾ॥ ಭೀಮರಾಯಪ್ಪಾ ಹುನ್ನರಗಿ ಇವರ
ದಿಂದ ಆವನಿಗೆ ವ್ಯಾಪಾರಸ್ಥ ವಗೈರೆ ಜನರಕಡೆಯಿಂದ ಒಂದೇ ದಿವಸದಲ್ಲಿ
ಪಾಯಿಗಳುಕೂಡಿಸಿ ಕೊಡಲ್ಪಟ್ಟವು. ಪ್ರಿಯಬಾಂಧವರೇ ಈ ಎಲ್ಲ ಸಂಗತಿಗ
ಈ ಹೊತ್ತಿಗೆ ನಮ್ಮ ಸಮಾಜದಲ್ಲಿ ಸ್ವಾರ್ಥತ್ಯಾಗಿ ನಿಜ ಮುಂದಾಳುಗಳದಪ್ಪ
ರುತ್ತದೆ. ವಾಡಿಕೆಯಾಗಿ ಅಲ್ಲಲ್ಲಿಯ ವ್ಯಾಪಾರಸ್ಥರೂ ಇತರ ಜನರೂ ಹಣ
ತೈಲ, ಮೆಣಸಿನಕಾಯಿ ಮುಂತಾದ ಅಸಂಖ್ಯ ಸಾಮಾನುಗಳನ್ನು ಕಳಿಸಿ; ವಿದ್ಯಾ
ನಿಃಸಂದೇಹವಾಗಿ ಉತ್ತೇಜನ ಕೊಡುವರೆಂದು ನಿಮಗೆ ತೋರುವದಿಲ್ಲವೇ?

ಇನ್ನು ಈ ರೀತಿಯಾಗಿ ಕೊಲ್ಲಾಪೂರ, ಶ್ರೀಕಾಡ ಸಿದ್ಧೇಶ್ವರ, ಶ್ರೀ
ನಿಪ್ಪಾಣಿ, ಸಂಕೇಶ್ವರ, ಚಿಕ್ಕೋಡಿ ಮುಂತಾದ ಸ್ಥಳಗಳಲ್ಲಿ ದಕ್ಷಿಣಮಹಾರಾಷ್ಟ್ರ
ಶೈವ ಸಮಾಜದಿಂದ ವಿದ್ಯಾಪ್ರಸಾರಾರ್ಥ ಪ್ರಯತ್ನವು ಸುರು ನಡೆಯುತ್ತಿದ್ದು
ನವಂಬರ ತಿಂಗಳಲ್ಲಿ ಶ್ರೀಯುತ ಸಂಗಪ್ಪಾ, ಅಣ್ಣಾ ಮೋಲಿಕಟ್ಟಿ, ಮತ್ತು ವೇ
ಸಣ್ಣ ತಮ್ಮಪ್ಪಾಶಾಸ್ತ್ರಿ ಮುಂತಾದ ಜನರ ಪರಿಶ್ರಮದಿಂದ ಮೊದಲನೇ ಮಿ
ಸಭೆಕೂಡಿ ವಿದ್ಯಾಮಂದಿರ ಸ್ಥಾಪನೆಯನ್ನು ನಿರ್ಣಯಿಸಿ, ವಿದ್ಯಾಮಂದಿರದ ಸ್ಥಳ

ಯುತ ಸಂಗಪ್ಪ ಅಣ್ಣಾಮೇಲಿಕಟ್ಟಿ ಇವರು ೫೦೦ ರೂಪಾಯಿ ಕಿಮ್ಮತ್ತಿನ ಜಾಗೆಯನ್ನು ಕೊಟ್ಟರು. ಮತ್ತು ಇನ್ನೂ ಎಷ್ಟೋ ವರ್ಗಣೀದಾರರಿಂದ ಅಂಕಿಗಳಾದರೂ ಸಹ ಬಿದ್ದಿರುತ್ತವೆ. ... ... ... ... ... *

ಈಗ ಎರಡು ವರ್ಷದಿಂದ ಸೊಲ್ಲಾಪೂರದಲ್ಲಿ ವೀರಶೈವಜನ ಹಿತೈಷಿಮಂಡಳಕಡೆಯಿಂದ ಅನಾಥ ವೀರಶೈವ ವಿದ್ಯಾರ್ಥಿಗಳ ಸಲುವಾಗಿ ಮೋಫತ ಶಿಕ್ಷಣಕೊಡುವಬಗ್ಗೆ ಸೋಯಿಮಾಡಲ್ಪಟ್ಟಿರುತ್ತದೆ. ಮತ್ತು ಈ ಸಂಸ್ಥೆಯಕಡೆಯಿಂದ ಎಷ್ಟೋ ವೀರಶೈವ ವಿದ್ಯಾರ್ಥಿಗಳಿಗೆ ಸ್ಕಾಲರಶಿಪ್ಪು ರೂಪಿನಿಂದ ಸಹಾಯದೊರೆತು ಅಲ್ಲಲ್ಲಿಗೆ ಸಂಸ್ಥೆ ಮಾರ್ಫತು ವ್ಯಾಖ್ಯಾನಗಳನ್ನು ಕೊಡಿಸಿ, ಸಮಾಜದಲ್ಲಿ ಜಾಗೃತಿಯನ್ನು ಉತ್ಪನ್ನಮಾಡುವ ಕೆಲಸವು ಸುರು ನಡೆದಿರುತ್ತದೆ. ಈ ವಿಷಯವಾಗಿ ಎಲ್ಲ ಮಾಹಿತಿಯು ಇಲ್ಲಿ ಓದಿತೋರಿಸಿದ ರಿಪೋರ್ಟಿನ ಮೇಲಿಂದ ತಮಗೆ ವಿದಿತವಾಗಿಯೇ ಇದೆ. ಪುನಃ ಈ ವರ್ಷ ಸೊಲ್ಲಾಪೂರದಲ್ಲಿ ವೀರಶೈವ ಮಹಾಜನ ಸಭೆಯುಸ್ಥಾಪನೆಯಾಗಿ ಬೋರ್ಡಿಂಗ ಹಾವುಸ್ ವಿದ್ಯಾವಸತಿ ಗೃಹವು ಸ್ಥಾಪಿಸಲ್ಪಟ್ಟು ಈ ಕೆಲಸಕ್ಕೆ ಜನರಕಡೆಯಿಂದ ಒಳ್ಳೇ ಸಹಾಯವು ದೊರೆಯುತ್ತಲಿಧೆ. *

ಇನ್ನು ಸಮಾಜಸುಧಾರಣೆಗೆ ಮಾಡತಕ್ಕ ಪ್ರಯತ್ನಗಳನ್ನು ಕೇವಲ ಪುರುಷ ವರ್ಗದಲ್ಲಿಯೇ ಮಾಡಿ ಸಾಲುವಂತಿಲ್ಲ. ವೀರಶೈವ ಧರ್ಮತತ್ವದಿಂದ ನೋಡಲಾಗಿ ಸ್ತ್ರೀಪುರುಷ ರೀರ್ವರು ಸಮ ಸಮಾನರಾಗಿ ತಿಳಿಯಲ್ಪಟ್ಟು, ಈ ಸರ್ವಮಾನ್ಯ ಸಿದ್ಧಾಂತವು ಇತರರಿಗೂ ಸಹ ಚನ್ನಾಗಿ ತಿಳಿಯಹತ್ತಿದೆ. ಆದ್ದರಿಂದ ಸ್ತ್ರೀವರ್ಗದಲ್ಲಾದರೂ ಯೋಗ್ಯವಾದ ಸುಧಾರಣೆಯು ಅವಶ್ಯವಾಗಿ ಆಗತಕ್ಕದ್ದು. ಮತ್ತು ಈ ದೃಷ್ಟಿಯಿಂದ ನೋಡಲಾಗಿ ಬಳ್ಳಾರಿಯಲ್ಲಿಯ ವೀರಶೈವ ಮುಂದಾಳುಗಳು ಮೊದಲನೇ ಶ್ರೀಮದ್ವೀರಶೈವ ಮಹಿಲಾಪರಿಷದವನ್ನು ತುಂಬಿಸಿ, ಸಮಾಜಕ್ಕೆ ಯೋಗ್ಯವಾದ ದಾರೀ ತೋರಿಸಿಕೊಟ್ಟರು. ಇದರಂತೆ ಇದರ ಅನುಕರಣವನ್ನು ಅವಶ್ಯವಾಗಿ ಇತರತ್ರ ಮಾಡತಕ್ಕದ್ದು. ಖರೆ ವಿಚಾರಗಳು ಖರೆ ಸಮಜೂತದಾರರು, ಖರೆ ಶೋಧಕರು, ಮತ್ತು ಖರೆ ಪರೀಕ್ಷಕರು ಇವರಿಗೆ ನರನಾರೀ ರತ್ನಗಳ ಪೂರ್ಣಜ್ಞಾನವಿರುತ್ತದೆ. ಆದರೆ ಈ ರತ್ನಶೋಧಕತನ ವಿಲ್ಲದಿದ್ದರೆ ಮತ್ಸರಾಗ್ನಿಯಿಂದ ಇಂಥಾ ರತ್ನಗಳ ಆಹುತಿಬೀಳುತ್ತದೆ, ಅಥವಾ ಕಠೋರಸುತ್ತಿಗೆಯಪೆಟ್ಟಿಗೆ ಇಂಥ ರತ್ನಗಳು ಚೂರುಚೂರಾಗಿ ಮಣ್ಣುಪಾಲಾಗಿ ಹೋಗುತ್ತವೆ. ಇಂಥ ಸ್ಥಿತಿಯಲ್ಲಿ ಭರ್ತೃಹರಿಯ:—ಕುತ್ರಾಸ್ಯಸ್ಯ:ಕುಪರೀಕ್ಷಕೈರ್ನಮಣಯೋಮ್ಯೆರ್ಘತಃಪಾತಿತಾಃ ಈ ವಚನದಂತೆ ನಾವು ನಮ್ಮಲ್ಲಿಯ ಕುಪರೀಕ್ಷತನವನ್ನೇ ವ್ಯಕ್ತಮಾಡುತ್ತೇವೆ. ಆದ್ದರಿಂದ ಮಹಿಲಾಪರಿಷದಗಳನ್ನು ತುಂಬಿಸಿ, ಶಕ್ತ್ಯಾನುಸಾರವಾಗಿ ,, ಶಕ್ತಿವಿಶಿಷ್ಟ ಶಿವಾದ್ವೈತವಾದೀ ,, ಸಮಾಜವು ತನ್ನ ಪ್ರಗತಿಮಾಡಿಕೊಳ್ಳುವದೇ ಇಷ್ಟವಾದದ್ದು. ಮತ್ತು ಈ ಸೃಷ್ಟಿಯಿಂದ

ನಮ್ಮ ಸಮಾಜದಮೇಲೆ ಬಳ್ಳಾರಿ ವಾಸಿ ವೀರಶೈವರ ಅತ್ಯಂತ ಉಪಕಾರಗಳಾಗಿವೆ. ಅಲ್ಲಲ್ಲಿಯ ಮಹಿಳಾಪರಿಷದಗಳ ರಿಪೋರ್ಟವನ್ನಾದರೂ ಮಹಾಸಭೆಯಲ್ಲಿ ಆಗತ್ಯವಾಗಿ ತಕ್ಕದ್ದು, ಸ್ತ್ರೀಶಿಕ್ಷಣಕೊಡಲಿಕ್ಕೇ ಬೇಕು ಎಂಬ ಕೇವಲ ಠರಾವುಗಳನ್ನೇ ಪ್ರತ್ಯೇ ಪಾಸಮಾಡದೆ ಅವುಗಳನ್ನು ಆಮಲಿನಲ್ಲಿ ತರುವಂತೆ ಮಾಡಬೇಕು. ...

ಕಡೆಗೆ ಇಂಥತರದ ಅಲ್ಲಲ್ಲಿಯ ಸಮಾಜಕಾರ್ಯದ ರಿಪೋರ್ಟನ ವಾಚನವು ಮುಖ್ಯವಾಗಿ ಮಹಾಸಭೆಯಲ್ಲಿ ನಡೆದರೆ ಖರೇ ಮುಂದಾಳುಗಳು ಯಾರು ಅವರಿಂದ ಜರು ಲ್ಪಟ್ಟ ಕರ್ತವ್ಯವೇನು ಅಂಗೀಕೃತ ಕಾರ್ಯಗಳೊಳಗೆ ಅವರಿಗೆ ಬದಗಿದ ಅಡಚಣೆಗ ವವು ಮತ್ತು ಅವುಗಳನ್ನು ದೂರಮಾಡುವದಕ್ಕಾಗಿ ಮಹಾಸಭೆಯ ಮಾರ್ಫತು ಕಾ ಮಾಡಲಾದೀತು, ಎಂಬದರ ಬಗ್ಗೆ ಚರ್ಚೆನಡೆದು, ಅದರಂತೆ ಕೈಕೊಂಡ ಕೆಲಸಗಳ ಯೋಗ್ಯರೀತಿಯಿಂದ ಸಿದ್ಧಿಗೆ ಮುಟ್ಟಸಲಿಕ್ಕೆ ಬಹಳ ಆಸ್ಪದವಾಗುವದು. ತಾವು ಮು ಳುಗಳೆಂದು ಬದರಾಡುವವರು ಖರೇ ಶ್ರೀಮಂತರೋ ಆಥವಾ ಶ್ರೀಮತ್ತರೋ ಖರೇ ರ್ಥತ್ಯಾಗಿ ಮುಂದಾಳುಗಳೋ ಆಥವಾ ಸಮಾಜಕಾರ್ಯ ಮಾಡುವ ನೆವದಿಂದ ಕೇವಲ ರ್ಥಕ್ಕಾಗಿಯೇ ಯಾವಾಗಲೂ ಧಡಪಡಿಸುವ ಉಪದ್ವ್ಯಾಪಿಗಳೋ ಇದರ ವಿಷಯ ಜನರಿಗೆ ಚನ್ನಾಗಿ ಪ್ರತೀತಿಯಾಗಿ ಯೋಗ್ಯ ನರನಾರಿಯರಿಗೆ ಚನ್ನಾಗಿ ಉತ್ತೇಜನವ ಕ್ಕುತ್ತ ಹೋದರೆ ಸಮಾಜದಲ್ಲಿ ಯೋಗ್ಯ ಸ್ತ್ರೀಪುರುಷ ಮುಂದಾಳುಗಳು ನಿಶ್ಚಯ ಉದಯಕ್ಕೆ ಬರುವರು. ಆದ್ದರಿಂದ ಮಹಾಸಭೆಯ ಮುಖ್ಯ ಕರ್ತವ್ಯವೆಂದರೆ ಬೇರೆ ಸ್ಥಳಗಳಲ್ಲಿ ಪ್ರತಿವರ್ಷ ಜರಗಿದ ಸಮಾಜಕಾರ್ಯಗಳ ರಿಪೋರ್ಟನ ವಾಚನವೂ ತದ್ಧ ಸಮಾಜದಲ್ಲಿ ಯೋಗ್ಯ ಸ್ವಾಭಿಮಾನ ನಿಜವಾದ ಧರ್ಮಜಾಗೃತಿ ಮತ್ತು ಸಮಾಜ ಪ್ರ ವಿಷಯವಾಗಿ ಕಾರ್ಯಮಾಡುವ ಇಚ್ಛೆ ಇವುಗಳ ಪ್ರೇರಣೆಯೂ ಇವೇ ಮುಂತಾದವುಗ ಆದ್ದರಿಂದ,ಇದೇ ಮಾರ್ಗವನ್ನವಲಂಬಿಸುವರೆಂದು ಅತಿ ಆಗ್ರಹದ ವಿನಂತಿಮಾಡಿ ನ ಭಾಷಣವನ್ನು ಮುಗಿಸುತ್ತೇನೆ. ... ... ...

(ಕೈಚಪ್ಪಾಳೆ.)

ವೀರಬಸವ ಶಿವಲಿಂಗಪ್ಪಾ ಶ್ರೇಷ್ಠಿ ಬಿ. ಏ.
ಕೊಲ್ಹಾಪೂರ.

## ೭-ನೇ ವಿಷಯ ವೀರಶೈವರ ಮಿಲ್ಲು (ಗಿರಣಿ) ಮತ್ತು ಬ್ಯಾಂಕು ಈ ವಿಷಯದ ಮೇಲೆ ವೇ|| ಶಿವಮೂರ್ತಯ್ಯಾ ಸ್ವಾಮಿ ಕಣಬುರ್ಗಿಮಠ್ ಇವರು ಮಾಡಿದ ಭಾಷಣವು.

ಸಿಂಹಾಸನಾಧಿಪತಿಗಳೇ! ಮಹಾ ಸ್ವಾಮಿಗಳೇ! ಅಧ್ಯಕ್ಷರೇ? ಮರ್ಯಾದೆಯಿಂದ ಕರೆಯಲ್ಪಟ್ಟ ಎಲ್ಲ ಸದಸದ್ವಿಚಾರಿಗಳಾದ ಸಭ್ಯಗೃಹಸ್ಥರೇ? ಪ್ರತಿನಿಧಿಗಳೇ? ಪ್ರೇಕ್ಷಕರೇ ಈ ಪ್ರಚಂಡತರವಾದ ೫ನೇ ವೀರಶೈವ ಮಹಾಸಭೆಯ ಮುಂದೆ ನಾನು ಮಾತಾಡಬೇಕೆಂಬ ವಿಷಯವು ವ್ಯಾಪಾರದ್ದಿದ್ದು ಅದನ್ನು ಅರಿಯದಜನರು ಈ ಸಭೆಯಲ್ಲಿ ಹಾಜರಿರುವವರಲ್ಲಿ ಒಬ್ಬರೂ ಇಲ್ಲಾ; ಅಂದರೆ ಅತಿಶಯೋಕ್ತಿಯಾಗದು. ಅದರಲ್ಲಿ ಹಾಲಿನಲ್ಲಿ ಸಕ್ಕರೆ ಬೆರಸಿದಂತೆ ಈ ಸಾರೆ ನಮ್ಮ ಪರಮಪ್ರಿಯ ರಾವುಸಾಹೇಬ ಅಪ್ಪಾಸಾಹೇಬ ಉರ್ಫ ಮಲ್ಲಪ್ಪಾ ಅಣ್ಣಾವಾರದ ಇವರು ಅಧ್ಯಕ್ಷರಾದುದರಿಂದ ಈ ವಿಷಯದ ಮಹತ್ವವು ಬಹಳೇ ಏರಿರುವದು ಅದನ್ನು ವಾಕ್ಯಗಳಿಂದಲೇ ಅಥವಾ ಬರೇಮಾತಿನಿಂದಲೇ ಮುಗಿಸದೆ ಅದಕ್ಕೆ ಬಂದು ರೂಪವನ್ನು ಕೊಟ್ಟು ಬೇಗನೇ ಅಮಲಿನಲ್ಲಿ ತರಬೇಕೆಂದು ಸರ್ವವೀರಶೈವ ಸಮಾಜಕ್ಕೆ ನನ್ನ ಆಗ್ರಹದಸೂಚನೆ ಇರುವದು. ಇದೇ ವಿಷಯದಬಗ್ಗೆ ಹೋದವರ್ಷ ಬಾಗಲಕೋಟೆಯ ಮಹಾಸಭೆಗೆ ಬಂದವರಿಗೆಲ್ಲ ಸ್ಮರಣವಲ್ಲಿ ಇರುವಂತೆ ಸದರೀ ಅಧ್ಯಕ್ಷರು ನಾವು ಮಾತಾಡಿರುವೆವು. ನಂತರ ನಮ್ಮಸಮಾಜಕ್ಕೆ ಸಂಜೀವನಿ ಯಂತಿರುವ ಮೈಸೂರ ಸ್ಟಾರ ಪತ್ರದಲ್ಲಿ ಸಹಾ ಅನೇಕ ವಿಷಯಗಳು ಬಂದಿದ್ದು ಅದನ್ನು ಓದುವ ಅನೇಕ ಅಭಿಮಾನಿಗಳು ಇಲ್ಲಿ ಹಾಜರಿರುವದರಿಂದ ಹೆಚ್ಚಿಗೆ ಅಮಲಿನಬಗ್ಗೆ ಚರ್ಚೆಬೇಕಿಲ್ಲಾ. ... *

### ವಿಷಯ ಪ್ರಾರಂಭ.

ಯಾವಪ್ರಕಾರ ನಮ್ಮಲ್ಲಿ ಧರ್ಮಗ್ಲಾನಿ ಆಗಿದ್ದು, ಅದು ಈ ಮಹಾಸಭೆಯು ಪ್ರಾರಂಭವಾದಾಗಿನಿಂದ ತಕ್ಕಮಟ್ಟಿಗೆ ಎಚ್ಚರಾಗುತ್ತ ನಡದದೆಯೋ ಅದರಂತೆ ಸಮೂಯಿಕ ಭಂಡವಾಲ ಕೂಡಿಸಿ, ದೊಡ್ಡದೊಡ್ಡ ವ್ಯಾಪಾರಗಳನ್ನು ಪಾಶ್ಚಾತ್ಯರ ಮಾದರಿಯಂತೆ ಮಾಡಬೇಕೆಂಬ ಲವಲವಿಕೆಯು ಅನೇಕರ ಮನಸ್ಸಿನಲ್ಲಿ ಇತ್ತಿತ್ತಲಾಗಿ ಬರಹತ್ತಿರುವದನ್ನು ಇಲ್ಲಿ ನೆರೆದಿರುವ ಅನೇಕ ದೇಸಾಯಿ, ವತನದಾರ, ಕಾಮದಾರರ ಮುಖದಿಂದ ನಾನು ಕೇಳಿರುವದರಿಂದ ಧನ್ಯನಾಗಿರುವೆನು. ... ... ... *

ಹ್ಯಾಗೆ ಶರೀರವು ಪುಷ್ಟಿಯಾಗಿ ನಿರೋಗ ಉಳ್ಳದ್ದಾಗಬೇಕಾದರೆ ಕ್ರಮವಾಗಿ ವ್ಯಾಯಾಮ, ನಿರ್ಮಲಸ್ನಾನ ಸ್ವಚ್ಛಭಕ್ಷಣ, ತಕ್ಕಷ್ಟು ಕೆಲಸಮಾಡುವದು, ಅವಶ್ಯವೋ ಅದರಂತೆ ಮನುಷ್ಯನು ಜ್ಞಾನವಂತನೂ, ಗುಣವಂತನೂ, ವ್ಯಾಪಾರದ ಗುಟ್ಟನ್ನೂ ತಿಳಿಯ

ಬೇಕಾದವರೆ ಸತ್ಸಂಗತಿ, ಉತ್ತಮವಿದ್ಯಾ, ಗ್ರಂಥಾವಲೋಕನ, ಸುಧಾರಿಸಿದ ವ್ಯಾಪಾ
ಸಹವಾಸ, ಹಣದಸಹಾಯ, ಗಿರಣಿಗಳಕೂಡ ನಡಕೊಳ್ಳತಕ್ಕರೀತಿ, ಪ್ರಮಾಣಿಕತ
ಅವಶ್ಯಬೇಕು. ನಮ್ಮ ಜನರು ಇದೇ ಹಿಂದುಸ್ಥಾನದಲ್ಲಿ ೩೫ಲಕ್ಷವಿದ್ದು, ಅವರಲ್ಲಿ
ಜನರಿಗೆ ವಿಮಾಕಂಪಿನಿ, ಬ್ಯಾಂಕು, ಗಿರಣಿಗಳು, ಹಡಗಿನವ್ಯವಹಾರ, ಭಂಗಾರದ
ನೇಯುವ ಉದ್ಯೋಗಗಳ ಸಂಘಗಳಿಗೆ ಡೈರೆಕ್ಟರರು, ಷೇರಹೋಲ್ಡರರು,
ರರು, ಇಂಜಿನೀಯರರು ಫೀಟರರು, ಅರಿವೆಗಳನ್ನು ನೇಯುವ ಮಾಹಿತಿಯುಳ್ಳ
ರುವರೆಂಬ ಬಗ್ಗೆ ಹೇಳಲಿಕ್ಕೆ ನನಗೆ ವಿಷಾದವುಂಟಾಗುವದು. ಆದರೆ ಚಿಕ್ಕತಕ್ಕ
ಅಂಗಡಿಗಳನ್ನು ಪರಿಶೋಧಿಸಿ ನೋಡಿದರೆ ಒಂದು ಮನೆತನದಲ್ಲಿ ನಾಲ್ಕುಮಂದಿ
ಮ್ಮಂದಿರಿರುವ ಕುಟುಂಬದವರು ತಮ್ಮ ಇದ್ದಷ್ಟು ಆಸ್ತಿಯನ್ನು ಪಾಲು ಮಾಡಿಕೆ
ಚಿಕ್ಕದಾಗಿರುವ ಮನೆಯಲ್ಲಿ ಭಿನ್ನಭಿನ್ನವಾಗಿ ಕೋಣೆಗಳನ್ನು ಮಾಡಿಕೊಂಡು
ಚುರುಮುರಿ ಪುಠಾಣಿ, ಮೇವಮಿಠಾಯಿ, ಕಿರಕುಳ ಸಣಗು, ಇಂಗು, ಜೀರಗಿಯ
ಗಳೇ ನಮ್ಮ ದೇಶದಲ್ಲಿ ನಮ್ಮಜನರಲ್ಲಿ ಹೆಚ್ಚಾಗಿಕಾಣುವದಲ್ಲದೆ, ಅವರಲ್ಲಿ ತುಸುನ
ವದರಿಂದ ಹರಪ್ರಯತ್ನಮಾಡಿ ಜನರನ್ನು ಗಿರಾಕಿಗಳನ್ನು ಮೋಸಗೊಳಿಸಿ ಹೆಚ್ಚು
ಮಾಡಿಕೊಂಡು ತಮ್ಮ ಹೊಟ್ಟೆತುಂಬಿಕೊಳ್ಳುವ ಅಧಮರೇ ಬಹಳಾಗಿರುವರು.
ಮಾಜದ ಉನ್ನತಿಯಾಗಬೇಕೆಂದು ಹಗಲಿರಳು ಅವಿಶ್ರಾಂತ ಶ್ರಮಪಡುತ್ತಿರುವ
ನಾಧಿಪತಿಗಳು, ವೀರಮಾಹೇಶ್ವರರೂ, ರಾ॥ಬ॥ ರುದ್ರಗೌಡ, ಚನವೀರಗೌಡ,
ಸರದೇಶಾಯಿ ವಂಟಮುರಿಕರ ರಾ॥ಸಾ॥ ಮಲ್ಲಪ್ಪಾ ಅಣ್ಣಾವಾರದ, ನಾಮದಾರ,
ಶೆಟ್ಟರು, ರಾ॥ ಸಾ॥ ಮಲ್ಲೇಶಪ್ಪ, ಅಣ್ಣಾ ಮಾನ್ವಿ, ರಾ॥ ರಾ॥ ವೀರಪ್ಪಾ ಅಣ್ಣಿ
ರಾ॥ ರಾ॥ ರಾಚಪ್ಪಾ ಅಣ್ಣಾನೀಲಿ, ವಗೈರೆ ಪ್ರಮುಖರು ನಮ್ಮ ಬೆನ್ನುಮೇಲೆ
ವೀರಶೈವ ಸಮಾಜದ ಉನ್ನತಿಗೋಸ್ಕರ ಒಂದು ನೂಲು ಅರಿವೆಯನ್ನು ತಯಾರ
ಗಿರಣಿಯನ್ನು ನಾವು ಸಮಾಯಿಕ ಭಂಡವಲದಿಂದ ತಯಾರಮಾಡುವದು, ಅದರ
ಭಾಗವನ್ನು ಅದರ ಭಾಗಿದಾರರಿಗೆಕೊಟ್ಟು ಒಂದು ಭಾಗವನ್ನು ರಿಝರ್ವಫಂಡಾಗಿ
ಇನ್ನೊಂದು ಭಾಗವನ್ನು ಶಿವಯೋಗಮಂದಿರ, ವಿದ್ಯಾಭ್ಯಾಸ ಸಂಸ್ಕೃತಪಾಠಶಾ
ದ್ಯೋಗಿಕಶಾಲೆ, ಕಾಲೇಜ, ಪರದೇಶಗಳಿಗೆ ಹುಶಾರವಿದ್ಯಾರ್ಥಿಗಳನ್ನು ಕಳಿಸುವ
ಯೋಗಿಸುವದು; ಅತಿ ಅವಶ್ಯಕವಾಗಿರುವದು. ಮತ್ತು ಬೇಕಾದ ಗ್ರಾಮಗಳಲ್ಲಿ
ಸಹಾಯದಿಂದ ಪ್ರತಿವರ್ಷ ಮಹಾಸಭೆಗಳನ್ನು ಕೂಡಿಸಿ, ಪ್ರೇಕ್ಷಕರ ಪ್ರತಿನಿಧಿಗ
ಸಹ ತೆಗೆದುಕೊಳ್ಳದೆ ಊಟ ಉಪಚಾರಗಳನ್ನು ಸಹಾ ಖರ್ಚಿಲ್ಲದೆ ಕೊಡಲನುವಾ
ಈ ಕಾರ್ಯವನ್ನು ಅತಿತ್ವರೆಯಾಗಿ ಅಮಲಿನಲ್ಲಿ ಈ ಕಾಲಕ್ಕೆ ತಾರದಿದ್ದರೆ, ಇನ್ನು
ಸುಖಶಾಂತತೆಯ ಕಾಲವು ನಮಗೆ ಶಿಗಲಾರದು. ಈ ಬ್ರಿಟಿಶ ಸಾಂಬ್ರಾಜ್ಯದಲ್ಲಿ
ಶಾಂತತೆಯು ನಮ್ಮ ದಯಾಳು ಸಾರ್ವಭೌಮ ಸಪ್ತಮ ಎಡ್ವರ್ಡ ಬಾದಶಹರ

ಚಿರಕಾಲವಿದ್ದು ಅವರ ಆಶ್ರಯದ ಛತ್ರವು ನಮ್ಮಮೇಲೆ ಸದಾ ಇರುವದರಿಂದ ಶ್ರೀ ಪರಮೇಶ್ವರನನ್ನು ಕೊಂಡಾಡಿ, ಸದಾ ಇದೇನ್ಯಾಯವಾದ ರಾಜ್ಯವು ನಮ್ಮಮೇಲೆ ಇರಲೆಂದು ಬೇಡಿಕೊಳ್ಳುವೆನು. ಮತ್ತು ಅವರ ಕಟ್ಟಳೆಗಳಿಗೆ ನಾವು ತ್ರಿಕರಣಪೂರ್ವಕವಾಗಿ ಬದ್ಧರಾಗಿ ನಡೆದು ರಾಜನಿಷ್ಟೆಯುಳ್ಳ ಪ್ರಜರು ನಾವೆಂದು ಹೊಗಳಿಸಿಕೊಳ್ಳುವ ಸಮಯವಾದರೂ ಇದೇ ಇರುವದು. ಅದರಿಂದ ನಾವು ಆಲಸ್ಯಕ್ಕೆ ಅವಕಾಶಕೊಡದೆ ನಡಕಟ್ಟಿ ಪ್ರತಿ ವೀರಶೈವನೆಂದೆನಿಸಿಕೊಳ್ಳುವ ಅಭಿಮಾನಿಯು ತಲೆಗೆ ಒಂದು ಅರ್ಧರೂಪಾಯಿ ಒಂದು ವರ್ಷದಲ್ಲಿ ಇಲ್ಲವೆ ಒಮ್ಮಿಲೆ ಒಂದೇಸಾರಿ ಧರ್ಮಾರ್ಥಕೊಡಲಿ, ಇಲ್ಲವೆ ಪ್ರತಿಶೇರ್ ೧೦ ರೂ ಮುದ್ದು ಮಾಡಿ, ೩ ತಿಂಗಳಿಗೆ ೨॥ ರೂ, ಯಂತೆ ೪ ಹಪ್ತೆಗಳನ್ನು ಒಂದು ವರ್ಷದಲ್ಲಿ ತಮಗೆ ಬೇಕಷ್ಟು ಶೆಯರುಗಳನ್ನು ತೆಗೆದುಕೊಂಡು ಸಂಸ್ಥಾನಿಕರೂ, ಗೌಡರೂ, ಶಾನಭೋಗರೂ, ಇನಾಮದಾರರೂ, ದೇಸಾಯರೂ, ವ್ಯಾಪಾರಿಗಳೂ, ಒಕ್ಕಲಿಗರೂ, ಭಿಕ್ಷುಕರೂ ಸಹಾ ತಮ್ಮ ಅನುಕೂಲತೆಯಂತೆ ಶೆಯರಗಳನ್ನು ತಗೋಂಡು ಈ ಕಾರ್ಯವನ್ನು ಸಾಂಗಗೊಳಿಸಿದರೆ ಅದರಿಂದಾಗುವ ಲಾಭಗಳು ಅವರ್ಣನೀಯವಾಗುವವೆಂದು ಹೇಳುವ ಆಗತ್ಯವೇ ಉಳಿಯುವದಿಲ್ಲಾ. ... ... ... ... *

## ವೀರಶೈವರ ನೂಲುಬಟ್ಟೆಯ ಗಿರಣಿಗೆ ಬೇಕಾದ ಭಾಂಡವಲವು ಮತ್ತು ಅವರಿಂದ ಆಗುವ ಲಾಭವು, ಇದರ ವಿವರ.

ಭಾಂಡವಲ ೧೬೦೦೦೦೦ ರೂಪಾಯಿ ಆದರೆ ೧೦ ರೂಪಾಯಿಗೆ ಒಂದು ಭಾಗವನ್ನಿಟ್ಟು ೩ ತಿಂಗಳಿಗೊಂದು ಹಪ್ತೆಯಂತೆ ವಸೂಲಮಾಡಬೇಕು. ಅದರಿಂದ ೨೫೦೦೦ ಕದರುಗಳೂ. ೪೦೦ ನೇಯುವ ಮಗ್ಗಗಳೂ ಆಗಿ, ಸರಾಸರಿ ೩೦೦೦ ವೀರಶೈವರಿಗೆ ಕೆಲಸ ಶಿಗುವದು. ಇಷ್ಟು ಭಾಂಡವಲದಿಂದ ಕಡಿಮಿಯಿಂದ ಕಡಿಮೆಹಿಡಿದರೂ ಆಗುವ ಲಾಭ, ಲುಕ್ಸಾನದ ಅಂದಾಜ ಪಟ್ಟಿಯು. ... ... ... *

(ಮುಂದಿನಪೇಜು ನೋಡಿ.)

೨೭

ಜವಾ ೨೫೦೦೦ ಕದರುಗಳಿಗೆ ದಿನಂಪ್ರತಿ ೬೦ ನೆ. ನೂಲಿನಂತೆ ೯೩೭೫ ನೂಲು ಹೊರಡುವದು. ಅಂದರೆ ೨೬ ದಿವಸಗಳಿಗೆ ೯೩೭೫ + ೨೬ = ೨೪೩೭೫೦

ನೂಲು ಧರ ೭ ಆಣೆ. ರು. ೧೦೬೬೪೦

೩೦೦ ಮಗ್ಗಗಳಿಗೆ ೫೧೨೦ ಪೌಂಡುನೂಲು ೬೪೦೦ + ೨೬ ೧೬೬೪೦೦-

ಪೌಂಡು ಅರಿವಿ. ಧರ ೧೦ ಅ. ೬ ಪೈ. ರು. ೧೦೯೨೦೦

ವೇಸ್ಟುಮಾಲು ಮಾರಿದರೆ ತಿಂಗಳಿಗೆ;—ರು. ೨೦೦೦

ತಿಂಗಳಿಗೆ ಗ್ರೋಸ್ ಉತ್ಪನ್ನ. ರು. ೨೧೭೮೪೦

ಖರ್ಚು. ೯೩೭೫ ಪೌಂಡು ನೂಲು ತಯಾರಿಸಲಿಕ್ಕೆ ಜಿನ್ನ ಅರಳೆ ೧೧೬೨೫ ೩೦೨೨೫೦ ಪೌಂಡು ಅರಳೆ ಮ. ಧ. ರು ೭—೧೨—೦. ೧೦೭೯೪ ಮಣ

ರು. ೮೩೬೫೩-

೫೧೨೦ ಪೌಂಡು ಅರಿವಿ ೨೬ದಿವಸ ೧೩೩೧೨೦ ಧರ ೭ ಅ. ೯ ಪೈ. ೬೪೪೮೦-

ಮಜೂರಿ ನೂಲಿಗೆ ೯೩೭೫ + ೨೬ = ೨೪೩೭೫೦ ಪೌಂಡಕ್ಕೆ

ಧರ. ೧ ಅ. ೩ ಪೈ ಪೌಂಡಿನಂತೆ. ೧೯೦೪೩-

ಅರಿವಿ. ೬೪೦೦ + ೨೬ = ೧೬೬೪೦೦ ,, ೨ ಅ. ೩ ಪೈ. ,, ೨೩೪೦೦-

ಗ್ರೋಸು ಖರ್ಚು. ರು. ೧೯೦೫೭೬-

ದರ ತಿಂಗಳ ೧ಕ್ಕೆ ಫಾಯಿದೆ. ೨೭೨೬೪-

ರು. ೨೧೭೮೪೦-

ಬಂದುತಿಂಗಳಿಗೆ ಅಗದೀ ಕನಿಷ್ಟಫಾಯಿದೆ ೨೭೨೬೪೦ ರೂಪಾಯಿ ಅ... ತಿಂಗಳಿಗೆ ೩೨೭೧೬೮ ರೂಪಾಯಿ ಆಯಿತು. ಅಂದರೆ ನೂರಕ್ಕೆ ೨೦—೭ ರೂಪಾ... ಆಯಿತು. ಇದರಲ್ಲಿ ಪ್ರತಿವರ್ಷ ಬಂದು ಲಕ್ಷ ರೂಪಾಯಿಗಳನ್ನು ವೀರಶೈವ ಸಮ... ನ್ನತಿಯ ಗೋಸ್ಕರ ವಿದ್ಯಾರ್ಥಿವೇತನ, ಶಿವಯೋಗ ಮಂದಿರ, ಸಂಸ್ಕೃತಪಾಠಶಾಲೆ, ಜ, ಹೈಸ್ಕೂಲ, ಉಪದೇಶಕಕರನ್ನು ನೇಮಿಸುವದರ ಕಡೆಗೆ ಉಪಯೋಗಿಸಬೇಕು. ಲಕ್ಷರೂಪಾಯಿಗಳನ್ನು ರಿಝರ್ವ, ಮತ್ತು ಡಿಪ್ರಿಶಿಯೇಶನಕ್ಕಾಗಿ ಇಡಬೇಕು. ೩೨೭೧೬೮ ರೂಪಾಯಿಗಳನ್ನು ಭಾಗಿದಾರರಿಗೆ ನೂರಕ್ಕೆ ೩—೧೫—೮ ದಂತೆ ...

ನ್ನು ಕೊಡಬಹುದು. ಮಳೆ ಬೆಳೆ ಹಂಗಾಮುಗಳ ಮೇಲಿಂದ ಇದಕ್ಕೂ ಹೆಚ್ಚಿಗೆ ಲಾಭವಾಗುವದು. ಈರೀತಿ ನಮಗೆ ನಾವು ಸಹಾಯಮಾಡಿದರೆ ಬಡ ವೀರಶೈವರ ಕಲ್ಯಾಣವನ್ನು ಅನೇಕರೀತಿಯಿಂದ ಮಾಡಿದಂತಾಗಿ, ಹಣ ಹಾಕಿದವರಿಗೆ ಬಡ್ಡಿಶಿಕ್ಕು ಸ್ವಾರ್ಥ, ಪಾರಮಾರ್ಥಿಕಗಳೆರಡೂ ದೊರೆಯುವದಲ್ಲದೆ ಸಮಾಜ ಉತ್ಕರ್ಷಬಗ್ಗೆಮಾಡಿದ ಈ ಸಹಸವು ಆಚಂದ್ರಾರ್ಕವಾಗಿ ಉಳಿಯುವದರಲ್ಲಿ ಸಂದೇಹವಿಲ್ಲಾ. ಇಂಥ ಕಾರ್ಯಾಲಯವು ಸಮಾಯಿಕ ಭಾಂಡವಾಲದಿಂದ ಮೇಲೆ ಬರೆದರೀತಿಯಿಂದ ಆಗದವಿನಃ ನಮ್ಮ ಸಮಾಜಕ್ಕೆ ತಲೆಯೆತ್ತಿ ನಡಿಯಲಿಕ್ಕೆ ಆಗುವದು. ತುರ್ತದ ಮೇಲಿಂದ ಅಸಾಧ್ಯವಾಗಿ ತೋರುವದು, ಹಾಗೇ ನಾವು ಮಹಾಸಭೆಗಳನ್ನು ನೆರೆಯಿಸುವದರಿಂದ ನಮ್ಮ ಸಮಾಜದವರಿಂದ ಪ್ರತಿವರ್ಷ ರೈಲಖರ್ಚು ಪ್ರವೇಶಫೀ, ಊಟದ ವ ಕಿರಕುಳ ಬಾಬಿನಿಂದ ಆಗದೀ ಕನಿಷ್ಟಪಕ್ಷಕ್ಕೆ ೨೫—೩೦, ಸಾವಿರ ರೂಪಾಯಿಗಳು ಖರ್ಚಾಗುವವು. ಅವುಗಳ ಮೋಬದಲು ನಮಗೆ ಯಾವರೀತಿಯಿಂದಲೂ ದೊರಿಯದೋಪರೆ, ಮೊದಲೇ ನಮ್ಮಜನರು ದರಿದ್ರರು “ ಸಾಯುವದರ ಮೇಲೆ ಮೇಯುವದು ಬಿತ್ತಂಬ,, ಗಾದಿಯಂತೆ ಬೇಗನೆ ಮಹಾಸಭೆಗೆ ಅಳಗಾಲ ಬರಬಹುದು. “ಕಾಂಚನವಿದ್ದರೆ ಕಾರ್ಯಸಿದ್ಧಿ, ಎಂಬಂತೆ ಜನರ ಕಡಿಗೆ ಹಣವಿಲ್ಲವಾದ ಬಳಿಕ ನಿದ್ರೆಬಂದಾಗ್ಯೆ ಮನುಷ್ಯನು ಇಂದ್ರಿಯಗಳು ಹ್ಯಾಗೆ ಶಿಥಿಲವಾಗುವವೋ ಅದರಂತೆ ಸರ್ವವೂ ಸಡಿಲಾಗುವದು ಸಹಜವು. ನಮ್ಮ ಪೂರ್ವಜರು ಮೊದಲಿಗೆ ಮಾಡುತ್ತಿದ್ದ ಅಪಾರವಾದ ವ್ಯಾಪಾರವು ಈಗ ನಮ್ಮ ಸ್ವಾರ್ಥತನದ ಮತ್ತು ಅಪ್ರಮಾಣಿಕತನದ ನಡತೆಯಿಂದ ಹಾಳಾಗಿಹೋಗಿರುವದು. ಅವರು ಮುತ್ತು, ಮಾಣಿಕ, ಆನೆ, ಕುದುರೆ, ಯಾಲಕ್ಕಿ, ಪತ್ರಿ, ಜಾಜಿಕಾಯಿ ವಗೈರೆ ಸರಕುಗಳ ಅತಿ ದೊಡ್ಡವ್ಯಾಪಾರವನ್ನು ಮಾಡುತ್ತಿದ್ದು, ಅವರ ಪ್ರಮಾಣಿಕತನವೂ, ಅವರ ಶಕ್ತಿಯೂ ಅವರ್ಣನೀಯವಿದ್ದದ್ದು ಹಿಂದಿನ ಇತಿಹಾಸದ ಮೇಲಿಂದ ಸಹಜ ಗೊತ್ತಾಗುವದು. ಅಂಥ ಅನಾನುಕೂಲತೆಯ ಕಾಲದಲ್ಲಿ ಸಹಾ ಈಗ ನಮ್ಮ ಎದೆಯು ಬುಗಲ್ಲೆನ್ನುವಂಥ ಕಾರ್ಯಗಳಾಗುತ್ತಿದ್ದು ಈಗ ಬ್ರಿಟಿಷ್ ಅಮಲಿನಲ್ಲಿ ಸರ್ವರರೀತಿ ವ್ಯಾಪಾರದಬಗ್ಗೆ ಅನುಕೂಲವಿದ್ದು ನಾವು ನಮ್ಮಸಮಾಜದ ಮತ್ತು ನಮ್ಮ ಉನ್ನತಿಗಾಗಿ ದೊಡ್ಡ ದೊಡ್ಡ ವ್ಯಾಪಾರಗಳನ್ನು ಮಾಡುವದಕ್ಕೆ ನಮ್ಮ ಬುದ್ಧಿಹೀನತೆ, ಮೈಗಳ್ಳತನ, ಅವಿಶ್ವಾಸತನ, ನಿಂದೋಕ್ತಿ ಇವೇಕಾರಣಗಳೆಂದು ಅನ್ನದಹೊರ್ತು ಗತಿಯಿಲ್ಲಾ. ಯಾವದೇ ದೇಶವಾಗಲೀ, ಸಮಾಜವಾಗಲೀ ಕಾರಕೂನರಿಂದಲೂ ವಕೀಲರಿಂದಲೂ ಶ್ರೀಮಂತವಾಗಲಾರದು ನಮ್ಮದೇಶದ ನಮ್ಮಸಮಾಜದ ಊರ್ಜಿತಾವಸ್ಥೆಯನ್ನು ಮಾಡಬೇಕಾದರೆ ವ್ಯಾಪಾರ, ಬಕ್ಕಲತನಗಳೇ ಮುಖ್ಯ ಸಾಧನಗಳು. ನಮ್ಮ ಇಂಥ ಪ್ರಚಂಡವಾದ ಸಮಾಜಕ್ಕೆ ಇಷ್ಟು ಹಣವು ಅಂದರೆ ಮೇಲೆಬರೆದಂಥ ಗಿರಣಿಯನ್ನು ಮಾಡುವದೆಂದರೆ ಎಷ್ಟರಮಾತು. ಕೆಳಗೆ ಬರೆದ ಮಾಹಿತಿಯು ಅದನ್ನು ತಾನೇ ತಿಳಿಸುವದು. ಮುಂಬಯಿ ಪಟ್ಟಣದಲ್ಲಿ ಜನಸಂಖ್ಯೆ ೩೩೩೦೦೦ ಇದ್ದು ಅಲ್ಲಿಯ ವ್ಯಾಪಾರ ಸಮಾಯಿಕ ಭಾಂಡವಲದಿಂದ ಆಗಿರುವ ಬ್ಯಾಂಕು

ಗಳು, ನೂಲಿನ, ಅರವಿಯು, ಬಣ್ಣದ, ವಿಮಾ ಇವುಗಳವರ್ಣನೆ ಪ್ರತ್ಯಕ್ಷ ಮುಂ
ಅಂತರಂಗದ ಸ್ಥಿತಿ ಗೊತ್ತಿದ್ದವರಿಗೇನೆ ಮಾಡಲಿಕ್ಕೆ ಬರಬಹುದು. ಹೊರ್ತು
ಘಟ್ಟಕ್ಕೆ ಹೋಗಿಬಂದಂತೆ ಆಶಹರ ನೋಡಲಿಕ್ಕೆ ಹೋದವರಿಗೆ ತಿಳಿಯುವದು
ಇಡೀ ಜಗತ್ತಿನಲ್ಲಿ ಈ ಮುಂಬಯಿ ಪಟ್ಟಣವು ವ್ಯಾಪಾರದೃಷ್ಟಿಯಿಂದ ಮುಂದೆ
ವದು ಇದು ಯಾತರಫಲ ನೀವೇ ನೋಡಿರಿ! ಅಹಹ ಅಲ್ಲಿಯ ಶಯರ ಬಜಾರ,
ನಲ್ಲಿ ಲಕ್ಷಾವಧಿರೂಪಾಯದ ಘಡಾಮೋಡಿ ಬೆಳ್ಳಿ ಭಂಗಾರ, ಮುತ್ತು ಮಾಣಿಕದ
ಕುಲಾಬಾ ಕಾಟನ್ ಗ್ರೀನದಲ್ಲಿ ಅರಳಿವ್ಯಾಪಾರಿಗಳು ಮಾಡುವ ಲಕ್ಷಗಟ್ಟಲೆಯು
ಇನ್ನು ಯರನ್ಸ ಕಂಪನಿಗಳು, ಬೆಂಕಿಹತ್ತಿ ಸುಟ್ಟ ಮಾಲಿನ ರಕಮು ಕೂಡ
ವ್ಯಾಪಾರ, ಇಂಗ್ಲೀಷ, ಫ್ರೆಂಚ, ಜರಮನ, ಅಸ್ಟ್ರೇಲಿಯಾ ಜನರ ಸಮಾಯಿಕ
ಅಂಗಡಿಗಳಲ್ಲಿ ವ್ಯವಹಾರ ಗಿರಾಕಿಗಳ ಕೂಡ ಅವರ ನಡಕೊಳ್ಳುವರೀತಿ, ಪ್ರಾಮಾಣಿ
ಚಟುವಟಿಕೆಯನ್ನು ಕಂಪಾರನೋಡಿ ವಿಚಾರಮಾಡಿದರೆ ನಮ್ಮಸಮಾಜವು ಆದರ
ನವರು ಲೋಡಿಗಾತು ಕಾರಕೂನರಿಂದ ಟಪಾಲ ಓದಿಸಿ ಹುಂಡಿಬರಿಸಿ ಏನಾದರೂ
ಅಥವಾ ಗಿರಾಕಿಗಳು ಬಂದರೆ ನಮ್ಮ ಗುಮಾಸ್ತರನ್ನು ಕೇಳರಿ, ನಮಗೇನೂ ಗೊ
ಅಂತ ಕೂತಸ್ಥಳಬಿಟ್ಟು ಏಳದ ಶೆಟ್ಟಸಾವಕಾರರು ತಾವುಸ್ವತಃ ಯಾವಕೆಲಸವನ್ನು
ಡದ ಹೊರ್ತು ಎಂದೂ ಸುದಾರಿಸದೆಂದು ಪಕ್ಕತಿಳಕೊಳ್ಳಿರಿ. ಕಾರಕೂನರು
ಲೆಖ್ಖ, ಅಂದದ್ದೇ ಖರ್ಚು, ಬಂದದ್ದೇ ಜಮಾ, ಉಳಿದದ್ದೇ ಶಿಲಕು, ಅಂತಾ
ದ್ದನ್ನು ಅಣ್ಣನವರು ಒಮ್ಮೆ ಲೋಡಿಗೆಕೂತು ತಲೆಹಾಕಿಬಿಟ್ಟರೆ ಕೆಲಸತೀರಿತು.
ಮೇಲೆ ಕಂಪನಿಗಳು ಹ್ಯಾಗೆ ಮುಂದಾಗಬೇಕು. ಭಾಗೀದಾರರಿಗೆ ಹ್ಯಾಗೆ ಲಾಭ
ಬೇಕು, ಸಮಾಜಕ್ಕೆ ಹಿತವಾಗುವ ಬಗ್ಗೆ ಎಲ್ಲಿ ಉಳಿಯಿತು. ಈ ಅಜಾಗಳತನ
ಕಂಪನಿ ಮಾಡಬೇಡಿರಪ್ಪಾ, ಉಚ್ಚೇರು ಲಫಂಗರು ಕೂಡಿ ಹಾಳುಮಾಡಿಬಿಡುವರು!
ನಮ್ಮ ಶೆಟ್ಟಸಾವಕಾರರು ಅನೇಕತರದಿಂದ ಹೇಳುವರು. ನೋಡಿರಿ ಮಹನೀಯರೇ
ಕಡಿಗೆ ಅನೇಕ ದೋಷಗಳನ್ನಿಟ್ಟುಕೊಂಡು ಸಮಾಯಿಕ ಭಂಡವಲದ ಕೆಲಸಕ್ಕೆ
ರುವದಿಲ್ಲಾ ಅಂತಾ ಒಂದೆರಡು ಉದಾಹರಣೆಗಳನ್ನುಕೊಟ್ಟು ಮುಂದಾಳುಗಳ
ಯುವ ಈ ಕಟಕರಿಗೆ ಏನುಮಾಡಬೇಕು ನೀವೇ ನೋಡಿರಿ, ಈ ಮಾತಿನಬಗ್ಗೆ
ಯೊಳಗಿರುವ ಶಿಟ್ಟುರಟ್ಟಿಯಲ್ಲಿ ಇಲ್ಲದ್ದರಿಂದ ಸಂತಾಪದಿಂದ ರಕ್ತಕುದಿದರೂ
ಬೇಕಾಗಿದೆ. ... ... ... ... "

ಸಂಪತ್ತಿನಲ್ಲಿ ಶರೀರಸಂಪತ್ತು, ಮತ್ತು ವ್ಯಾಪಾರದಲ್ಲಿ ಸಂಘಶಕ್ತಿಯು
ಹತ್ವದ್ದಾಗಿರುವದು. ಇವುಗಳ ಉಪಯೋಗಮಾಡದಿದ್ದರೆ ಸುಖವಿಲ್ಲಾ, ಕಳಕೊ
ಅವುಗಳ ಬೆಲೆ ತಿಳಿಯುವದಿಲ್ಲಾ ನಿಮ್ಮೆಲ್ಲರಿಗೆ ಪರಿಚಯವಿರುವ ಪಾಶ್ಚಾತ್ಯರು
...ಮೇರಿಕನ್ ಮಿಶನರಗಳನ್ನು ನೋಡಿರಿ, ಅವಾದರೂ ಧರ್ಮವು

ಹೇತುವಿನಬಗ್ಗೆ ಉದಾರ ಆಶ್ರಯವು ಜನರಿಂದ ಶಿಕ್ಕದ್ದರಿಂದಲೇ ಕಾಲೇಜ, ಹಾಯಿಸ್ಕೂಲ ದವಾಖಾನೆ, ಉಪದೇಶಕರು ಬಡಜನರಿಗೆ ಮನೆಮಾರು ಕೊಡುವದು, ನಿಮ್ಮೆಲ್ಲರ ಕಣ್ಣು ಮುಂದೆ ಇರುವವು. ಮಂಗಳೂರ ಬಾಸೆಲಮಿಶನ್ ನೋಡಿರಿ. ಮರಕ್ಕಟಾಯಿಲ ಕೆಲಸ ಅವರದು ಅಚಾಟವಿದೆ. ಮಿರಜಿ ಡಾಕ್ಟರ ವಾನತಿಸ ಇವರ ದವಾಖಾನೆ ಅನೇಕರು ನೋಡಿರ ಬಹುದು, ಇವೆಲ್ಲ ಸಂಘಶಕ್ತಿಯ ಫಲಗಳು. ... ... *

ಪಶುಪಕ್ಷಿಗಳಿಗೆ ವಿಚಾರಶಕ್ತಿಯಿಲ್ಲಾ, ಕಾರಣಾ ಹುಟ್ಟಗುಣದ ಹೊರ್ತರ್ಗ ಅವು ಗಳಲ್ಲಿ ಬೇರೆ ಏನು ಕಾಣಲಾರೆವು. ಆದರೆ ಮನುಷ್ಯನಲ್ಲಿ ವಿಚಾರಶಕ್ತಿ ಇರುವದರಿಂದ ದೇವರು ಆತನನ್ನು ಈ ಜಗತ್ತಿನಲ್ಲಿ ಏನಾದರೂ ಮಹತ್ವದ ಕೆಲಸ ಆತನಿಂದ ಆಗಬೇಕೆಂದು ಕಳಿಸಿರುವ ನೆಂದೆನ್ನಲಿಕ್ಕೆ ಅನೇಕ ಬಲವತ್ತರ ಕಾರಣಗಳುಂಟು. ಅದಕ್ಕಾಗಿಯೇ ಹಿಂದು ಸ್ಥಿತಿಯಲ್ಲಿ ಅನ್ನುವದೇನೆಂದರೆ ,, ನರಕರಣಿಕರೇತೋ ನರಕಾನಾರಾಯಣ ಬನಜಾಯ, ನಮ್ಮ ಸಮಾಜದ ಹಿತಚಿಂತಕರೂ, ಅಭಿಮಾನಿಗಳಾದ ಸಂಸ್ಥಾನಿಕರೂ, ಶ್ರೀಮಂತರೂ, ಕಾಮದಾರರೂ, ಶೆಟ್ಟಸಾವುಕಾರರೂ ತಮ್ಮ ಇಷ್ಟು ಅರಾಮವನ್ನು ಲೋಡಿಗಾತು ಕೂತು ಬಡಜನರ ವ ಸಮಾಜಸುಧಾರಣೆ ಕಡಿಗೆ ನೋಡದಿದ್ದರೆ ಬಡವರು ತಿರಿದುತಿನ್ನುವ ಕೂಲಿ ಕಾರರು ಏನುಮಾಡಬೇಕು, ನೀವೇ ನೋಡಿರಿ? ಕಷ್ಟಗಳು ದಾರಿಗೂಬಿಟ್ಟಲ್ಲಾ ರಾಜನಿಗೆ ಸಂತತಿ ಇಲ್ಲದೆ ರಾಜ್ಯಪದವು ಹೋಗುವದೆಂತಲೂ, ಬಡವನಿಗೆ ಮಕ್ಕಳು ಬಹಳ ಹೊಟ್ಟೆ ಗಿಲ್ಲೆಂತಲೂ, ಶ್ರೀಮಂತನಿಗೆ ಬೇಕಾದ್ದು ಇದ್ದು ಮೈಯಲ್ಲಿ ಸ್ವಸ್ಥವಿಲ್ಲವೆಂತಲೂ ಇವೇ ದುಃಖಗಳು. ಈ ಭವಸಾಗರದಲ್ಲಿ ತುಂಬಿದಾಗ್ಯೂ, ಹನಿಗೆಹನಿ ಕೂಡಿದರೆ ಹಳ್ಳ, ತೆನಿಗೆತೆನಿ ಕೂಡಿದರೆ ರಾಸಿ, ಎಂಬಂತೆ ಸಮಾಜದಬಗ್ಗೆ ಪ್ರತಿ ಒಬ್ಬರು ದಕ್ಷರಾಗಿ ತಮ್ಮ ಕೈಲಾದ ಮಟ್ಟಿಗೆ ಸಹಾಯಮಾಡುವವನೇ ನರನು, ಅವನೇ ನಿಜವಾದ ದೇವದೂತನು. ... *

ಫಕ್ತ ಮುಂಬಯಿಯಲ್ಲಿ ಕಂಪನಿ, ಮತ್ತು ಸಮಾಯಿಕ ಭಾಂಡವಲದಿಂದ ಉಂಟಾಗಿರುವ ಯಾದಿನೋಡಿದರೆ ಎದೆಯು ಬುಗಿಲೆನ್ನುವದು. ಅಲ್ಲಿ ಭಂಗಾರದಹೊಗೆ ಹಾಯುತ್ತದೆಂದು ಅನ್ನುವ ಮಾತು ನೆನಪಿಗೆ ಬರುವದು. ಅವುಗಳ ವಿವರ. ... *

| | |
|---|---|
| ೫೫. ಎಲವಿನ ಗಿರಣಿಗಳು. | ೨. ಅಲುಮಿನಿಯಂಮಾಡುವ ಕಾರಖಾನೆಗಳು. |
| ೧. ಚೀಟಮಾಡುವ ಗಿರಣಿಗಳು. | ೧೧. ತುಬಾಕಿ ಮದ್ದು ಮಾಡುವ ,, |
| ೧. ಕೂಲಿ ,, | ೫೫. ರೋಟಿ ಬಿಸ್ಕೂಟಮಾಡುವ ,, |
| ೪೩. ನೂಲಿನ ಇಲಾಖೆ ೪೩. | ೧೬. ದ್ರುವ್ಯನಿಧಿಗಳು ಬ್ಯಾಂಕು. |
| ೫. ಅರಳಿ ಪ್ರೆಸ್ ,, | ೩೫. ಸರಾಫ ಬ್ಯಾಂಕು ಏಜನ್ಸಿ |
| ೨. ಜಿನಿಂಗ ,, | ೯. ಬೋಯಿಲರ್ ಮೇಕರ್ಸ್ ,, |

೧೯. ಹಾಲುಬೆಣ್ಣೆ ಗಿರಣಿಗಳು.
೫. ಶರೆಯು ,,
೩. ಹಿಟ್ಟಿನ ,,
೯. ಬರ್ಫಿಮಾಡುವ ,,
೧೦. ಕಬ್ಬಿಣದ ,,
೨. ಎಣ್ಣೆ ಗಿರಣಿ
೪. ಕಾಗದ ,,
೨. ಗಡಿಗಿ ಕಾರಖಾನೆ.
೧. ಪಗ್ಗಮಾಡುವ ,,
೫. ಕಟ್ಟಿಗಿ ಕೊರೆಯುವ ,,
೨. ರೇಶ್ಮಿಗಿರಣಿಗಳು.
೨. ಸಾಬೂಣ ,,
೨. ಸಕ್ಕರಿ ,,
೧. ತೊಗಲಿನ ,,
೪. ಉಣ್ಣೆ ,,
೩೨೯ ಏಜಂಟರಕಂಪಿನಿಗಳು
೧೨೦ ವಿಮಾಕಂಪಿನಿಗಳು.
೩೯. ಗಡಗಿನ ಏಜನ್ಸಿ.
೮. ಬಣ್ಣದ ಕಂಪಿನಿ.
೧೦೩. ಛಾಪಖಾನೆಗಳ ಕಂಪಿನಿ.

೧೬. ಬಕ್ಕ ಬೈಂಡರ ಕಾರಖಾನೆಗಳು.
೬೩. ಪುಸ್ತಕಡಿಪೋ ಕಂಪಿನಿ.
೫೨. ಬೂಟ ಮತ್ತು ಶೂಜ ಕಂಪಿನಿ.
೧೦. ಹಡಗಿನ ಏಜನ್ಸಿ.
೫೩. ಷೇರ್‌ಬ್ರೋಕರ್ ಕಂಪಿನಿ.
೧೫. ಹಡಗಿನ ಸರಕು ಒಯ್ಯುವ ಕಂಪಿನಿ.
೮೨. ಔಷಧಾಲಯಗಳ ಕಂಪಿನಿ.
೯೮. ಗ್ಲಾಸ ದೀವಿಗೆಗಳ ಕಂಪಿನಿ.
೮೭. ಸಿವಿಲ್ ವರ್ನ್ಯಾಕುಲರ್ ಎಂಜಿನಿಯ ಕಂಪಿನಿ
೬೧. ಕೋಚ್ ಬಿಲ್ಡಿಂಗ್ ಕಂಪಿನಿ.
೧೭. ಕಲ್ಲಿದ್ದಲಿಯ ಕಂಪಿನಿ ಏಜನ್ಸಿ.
೨೫. ಮಿಠಾಯಿಗಾರರ ಕಂಪಿನಿ.
೧೦೭. ಎಂಜಿನೀಯರ ಕಂಟ್ರಾಕ್ಟರ ಕಂಪಿನಿ.
೨೬. ತಾಂಬ್ರದಪಾತ್ರೆ ಮಾಡುವ ಕಂಪಿನಿ.
೧೧೫ ಅರಳಿವ್ಯಾಪಾರದಲಾಲಿ ಕಂಪಿನಿ.
೩೨ ಬಾಯಿಸಿಕಲ್ ಕಂಪಿನಿ.
೧೬. ಕಬ್ಬಿಣದ ಭಟ್ಟಿಕಂಪಿನಿ.
೧೫. ಹೋಟೆಲ ಕಂಪಿನಿ.
೩೨. ಫೋಟೋಗ್ರಾಫ್ ಕಂಪಿನಿ.
೬. ಥಿಯೇಟರ್ ಕಂಪಿನಿ.

ಇನ್ನು ದ್ರವ್ಯನಿಧಿಗಳ ವಿಚಾರ ಒಂದು ದೃಷ್ಟಾಂತದಿಂದ ತೋರಿಸುತ್ತೇನೆ.

ಕೋಲಾರ ಗೋಲ್ಡಕಂಪಿನಿ ೩೦ ವರ್ಷಗಳಲ್ಲಿ ೭೫೦೦೦೦೦ ಟನ್ ಜೀಣಜಿ... ಜೋಂಸ ಭಂಗಾರ ಅಂದರೆ ೪೭೦೨೪೬೪೩೦ ರೊಡ್ಡು ಹೊರಟಿತು. ಭಾಗದಾರರಿಗೆ ಈ ಪ... ತ್ತಿನವರಿಗೆ ರು. ೧೮೬೨೭೭೦೩೫, ಮತ್ತು ಮೈಸೂರು ಸರಕಾರಕ್ಕೆ ೧೦೦ಕ್ಕೆ ೫ ರಂ... ೨೩೨೮೭೩೫೫ ರೂಪಾಯಿ ಮುಟ್ಟಿತು. ಅಲ್ಲಿ ಒಟ್ಟಿಗೆ ೬ ಕಂಪಿನಿಗಳು ಇದ್ದು, ೫... ಯೂರೋಪಿಯನ್ನರು ೩೩೦ ಯೂರೇಷಿಯನ್ನರು, ೨೭೪೫೦ ಹಿಂದಿ ಜನರು, ಕೆಲಸ... ಡುವರು ಅಲ್ಲಿಯ ಜನಸಂಖ್ಯೆ ೮೦೦೦೦ ಇರುವದು ಇವೆಲ್ಲ ಸಂಘಶಕ್ತಿಯ ಮಾದರಿಗಳು.

ವಿಷಯವು ಹೇಳುತ್ತ ಹೋದಂತೆ ಬಹಳೇ ಬೆಳೆದದರಿಂದ ಇನ್ನು ಹೆಚ್ಚಿಗೆ ... -ಷದೆ ನಮ್ಮ ವೀರಶೈವ ಶಿಖಾಮಣಿಗಳಾದ ಸಿಂಹಾಸನಾಧಿಪತಿಗಳೇ? ಮಹಾಸ್ವಾಮಿಗಳೇ!

ಸಂಸ್ಥಾನಿಕರೇ? ಶೆಟ್ಟಸಾವಕಾರ ಕಾಮದಾರ ಕೂಲಿಕಾರ ಪ್ರತಿನಿಧಿ ಪ್ರೇಕ್ಷಕರೇ? ನಮ್ಮ ಸಮಾಜವು ದಿನದಿನಕ್ಕೆ ಇಳಹೊತ್ತಿನ ನೆರಳಸಂತೆ ಬೆಳೆಯಬೇಕು ಅದರಲ್ಲಿ ವಿದ್ಯಾವಂತರೂ ಗುಣವಂತರೂ, ಉಪದೇಶಕರೂ, ಬಡವರೂ, ಶ್ರೀಮಂತರೂ ಸಹ ಸುಖಹೊಂದಬೇಕೆಂಬ ಆಶಾತಂತುವು ನಿಮ್ಮ ಹೃದಯಪಟಲದಲ್ಲಿ ಇದ್ದದ್ದೇ ನಿಜವಾದರೆ ನಮ್ಮ ಸಮಾಜಕ್ಕೆ ಒಂಜು ಕಾರ್ಯಾಲಯ ಮಿಲ್, ಮತ್ತು ದ್ರವ್ಯನಿಧಿ, ಬ್ಯಾಂಕುಸ್ಥಾಪನ ಮಾಡಿ ಅವರ ವಿನಿಯೋಗದಮೇಲೆ ವಿನಂತಿ ಮಾಡಿದರೆ, ನಾವು ಈ ಮಹಾಸಭೆಯನ್ನು ಕೂಡಿಸುವ ಮಹನೀಯರು ಪಟ್ಟಶ್ರಮದ ಭಾಗಿದಾರರಾದೆವೆಂದು ತಿಳಿಯಲಿಕ್ಕೆ ಬಾಧಕವಿಲ್ಲ. ,, ಯುನಿಯನ್ ಇಜ್‌ಸ್ಟ್ರೇಂಗ್ತ್,, ಆದಕಾರಣ ಈ ದಯಾಳು ಮತ್ತು ಶಾಂತಿಯಿಂದ ತುಂಬಿರುವ ನಮ್ಮ ಬ್ರಿಟಿಷ ಸರಕಾರದ ಆಳಕೆಗೆ ಒಳಗಾಗಿ ರಾಜನಿಷ್ಟರೆಂದೆನಿಸಿಕೊಂಡು ನಮ್ಮ ಸಮಾಜೋನ್ನತಿಯನ್ನು ಮಾಡುವ ಕಾಲವು ಇದೇ ಇಂಥ ಸಮಯವು ಪುನಃ ಸಿಗಲಾರದು. ಕಾರಣ ಈ ಸಾರೆ ಕಮಿಟಿ ನೇಮಿಸಿ, ಕಂಪಿನಿ ನೋಂದಾಯಿಸಿ ಬಿಡುವದೇ ಅವಶ್ಯಕರ್ತವ್ಯವಾಗಿದೆ.

ಇಷ್ಟುಹೊತ್ತಿನ ವರೆಗೆ ತಾವೆಲ್ಲರೂ ದಯವಿಟ್ಟು ಶಾಂತಚಿತ್ತದಿಂದ ಈ ನನ್ನ ವ್ಯಾಖ್ಯಾನವನ್ನು ಕೇಳಿದ್ದಕ್ಕೆ ಮತ್ತು ಅಧ್ಯಕ್ಷರು ನನಗೆ ಮಾತಾಡುವದಕ್ಕೆ ಈ ಸುಯೋಗವನ್ನು ಕೂಡಿಸಿಕೊಟ್ಟದಕ್ಕೆ ನಿಮ್ಮೆಲ್ಲರ ಉಪಕಾರ ನೆನಿಸಿ, ಶ್ರೀ ಪಾರ್ವತಿರಮಣನು ನಮ್ಮೆಲ್ಲರ ಕೋರಿಕೆಯನ್ನು ಈ ಸಮಾಜ ಉನ್ನತಿಗಾಗಿ ಪೂರೈಸಿ ನಮ್ಮೆಲ್ಲರಿಗೆ ಆಯುರಾರೋಗ್ಯವನ್ನು ಕೊಟ್ಟು, ನಮ್ಮ ಪರಮಪ್ರಿಯ ಸಪ್ತಮ ಎಡ್ವರ್ಡ ಮಹಾರಾಜನ ಆಳಕೆಯು, ಸದಾ ನಮ್ಮೆಲ್ಲರಮೇಲೆ ಇರಲೆಂದು ತ್ರಿಕರಣ ಪೂರ್ವಕವಾಗಿ ಬೇಡಿಕೊಂಡು ನಮ್ಮ ಮತದ ಏಳಿಗೆಯನ್ನು ಸದಾ ಬಯಿಸಿ, ಸೇವಿಸುತ್ತಿರುವ ಮೈಸೂರ ಸ್ಟಾರಪತ್ರವನ್ನು ಸರ್ವರೂ ತರಿಸಿಕೊಂಡು ಅದರ ವರ್ಗಣಿ ಕಾಲಕಾಲಕ್ಕೆ ಮುಟ್ಟಿಸಿ, ಪ್ರೋತ್ಸಾಹ ಗೊಳಿಸಬೇಕೆಂದು ಬೇಡಿಕೊಂಡು ಈ ನನ್ನ ವ್ಯಾಖ್ಯಾನವನ್ನು ಮುಗಿಸುವೆನು. ... *

(ಕೈಚಪ್ಪಾಳೆ.)

ಶಿವಮೂರ್ತಿಸ್ವಾಮಿ ಕಣಬುರ್ಗಿ ಮಠ.

ಗೋಕಾಕ ಫಾಲ್ಸ.

## ಇದೇ ವಿಷಯವನ್ನು ಮ॥ ರಾ॥ ರಾ॥ ಮಲ್ಲಿಕಾರ್ಜುನಪ್ಪ ಅಪ್ಪಾರಾವು, ಪಾಟೀಲ ಸೋಲಾಪುರ, ಇವರು ಅನು ಮೋದಿಸುತ್ತಾ ಮಾಡಿದ ಭಾಷಣವು.

ಗಿರಣಿ, ಮತ್ತು ಬ್ಯಾಂಕ, ಇವುಗಳ ಸ್ಥಾಪಿಸುವ ವಿಷಯದಲ್ಲಿ ನನ್ನ ವಿದ್ವಾ[...] ರಾದ ವೇ। ಶಿವಮೂರ್ತಿಪ್ಪನವರು ಆದಷ್ಟು ವಿಸ್ತಾರವಾಗಿಯೂ ಕೇಳುವವರ ಕಿವಿಗಿ[...] ಗಿಯೂ ಮಾಹಿತಿಯನ್ನು ಹೇಳುವದಲ್ಲದೆ ಅದರ ಅವಶ್ಯಕತೆಯನ್ನು ಕೂಡಾ ತಿಳುಹಿಸ[...] ತ್ತಾರೆ. ಅದೇವಿಷಯವನ್ನೇ ಸ್ಪಷ್ಟಮಾಡುವದರುದ್ದಿಶ್ಯ ತಮ್ಮಗಳಮುಂದೆ ನಿಂತಿರುವ[...] ನಾನು ಹೇಳುವ ವಿಷಯವನ್ನು ತಾವೆಲ್ಲರು ಶಾಂತವೃತ್ತಿಯಿಂದ ಕೇಳಿ, ಮಾಡುವಠರಾ[...] ಸನ್ಮತಿಯನ್ನು ಕೊಡುವಿರೆಂದು ನಂಬಿರುವೆನು. ಇಷ್ಟರಿಂದಲೆ ಇದು ಪೂರೈಸಲ್ಪಟ್ಟ[...] ಬುವಂತಿಲ್ಲ. ಇದನ್ನು ಪೂರೈಸುವಭಾರವು ತಮ್ಮೆಲ್ಲರ ಕೈಯಲ್ಲಿಯೇ ಇರುತ್ತದೆ. ಹ[...] ವರ್ಷ ಬಾಗಲಕೋಟಿಯಲ್ಲಿ ಕೂಡಿದ್ದ ಮಹಾಸಭೆಯಲ್ಲಿ ಇದೇ ವಿಷಯವನ್ನ ನನ್ನ[...] ರವಿದ್ದಂತೆ ಸವಿಸ್ತಾರ ತಮ್ಮೆಲ್ಲರ ಮುಂದಿಟ್ಟತ್ತು. ಇದರ ಸಂಬಂಧವಾಗಿ ಪುಷ್ಕಳ[...] ಯು ಜರಿಗಿತು. ಆದರೆ ಹನ್ನೆರಡುತಿಂಗಳಲ್ಲಿ ಅದರ ಕೆಲಸವು ಏನಾಯಿತೆಂದು ಯಾರಾ[...] ಕೇಳದರೆ ಏನು ಆಗಲಿಲ್ಲವೆಂದು ಉತ್ತರವನ್ನು ಹೇಳಬೇಕಾಗುತ್ತೆ. ಆಗುವದಕ್ಕೆ ಶಕ್ಯವ[...] ಕೆಲಸವು ನಮ್ಮಕಡಿಯಿಂದ ಆಗದಿದ್ದರೆ ಇಂಥ ಮಹತ್ವವಾದ ವಿಷಯದಲ್ಲಿ ಭಾಷಣ[...] ಡೋಣ, ಅದರಂತೆ ಠರಾವಮಾಡೋಣ, ಇದರಿಂದುಂಟಾದ ಉಪಯೋಗವೇನೋ ನಾ[...] ಬೆನು? ಹೀಗೆ ಕೇವಲಠರಾವಗಳ ಮಹತ್ವವೇ ಮಾತ್ರ ಹೀನಸ್ಥಿತಿಗಿಳಿಯುತ್ತದೆ. ಎ[...] ವಂತಿಲ್ಲ, ಸಭೆಯ ಮಹತ್ವವು ಕೂಡ ಹಾಗೆ ಆಗುವದು. ಇಂಥ ಅಧಿಕಸಂಖ್ಯೆಯುಳ್ಳ ಸ[...] ಸಮಾಜದಲ್ಲಿ ಕೊಟ್ಟ ಹಣವು ಮುಳಗದೆ ಎಷ್ಟಾದರು ಬಡ್ಡಿಯರೂಪದಿಂದ ಪ್ರಾಪ್ತಿಯ[...] ಅದರಿಂದ ನಮ್ಮಸಮಾಜದ ಅತ್ಯಂತ ಹಿತವಾಗುವಕೆಲಸಕ್ಕೆ ಸಹಾಯವಾಗದಿರುವದಿದು [...] ನಾಚಿಕಿಯು ಮಾತಾಗಿದೆ. ಪ್ರಯತ್ನಮಾಡವಲ್ಲದೆ ನಿರಾಶೆಯ ಉದ್ಗಾರವನ್ನು ಹೊರ[...] ವದು ಸರಿಯಾದದ್ದಲ್ಲ. ಆದರೆ ಅಧಿವೇಶನದಲ್ಲಿ ಯಾದರು ಈ ಮಾತಿನಕಡಿಗೆ ಪೂರ್ಣಲ[...] ನ್ನಿತ್ತು ಮುಂದಿನ ಸಭೆಯವರಿಗಾದರು ಯಾವದಾದರೊಂದು ಕೃತಿರೂಪವನ್ನು ತಾವು[...] ರಿಸಬೇಕೆಂಬದಾಗಿ ಪ್ರಾರ್ಥಿಸುವೆನು. ಸುಶಿಕ್ಷಿತರಾಗಿ ಸಮಂಜಸರಾದ ಸಮಾಜದ ಕಲ್ಯ[...] ಮಾಡುವದರಲ್ಲಿ ಮುಂದಾಳುಗಳಾದ ಎಲ್ಲಾ ಪ್ರದೇಶದ ಪ್ರಮುಖರಾದ ತಾವೆಲ್ಲರು ಈ[...] ಹಾಸಭೆಯ ಯೋಗದಿಂದ ಇಲ್ಲಿಯೆ ಕೂಡಿ ಇರುತ್ತೀರಿ, ತಾವು ಈ ವಿಷಯವನ್ನು ಮ[...] ನಲ್ಲಿ ತಂದದ್ದಾದರೆ ಅದು ಅಶಕ್ಯವೆನ್ನುವ ಹಾಗಿಲ್ಲ. ನಮ್ಮ ಸಮಾಜದಲ್ಲಿ ಬಡವ, ಮ[...] ಮಧ್ಯಮ, ಈ ವರ್ಗಗಳ ಸಂಖ್ಯೆಯು ಬಹು ಹೆಚ್ಚಾಗಿರುತ್ತದೆ. ನೂರಲ್ಲಿ ೬೫ ಜನ [...] ಹವು ಬೇಸಾಯದ ಕೆಲಸದಮೇಲೆ ಆಗುತ್ತದೆ. ನಕ್ಕಲತನಕೆ ನೇಸವಾದರು ಅನೇಕ[...]

ಗಳಿಂದ ಈಗ ಹೀನಸ್ಥಿತಿಯಲ್ಲಿ ಇರುತ್ತದೆ. ಮತ್ತು ನಮ್ಮ ವ್ಯಾಪಾರದ ಸ್ಥಿತಿಯಾದರು ನಮ್ಮ ಕಣ್ಣೆದುರೆ ಇರುತ್ತದೆ. ಆದರೆ ಸುಧಾರಿಸಿದ ಪದ್ಧತಿಯಂತೆ ನೂತನ ನೂತನವಾದ ಉದ್ಯೋಗವನ್ನು ತೆಗಿದು ಸರ್ವಪ್ರಕಾರದ ಕಾರಖಾನೆಗಳ ಸ್ಥಾಪನೆಯನ್ನು ಮಾಡಿದವಿನಹ ನಮ್ಮ ಸಮಾಜದ ಸುಧಾರಣೆಯು ಒಳ್ಳೇವೃದ್ಧಿಯ ಅವಸ್ಥೆಗೆ ಬರುವದು, ಶಕ್ಯವಲ್ಲ. ಕೇವಲ ಒಕ್ಕಲತನವನ್ನೇ ನೆಚ್ಚಿದರೆ ಯಾವಾಗಲು ನಮ್ಮ ಸಮಾಜವು ಮುಂದೆ ಬರುವಂತಿಲ್ಲ. ಮತ್ತು ಕೇವಲ ಇಷ್ಟೇ ಅಲ್ಲ. ಇಂಥಾ ಸಮಯದಲ್ಲಿಯುಕೂಡ ತಾವು ಯಾವವಿಚಾರವನ್ನು ಮಾಡದಿದ್ದರೆ ಈ ನಮ್ಮ ಸಮಾಜವು ಕೆಲವುದಿವಸಗಳಲ್ಲಿ ಇದ್ದಸ್ಥಿತಿಯಲ್ಲಿಯೂ ಕೂಡ ಇರಲಾರದು. ಆವಾಗ್ಯೆ ತಮ್ಮಸಮಾಜದ ಸಂಬಂಧಿ ಜವಾಬದಾರಿಯು ತಮ್ಮಮೇಲೆ ಎಂಥಾ ದೊಡ್ಡದಾಗಿರುತ್ತದೆ. ಸಮಾಜದ ಉನ್ನತಿಯನ್ನು ತಿಳಿಯುವಭಾರವು ಸಮಾಜದಲ್ಲಿಯ ಸುಶಿಕ್ಷಿತರು, ಮತ್ತು ಧನಸಂಪನ್ನರು ಇವರಕಡಿಗೆ ಇರುತ್ತದೆ. ಸಧ್ಯಃ ಊರ್ಜಿತಾವಸ್ಥೆಯಲ್ಲಿರುವ ಸಮಾಜಗಳ ಕಡಿಗೆ ಸರಿಯಾಗಿ ದೃಷ್ಟಿಯನ್ನಿಟ್ಟರೆ ನಾನು ಹೇಳುವ ವಿಷಯದ ಸತ್ಯತೆಯು ತಮ್ಮಗಳ ಮನಸಿಗೆ ತೋರದೆ ಇರಲಾರದು. ಪಾರ್ಶಿ, ಭಾಟ, ಈ ಜನರ ಸ್ಥಿತಿಯನ್ನು ವಿಚಾರಿಸಿನೋಡಿರಿ ಇವರು ಎಂಥಾ ದ್ರವ್ಯಸಂಪನ್ನರಾಗಿರುವರು. ಇವರು ನಾವು ನೋಡುನೋಡುತಾ ಸಂಪತ್ತಿನ ಸೀಮೆಯನ್ನು ಹತ್ತಿದ್ದು, ನಾವು ಇದ್ದಸ್ಥಿತಿಯಲ್ಲಿಯೂ ಕೂಡ ಏತಕ್ಕಿರಬಾರದು? ನಾವು ಯಾವದರಲ್ಲಿ ಅಪವಾದವನ್ನು ಹೊಂದಿರುತ್ತೇವೆ. ಇದೆ ವೇಳೆಯಲ್ಲಿಯೇ ಈ ವಿಚಾರವನ್ನು ನಾವೆಲ್ಲರು ಮಾಡುವದವಶ್ಯವಾಗಿರುತ್ತದೆ. ಹೀಗೇನಾದರು ಮಾಡಿ ಮುಂದಿನ ಸಂತತಿಗೆ ಮಾರ್ಗವನ್ನು ಸರಿಯಾಗಿಮಾಡದ ಹೊರ್ತು ತಮ್ಮ ಮೇಲಿರುವ ಜವಾಬದಾರಿಯು ಕಡಿಮೆಯಾಗುವಂತಿಲ್ಲ. ನಮ್ಮಸಮಾಜದಲ್ಲಿ ದರಿದ್ರರಸಂಖ್ಯೆಯು ಯಲ್ಲಿವರಿಗೂ ಜಾಸ್ತಿ ಇರುತ್ತದೆಯೋ ಅಲ್ಲಿವರಿಗೂ ನಮ್ಮಸಮಾಜದ ಊರ್ಜಿತಸ್ಥಿತಿಯು ಯಾವಾಗಲು ಆಗುವಂತಿಲ್ಲ, ಇಷ್ಟೇ ಅಲ್ಲ ಉನ್ನತಿಯ ಆಶೆಯು ಕೂಡ ವ್ಯರ್ಥವಾಗುವದು ನಮ್ಮ ಸಮಾಜವು ಸ್ವತಂತ್ರವಾದ ವ್ಯಾಪಾರ ಮತ್ತು ಒಕ್ಕಲತನ ಈ ಎರಡು ಉದ್ಯೋಗಗಳಲ್ಲಿ ಇದ್ದು ನೂರರಲ್ಲಿ ೫೯ ಜನರಾದರು ನಮ್ಮ ಸಮಾಜದಲ್ಲಿ ದೃಗ್ಗೋಚರರಾಗದಿರುವದಿದು ಎಂಥ ದುಃಖದಮಾತಾಗಿದೆ. ನಮ್ಮ ಸಮಾಜದ ಎಲ್ಲಾ ಕಡಿಯಿಂದಲು ಉನ್ನತಿಯಾಗುವದಕ್ಕೆ ಅಗಣಿತ ಹಣದ ಸಾಹಸವು ಬೇಕಾಗುತ್ತದೆ. ಯಾಚನಾವೃತ್ತಿಯಿಂದ ಹಣವನ್ನು ಸಂಪಾದಿಸಿ, ಸಮಾಜದ ಸುಧಾರಣೆಯನ್ನು ಮಾಡುವದು ಶಕ್ಯವಲ್ಲ. ನಮ್ಮ ಸಮಾಜದ ಯಾವದೋ ಒಂದು ದೊಡ್ಡಸಂಸ್ಥೆಯು ಇದ್ದದ್ದಾದರೆ ಅದು ಧಾರವಾಡದಲ್ಲಿಯ ಲಿಂಗಾಯತ ಎಜ್ಯುಕೇಶನ್ ಫಂಡಿನದೆ ಇರುತ್ತದೆ. ಫಂಡನ್ನು ಕೂಡಿಸುವ ಕೆಲಸದಲ್ಲಿ ಪ್ರಯತ್ನವನ್ನು ಮಾಡುವ ಮಂಡಲಿಯನ್ನು ಮತ್ತು ಆ ಭಾಗದ ಧನಿಕರು, ಜಮೀನದಾರರು, ' ಜಹಗೀರದಾರರು ಮೊದಲಾದವರನ್ನು ನೋಡಿದರೆ ಇಷ್ಟು ಅವಧಿಯಲ್ಲಿ ಕೂಡಿರುವ ಫಂಡಿನ ಸಂಖ್ಯೆಯು ಅಂಥ ವಿಶೇಷವೇನು ಅಲ್ಲ. ಆದರೆ ಇತರಸ್ಥಳದಲ್ಲಿ ಫಂಡನ್ನುಸ್ಥಾಪಿಸಿ ಆದರ ಉ

ತ್ಪನ್ನದ ಮೇಲಿಂದ ಸಾರ್ವಜನಿಕ ಹಿತವನ್ನು ಮಾಡುವ ಸಂಸ್ಥೆಯು ಹೊರಡುವದು ಅ
ವದೆ. ಧಾರವಾಡ ಫಂಡಿನ ಉಪಯೋಗವು ಆದರ ನಿಯಮದಂತೆ ಯಲ್ಲಿ ಆಗಬೇಕೋ ಅ
ಯೇ ಆಗುತ್ತದೆ. ಆದರೆ ತಮ್ಮಗೆ ತಮ್ಮ ಸರ್ವವೀರಶೈವರ ಉನ್ನತಿಯಾಗುವ ಉದ್ದೇ
ಯಾಸ್ಥಲಗಳಲ್ಲಿ ಅವಷ್ಟುಮಟ್ಟಿಗೆ ವ್ಯವಸ್ಥೆಯನ್ನು ಮಾಡಬೇಕಾಗುವದು. ಅಂದರೆ ಪ್ರ
ಕಗ್ರಾಮದಲ್ಲಿ ಮುಷ್ಟಿಫಂಡ, ಧಾನ್ಯಫಂಡ, ಪೈಸಾಫಂಡಗಳನ್ನು ಕೂಡಿಸಿ, ಆಯಾಗ್ರಾ
ದಲ್ಲಿ ಪ್ರಾಥಮಿಕ ಶಿಕ್ಷಣದ ಖರ್ಚಿನ ನಿರ್ವಾಹವನ್ನು ಮಾಡಬೇಕು. ದರಿದ್ರರ ಹುಡು
ವಿದ್ಯೆಯನ್ನು ಕಲಿಯುವದರಲ್ಲಿ ರುಚಿಯನ್ನು ಹುಟ್ಟಿಸುವದು, ಅಂದರೆ ಆ ಹುಡುಗರ
ಯಿತಂದಿಗಳ ಮೇಲೆ ಭಾರವು ಬೀಳದಂತೆ ವ್ಯವಸ್ಥೆಯನ್ನು ಮಾಡುವದು ಅತ್ಯಂತ ಜ
ರವದೆ. ಇಂಥ ವ್ಯವಸ್ಥೆಯಂದರೆ ಆ ಹುಡುಗರ ಭೋಜನದ ಮತ್ತು ಪುಸ್ತಕದ ಸೋ
ಯನ್ನು ಉಚಿತವಾಗಿಯೇ ಮಾಡಿ, ಅವರಿಗೆ ಅಭ್ಯಾಸವನ್ನು ಮಾಡಿಸಬೇಕು. ಈ ಮು
ಶಿಕ್ಷಣದ ಉದ್ದಿಶ್ಯ ಜಿಲ್ಹೆಯಲ್ಲಿ ವರ್ಗಣಿ ಮೊದಲಾದವರ ರೂಪದಿಂದ ಫಂಡನ್ನು ಕ
ಅದರಿಂದ ಸಹಾಯವನ್ನು ಮಾಡಬೇಕು. ಹೀಗೆ ಮಾಡುವದಕ್ಕೆ ಶಕ್ಯವಿಲ್ಲದಿದ್ದರೆ ಅ
ಲೆ ಹೇಳಿದಂತೆ ಗಿರಣಿ, ಮತ್ತು ಬ್ಯಾಂಕ ಇವುಗಳನ್ನು ಸ್ಥಾಪಿಸಿ, ಅದರಲ್ಲಿ ಉಳಿದ
ಪ್ತಿಯ ಭಾಗದಿಂದ ಆಯಾಸ್ಥಲದಲ್ಲಿಯ ಕೆಲಸಗಳನ್ನು ಶಕ್ತ್ಯಾನುಸಾರವಾಗಿ ಪೂರೈಸ
ಕು. ಇದರುದ್ದಿಶ್ಯವಾಗಿಯೆ ( ಗಿರಣಿ, ಮತ್ತು ಬ್ಯಾಂಕ, ಇವುಗಳನ್ನು ಸ್ಥಾಪಿಸಬೇ
ಈ ರೀತಿಯಾಗಿ ಆಯಾಸ್ಥಲಗಳಲ್ಲಿ ಗಿರಣಿ ಬ್ಯಾಂಕಗಳ ಸ್ಥಾಪನೆಯು ಆಗಬೇಕು.) ಅ
ಳಿಂದ ಹುಟ್ಟುವಳಿಯಾದುದರಲ್ಲಿ ಯೋಗ್ಯಭಾಗವನ್ನು ಭಾಂಡವಲದಾರರಿಗೆಕೊಟ್ಟು ಉ
ಭಾಗವು ಸಮಾಜದ ಇಂಥ ಹಿತದಕಡಿಗೆ ವ್ಯಯವಾದದ್ದಾದರೆ ಆಗದಿ ಸ್ವಲ್ಪಕಾಲದಲ್ಲಿ
ತಮ್ಮಸಮಾಜವು ಸುಧಾರಣೆಯನ್ನು ಹೊಂದುವದು. ಮೇಲೆ ಹೇಳಿದುದಲ್ಲದೆ ಆದೇ ಪ್ರ
ರದ ಕಾರಖಾನೆಗಳು ಹೊರಡುವದರಿಂದ ಅನೇಕಪ್ರಕಾರದ ಲಾಭಗಳು ಆಗುತ್ತವೆ. ಜ
ತರದ ಕೆಲಸಗಳನ್ನು ಮಾಡುವ ಜನರು ನಮ್ಮ ಸಮಾಜದಲ್ಲಿ ಇರುವದರಿಂದ ಇಂಥ
ಖಾನೆಗಳಲ್ಲಿ ಅಭ್ಯಾಸಮಾಡಿ ಅನೇಕಜನರು ಹೊರಡುವರು. ಇಂಥ ಕೆಲಸಗಳಲ್ಲಿ ನಮ್ಮ
ನರಬುದ್ಧಿ ಮತ್ತೆಯು ಇತರ ಉದ್ಯೋಗಗಳಕಿಂತಲು ಅಧಿಕವಾಗಿ ಕಂಡುಬರುತ್ತದೆ.
ರೆ ನಮ್ಮಜನರ ಇಂಥ ಕಾರಖಾನೆಗಳು ಇಲ್ಲದಿರುವದರಿಂದ ಮತ್ತು ( ಅಂಥ ಪರಿಸ್ಥಿತಿ
ಇಲ್ಲದಿರುವದರಿಂದ ನಿರುಪಾಯವಾಗಿದೆ.) ಈ ಸಭೆಯ ಅಧ್ಯಕ್ಷರಾದ ಶ್ರೀಮಂತ ವಾ
ಸಾಹೇಬ ವಾರದ ಇವರು ಗಿರಣಿ, ಮತ್ತು ಫ್ಯಾಕ್ಟರಿ, ಇವುಗಳನ್ನು ಸ್ಥಾಪಿಸಿರುವ
ನಮ್ಮ ವೀರಶೈವ ಜನರಿಗೆ ಅವರ ಉಪಯೋಗವು ಎಷ್ಟುಆಗಿದೆ. ಮತ್ತು ತಮ್ಮಬುದ್ಧಿ
ತ್ತೆಯನ್ನು ತೋರಿಸಿ, ಮೇಲುಬರುವದಕ್ಕೆ ಎಂಥ ಸಾಧನವಾಗಿದೆ ಯಂಬುವದು
ತಮ್ಮಲ್ಲಿಯ ಅನೇಕರ ಮನಸ್ಸಿನಲ್ಲಿ ಪ್ರತಿಬಿಂಬಿಸಿರುವದರಿಂದ ಅದರಿಂದ ಲಾಭವು ಎ
ಗುವ ದೆಂಬುದರ ಬಗ್ಗೆ ಹೇಳಲು ಅವಶ್ಯಕವಿದ್ದಿಲ್ಲ. ಆದರೆ ತಮ್ಮಸಮಾಜದ ಹಿತದ

ಯಿಂದ ಮೇಲಿನ ಎಲ್ಲಾ ಮಾತಿನಕಡೆಗೆ ಲಕ್ಷ್ಯವನ್ನಿತ್ತು, ತಾವು ಗಿರಣಿ, ಮತ್ತು ಬ್ಯಾಂಕ ಇವುಗಳ ಸ್ಥಾಪನೆಯುನ್ನು ಮಾಡುವವರ ಕಡೆಗೆ ಲಕ್ಷ್ಯವನ್ನು ಪೂರೈಸರಿ. ಮತ್ತು ಸಹಾಯುವನ್ನು ಮಾಡಿರಿ, ಎಂಬದಾಗಿ ತಮ್ಮಗಳಿಗೆ ಸವಿನಯು ಪ್ರಾರ್ಥನೆಯುನ್ನುಮಾಡಿ ಮತ್ತು ನನ್ನಭಾಷಣವನ್ನು ಶಾಂತವೃತ್ತಿಯಿಂದ ಕೇಳಿರುವ ತಮ್ಮಗಳ ಆಭಾರವನ್ನು ಮಾನಿಸಿ, ತಮ್ಮ ಅಪ್ಪಣೆಯುನ್ನು ತೆಗಿದುಕೊಳ್ಳುತ್ತೇನೆ. ... ... *

(ಕೈಜಪ್ಪಾಳಿ.)

ಮಲ್ಲಿಕಾರ್ಜುನಪ್ಪ, ಅಪ್ಪಾರಾವ, ಪಾಟೀಲ.

ಮುಕ್ಕಾಂ ಸೋಲಾಪುರ.

---

## ೮ನೇ ವಿಷಯು—ಕಾಯ್ದೆ ಕೌನ್ಸಿಲ್ ಸಭೆಗಳಲ್ಲಿ ಲಾರ್ಡ ಮಾರ್ಲೆಸಾಹೇಬರವರು ಮಾಡಿದ ಹೊಸ ಸುಧಾರಣೆಯು, ಮತ್ತು ವೀರಶೈವರಿಗೆ ಅವುಗಳಲ್ಲಿ ಸ್ಥಳವು ದೊರಕುವ ಉಪಾಯುಗಳು.

ಶಿ. ರಾ. ರಾ. ಗದಿಗೆಯ್ಯಸ್ವಾಮಿ ಹೊನ್ನಾಪುರ ಮಠ ವಕೀಲ ಡಿ॥ ಕೋರ್ಟ ಧಾರವಾಡ ಇವರು ಮಾಡಿದ ಭಾಷಣವು.

ಪ್ರಿಯು ಅಧ್ಯಕ್ಷರೇ? ಮತ್ತು ಸಭ್ಯಗೃಹಸ್ಥರೇ? ಬ್ರಿಟಿಷ್ ರಾಜ್ಯದಲ್ಲಿ ಪ್ರಜೆಗಳಿಗೆ ದಿನೇದಿನೇ ಹೆಚ್ಚುಹೆಚ್ಚು ವಿದ್ಯಾಭಿವೃದ್ಧಿಯು ಸಾಧನಗಳೂ, ಸ್ವತಂತ್ರಗಳೂ, ಅಧಿಕಾರಗಳೂ ದೊರಕುತ್ತಲಿವೆ ಎಂಬದು ಅತ್ಯಂತ ಅಭಿನಂದನೀಯುವಾದದ್ದು. ಈಗೀಗ ಲಾರ್ಡ ಮಾರ್ಲೆ ಇವರು ಹಿಂದುಸ್ಥಾನದ ಕಾಯ್ದೆಕೌನ್ಸಿಲ್ ಸಭೆಗಳಲ್ಲಿ ಹೆಚ್ಚು ಮೆಂಬರರನ್ನು ಸೇರಿಸಿಕೊಳ್ಳುವ ವ್ಯವಸ್ಥೆಯುನ್ನು ಮಾಡಿರುತ್ತಿದ್ದು, ಈ ಕೌನ್ಸಿಲ್ ಸಭೆಗಳ ಮೆಂಬರರಿಗೆ ಮೊದಲಿನಕಿಂತ ಹೆಚ್ಚು ಅಧಿಕಾರವನ್ನು ಕೊಟ್ಟಿರುತ್ತಾರೆ. ಮುಖ್ಯವಾಗಿನಾವು ಅತ್ಯಂತಸಂತೋಷ ಪಡುವ ಸಂಗತಿ ಯಾವದೆಂದರೆ;— ಈ ಕೌನ್ಸಿಲ್ ಸಭೆಗಳಲ್ಲಿ ಮುಸಲ್ಮಾನ ಜಾತಿಯು ಜನರು ತಮ್ಮಜಾತಿಯು ಪ್ರತಿನಿಧಿಗಳನ್ನು ತಾವೇ ಸ್ವತಂತ್ರವಾಗಿ ಆರಿಸಿ ಕೊಡಬೇಕೆಂಬ ಅಧಿಕಾರವನ್ನು ಸರಕಾರದವರು ಮುಸಲ್ಮಾನ ಜನರಿಗೆ ಕೊಟ್ಟಿರುತ್ತಾರೆ. ಇದರಿಂದ ಇನ್ನು ಮುಂದೆ ಪ್ರಾಂತಿಕ ಸರಕಾರದ ಮತ್ತು ಹಿಂದುಸ್ಥಾನ ಸರಕಾರದ ಕಾಯ್ದೆ

ಕೌನ್ಸಿಲ್ ಸಭೆಗಳಲ್ಲಿ ಮುಸಲ್ಮಾನ ಪ್ರತಿನಿಧಿಗಳು ಹೆಚ್ಚಿಗೆ ಬರುವ ಸಂಭವವಿದ್ದು, ಇ
ರಿಂದ ಸ್ವಾಭಾವಿಕವಾಗಿ ಆ ಜಾತಿಯ ಕಲ್ಯಾಣವೂ, ವರ್ಚಸ್ಸೂ, ಹೆಚ್ಚಾಗುವವು. ನ
ವೀರಶೈವರು ಮುಂಬಯಿ ಮತ್ತು ಮದ್ರಾಸ, ಇಲಾಖೆಗಳಲ್ಲಿ ಮುಸಲ್ಮಾನರಕಿಂತ ಜನ
ಖ್ಯೆಯಲ್ಲಾಗಲೀ, ಉದ್ಯೋಗ ವ್ಯಾಪಾರದಲ್ಲಾಗಲೀ, ವಿದ್ಯೆಯಲ್ಲಾಗಲೀ, ಸಾರ್ವಜ
ಕೆಲಸಗಳನ್ನು ಆಸ್ಥೆಯಿಂದ ಮಾಡುವ ವಿಷಯದಲ್ಲಾಗಲೀ, ಎಷ್ಟುಮಾತ್ರಕ್ಕೂ ಹಿಂ
ದಿರುವದಿಲ್ಲ. ನಾವು ಅವರಿಗಿಂತ ಹೆಚ್ಚಾಗಿ ಸರಕಾರಕ್ಕೆ ತೆರಿಗೆಯನ್ನೂ ಕರವನ್ನೂ ಕೊ
ತ್ತೇವೆ. ಹಾಗೂ ರಾಜ್ಯಕಾರಭಾರದಲ್ಲಿ ಸರಕಾರಕ್ಕೆ ಸಹಾಯಮಾಡಬೇಕೆಂಬ ಕರ್ತವ್ಯ
ದ್ಧಿಗೆ ನಾವು ಯಾವಾಗಲೂ ಜಾಗೃತರಾಗಿರುತ್ತೇವೆ. ಮನುಷ್ಯನ ಆರೋಗ್ಯತೆಯು
ದಂತೆ ಅವನಲ್ಲಿ ಪಚನಶಕ್ತಿಯು ಹೆಚ್ಚಾಗಿ ಅವನ ಹಸಿವೆಯಾದರೂ ಸರಿಯಾದ ಪ್ರಮಾ
ದಿಂದ ಬೆಳೆಯುವಪ್ರಕಾರ ನಾವು ವಿದ್ಯಾವಂತರಾದ ಪ್ರಮಾಣದಿಂದ ನಮ್ಮಲ್ಲಿ ಮಹತ್ವಾಕಾ
ಕ್ಷೆಯು ಬೆಳೆಯುವದು ಸ್ವಭಾವಿಕವಾಗಿರುತ್ತದೆ. ನಾವು ಮುನಸಿಪಾಲಟಿಯಲ್ಲಿ, ಮ
ಡಿಸ್ಟ್ರಿಕ್ಟ ಲೋಕಲ್ ಬೋರ್ಡುಗಳಲ್ಲಿ ಕೆಲಸಮಾಡಿರುವ ಕಾರಣ ನಮ್ಮಲ್ಲಿ ಯೋಗ್ಯ
ವರು ಕಾಯ್ದೇ ಕೌನ್ಸಿಲ್‌ಗಳಲ್ಲಿ ಪ್ರತಿನಿಧಿಗಳಾಗಲಿಕ್ಕೆ ಹವಣಿಸುವದು ಉಚಿತವೇ ಇ
ತ್ತದೆ. ಆದ್ದರಿಂದ ಧರ್ಮ ಸರಕಾರದವರು ತಮ್ಮ ರಾಜನಿಷ್ಠ ವೀರಶೈವಪ್ರಜೆಗಳ ಈ
ನ್ಯಾಯವಾದ ಮಹತ್ವಾಕಾಂಕ್ಷೆಯನ್ನು ಪೂರೈಸಲಿಕ್ಕೆ ಮುಸಲ್ಮಾನರಂತೆ ಸ್ವತಂತ್ರ ಚು
ವಣಿಯ ಅಧಿಕಾರವನ್ನು ಕೊಡತಕ್ಕದ್ದೆಂದು ನನ್ನ ಪ್ರಾರ್ಥನೆಯುಂಟು. ...

ಈ ವಿಷಯದ ಎರಡನೇಭಾಗ ವ್ಯಾವದೆಂದರೆ;— ಸರಕಾರದವರು ಮುಸಲ್ಮಾ
ರಂತೆ ನಮಗೂ ಚುನಾವಣಿಯ ಅಧಿಕಾರವನ್ನು ಕೊಡುವತನಕ ಈ ಸಂಬಂಧದಿಂದ ನಾ
ನಮ್ಮ ಕೈಯಿಂದ ಬಹಳಲ್ಲದಿದ್ದರೂ ಸ್ವಲ್ಪ ಕಲ್ಯಾಣವನ್ನು ಮಾಡಿಕೊಳ್ಳುವದು ಶಕ್ಯ
ತ್ತದೆ. ಅದು ಹ್ಯಾಗೆಂದರೆ;—ಕಾಯ್ದೆ ಕೌನ್ಸಿಲ್ ಸಭೆಗಳಲ್ಲಿ ಪ್ರತಿನಿಧಿಗಳನ್ನು ಆರಿಸಿ
ಡುವ ಅಧಿಕಾರವು ಮುನಸಿಪಾಲಟಿಗಳಿಗೂ ಡಿಸ್ಟ್ರಿಕ್ಟ ಲೋಕಲ್ ಬೋರ್ಡುಗಳಿಗೂ
ತ್ಯೇಕವಾಗಿ ಕೊಡಲ್ಪಟ್ಟರುವವು. ಆದ್ದರಿಂದ ನಮ್ಮಲ್ಲಿಯ ಪ್ರತಿಷ್ಠಿತ ಮತ್ತು ಸಂಭಾ
ಜನರು ಮುನಸಿಪಾಲಟಿಯಲ್ಲಿ ಮತ್ತು ಡಿಸ್ಟ್ರಿಕ್ಟ ಲೋಕಲ್‌ಬೋರ್ಡುಗಳಲ್ಲಿ ಹೆ
ಜನರು ಮೆಂಬರರಾಗಲಿಕ್ಕೆ ಪ್ರಯತ್ನ ಮಾಡಬೇಕು. ಕಾಯ್ದೆ ಕೌನ್ಸಿಲ್ ಸಭೆಗಳಿಗೆ ಪ್ರ
ತಿನಿಧಿಗಳನ್ನು ಚುನಾಯಿಸಿಕೊಡುವ ಜನರು ನಮ್ಮವರೇ ಹೆಚ್ಚಾದ ಬಳಿಕ ಮುಂಬಯಿ
ಮತ್ತು ಮದ್ರಾಸ ಇಲಾಖೆಯ ಕಾಯ್ದೆಕೌನ್ಸಿಲ್ ಸಭೆಗಳಲ್ಲಿ ನಮ್ಮ ಜಾತಿಯ ಬಹಳ
ಮೆಂಬರರು ಮುನಸಿಪಾಲಟಿಯಿಂದ ಮತ್ತು ಡಿಸ್ಟ್ರಿಕ್ಟ ಲೋಕಲ್‌ಬೋರ್ಡಿನಿಂದ ಆ
ಬರಲಿಕ್ಕೆ ಏನೇನೂ ಸಂದೇಹವಿಲ್ಲ. ‹‹ ನೀಡುವವರು ತಮ್ಮವರಾದ ಬಳಿಕ ಎಲ್ಲಿ ಕು
ಉಂಡರೂ ಹೊಟ್ಟೆತುಂಬ ಗ್ರಾಸವು ಸಿಗುವದು ›› ಎಂಬ ಸಾಧಾರಣ ನಿಯಮವದನೋ

ನಮ್ಮ ಜಾತಿಯ ಉಮೇದವಾರರಿಗೆ ಕಲ್ಯಾಣವಾಗಲಿಕ್ಕೇ ಬೇಕು. ಈ ಕಾರಣದಿಂದ ನಮ್ಮ ಜನರು ಮುನಸಿಪಾಲಟಿಯಲ್ಲಿ ಮತ್ತು ಡಿಸ್ಟ್ರಿಕ್ಟ ಲೋಕಲ್ ಬೋರ್ಡುಗಳಲ್ಲಿ ಹೆಚ್ಚಿಗೆ ಮೆಂಬರರಾಗಿ ಬರಲಿಕ್ಕೆ ಪ್ರಯತ್ನ ಮಾಡತಕ್ಕದ್ದು. ಇದರಿಂದ ಊರಜನರ ಕಲ್ಯಾಣಮಾಡಲಿಕ್ಕೆ ಅನುಕೂಲವಾಗುವದಲ್ಲದೆ ಕೌನ್ಸಿಲ್‌ಚುನಾವಣಿಯ ಸಂಬಂಧದಿಂದ ತಮ್ಮ ಜಾತಿಯ ಜನರ ಕಲ್ಯಾಣಮಾಡಲಿಕ್ಕೆ ಸಹ ಅನುಕೂಲವಾಗುವದು. ಆದರೆ ದಯಮಾಡಿ ನಮ್ಮ ಜನರು ಮುನಸಿಪಾಲಟಿಯಲ್ಲಿ ಅಥವಾ ಡಿಸ್ಟ್ರಿಕ್ಟ ಲೋಕಲ್‌ಬೋರ್ಡಿನಲ್ಲಿ ಮೆಂಬರರಾಗಿ ಪತವಡಿ ಅಥವಾ ಪಾರ್ಟಿಮಾಡಿ ತಮ್ಮ ತಮ್ಮೊಳಗೆ ಜಗಳಾಡಬಾರದು. ರಾವಸಾಹೇಬ, ಅಥವಾ ರಾವಬಹದ್ದೂರ, ಆಗುವದಕ್ಕೆ ತಮ್ಮ ತಮ್ಮೊಳಗೆ ಕುತ್ತಿಗೆಯನ್ನು ಒತ್ತಾಡಬಾರದು ವಾಹಿಸ ಪ್ರೆಸಿಡೆಂಟ ಅಥವಾ ಚೇರಮನ್‌ಸ್ಥಳದ ದೆಸೆಯಿಂದ ತಮ್ಮ ತಮ್ಮೊಳಗೆ ಒಡದಾಡಿ ಈರ್ಷೆಯಿಂದ ಮತ್ತು ಹಟದಿಂದ ಮೂರನೆಯವರ ಲಾಭಮಾಡಿ ಕೊಡಬಾರದು. ಇಷ್ಟುಮಾತ್ರ ನಮ್ಮ ಜನರು ಮುನಸಿಪಾಲಟಿಯಲ್ಲಿ ಅಥವಾ ಡಿಸ್ಟ್ರಿಕ್ಟ ಲೋಕಲ್ ಬೋರ್ಡಿನಲ್ಲಿ ಕೆಲಸ ಮಾಡುವಾಗ ಲಕ್ಷ್ಯದಲ್ಲಿಡಬೇಕು. ... ... ... *

ಇನ್ನು ಈ ವಿಷಯದ ಮೂರನೇ ಅಥವಾ ಕಡೇಭಾಗ ವ್ಯಾವದೆಂದರೆ;—ಮುಂಬಯಿ ಸರಕಾರದವರು ಈ ವರ್ಷ ಶ್ರೀಮಂತ ಅಪ್ಪಾಸಾಹೇಬ ಸರದೇಸಾಯಿ ಬಂಟಮುರಿಕರ ಇವರನ್ನು ಮುಂಬಯಿ ಕಾಯ್ದೆ ಕೌನ್ಸಿಲ್ ಸಭೆಯಲ್ಲಿ ತಮ್ಮ ಮತಿಯಿಂದ ನಾಮಿನೇಟಮಾಡಿಕೊಂಡ ಬಗ್ಗೆ (ನೇಮಿಸಿಕೊಂಡ ಬಗ್ಗೆ) ನಾವು ಸರಕಾರದವರ ಉಪಕಾರಗಳನ್ನು ಬಹಳವಾಗಿ ಸ್ಮರಿಸುತ್ತೇವೆ. ನಮ್ಮ ಸಮಾಜದಲ್ಲಿ ಇವರಷ್ಟು ಹುಷಾರ ಮತ್ತು ಯೋಗ್ಯಜನರು ಯಾರೂ ದೊರಕಲಾರರು. ಆದ್ದರಿಂದ ಮುಂಬಯಿ ಸರಕಾರದವರು ಮಾಡಿದ ನಾಮಿನೇಶನವು ನಮ್ಮ ಸಮಾಜಕ್ಕೆ ಪೂರ್ಣ ಸಮ್ಮತವಾದದ್ದು, ಸಂತೋಷಕರವಾದದ್ದು, ಆಗಿರುತ್ತದೆ. ಆದರೆ ಆಕ್ಷೇಪವುಳ್ಳ ಇನ್ನೊಂದು ಅಂಶವೇನಂದರೆ;—ಲಾರ್ಡಮಾರ್ಲೆ ಇವರು ಕಾಯ್ದೆ ಕೌನ್ಸಿಲ್ ಸಭೆಗಳಲ್ಲಿ ಸಭಾಸದರ ಸಂಖ್ಯೆಯನ್ನು ಬೆಳಸಿ, ಸುಧಾರಣೆಯನ್ನು ಮಾಡುವ ಪೂರ್ವದಲ್ಲಿಯೇ ಸರಕಾರದವರು ಶ್ರೀಮಂತ ಅಪ್ಪಾಸಾಹೇಬ ಸರದೇಸಾಯಿ ಶಿರಸಂಗಿಕರ, ಅಥವಾ ಶ್ರೀಮಂತ ಅಪ್ಪಾಸಾಹೇಬ ಸರದೇಸಾಯಿ ಬಂಟಮುರಿಕರ, ಈ ಇಬ್ಬರಲ್ಲಿ ಒಬ್ಬರನ್ನು ಈಗ ೮—೧೦ ವರ್ಷಗಳಿಂದ ನೇಮಿಸುತ್ತಾ ಬಂದಿರುತ್ತಾರೆ. ಮೊದಲಿನ ಸಣ್ಣ ಮತ್ತು ಸಂಕೋಚವಾದ ಕಾಯ್ದೇ ಕೌನ್ಸಿಲ್ ಸಭೆಯಲ್ಲಿಯೂ ಒಬ್ಬರೇ ಮೆಂಬರರು, ಮತ್ತು ಈಗಿನ ವಿಸ್ತೃತ, ಮತ್ತು ಸುಧಾರಣೆಯ ಕಾಯ್ದೇ ಕೌನ್ಸಿಲ್‌ಸಭೆಯಲ್ಲಿಯೂ ಒಬ್ಬರೇ ಮೆಂಬರರು ಎಂಬ ಸಂಗತಿಯು "ಕೂಸಿಗೂ ಪಾವಶೇರು ಹಾಲು, ಜಟ್ಟಿಗೂ ಪಾವಶೇರು ಹಾಲು" ಎಂಬಂತೆ ಹಾಸ್ಯಾಸ್ಪದವಾಗಿರುವದು. ಮುಂಬಯಿ ಸರಕಾರದವರು ಶ್ರೀಮಂತ ಬಂಟಮುರಿಕರರ ಜೊತೆಗೆ ಇನ್ನೊಬ್ಬರನ್ನು ನಾಮಿನೇಟ್‌ಮಾ

ಡಿಕೊಳ್ಳತಕ್ಕದ್ದಿತ್ತು. ಇರಲಿ ಈ ಬಗ್ಗೆ ಸರಕಾರದವರು ಮುಂದಿನಸಾರೆ ಯಾವರೂ ವಿಚಾರವಾಡಲಿಕ್ಕೆ ತಪ್ಪಲಿಕ್ಕಿಲ್ಲವೆಂದು ನಂಬಿ ಮುಸಲ್ಮಾನರಂತೆ ನಮಗೂ ಚುನಾವಣಿ ಅಧಿಕಾರವನ್ನು ಕೊಡಲೆಂದು ಸರಕಾರದವರಿಗೆ ಪುನಃ ಪ್ರಾರ್ಥಿಸಿ ನನ್ನ ಸ್ಥಳಕ್ಕೆ ತೆರಳಲಿಕ್ಕೆ ನಿಮ್ಮೆಲ್ಲರ ಅಪ್ಪಣೆಯನ್ನು ಬೇಡಿಕೊಳ್ಳುತ್ತೇನೆ. ... ...

(ಕೈಚಪ್ಪಾಳೆ.)

ಗದಿಗೆಯ್ಯಾ ಹುಚ್ಚಯ್ಯಾ ಹೊನ್ನಾಪುರಮಠ,
ವಕೀಲ ಧಾರವಾಡ.

---

## ಇವನ್ನೇ ಅನುಮೋದಿಸುತ್ತಾ ಮ॥ ರಾ॥ ರಾ॥ ಸಿದ್ದನಂಜಪ್ಪ ಪ್ಲೀಡರ್ ಇವರು ಮಾಡಿದ ಭಾಷಣವು.

ಸಭಾಪತಿಯವರೇ? ಪ್ರೇಮಬಾಂಧವರೇ! ನನಗಿಂತ ಮುಂಚಿತವಾಗಿ ಭಾಷಣವನ್ನು ಮಾಡಿದ ಮೆ॥ ಗದಿಗಯ್ಯ ಹೊನ್ನಾಪುರಮಠ ಇವರು ಇಂಡಿಯಾ ಕೌನ್ಸಿಲ್ ಸಭೆಗೆ ನಮ್ಮ ಲಿಂಗಾಯತ ಮತದಲ್ಲಿ ಯೋಗ್ಯರಾದವರನ್ನು ಚುನಾವಣಿಯಲ್ಲಿ ಯಾಗಲೀ, ಅಥವಾ ನಾಮಿನೇಷನ್ ಮೂಲಕವಾಗಿ ಸೇರಿಸಿಕೊಳ್ಳಬೇಕೆಂದು ಇಂಡಿಯಾ ಸರ್ಕಾರಕ್ಕೆ ವಿನಂತಿ ಮಾಡಿಕೊಳ್ಳುವುದು ಅವಶ್ಯಕವೆಂದು, ಮತ್ತು ಇದಕ್ಕೆ ಯೋಗ್ಯರಾದವರು ನಮ್ಮ ಮತದಲ್ಲಿ ಅನೇಕರು ಇದ್ದಾರೆಂದು ಸೂಚಿಸಿರುವುದು ಸರಿಯಷ್ಟೆ? ಈ ಇಂಡಿಯಾ ದೇಶಕ್ಕೆ ವೈಸರಾಯಿಯಾಗಿ ಬಂದ ಗತಿಸಿದ ಲೇಟ್ ಲಾರ್ಡ ರಿಪನ್ ಸಾಹೇಬರವರು ಇಲ್ಲಿಗೆ ಬಂದವಡನೆಯೇ ಇಂಡಿಯಾ ದೇಶದ ಜನಗಳು ತಮ್ಮ ರಾಜ್ಯಾಡಳಿತವನ್ನು ನಡಿಸುವದಕ್ಕೆ ಸಮರ್ಥರನ್ನಾಗಿ ಮಾಡುವಬಗ್ಗೆ ಇಂಡಿಯಾ ದೇಶದ ಜನಗಳಮೇಲೆ ಕೇವಲ ಅಭಿಮಾನವಿಟ್ಟು, ಮ್ಯುನಿಸಿಪಲ್ ಬೋರ್ಡ್ಡು ಡಿಸ್ಟ್ರಿಕ್ಟ್ಬೋರ್ಡ್ಡು, ತಾಲ್ಲೂಕುಬೋರ್ಡ್ಡು, ಎಂಬ ಸಭೆಗಳನ್ನು ನಿರ್ಮಿಸಿ, ಈ ಸಭೆಗಳಲ್ಲಿ ಆಯಾಯ ಸ್ಥಳಗಳ ಜನಗಳನ್ನು ಮೆಂಬರಗಳಾಗಿ ನೇಮಿಸುವಂತೆ ಏರ್ಪಾಡು ಮಾಡಿ ಈ ಸಭೆಗಳಲ್ಲಿ ಆಯಾಯಸ್ಥಳಗಳ ಕಾರುಬಾರುಗಳ ವಿಷಯದಲ್ಲಿ ಈ ಸಭೆಗಳ ಮೆಂಬರುಗಳು ಚರ್ಚೆಮಾಡುವಂತೆ ಅವಕಾಶಕೊಟ್ಟು ಸೆಲ್ಫ ಗವರ್ನ್ಮೆಂಟ್, ಅಂದರೆ ಇಂಗ್ಲೆಂಡ್ ಚಕ್ರಾಧಿಪತಿಗಳ ಅಧಿಕಾರಕ್ಕೆ ಒಳಪಟ್ಟು ತಮ್ಮತಮ್ಮ ರಾಜ್ಯಗಳ ರಾಜ್ಯಭಾರ

ವನ್ನು ತಾವೇ ನಡಿಸಿಕೊಳ್ಳುವ ಶಕ್ತಿಯು ಬರುವಂತೆ ಇಂಡಿಯಾ ದೇಶಕ್ಕೆ ಓನಾಮವನ್ನು ಹಾಕಿಕೊಟ್ಟರು. ... ... ... ... *

ಇವರ ತರುವಾಯ ಇಂಡಿಯಾ ದೇಶಕ್ಕೆ ಬಂದ ವೈಸರಾಯಿ ಪ್ರಭುಗಳು ಹೆಚ್ಚು ಅಧಿಕಾರವನ್ನು ಪಡೆಯುವ ಬಗ್ಗೆ ಜನಗಳಿಗೆ ಇನ್ನೂ ಶಕ್ತಿಯು ಬಂದಿಲ್ಲವೆಂದು ಹೇಳು ತ್ತಾ ಇದ್ದರು. ಈಗ ಇಂಡಿಯಾ ಜನಗಳು ವಿದ್ಯಾಬುದ್ಧಿಗಳಲ್ಲಿ ಸಮರ್ಥರಾಗಿ ಮುಂದುವರಿ ಯುತ್ತಾ ಬಂದುಯಿದ್ದಾರೆಂದು ತಿಳಿದು, ದಯಾಳುಗಳಾದ ಲಾರ್ಡ್ ಮಾರ್ಲ್ಲೆ ಪ್ರಭುಗಳು, ಇಂಡಿಯಾ ದೇಶೀಯರಮೇಲೆ ಕೇವಲ ಅಭಿಮಾನ ವಿಟ್ಟು ಕೌನ್ಸಿಲ್ ರಿಫಾರಂ ಅಂದರೆ ಕೌನ್ಸಿಲ್ ಬದಲಾವಣೆಯನ್ನು ಮಾಡಿ, ಇವುಗಳಲ್ಲಿ ಮುಂಚೆಯಿದ್ದ ಮೆಂಬರುಗಳಿಗಿಂತ ಲೂ ಹೆಚ್ಚು ಮೆಂಬರುಗಳು ಇರುವಂತೆ ಕಾನೂನು ಮಾಡಿ ದೇಶೀಯ ಜನಗಳು ಹೆಚ್ಚು ಮೆಂಬರುಗಳು ಆಗುವಂತೆ ಅವಕಾಶಕೊಟ್ಟು ಇರುತ್ತಾರೆ. ಈ ಸಭೆಗಳಲ್ಲಿ ನಮ್ಮ ಮುಸ ಲ್ಮಾನ್ ಬಾಂಧವರು ಇಷ್ಟೇ ಜನಗಳು ಇರಬೇಕೆಂದು ನಿಯಾಮಕಮಾಡಿ ಇವರಿಗೆ ಅನು ಕೂಲತೆಯನ್ನು ಕೊಟ್ಟು ಇರುತ್ತಾರೆ. ... ... ... *

ವಿದ್ಯೆ, ಬುದ್ಧಿ, ಕೌಶಲ್ಯಗಳಲ್ಲಿಯೂ ಜನಸಂಖ್ಯೆಯಲ್ಲಿಯೂ ಹಿಂದುಳಿಯದೆ ಇ ರುವ ವೀರಶೈವರಲ್ಲಿ ಯೋಗ್ಯರಾದ ಇಬ್ಬರನ್ನು ಬೊಂಬಾಯಿ ಕೌನ್ಸಿಲ್ಲಿಗೂ ಒಬ್ಬರು, ಅಥವಾ ಇಬ್ಬರನ್ನು ಮದ್ರಾಸ್ ಕೌನ್ಸಿಲ್‌ನಲ್ಲಿಯೂ ಇರುವಂತೆ ನಿಯಾಮಕ ಮಾಡಿಯಾ ಗಲಿ, ಅಥವಾ ನಾಮನೇಷನ್ ಮೂಲಕ ಚುನಾಯಿಸುವದರಲ್ಲಿ ಯಾಗಲಿ, ಈ ಸಭೆಯವರು ಗೌರ್ನಮೆಂಟಿಗೆ ವಿನಂತಿಮಾಡಿಕೊಳ್ಳುವುದು ಅವಶ್ಯಕವೆಂದು, ಮತ್ತು ಮೈಸೂರ್ ಗೌರ್ನ ಮೆಂಟಿನ ಲೆಜಿಸ್ಲೇಟಿವ್ ಕೌನ್ಸಿಲ್ ಸಭೆಗೆ ಯೋಗ್ಯರಾದ ವೀರಶೈವರಲ್ಲಿ ಒಬ್ಬಿಬ್ಬರನ್ನು ನೇಮಿಸಿಕೊಳ್ಳಬೇಕೆಂದು ಮೈಸೂರ್ ಗೌರ್ನಮೆಂಟಿನವರಿಗೆ ವಿನಂತಿ ಮಾಡಿಕೊಳ್ಳುವುದು ಅವಶ್ಯಕವೆಂದು ಸಹ, ಮ॥ ರಾ॥ ಹೊನ್ನಾಪುರ ಮಠ, ಇವರು ಸೂಚಿಸಿದ್ದನ್ನು ನಾನು ಅನುಮೋದಿಸುತ್ತೇನೆ. ... ... ... ... *

(ಕೈಚಪ್ಪಾಳೆ.)

ಸಿದ್ದನಂಜಪ್ಪ ಪ್ಲೀಡರ್, ಚಿತ್ರಕಲ್ದುರ್ಗ.

## ಇದೇ ವಿಷಯವನ್ನು ಪುಷ್ಟೀಕರಿಸುತ್ತಾ ಶ್ರೀಮಾನ್ ಒಂಟಮುರಿ ದೇಸಾಯಿಯರ ಜ್ಯೇಷ್ಠಪುತ್ರರಾದ ಶ್ರೀಮಾನ್ ಬಾಬಾಸಾಹೇಬರು ಮಾಡಿದ ಭಾಷಣವು.

ಅಧ್ಯಕ್ಷರೇ ? ಮತ್ತು ಸದ್ಗೃಹಸ್ಥರೇ? ನನ್ನ ಮಿತ್ರರಾದ ಮಿ॥ ಹೊನ್ನಾಪುರಮಠ, ಇವರು ಮಾಡಿದ ಅತಿ ಮಹತ್ವದ್ದಾದ ಸೂಚನೆಗೆ ನನ್ನ ಅನುಮೋದನವನ್ನು ಕೊಡುವದಕ್ಕಿಂತ ಪೂರ್ವದಲ್ಲಿ ತಾವೆಲ್ಲರು ನನಗೆ ಹೊಸಕಾಯದೆ ಕೌನ್ಸಿಲನಲ್ಲಿಯ ಹಕ್ಕುಗಳನ್ನು ಕುರಿತು, ನನ್ನ ವಿಚಾರಗಳನ್ನು ವ್ಯಕ್ತಮಾಡಲಿಕ್ಕೆ ಅಮೂಲ್ಯ ಸಂಧಿಯನ್ನು ಕೊಟ್ಟದ್ದರಿಂದ, ತಮ್ಮ ಉಪಕಾರವನ್ನು ಮನಃಪೂರ್ವಕವಾಗಿ ನೆನೆಯುವೆನು. ಸಾಂಪ್ರತಕ್ಕೆ ಈ ವಿಷಯದ ನನ್ನ ವಿಚಾರಗಳನ್ನು ಉದ್ದವಾಗಿ ಹಬ್ಬಿಸಿ, ತಮ್ಮ ಉತ್ತಮವಾದ ಕಾಲವನ್ನು ವೆಚ್ಚಮಾಡಲಿಚ್ಛಿಸುವದಿಲ್ಲ. ಲಾರ್ಡ ಮಾರ್ಲೆ ಸಾಹೇಬ, ಬಹಾದ್ದೂರರವ ಉದಾರವಾದ ಕೊಡುವಿಕೆಗನುಸರಿಸಿ, ಇಂಡಿಯಾ ಸರಕಾರದವರು ಕಾಯಿದೆ ಕೌನ್ಸಿಲುಗಳಲ್ಲಿ ಹೆಚ್ಚು ಸ್ಥಳಗಳನ್ನು ಕೊಟ್ಟು ಸಮಸ್ತ ಹಿಂದುಸ್ಥಾನ ನಿವಾಸಿಗಳಮೇಲೆ ಮಹದುಪಕಾರಗಳನ್ನು ಮಾಡಿರುತ್ತಾರೆಂದು ನಾನು ತಿಳಿದಿರುವೆನು. ಮುಸಲ್ಮಾನರು, ಮರಾಠಾಜನರು, ಮತ್ತೂ ಕೆಲವು ಹಿಂದುಳಿದ ಸಮಾಜದವರು ಕಾಯದೆ ಕೌನ್ಸಿಲನಲ್ಲಿಯ ಸ್ಥಳಗಳ ಸಲುವಾಗಿ ತಮಗೆ ವಿಶೇಷ ಅನುಕೂಲ್ಯವನ್ನು ಕಲ್ಪಿಸಿ ಕೊಡಬೇಕೆಂದು ಸರಕಾರದವರಿಗೆ ಅರಿಕೆಯನ್ನು ಮಾಡಿಕೊಂಡಿದ್ದರು. ಆದಕಾರಣ ಅವರು ದಯಾರ್ದ್ರ ಬುದ್ಧಿಯುಳ್ಳವರಾಗಿ ಮುಸಲ್ಮಾನರಿಗೆ ವಿಶೇಷ ಮೇಹರ್ಬಾನಗಿಯನ್ನು ತೋರಿಸಿದರು. ಇದಕ್ಕಾಗಿ ನಾವು ಸಮಸ್ತ ವೀರಶೈವರು ಸರಕಾರದವರಿಗೆ ನಮ್ಮ ಕೃತಜ್ಞತೆಯನ್ನು ತೋರಿಸುವದು ಯೋಗ್ಯ ಸರಿ. ಸಭ್ಯಗೃಹಸ್ಥರೇ? ಸರಕಾರದವರಿಗೆ ನಮ್ಮ ಸಮಾಜದ ವಿಸ್ತಾರವನ್ನು ಅಲೋಕಿಸಿ ಇದೇ ತರದ ಮೇಹರ್ಬಾನಗಿಯನ್ನು ನಮ್ಮ ವಿಷಯದಲ್ಲಿಯೂ ತೋರಿಸುವದಕ್ಕೆ ಅರಿಕೆಯನ್ನು ಮಾಡಿಕೊಳ್ಳತಕ್ಕ ಕಾಲವು ಬಂದಿರುವದೆಂದು ನಾನು ತಿಳಿಯುತ್ತೇನೆ. ಸರಕಾರದವರು ನಮ್ಮ ಸಮಾಜದಮೇಲೆ ಈ ಪೂರ್ವದಲ್ಲಿಯೇ ತಮ್ಮ ದಯಾಳುತ್ವವನ್ನು ಪ್ರಕಟಿಸಿದ್ದಾರೆ. ಇದಕ್ಕೆ ಉದಾಹರಣೆ ಏನೆಂದರೆ;— ನನ್ನ ತಂದೆಯಂದಿರನ್ನು ಹಿಂದಕ್ಕೆ ಎರಡುಸಾರೆ ಮುಂಬಯಿ ಕಾಯದೆ ಕೌನ್ಸಿಲ್ಲಿನ ಮೆಂಬರನ್ನಾಗಿ ನೇಮಿಸಿದ್ದರು. ಮತ್ತು ಈಗಿನ ಸುಧಾರಿಸಿದ ಹೊಸ ಕೌನ್ಸಿಲ್ಲಿನಲ್ಲಾದರೂ ಅವರನ್ನು ಮೆಂಬರನ್ನಾಗಿ ನೇಮಿಸಿದ್ದಾರೆ. ಹಾಗೂ ಇದೇಮೇರೆಗೆ ಮುಂದಾದರೂ ಸರಕಾರದವರು ನಮ್ಮ ಸಮಾಜದಮೇಲೆ ಮೇಹರ್ಬಾನಗಿಯನ್ನು ನಿಃಸಂಶಯವಾಗಿ ತೋರಿಸುವರೆಂದು ನಾನು ತುಂಬಾ ನಂಬಿರುವೆನು. ಇನ್ನುಮೇಲೆ ಮಿ॥ ಹೊನ್ನಾಪೂರ ಮಠ, ಇವರು ಮಾಡಿದ ಸೂಚನೆಗೆ ಅನುಮೋದನವನ್ನು ಕೊಟ್ಟು, ನನ್ನ ಭಾಷಣವನ್ನು ಮುಗಿಸಲಿಕ್ಕೆ ತಮ್ಮ ಅಪ್ಪಣೆಯನ್ನು ಬೇಡಿಕೊಳ್ಳುತ್ತೇನೆ.

(ಕೈಚಪ್ಪಾಳೆ.)

## ೯ನೇ—ವಿಷಯು ಕೃಷಿ, (ಒಕ್ಕಲತನ) ವಾಣಿಜ್ಯ, (ವ್ಯಾಪಾರ) ಕಲಾಕೌಶಲ್ಯ (ಕೈಗಾರಿಕೆ) ಗಳ ಸುಧಾರಣೆಯು ಉಪಾಯುಗಳು.

### ಈ ವಿಷಯುವನ್ನು ಕುರಿತು ಮ॥ರಾ॥ರಾ॥ ಶರಭಪ್ಪ ಮೇಣಸಿನ ಕಾಯಿ ಇವರು ಮಾಡಿದ ಭಾಷಣವು.

ಯಾವ ಉದ್ಯೋಗಕ್ಕಾದರೂ ಚಿಕ್ಕಂದಿನ ಸುಧಾರಣೆಯೇ ಮುಖ್ಯ ಫಲದಾಯುಕ ಸಂಗತಿಯಾಗಿರುತ್ತದೆ; ಅಂದರೆ ಮನುಷ್ಯನು ಮುಂದೆ ಯಾವ ನಿತ್ಯ ಉದ್ಯೋಗದಲ್ಲಿ ದುಡಿಯುವವ ನಿರುವನೋ ಆಯಾ ಉದ್ಯೋಗದ ಮುಖ್ಯ, ಅಮುಖ್ಯ, ಶಾಸ್ತ್ರಜ್ಞಾನಗಳನ್ನು ಚಿಕ್ಕಂದಿನಲ್ಲಿ ಸಂಪಾದಿಸಿಕೊಂಡು ಆ ಉದ್ಯೋಗಗಳನ್ನು ಮಾಡಲಿಕ್ಕೆ ಹತ್ತಿದರೆ ಕೇವಲ ಅನುಭವಿ ಉದ್ಯೋಗಿಗಿಂತ ಹೆಚ್ಚು ಫಲರೂಪವಾದ ಉದ್ಯೋಗಿ ಯಾಗುವನು.

ಯಾವ ಶಾಸ್ತ್ರದ ತತ್ವವಾದರೂ ಮನುಷ್ಯನ ಒಂದಿಲ್ಲ ಒಂದುಪ್ರಕಾರದ ಲಾಭ ದಾಯುಕತ್ವದಿಂದಲೇ ಸಂಬಂಧ ವಿರುವವಲ್ಲದೆ ನಿಷ್ಫಲದಾಯುಕತ್ವದಿಂದ ಎಷ್ಟೂ ಸಂಬಂಧ ವಿಲ್ಲ. ಹ್ಯಾಗಂದರೆ;—ಅರ್ಥಶಾಸ್ತ್ರವನ್ನು ನೋಡಿದರೆ ಮನುಷ್ಯನು ಸಂಪತ್ತನ್ನು ಹ್ಯಾಗೆ ದೊರಕಿಸಬೇಕೆಂಬವನ್ನೂ, ಕೃಷಿಕರ್ಮ ಶಾಸ್ತ್ರವನ್ನು ನೋಡಿದರೆ ಭೂಮಿಯಿಂದ ಯೋಗ್ಯಬೆಳೆ ಬರಬೇಕಾದರೆ ಯಾವಯಾವ ಯೋಜನವನ್ನು ಮಾಡಬೇಕೆಂಬದನ್ನೂ, ಅದರಂತೆ ಧರ್ಮಶಾಸ್ತ್ರ, ರಸಾಯುನಶಾಸ್ತ್ರ, ಯುಂತ್ರಶಾಸ್ತ್ರ, ಮುಂತಾದ ಎಲ್ಲ ಶಾಸ್ತ್ರಗಳನ್ನು ನೋಡಿದರೆ ಮನುಷ್ಯನ ಒಂದಿಲ್ಲ ಒಂದುಪ್ರಕಾರದ ಹಿತವನ್ನೇ ಚಿಂತಿಸುತ್ತವಲ್ಲದೆ ಅಹಿತವನ್ನು ಸ್ವಲ್ಪಾದರೂ ಹೇಳುವದಿಲ್ಲ. ಇಷ್ಟೇ ಅಲ್ಲ ಅವುಗಳಲ್ಲಿ ಆ ಹಿತಗಳ ಸಂಬಂಧದ ಸ್ಥೂಲ, ಸೂಕ್ಷ್ಮ ಸಂಗತಿಗಳನ್ನೂ ಸಾಮಾನ್ಯ, ವಿಶೇಷ, ಸಂಗತಿಗಳನ್ನೂ ಸಹ ಒತ್ತಟ್ಟಿಗೇ ಕೂಡಿಸಿ ವಿಚಾರಮಾಡಿರುತ್ತವೆ. ... ... ... *

ಈ ಎಲ್ಲ ವಿಚಾರದಿಂದ ಒಂದು ಮಹತ್ವವಾದ ಸಿದ್ಧಾಂತವು ಹೊರಬೀಳುತ್ತದೆ. ಏನಂದರೆ;—"ಮನುಷ್ಯನು ಶಾಸ್ತ್ರಗಳ ನಿಯುಮಗಳನ್ನೂ, ತತ್ವಗಳನ್ನೂ ಮುಂದಿಟ್ಟುಕೊಂಡುನಡೆದರೆ ತನ್ನ ನಿಃಸಂಶಯ ಫಲದಾಯುಕ ಹಿತಗಳನ್ನೇ ಮುಂದಿಟ್ಟುಕೊಂಡು ನಡೆದಂತೆ," ಎಂಬ ಸಿದ್ಧಾಂತವು ಹೊರಡುತ್ತದೆ. ಅದರಿಂದ ಮುಂದೆ ನಿಃಸಂಶಯ ಫಲದಾಯುಕ ದೃಷ್ಟಿಯಿಂದ ಉದ್ಯೋಗ ಮಾಡಬೇಕೆಂಬುವವರು ಚಿಕ್ಕಂದಿನಲ್ಲಿ ಆಯಾ ಉದ್ಯೋಗದ ಸಂಬಂಧವಾದ ಮುಖ್ಯ, ಅಮುಖ್ಯವಾದ ಶಾಸ್ತ್ರದ ತತ್ವಗಳನ್ನೂ ಕಟ್ಟಳೆಗಳನ್ನೂ ಕಲಿತುಕೊಂಡು ಆ ಉದ್ಯೋಗ ಮಾಡಲಿಕ್ಕೆ ಹತ್ತುವದು ಅಗತ್ಯವಾದದ್ದು. ... *

| [illegible] | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೫೭೫ | ಹೆಂಪಸಾಗರ. | ಸರೂರು ಶಿವಪ್ಪ. |
| ೫೭೬ | ನಾಶಿಕ್. | ಬಾಗಪ್ಪ ಬಾಲಚಂದ್ರ ಗುಳವೆ. |
| ೫೭೭ | ,, | ಬಾಪುಸಕಾರಾಂ ಅತನಕರ್. |
| ೫೭೮ | ಜಮಖಂಡಿ. | ಪೊರಪ್ಪ ಬಸಪ್ಪ ಕಡಿಮನಿ. |
| ೫೭೯ | ,, | ನಾಗಪ್ಪ ಮಲಕಪ್ಪ ಜಾಡಗೌಡ. |
| ೫೮೦ | ಮಹಲಿಂಗಪುರ. | ಮಹಲಿಂಗಪ್ಪ ಗುರುಶಿದ್ಧಪ್ಪ. |
| ೫೮೧ | ಪುಣೆ. | ಜ್ಞಾನಜಿ ಗೋವಿಂದಪುರುವಣೆ. |
| ೫೮೨ | ,, | ಬಾಳಬಾಬಾ ತಾಂಬೆಕರ್. |
| ೫೮೩ | ,, | ಮಹದೇವಪ್ಪ ಶಿವರಾಮಶೇಟಿ. |
| ೫೮೪ | ,, | ಪೊರಪ್ಪ ಮಾದಪ್ಪ ದೇವನಿ. |
| ೫೮೫ | ,, | ಶಂಕರ್ ವಿಠೋಬಾ. |
| ೫೮೬ | ,, | ದಾಜಿಬಾ ರಾಂಶೇಟಿ. |
| ೫೮೭ | ಅಣ್ಣಿಗೇರಿ. | ಚರಂತಯ್ಯ ನಾಗಯ್ಯ. |
| ೫೮೮ | ಬೆಳಗಾಂವಿ. | ಚನ್ನಬಸಯ್ಯ. |
| ೫೮೯ | ಹಿಟ್ಟನಾಳು. | ಅಣ್ಣಾಸಾಹೇಬು. |
| ೫೯೦ | ಶಲನಡಿ. | ಚನ್ನಪ್ಪ ಆಣಪ್ಪ. |
| ೫೯೧ | ಹೆಬ್ಬಾಳು. | ಬಸವನಗೌಡ. |
| ೫೯೨ | ,, | ಮಹಲಿಂಗಪ್ಪ ಬನ್ನೂರು. |
| ೫೯೩ | ಹೊಸಪೇಟೆ. | ಮಹಂತ ಮಠದ ಪೊರಯ್ಯ. |
| ೫೯೪ | ಸೋಲಾಪುರ. | ಶಿವಬಸಪ್ಪ ಅಯ್ಯಪ್ಪ ಶೀಲವಂತ ವಕೀಲ. |
| ೫೯೫ | ,, | ಗುರುಮೂರ್ತಿ ಶಿವಪ್ಪ ನಂದಗಿರಿ. |
| ೫೯೬ | ಬೆಲ್ಲದ ಬಾಗೆವಾಡಿ. | ಶಿದ್ಲಿಂಗಪ್ಪ ಮಹಂತಪ್ಪ ಕತ್ತಿ. |
| ೫೯೭ | ,, | ಬಸವಪೊರಪ್ಪ. |
| ೫೯೮ | ,, | ನಾಗಪ್ಪ ಶಿವಯೋಗಪ್ಪ. |
| ೫೯೯ | ದೇವಿಹೊಸೂರು. | ಚನ್ನಬಸಪ್ಪ ಶೆಟ್ರು. |
| ೬೦೦ | ,, | ಲಿಂಗಪ್ಪ ಗುಂಡೂರು. |
| ೬೦೧ | ಮೆಳ್ಳಿಹಳ್ಳಿ. | ಬಸವನ ಗೌಡ್ರು. |

| ಅನುಕ್ರಮ ಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೬೦೨ | ಕುರವತ್ತಿ. | ಅಯ್ಯಪ್ಪ ಚಕ್ಕಿ. |
| ೬೦೩ | ಹಿರೆ ಬಿದಿರಿ. | ರುದ್ರಗೌಡ ಪಾಟೀಲ. |
| ೬೦೪ | ಮರವತ್ತಿ. | ಚನಬಸಯ್ಯ ತೋಟದಹಳ್ಳಿ. |
| ೬೦೫ | ಮುಕ್ತಲ್. | ನೀರಡಗುಂಭಿನ ಶಂಕರಪ್ಪ ವಕೀಲ. |
| ೬೦೬ | ,, | ಚನ್ನಬಸಪ್ಪ ತುಣಿಶಿ. |
| ೬೦೭ | ,, | ರಾಮಯ್ಯ ತಂಗಿಡಿ. |
| ೬೦೮ | ,, | ಬಾಡದ ಶಿದ್ದಲಿಂಗಪ್ಪ. |
| ೬೦೯ | ,, | ಮಹದೇವಪ್ಪ ಸಾವುಕಾರಬಾಡ. |
| ೬೧೦ | ಇರನಾಳು. | ಕರಿಬಸಯ್ಯ. |
| ೬೧೧ | ಮುಶಿಗೇರಿ. | ಮಹಂತಪ್ಪ. |
| ೬೧೨ | ಹಂಪಸಾಗರ. | ಮರ್ತೂರು ಸಂಗಪ್ಪ. |
| ೬೧೩ | ,, | ,, ಸಂಣವೀರಪ್ಪ. |
| ೬೧೪ | ,, | ,, ಶರಣಪ್ಪ. |
| ೬೧೫ | ,, | ಮುಶಿಗನೂರು ಬಸಪ್ಪ. |
| ೬೧೬ | ,, | ಕಡ್ಲಿ ಮಹದೇವಪ್ಪ. |
| ೬೧೭ | ಬಾಗಲಕೋಟೆ. | ರುದ್ರಪ್ಪಣ್ಣ ಗೊಗವಾಡ. |
| ೬೧೮ | ,, | ಶಿವಪ್ಪ ಅಣ್ಣಾ ಪಲ್ಲೇದ. |
| ೬೧೯ | ,, | ಮಹಂತಪ್ಪ ಅಣ್ಣಾ ತಪಶೆಟ್ಟಿ. |
| ೬೨೦ | ,, | ವೀರ ಸಂಗಪ್ಪಂಣ ಗೂಡದ. |
| ೬೨೧ | ,, | ಸಂಗನಬಸಪ್ಪ ಅತ್ತಿ. |
| ೬೨೨ | ,, | ವೀರಬಸಪ್ಪ ಮುಕುಳಿ. |
| ೬೨೩ | ,, | ತಿಪ್ಪಂಣಾ ಯಿಂಡಿ. |
| ೬೨೪ | ,, | ಗುರುಬಸಪ್ಪ ವೀರಶೆಟ್ಟಿ. |
| ೬೨೫ | ,, | ವೀರಪ್ಪ ಅರಿಕೇರಿ. |
| ೬೨೬ | ,, | ಬಸಲಿಂಗಪ್ಪ ಕಡಿವಾಳ. |
| ೬೨೭ | ,, | ಚನ್ನಮಲ್ಲಪ್ಪ ನಡಿಗುಂದಿ. |
| ೬೨೮ | ,, | ನಾಗಪ್ಪ ಅಳ್ಳಿಕೈರು. |

| ಕ್ರಮ ಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೬೨೯ | ಬಾಗಲಕೋಟೆ. | ಚನ್ನಪ್ಪ ಜಿಗಿಜಿನ್ನಿ. |
| ೬೩೦ | ,, | ಬಸಪ್ಪ ಯಿಂಡಿ. |
| ೬೩೧ | ,, | ಅಯ್ಯಪ್ಪ ಬ್ಯಾಳಿ. |
| ೬೩೨ | ,, | ಶಿದ್ದಪ್ಪ ಅಣ್ಣಾ ಜಿಗಜಿನ್ನಿ. |
| ೬೩೩ | ಅಸುಂಡಿ. | ಮರೇಗೌಡ. |
| ೬೩೪ | ಹರ್ಲಾಪುರ. | ವೀರಪ್ಪ ಹುರುಕಣ್ಣಿ. |
| ೬೩೫ | ಹಳ್ಳಿಕೇರಿ. | ಗೂಳಪ್ಪ ಚಿಕ್ಕವಾಡಿ. |
| ೬೩೬ | ,, | ಚನವೀರಯ್ಯ ಹಿರೇಮಠ. |
| ೬೩೭ | ಸೋಲಾಪುರ. | ವಿಶ್ವನಾಥ ಕಾರಂಜಿ. |
| ೬೩೮ | ,, | ಮಲ್ಲಿಕಾರ್ಜುನಪ್ಪ ಲಿಗಾಡೆ. |
| ೬೩೯ | ,, | ವಿಶ್ವನಾಥ ತೊಗರಿ. |
| ೬೪೦ | ,, | ಮಹಲಿಂಗಪ್ಪ ವಜೀರಕರ್. |
| ೬೪೧ | ,, | ನಾಗಪ್ಪ ಅಡಿಕಿ. |
| ೬೪೨ | ,, | ನಾಗಪ್ಪ ವೈದ್ಯ. |
| ೬೪೩ | ,, | ಮಲ್ಲಿಕಾರ್ಜುನಪ್ಪ ಶೇಟ. |
| ೬೪೪ | ,, | ಮಹದೇವಪ್ಪ. |
| ೬೪೫ | ,, | ಶಿದ್ದಪ್ಪ ಕಲ್ಲುಬುರಿಗಿ. |
| ೬೪೬ | ,, | ದೇಶಮುಖ. |
| ೬೪೭ | ,, | ಭದ್ರಪ್ಪ ಹೊನ್ನಾ. |
| ೬೪೮ | ,, | ಬಸಲಿಂಗಪ್ಪ ಕಲ್ಯಾಣಶೆಟ್ಟಿ. |
| ೬೪೯ | ಜಕ್ಕರಿ. | ಶಿವಲಿಂಗಪ್ಪ. |
| ೬೫೦ | ,, | ತೋಟಪ್ಪ ತಡಗದ. |
| ೬೫೧ | ,, | ವೀರಸಂಗಪ್ಪ. |
| ೬೫೨ | ,, | ಬಸಪ್ಪ. |
| ೬೫೩ | ,, | ಮಹಂತಪ್ಪ. |
| ೬೫೪ | ಹಡಗಲಿ. | ಶಾಂತವೀರಪ್ಪ ಬಸಲಿಂಗಪ್ಪ. |
| ೬೫೫ | ,, | ಕೊಪ್ಪಳದ ಮಡಿವಾಳಯ್ಯ. |

| ಅನುಕ್ರ ನಂಬರು | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮು॥ ರಾ॥ ರಾ॥ |
| ೬೫೬ | ,, | ಕರಿಯುತ್ತಿನ ರಂಗಪ್ಪ. |
| ೬೫೭ | ಮಡಕಶಿರ. | ಬಂಡೆ ಹುಚ್ಚಪ್ಪ. |
| ೬೫೮ | ಗೋಕಾಕ ಫಾಲ್ಸ್. | ಶಿವಮೂರ್ತಿಸ್ವಾಮಿ ಕಣಬುರ್ಗಿ ಮಠ. |
| ೬೫೯ | ಯಲುಬುರ್ಗಿ. | ಅಯ್ಯಪ್ಪಯ್ಯ. |
| ೬೬೦ | ರಬಕವಿ. | ತಮ್ಮಪ್ಪ ಸತ್ಯಪ್ಪ. |
| ೬೬೧ | ,, | ಮುರಿಗಪ್ಪ ಬಸಪ್ಪ. |
| ೬೬೨ | ,, | ಗಂಗಪ್ಪ ಸಂಗಪ್ಪ. |
| ೬೬೩ | ಕುರುಗೋಡು. | ತಂಗಿ ಮಲ್ಲಿಕಾರ್ಜುನಪ್ಪ. |
| ೬೬೪ | ,, | ತಂಗಿ ಮಲ್ಲೇಶಪ್ಪ. |
| ೬೬೫ | ,, | ನಾಡಗೌಡ್ರು ಸಣ್ಣ ಮರೆಗೌಡ. |
| ೬೬೬ | ಹಂದಿಗನೂರು. | ಶ್ರೀಮಂತ ದೊಡ್ಡಮುರಿಗಪ್ಪ ಬಸವಂತಪ್ಪ ದೇ |
| ೬೬೭ | ಕುಂದಗೋಳ. | ,, ವೀರಭದ್ರಪ್ಪ ವೀರಪ್ಪ ದೇಶಪಾಂಡೆ (ಶಾಯಿ |
| ೬೬೮ | ಗೋಕಾವಿ. | ಶಿವಲಿಂಗಯ್ಯ ಶಿವಮೂರ್ತಯ್ಯ. |
| ೬೬೯ | ಸಂಪಗಾವಿ. | ಕಲ್ಲಪ್ಪ ಚನ್ನಮಲ್ಲಪ್ಪ ಶೆಟ್ಟಿ. |
| ೬೭೦ | ,, | ರಾಜಶೇಖರ ಶಿವಲಿಂಗಪ್ಪ ಪಾಟೀಲ. |
| ೬೭೧ | ,, | ಚಂದ್ರಶೇಖರಪ್ಪ ಶಿವಪ್ಪ. |
| ೬೭೨ | ಬೈಲುಮಂಗಲಿ. | ಶಿವಪ್ಪ ಬಸಪ್ಪ ಮುರಿಗಿ. |
| ೬೭೩ | ,, | ವಿರುಪಾಕ್ಷಪ್ಪ. |
| ೬೭೪ | ,, | ಶಿವಪ್ಪ ಬಾಳಪ್ಪ ಚಿನಿವಾಲ. |
| ೬೭೫ | ಸವುದತ್ತಿ. | ಭೂಪಾಲಪ್ಪ ಮಮದಾಪುರ. |
| ೬೭೬ | ಸಂಪಗಾಂವಿ. | ಗುರುಬಸಪ್ಪ ಬಸಪ್ಪ. |
| ೬೭೭ | ಬೈಲುಹೋಂಗಲ. | ಬಸವಣ್ಣೆಪ್ಪ ಚನ್ನಮಲ್ಲಪ್ಪ ಮೂಗಿ. |
| ೬೭೮ | ,, | ವಿರುಪಾಕ್ಷಪ್ಪ ವೀರಪ್ಪ. |
| ೬೭೯ | ಕುಂಟನಾಳು. | ಲಿಂಗನಗೌಡ. |
| ೬೮೦ | ಆದವಾನಿ. | ರುಮ್ಮಾಲದ ಬಸವಯ್ಯ. |
| ೬೮೧ | ಹುಬ್ಬಳ್ಳಿ. | ಮಹಲಿಂಗಪ್ಪ ದಾನಪ್ಪ ಮಿರಜಿ. |
| ೬೮೨ | ,, | ಚನ್ನಬಸಪ್ಪ ರೇವಣಪ್ಪ. |

| ಅನುಕ್ರಮ ಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೬೮೩ | ಹುಬ್ಬಳ್ಳಿ. | ಶ್ರೀಶೈಲಪ್ಪ ಶಿವಪ್ಪ. |
| ೬೮೪ | ,, | ವೀರಪ್ಪ ಪೊರಪ್ಪ ಬಾಳೆಕಾಯಿ. |
| ೬೮೫ | ,, | ತೀರ್ಥಪ್ಪ ಬೊಳ್ಳುಳ್ಳಿ. |
| ೬೮೬ | ಮೊರಟಗಿ. | ಕಲ್ಲಪ್ಪ ಲಿಂಗಪ್ಪ ಶಿರಿಗೇರಿ. |
| ೬೮೭ | ಮುರವಕೋಡ. | ಮುದ್ದಾನಪ್ಪ. |
| ೬೮೮ | ಬಂಡ್ರಿ. | ಶಿದ್ಧರಾಮಪ್ಪ. |
| ೬೮೯ | ,, | ಕರಿಬಸಪ್ಪ. |
| ೬೯೦ | ಹುನಗುಂದ. | ಸಂಗಪ್ಪ ಕರಕಪ್ಪ ನಾಗರಾಳು. |
| ೬೯೧ | ,, | ಬಸವರಡ್ಡೆಪ್ಪ ಚನ್ನಬಸಪ್ಪ ನಾಗರಾಳು. |
| ೬೯೨ | ,, | ಬಸವಂತಪ್ಪ ಹನುಮಂತಪ್ಪ ನಾಗರಾಳು. |
| ೬೯೩ | ,, | ಬಸವಪ್ಪ ಶರಣಪ್ಪ ಆಬ್ಬಿಗೇರಿ. |
| ೬೯೪ | ,, | ಕಂಬಾಳಯ್ಯ ಗುರುಬಸಯ್ಯ. |
| ೬೯೫ | ,, | ಮಲ್ಲಪ್ಪ ಶಂಕ್ರಪ್ಪ ಸಿಹ್ಮಾಸನ. |
| ೬೯೬ | ,, | ಅಡಿವಪ್ಪ ಕರಿಬಸಪ್ಪ. |
| ೬೯೭ | ,, | ಗುರುಬಸಯ್ಯ ಮುಪ್ಪಿನಯ್ಯ. |
| ೬೯೮ | ,, | ರುದ್ರಯ್ಯ ಚನಿವೀರೇಶ್ವರ ಪುರಾಣ. |
| ೬೯೯ | ,, | ಷಣ್ಮುಖಪ್ಪ ಸಂಗಪ್ಪಯ್ಯ ತಾಳಕೋಟೆ. |
| ೭೦೦ | ,, | ಚನ್ನಸಂಗಪ್ಪ ಚನ್ನಪ್ಪ ಪಟ್ನಶೆಟ್ಟಿ. |
| ೭೦೧ | ,, | ರಾಚಪ್ಪ ಕರಿಶೆಟ್ಟಿ. |
| ೭೦೨ | ,, | ವೀರಭದ್ರಪ್ಪ ವೀರಪ್ಪ. |
| ೭೦೩ | ,, | ವೀರಭದ್ರಪ್ಪ ಪಟ್ನಶೆಟ್ಟಿ. |
| ೭೦೪ | ಯಿಲಕಲ್ಲು. | ಸಂಗಪ್ಪ ರಕ್ಕಸಗಿ. |
| ೭೦೫ | ,, | ಬಸಪ್ಪ ಅಮೀನಗಡ ಯಿಲಕಲ್ಲು. |
| ೭೦೬ | ಹಾವೇರಿ. | ವಿರುಪಾಕ್ಷಪ್ಪ ಸಣ್ಣಬಸಪ್ಪ ಕೊರಡೂರು. |
| ೭೦೭ | ಹೊಸರುತ್ತಿ. | ಗುರುಶಾಂತಪ್ಪ ಶೆಟ್ರು. |
| ೭೦೮ | ,, | ದಾನಪ್ಪ ಬಿನ್ ಚನ್ನಬಸಪ್ಪ. |
| ೭೦೯ | ಹುಬ್ಬಳ್ಳಿ. | ಚನ್ನಪ್ಪ ಪಕೀರಪ್ಪ ಪೌಜುದಾರಿ. |

| ಅನುಕ್ರಮ ಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ನು॥ ರಾ॥ ರಾ॥ |
| ೨೧೦ | ಗದುಗು. | ರಾಚಪ್ಪ ಮಲ್ಕಾಜಪ್ಪ ಬುಳ್ಳಿ. |
| ೨೧೧ | ,, | ಕಾಶಪ್ಪ ದಂಡಪ್ಪ ಮಾನ್ವಿ. |
| ೨೧೨ | ಕರ್ನೂಲು. | ಜಾಜಿ ಯಾಗಂಟೆಪ್ಪ. |
| ೨೧೩ | ನಾಗನಹಳ್ಳಿ. | ಮಹಂತಯ್ಯ. |
| ೨೧೪ | ,, | ಶಿದ್ದಬಸಪ್ಪ. |
| ೨೧೫ | ,, | ಅಯ್ಯನಗೌಡ. |
| ೨೧೬ | ,, | ಜಂಬನಗೌಡ. |
| ೨೧೭ | ರಾಣಿಬೆನ್ನೂರು. | ವೀರಬಸಪ್ಪ ಆನೆಶೆಟ್ರು. |
| ೨೧೮ | ,, | ಮಹಲಿಂಗಪ್ಪ ಶಿದ್ಲಿಂಗಪ್ಪ ಕುರುವತ್ತಿ. |
| ೨೧೯ | ,, | ಕಾಳಪ್ಪ ಕರಿವೀರಪ್ಪ. |
| ೨೨೦ | ಕಡಕೋಳ. | ವೀರಪ್ಪ ಬಸೆಟ್ಟೆಪ್ಪ. |
| ೨೨೧ | ಹಳ್ಳಿಕೆರೆ. | ಪ್ರಭಪ್ಪ ಚೋಳಪ್ಪ ಸರ್ವೇಯರ್. |
| ೨೨೨ | ರಾಣಿಬೆನ್ನೂರು. | ಚನ್ನಬಸಪ್ಪ ಗುರುನಂಜಪ್ಪ ಸರ್ವೇಯರ್. |
| ೨೨೩ | ,, | ವೀರಪ್ಪ ಕಾಳಪ್ಪ ಕೊಟ್ಟೂರು. |
| ೨೨೪ | ಚಿಕ್ಕ ಕುರವತ್ತಿ. | ಮಲ್ಲಿಕಾರ್ಜುನಗೌಡ ವೀರಬಸವನಗೌಡ ಪಾ |
| ೨೨೫ | ರಾಣಿಬೆನ್ನೂರು. | ವೀರಪ್ಪ ಮುದ್ದವೀರಪ್ಪ ಹೊಟ್ಟ ( ಟೀಲ. |
| ೨೨೬ | ಹೊಸಪೇಟೆ. | ಮುದ್ದು ಬಸಪ್ಪ. |
| ೨೨೭ | ,, | ನಾಗಲಿಂಗಪ್ಪ. |
| ೨೩೮ | ಅಂಬಳಿ. | ಮಠದ ಪತ್ರಯ್ಯ. |
| ೨೨೯ | ,, | ಬಾಳನಗೌಡರ ಬಸವನಗೌಡ. |
| ೨೩೦ | ,, | ಬುಳ್ಳನಗೌಡ್ರ ಬಸವನಗೌಡ. |
| ೨೩೧ | ಹರಪನಳ್ಳಿ. | ಮಠದ ಕೊಟ್ರಯ್ಯ. |
| ೨೩೨ | ,, | ಗಚ್ಚಿನಮನಿ ವೀರಯ್ಯ. |
| ೨೩೩ | ಬೇಣ್ಣಿಹಳ್ಳಿ. | ಸಾಹುಕಾರು ಚನ್ನನಗೌಡ. |
| ೨೩೪ | ರಾಯದುರ್ಗ. | ಆರ್. ಯಸ್ ಮದ್ದಾನೆಪ್ಪ ಸಬ್ ರಿಜಿಸ್ಟ್ರಾರ್. |
| ೨೩೫ | ,, | ರುದ್ರಯ್ಯ. |
| ೨೩೬ | ,, | ಲಿಂಗನ ಗೌಡ. |

| ಕ್ರಮ ಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೨೩೭ | ರಾಯದುರ್ಗ. | ಆರ್. ಯಸ್. ಅಯ್ಯಪ್ಪ. |
| ೨೩೮ | ,, | ಕೊಟ್ಗಿ ಬಸಪ್ಪ. |
| ೨೩೯ | ,, | ಗುಡೇಕೋಟೆ ದೊಡ್ಡ ತಿಪ್ಪಯ್ಯ. |
| ೨೪೦ | ,, | ಮಾದಿ ನಾಗನಗೌಡ. |
| ೨೪೧ | ಗಂಗವರ. | ರಾಮಲಿಂಗಪ್ಪ. |
| ೨೪೨ | ರೆಡ್ಡಿಹಳ್ಳಿ. | ರೆಡ್ಡೆಪ್ಪ. |
| ೨೪೩ | ,, | ದೊಡ್ಡಹರ ಮಲ್ಲಪ್ಪ. |
| ೨೪೪ | ಬಿಜಾಪುರ. | ಬಸಯ್ಯ ಅಡಿವಯ್ಯ. |
| ೨೪೫ | ಕೊಲ್ಹಾಪುರ. | ವೀರಬಸಪ್ಪ ಶಿವಲಿಂಗಪ್ಪ ಶ್ರೇಷ್ಠಿ ಬಿ. ಎ. |
| ೨೪೬ | ಮುಧೋಳ್. | ಬಸವನಗೌಡ ಸಂಗಪ್ಪ ಪಾಟೀಲ. |
| ೨೪೭ | ಕಾಕಬಾಳು. | ಮಠದ ಶಿದ್ದಯ್ಯ. |
| ೨೪೮ | ,, | ಮಂದವಾಗಲಿ ಹನುಮಂತಪ್ಪ. |
| ೨೪೯ | ,, | ಹೊಳೆ ಆಚೆ ಲಿಂಗಣ್ಣ. |
| ೨೫೦ | ,, | ,, ಭೀಮಣ್ಣ. |
| ೨೫೧ | ,, | ,, ಹನುಮಂತಪ್ಪ. |
| ೨೫೨ | ,, | ಸಣ್ಣ ಜಂಬನಗೌಡ. |
| ೨೫೩ | ,, | ಜಾಜಾಪುರದ ಬಸಣ್ಣ. |
| ೨೫೪ | ,, | ಹೊಳೆ ಆಚೆ ಜಂಬಣ್ಣ. |
| ೨೫೫ | ,, | ರಾಜಾಪುರದ ಹಿರೆ ಮಲ್ಲಯ್ಯ. |
| ೨೫೬ | ದರೋಜಿ. | ಪಲ್ಲೇದ ಬಸವಲಿಂಗಪ್ಪ. |
| ೨೫೭ | ,, | ಗಚ್ಚಿನಮನೆ ಬಸಪ್ಪ. |
| ೨೫೮ | ,, | ಪಲ್ಲೇದ ವೀರಭದ್ರಪ್ಪ. |
| ೨೫೯ | ,, | ಜೀರ್ರು ನರಸಣ್ಣ. |
| ೨೬೦ | ,, | ನುಲ್ಕಿ ಶಿದ್ದಲಿಂಗಯ್ಯ. |
| ೨೬೧ | ಕಾಕಬಾಳು. | ಮಂದವಾಗಲಿ ಸಣ್ಣ ಹನುಮಂತಪ್ಪ. |
| ೨೬೨ | ಚಿತ್ತವಾಡಿಗಿ. | ಕಂಚಿಕೆರೆ ಮಠದ ರೇವಣ ಶಿದ್ದಯ್ಯ. |
| ೨೬೩ | ನೆಗಳೂರು. | ಶೆಟ್ರು ಅಡಿವಪ್ಪ ಡೊಡ್ಡಬಸಪ್ಪ ಅಂಗಡಿ. |

| ಅನುಕ್ರಮ ನಂಬರು | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೮೧೮ | ಮಹಲಿಂಗಪುರ. | ಗುರುಲಿಂಗಪ್ಪ ಮಹಲಿಂಗಪ್ಪ. |
| ೮೧೯ | ,, | ಶಂಕರಪ್ಪ ಗುರುಲಿಂಗಪ್ಪ. |
| ೮೨೦ | ,, | ದೌತಲಪ್ಪ ಮಹಲಿಂಗಪ್ಪ. |
| ೮೨೧ | ,, | ಗಂಗಪ್ಪ ತಿಮ್ಮಣಪ್ಪ ಕಟ್ಟಿಮನಿ. |
| ೮೨೨ | ,, | ಮಲ್ಲಪ್ಪ ಗಿರಿಮಲ್ಲಪ್ಪ ಮಿರಜ್. |
| ೮೨೩ | ,, | ಚನ್ನಗಿರೆಪ್ಪ ಗುರುಶಿದ್ದಪ್ಪ ಅಂಣಿ. |
| ೮೨೪ | ಗದಗು. | ಶಿವಪ್ಪ ಬುಳ್ಳಾ. |
| ೮೨೫ | ,, | ಮಹಂತಪ್ಪ ಬುಳ್ಳಾ. |
| ೮೨೬ | ಭದ್ರಾಪುರ. | ಫಕೀರಪ್ಪ ಅಂಗಡಿ. |
| ೮೨೭ | ಪರ್ವತ ಶಿರಿಗೇರಿ. | ವೀರಪ್ಪ ಗೌಡರು. |
| ೮೨೮ | ಕೋಗಳಿ | ಬಸವನಗೌಡ. |
| ೮೨೯ | ಲಕ್ಷ್ಮೇಶ್ವರ. | ಗಡ್ಡೆಯ್ಯ ಪಕೀರಯ್ಯ. |
| ೮೩೦ | ಕೂಡ್ಲೂರು. | ಮಠದ ಬಸಯ್ಯ. |
| ೮೩೧ | ,, | ರಾಮನ ಗೌಡರು. |
| ೮೩೨ | ಕುರುಗೋಡು. | ಸಂಣಪ್ಪ. |
| ೮೩೩ | ,, | ಅಳವಂಡಿ ಕರಿಬಸಪ್ಪ. |
| ೮೩೪ | ಶಿಂದಿಗೇರಿ. | ಗೋಡೆ ಮರೆಪ್ಪ. |
| ೮೩೫ | ರಾಣಿಬೆನ್ನೂರು. | ಮಲ್ಲಿಕಾರ್ಜುನಪ್ಪ. |
| ೮೩೬ | ಮೈಸೂರು. | ಗುರಿಕಾರ ಬಸವಲಿಂಗಪ್ಪ. |
| ೮೩೭ | ಗದಗು. | ಮಲ್ಲೇಶಪ್ಪ ಮಾನ್ವಿ. |
| ೮೩೮ | ,, | ಹೊಳೆಪ್ಪ ಬುಳ್ಳಾ. |
| ೮೩೯ | ,, | ಗುರಪ್ಪ ಆಲೂರು. |
| ೮೪೦ | ಧಾರವಾಡ. | ವಿರುಪಾಕ್ಷಪ್ಪ ಕಲೊಳಗಿ ಬಿ. ಏ. ಮಾಮಲೆದಾರ್. |
| ೮೪೧ | ನವುಲಗುಂದ. | ಪೊರಪ್ಪ ಗೌಡ |
| ೮೪೨ | ಕರ್ಜಗಿ. | ಚನ್ನಬಸಪ್ಪ ಗುರುಶಿದ್ದಪ್ಪ. |
| ೮೪೩ | ,, | ಶಿದ್ರಾಮಪ್ಪ ಚನ್ನಬಸಪ್ಪ. |
| ೮೪೪ | ರಾಣಿಬೆನ್ನೂರು. | ನಾಗಪ್ಪ ಗುರುಶಾಂತಪ್ಪ. |

| ಅನುಕ್ರ ನಂಬರು | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೮೪೫ | ಬೂದಿಹಾಳು. | ವೀರಬಸಪ್ಪ ಕರಿಬಸಪ್ಪ. |
| ೮೪೬ | ಮುದ್ದೆಬಾಳು. | ಶಿದ್ದಯ್ಯ. |
| ೮೪೭ | ಬಲದಿನ್ನಿ. | ಮಠದ ಗುರುಸಂಗಯ್ಯ. |
| ೮೪೮ | ಮುದ್ದೆಬಾಳು. | ಶಿವಪ್ಪ ಹುನುಕೋಟಿ. |
| ೮೪೯ | ಕುಷ್ಟಗಿ. | ಸಂಗನ ಬಸವನಗೌಡರು. |
| ೮೫೦ | ಕೋಟಕೆರೆ. | ಯಿಶ್ವರಯ್ಯ. |
| ೮೫೧ | ಹರಪನಳ್ಳಿ. | ಬೆಟ್ಟನಗೌಡರು. |
| ೮೫೨ | ರೋಣ. | ವೀರಯ್ಯ. |
| ೮೫೩ | ,, | ವೀರಭದ್ರ ಗೌಡರು. |
| ೮೫೪ | ,, | ಚನಿವೀರಪ್ಪ ಚಿನಗಾ. |
| ೮೫೫ | ,, | ಚನಿವೀರಪ್ಪ ದೊಡ್ಡಮಣ ನವರ. |
| ೮೫೬ | ,, | ಬಸವರಡ್ಡೆಪ್ಪ. |
| ೮೫೭ | ಕಂಪ್ಲಿ. | ಕಲ್ಗುಡಿ ಶಿದ್ದಪ್ಪ. |
| ೮೫೮ | ಹುಬ್ಬಳ್ಳಿ. | ಛನ್ನಬಸಪ್ಪ ಶಿರಹಟ್ಟಿ. |
| ೮೫೯ | ಧಾರವಾಡ. | ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರ ಮಠ. |
| ೮೬೦ | ಹುಬ್ಬಳ್ಳಿ. | ವಕೀಲ ಸಾಂತಪ್ಪ. |
| ೮೬೧ | ,, | ವೀರಪ್ಪ ಮಾನ್ವಿ. |
| ೮೬೨ | ಕಂಪ್ಲಿ. | ಜಾಜ್ಯುತಿಪ್ಪಂಣ. |
| ೮೬೩ | ಕೊರ್ಲಗುಂದಿ. | ವಿರುಪನಗೌಡ. |
| ೮೬೪ | ,, | ಅಯ್ಯನಗೌಡ. |
| ೮೬೫ | ತಂಬ್ರಹಳ್ಳಿ. | ಯಡಿಕೇರಿ ತೋಟಪ್ಪ. |
| ೮೬೬ | ,, | ಚೆನ್ನಪ್ಪ ಜಾಲವಾಡ. |
| ೮೬೭ | ,, | ಬಸಲಿಂಗನ ಗೌಡ. |
| ೮೬೮ | ,, | ವಿ. ಚನ್ನಬಸಯ್ಯ. |
| ೮೬೯ | ,, | ಆನೆಕೆರಿ ತೋಟಪ್ಪ. |
| ೮೭೦ | ,, | ಗೊಂಡಬಾಳು ರಾಚಪ್ಪ. |
| ೮೭೧ | ,, | ಕಿನ್ನಾಳು ಗುರುಶಿದ್ದಪ್ಪ. |

| ಕ್ರಮಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೮೭೨ | ತಂಬ್ರಹಳ್ಳಿ | ಕಿನ್ನಾಳು ಬಸಪ್ಪ. |
| | ,, | ಕಿಲ್ಲಾ ವಿರುಪಣ್ಣ. |
| ೮೭೩ | ,, | ಕನಿಕೇರಿ ಲಿಂಗಪ್ಪ. |
| ೮೭೪ | ,, | ಸಂಡೂರು ಶಿವಾರಮಪ್ಪ. |
| ೮೭೫ | ,, | ಗ॥ ತೋಟಪ್ಪ. |
| ೮೭೬ | ,, | ಚಿಕ್ಕಮ್ಮನವರ ವೀರಣ್ಣ. |
| ೮೭೭ | ,, | |
| ೮೭೮ | ಬಾಗಲಕೋಟೆ. | ಬಂಣಗಾರ ಬಸಪ್ಪ. |
| ೮೭೯ | ,, | ಮಹಲಿಂಗಪ್ಪ. |
| ೮೮೦ | ,, | ಪಟ್ಟಣಶೆಟ್ಟಿ ರಾಚಪ್ಪ. |
| ೮೮೧ | ಮಾವಿನಹಳ್ಳಿ. | ಅಂಗಡಿ ಬಸಪ್ಪ. |
| ೮೮೨ | ಹಡಗಲಿ. | ಮುದಕಪ್ಪ. |
| ೮೮೩ | ಅಲೀಬಾಗ್. | ವೀರಭದ್ರಪ್ಪ ಹಾಳಭಾವಿ ಸಬ್‌ಜಡ್ಜಿ. |
| ೮೮೪ | ಲಕ್ಷ್ಮೇಶ್ವರ. | ವಿರುಪಾಕ್ಷಪ್ಪ. |
| ೮೮೫ | ದರೋಜಿ. | ಆಯ್ಯನ ಗೌಡ. |
| ೮೮೬ | ಕಾಳಘಟ್ಟ. | ರೆಡ್ಡಿ ಪತ್ರೆಗೌಡ. |
| ೮೮೭ | ಮೊನ್ನಹಳ್ಳಿ. | ಶಂಖಿನ ಬಸಯ್ಯ. |
| ೮೮೮ | ಕಣೇಕಲ್ಲು. | ಯಾತಗಿರಿ ಹಂಪಣ್ಣ. |
| ೮೮೯ | ಕಣಿವಿಹಳ್ಳಿ. | ಕರಿಬಸಪ್ಪ. |
| ೮೯೦ | ಕುರುಗೋಡು. | ಹೋತೂರು ಬಸಪ್ಪ. |
| ೮೯೧ | ರಾಣಿಬೆನ್ನೂರು. | ಶಂಕರಪ್ಪ ಹರಪನಹಳ್ಳಿ. |
| ೯೯೨ | ,, | ಮುಕ್ಕಣ್ಣ ಪಟ್ಟಣಶೆಟ್ಟಿ. |
| ೮೯೩ | ,, | ಬಸಣ್ಣೆಪ್ಪ. |
| ೮೯೪ | ಬಳಗಾನೂರು. | ಮಲ್ಲೇಶಪ್ಪ. |
| ೮೯೫ | ,, | ಗುರವನಗೌಡ. |
| ೮೯೬ | ಕೊಡ್ಲಿಗಿ. | ಶೆಟ್ಟಿ ಬಸೆಟ್ಟೆಪ್ಪ. |
| ೮೯೭ | ಹಡಗಲಿ. | ನೆಲ್ಲುಕುದರಿ ಅಕ್ಕಿ ಶೆಟ್ರುಬಸಪ್ಪ. |
| ೮೯೮ | ನರಗುಂದ. | ಬಸವನಗೌಡ. |

| ಕ್ರಮ ಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೮೯೯ | ಹಡಗಲಿ. | ನೆಲ್ಲುಕುದರಿ ಗುರುಬಸಪ್ಪ. |
| ೯೦೦ | ಯಿಟಗಿ. | ಸಣ್ಣ ಅಯ್ಯಪ್ಪಗೌಡ. |
| ೯೦೧ | ಮಶಿಗಿ ಅಂಚಿನಾಳು. | ಅಯ್ಯಪ್ಪ ಅಂಗಡಿ. |
| ೯೦೨ | ದಾವಣಗೇರಿ. | ಮುರಿಗೆಪ್ಪ. |
| ೯೦೩ | ಕೊಂಚಿಗೇರಿ. | ಮುದ್ದನ ಗೌಡ. |
| ೯೦೪ | ದಾವಣಗೇರಿ. | ಕೊಟ್ಟೂರು ಬಸಪ್ಪ. |
| ೯೦೫ | ಕೊಂಚಿಗೇರಿ. | ಕೋರಿ ವಿರುಪಣ್ಣ. |
| ೯೦೬ | ಚವುಡದಾನಪುರ. | ಯಿನಾಂದಾರ್ ಪುಟ್ಟನಂಜೇ ಒಡೆಯರ್. |
| ೯೦೭ | ಬಂಡನಹಾಳು. | ಗಂಗನ ಗೌಡರು. |
| ೯೦೮ | ಬಾದನಹಟ್ಟಿ. | ಯೀರನಗೌಡ್ರು. |
| ೯೦೯ | ಆಲೂರು. | ಕೋಣನ ಮಲ್ಲಪ್ಪ. |
| ೯೧೦ | ಆರಕಭಾವಿ. | ಬಸೆಟ್ಟೆಪ್ಪ. |
| ೯೧೧ | ಹುಲಿಕೆರೆ. | ಅಟ್ಟೆಪ್ಪ. |
| ೯೧೨ | ಕಾನಮಡುಗು. | ಬನಶೆಟ್ಟಿ ಚನವೀರಪ್ಪ. |
| ೯೧೩ | ಮದ್ದಿಕೇರಿ. | ಬಳೆ ವೀರಭದ್ರಯ್ಯ. |
| ೯೧೪ | ,, | ಮಿಠಾಯಿ ವೀರಭದ್ರಯ್ಯ. |
| ೯೧೫ | ,, | ಕರ್ನೂಲು ಗಿಡ್ಡಯ್ಯ. |
| ೯೧೬ | ,, | ಬಳೆ ನಾಗಯ್ಯ. |
| ೯೧೭ | ಕರಕುಮುಕ್ಕಲಿ. | ಯೀಶ್ವರಪ್ಪ. |
| ೯೧೮ | ಹದ್ದಿನಗುಂಡು. | ಕೆಯ್ಯನಗೌಡ. |
| ೯೧೯ | ಇಭರಾಂಪುರ. | ಯೀರನಗೌಡ. |
| ೯೨೦ | ಹಂಪಸಾಗರ. | ಕಡ್ಲೆ ಬಸಪ್ಪ. |
| ೯೨೧ | ಬೀರೂರು. | ಪಟೇಲು ಗುರಪ್ಪ. |
| ೯೨೨ | ಶಿವನಿ. | ಪರ್ವತಪ್ಪ. |
| ೯೨೩ | ದಾವಣಗೇರಿ. | ಚನವೀರಯ್ಯ. |
| ೯೨೪ | ಆದವಾನಿ. | ಅಂಬಲಿ ರಾಮಲಿಂಗಪ್ಪ. |
| ೯೨೫ | ರಾಯದುರ್ಗ. | ಗಡ್ಡಿ ಶಿವರುದ್ರಪ್ಪ. |

| ಕ್ರಮಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮು॥ ರಾ॥ ರಾ॥ |
| ೯೨೬ | ಕರಕುಮುಕ್ಕಲಿ. | ಮುದ್ದಪ್ಪ. |
| ೯೨೭ | ಸೂಡಿ. | ಶಿದ್ದಪ್ಪ ಬಸಪ್ಪ ಅಂಗಡಿ. |
| ೯೨೮ | ನಾಗರಾಳು. | ದೊಡ್ಡಪ್ಪ. |
| ೯೨೯ | ಕೊಪ್ಪಳ. | ಪೊಂಪಣ್ಣ ಸಂಗಪ್ಪ. |
| ೯೩೦ | ,, | ಮುದ್ದುಗೌಡ. |
| ೯೩೧ | ನರೇಗಲ್ಲು. | ಶಿದ್ರಾಮಪ್ಪ ಜವಳಿ. |
| ೯೩೨ | ಬೆಣ್ಣಿಕಲ್ಲು. | ವೀರಾಪುರದ ಬಸಪ್ಪ. |
| ೯೩೩ | ನೀರಡಗುಂಭ. | ಶಾಂತವೀರಪ್ಪ. |
| ೯೩೪ | ಮೊಣಕಾಲ್ಮರು. | ರುದ್ರಪ್ಪ. |
| ೯೩೫ | ಹೋಸೂರು. | ಲಿಂಗನಗೌಡ. |
| ೯೩೬ | ,, | ವೀರಭದ್ರಪ್ಪ. |
| ೯೩೭ | ಮುಮನಾಬಾದು. | ಬಸಪ್ಪ. |
| ೯೩೮ | ,, | ಚನ್ನಬಸಪ್ಪ. |
| ೯೩೯ | ,, | ಶಿದ್ದಲಿಂಗಪ್ಪ. |
| ೯೪೦ | ಕರ್ಜಗಿ. | ಶಿದ್ದಪ್ಪ ಕರೆಪ್ಪ. |
| ೯೪೧ | ತಿಪಟೂರು. | ಸಂಗಪ್ಪ. |
| ೯೪೨ | ಸಂಡೂರು. | ರಾಜಪ್ಪ. |
| ೯೪೩ | ಕೌಲುಬಜಾರು, ಬಳ್ಳಾರಿ. | ಶಿವಪುರದ ಶರಣ ಬಸಪ್ಪ. |
| ೯೪೪ | ಮಹಾರಾಜಪೇಟೆ. | ಮುಳಿಮಪ್ಪ. |
| ೯೪೫ | ಮುದ್ದೇಬಾಳು. | ನೀಲಪ್ಪ ಗುರುಸಂಗಪ್ಪ ಮೋಟಗಿ. |
| ೯೪೬ | ಗದಗು. | ಕೊಟ್ರಪ್ಪ ರಾಜಪ್ಪ. |
| ೯೪೭ | ಹುಬ್ಬಳ್ಳಿ. | ಮಹಂತಪ್ಪ ಸೋಮಪ್ಪ. |
| ೯೪೮ | ಗದಗು. | ಕೊಟ್ರಪ್ಪ. |
| ೯೪೯ | ಮಹಾರಾಜಪೇಟೆ. | ಬಾಳಪ್ಪ. |
| ೯೫೦ | ತೆಕ್ಕಲಕೋಟೆ. | ಪೊಂಪಯ್ಯ. |
| ೯೫೧ | ,, | ಕೋರಿ ಚನ್ನಬಸಪ್ಪ. |

| ಕ್ರಮಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ॥ ರಾ॥ ರಾ॥ |
| ೯೫೨ | ಆದವಾನಿ. | ರಾಯಚೂರು ಶಿದ್ದಪ್ಪ. |
| ೯೫೩ | ತೆಕ್ಕಲಕೋಟೆ. | ಹೊನ್ನೂರು ವೀರಣ್ಣ. |
| ೯೫೪ | ನಾಲ್ವಾರು. | ವೀರಬಸಪ್ಪ. |
| ೯೫೫ | ,, | ಸಾಹೇಬಗೌಡ. |
| ೯೫೬ | ಬಳ್ಳಾರಿ. | ಹೋತೂರು ಶಿವಪ್ಪ. |
| ೯೫೭ | ಹಲಗಲಿವಾಡ. | ಲಿಂಗಪ್ಪ. |
| ೯೫೮ | ಕೊಂಡಕುಂದಿ. | ಮಠದ ದೊಡ್ಡ ಮುಪ್ಪಿನಯ್ಯ. |
| ೯೫೯ | ,, | ಮಠದ ಷಣ್ಮುಖಯ್ಯ. |
| ೯೬೦ | ,, | ಲೇವಡಿ ದೊಡ್ಡಯ್ಯ. |
| ೯೬೧ | ,, | ಅಂಗಡಿ ಸಣ್ಣಪ್ಪ. |
| ೯೬೨ | ,, | ಕುದುರೆಕಾರು ಬಂಡೆಪ್ಪ. |
| ೯೬೩ | ,, | ಅಂಗಡಿ ಕರೆಪ್ಪ. |
| ೯೬೪ | ,, | ಕೋಗಿನೆಹಳ್ಳಿ ಶಿವಪ್ಪ. |
| ೯೬೫ | ,, | ಸಮಂತ್ರಿ ಶಂಕರಪ್ಪ. |
| ೯೬೬ | ,, | ಗೂಗಲ್ಲು ವೀರಭದ್ರಪ್ಪ. |
| ೯೬೭ | ,, | ಮುಟ್ಟಗಿ ಬಸಪ್ಪ. |
| ೯೬೮ | ,, | ಚಿಟಂಗಯ್ಯ. |
| ೯೬೯ | ಆದವಾನಿ. | ಶೆಟ್ಟೆಪ್ಪ. |
| ೯೭೦ | ಸೋಲಾಪುರ. | ಭೀಮಾಶಂಕರು ಕರಂಜೀಕರ್. |
| ೯೭೧ | ಕಂಪ್ಲಿ. | ಜಾಜಿ ಬಸಪ್ಪ. |
| ೯೭೨ | ಕಣಿಮಿಹಳ್ಳಿ. | ಚಿತ್ರಕಿ ತೋಟಪ್ಪ. |
| ೯೭೩ | ಬಾಗಲಕೋಟೆ. | ರೇವಣ ಶಿದ್ದಪ್ಪ ಮಾಮಲೇದಾರ್. |
| ೯೭೪ | ಬಳ್ಳಾರಿ. | ಆಶಿವಿ ಮುದ್ದಾನಪ್ಪ. |
| ೯೭೫ | ಕಣೇಕಲ್ಲು. | ಹಿರೇಮಠದ ತಿಪ್ಪೇಸ್ವಾಮಿ. |
| ೯೭೬ | ರಬಕವಿ. | ಬಸೆಟ್ಟೆಪ್ಪ ಮುತ್ತೂರು. |
| ೯೭೭ | ತರೀಕೆರೆ. | ಬಸಪ್ಪ ವೀರಪ್ಪ. |
| ೯೭೮ | ,, | ನಂಜುಂಡಪ್ಪ ಶಿದ್ಲಿಂಗಪ್ಪ. |

| ಅನುಕ್ರಮ ಸಂಖ್ಯೆ | ಗ್ರಾಮ. | ಪ್ರತಿನಿಧಿಗಳ ಹೆಸರುಗಳು. |
|---|---|---|
| | | ಮ|| ರಾ|| ರಾ|| |
| ೯೭೯ | ಬಾಣಾಪುರ. | ಸಂಜೀವನ ಗೌಡ. |
| ೯೮೦ | ಯಮ್ಮಿಗನೂರು. | ಶಿದ್ರಾಮಯ್ಯ. |
| ೯೮೧ | ಯಿಟಗಿ. | ವೀರಪ್ಪ ಬಿನ್ ಚನ್ನಪ್ಪ. |
| ೯೮೨ | ,, | ವೀರಪ್ಪ ಬಿನ್ ಅಂದಾನಪ್ಪ. |
| ೯೮೩ | ಪುಣೆ. | ಬಾಲಕೃಷ್ಣನಾರಾಯಣ ಪುರಾಣಿ. |
| ೯೮೪ | ಹೊಳಲು. | ಮಠದ ಚನವೀರಯ್ಯ. |
| ೯೮೫ | ,, | ಮಠದ ಚನ್ನಬಸಯ್ಯ. |
| ೯೮೬ | ,, | ಜೋಡಿ ಚನ್ನಬಸಪ್ಪ. |
| ೯೮೭ | ,, | ಗುಡದೂರು ದೇವಪ್ಪ. |
| ೯೮೮ | ,, | ಅಸುಂಡಿ ಗುರುಲಿಂಗಪ್ಪ. |
| ೯೮೯ | ,, | ಯತ್ತಿನಹಟ್ಟಿ ಚನ್ನಬಸಪ್ಪ. |
| ೯೯೦ | ,, | ಕಟ್ಟಿಮ್ಮನ ಮಗ ದೊಡ್ಡಪ್ಪ. |
| ೯೯೧ | ,, | ಅಕ್ಕಿ ಬಸವಂಣೆಪ್ಪ. |
| ೯೯೨ | ಬಡನೂರು. | ವೀರಭದ್ರಪ್ಪ ಶೆಟ್ರು. |
| ೯೯೩ | ಕಂಪ್ಲಿ. | ಟಂಗಿನಕಾಯಿ ಶಿದ್ದಪ್ಪ. |
| ೯೯೪ | ,, | ಗುರುಶಾಂತಪ್ಪ. |
| ೯೯೫ | ಕಲ್ಲೂರು. | ಶೆಟ್ಟಿ ಗಣ್ಣೆಪ್ಪ. |
| ೯೯೬ | ಬಳ್ಳಾರಿ. | ಮಹರುದ್ರಪ್ಪ ಕೌತಾಳದ. |
| ೯೯೭ | ರಾಯಚೂರು. | ವೀರಭದ್ರಪ್ಪ. |
| ೯೯೮ | ,, | ಬಸಪ್ಪ. |
| ೯೯೯ | ಮಮನಾಬಾದು. | ಕೋಳೂರು ಗುರುವೀರಪ್ಪ. |
| ೧೦೦೦ | ತಾಳಿಕೋಟೆ. | ಬಸವಲಿಂಗಪ್ಪ. |

## ಆಜೀವ ಸಭಾಸದರು.

೧ ಶ್ರೀಮಂತ. ಸಂಗಪ್ಪ ಗದಿಗೆಪ್ಪ ದೇಶಾಯಿ ಜೈನಾಪುರ. ಡಿ॥ ಬಿಜಾಪುರ.
೨ ಶ್ರೀಮಂತ. ಗಂಗಪ್ಪ ಶಿವಲಿಂಗಪ್ಪ ದೇಶಾಯಿ ಸೊನ್ನ. ಡಿ॥ ಬಿಜಾಪುರ.
೩ ಶ್ರೀಮಂತ. ಮಲ್ಲಪ್ಪ ಬಸಪ್ಪ ದೇಶಾಯಿ ಯಡೇಹಳ್ಳಿ. ಡಿ॥ ಬಿಜಾಪುರ.
೪ ಶ್ರೀಮಂತ. ಶಿವಸಿದ್ಧಪ್ಪ ವೀರಪ್ಪ ಸರ್‌ನಾಯಕ ಗಲಗಲಿ. ಸಂಸ್ಥಾನ ಮುಧೋಳ.
೫ ಶ್ರೀಮಂತ. ಮಲ್ಲನಗೌಡ ಶಿವನಗೌಡ ಪಾಟೀಲ, ಬಳ್ಳೂರ. ಡಿ॥ ಬಿಜಾಪುರ.
೬ ಶ್ರೀಮಂತ. ಗುರುಸಿದ್ಧಪ್ಪ ದೇಶಾಯಿ ಕೋಲಾರು. ಡಿ॥ ಬಿಜಾಪುರ.
೭ ಶ್ರೀಮಂತ. ಶಂಕರಪ್ಪ ವ ವೀರಪ್ಪ ದೇಶಾಯಿ ಅಣ್ಣಿಗೇರಿ. ಡಿ॥ ಧಾರವಾಡ.
೮ ಶ್ರೀಮಂತ. ರಾಮಚಂದ್ರಪ್ಪ ಅಪ್ಪಾಸಾಹೇಬ ದೇಶಾಯಿ ಕಲ್ಲೂರು ಡಿ॥ಬೆಳಗಾಂವಿ.
೯ ಶ್ರೀಮಂತ. ವೀರಭದ್ರಪ್ಪ ಬಾಬಾಸಾಹೇಬ ದೇಶಾಯಿ ತಲ್ಲೂರು. ಡಿ॥ ಬೆಳಗಾಂವಿ.
೧೦ ಶ್ರೀಮಂತ. ಶಿವಲಿಂಗರಾವು ಜಗದೇವರಾವು ದೇಶಮುಖ ಆಲಮೇಲ.
೧೧ ಮ॥ರಾ॥ರಾ॥ ಸತ್ಯಪ್ಪ ಘೂಳಿ ಬಿ. ಏ. ಮಾಮಲೇದಾರ್.
೧೨ ಮ॥ರಾ॥ರಾ॥ ಫಕೀರಪ್ಪ ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಕೀಲ ಬಿಜಾಪುರ.
೧೩ ಮ॥ರಾ॥ರಾ॥ ಸಂಗಪ್ಪ ಗುರುಬಸಪ್ಪ ಪಟ್ಟಣಶೆಟ್ಟಿ ಶಿಂದಿಗಿ.
೧೪ ಮ॥ರಾ॥ರಾ॥ ಸಾತಪ್ಪ ಗುಣಾರಿ, ಶಿಂದಿಗಿ.
೧೫ ಮ॥ರಾ॥ರಾ॥ ರಾಮಚಂದ್ರಪ್ಪ ಸಂಗಪ್ಪ ಬೋನಾಳ.

---

ನಿಬ್ಬಕ್ಕಟ್ಟ ಕಮಿಟಿಯಲ್ಲಿ ಸೇರಿದ ಸ್ಟ್ಯಾಂಡಿಂಗ್‌ಕಮಿಟಿ ಛೇರ್‌ಮನ್ ಸೆಕ್ರೆಟರಿ ಮತ್ತು ಮೆಂಬರರ ಹೆಸರುಗಳು ಈ ಕೆಳಗೆ ಕಾಣಿಸಿದಂತೆ.

ಶ್ರೀಮಂತ ಮಲ್ಲಪ್ಪ, ಬಸಪ್ಪ, ರಾವುಸಾಹೇಬ್ ಉರ್ಫ ಅಪ್ಪಾಸಾಹೇಬ್, ಸೋಲಾಪುರ
ಅಧ್ಯಕ್ಷರು.

ಮ॥ರಾ॥ರಾ॥ ರಾ॥ಬ॥ ಶಾಂತವೀರಪ್ಪ, ವೀರಸಂಗಪ್ಪ, ಮೆಣಸಿನಕಾಯಿ, ಹು॥ ಡಿ॥ ಕಲೆಕ್ಟರ್, ಸ್ಟ್ಯಾಂಡಿಂಗ್ ಕಮಿಟಿ ಛೇರ್‌ಮನ್.

೧ ಶಿ॥ರಾ॥ರಾ॥ ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರ ಮಠ, ವಕೀಲ ಧಾರವಾಡ.
ಸರ್ಕಿಲ್ ಸೆಕ್ರೆಟರಿ.

೨ ಮ॥ರಾ॥ರಾ॥ ಮಲ್ಲಿಕಾರ್ಜುನಪ್ಪಾ ಪಾಟೀಲ, ಸೋಲಾಪುರ.
೩ ಮ॥ರಾ॥ರಾ॥ ವೀರಬಸಪ್ಪ ಶ್ರೇಷ್ಠಿ ಬಿ. ಎ. ಕೊಲ್ಹಾಪುರ. ಮಹಾರಾಷ್ಟ್ರ
ಸರ್ಕಿಲ್ ಸೆಕ್ರೆಟರಿಗಳು.

೪ ಮ॥ರಾ॥ರಾ॥ ಫಕೀರಪ್ಪ ಹಳಕಟ್ಟಿ, ಬಿ. ಎ., ಎಲ್. ಎಲ್. ಬಿ, ವಿಜಾಪುರ ಸರ್ಕಲ್ ಸೆಕ್ರೆಟರಿ.

೫ ಮ॥ರಾ॥ರಾ॥ ಶಿಂದಿಗಿ ಗವಿಯಪ್ಪ ಸೆಕ್ರೆಟರಿ, ಮದ್ರಾಸು ಸರ್ಕಲ್.

೬ ಮ॥ರಾ॥ರಾ॥ ಡಾಕ್ಟರು ಟಿ. ಯಸ್. ಶಿವ್ವಪ್ಪ ಸಬ್ ಅಸಿಸ್ಟೆಂಟ್ ಸರ್ಜನ್ ಮೈಸೂರು ಸ್ಟ್ಯಾಂಡಿಂಗ್ ಕಮಿಟಿ ಮೆಂಬರು.

೭ ಮ॥ರಾ॥ರಾ॥ ಎಚ್. ಕೆ. ವೀರಬಸವಯ್ಯ ಬಿ. ಎ. ಬಿ. ಎಲ್. ವಕೀಲ ಬೆಂಗಳೂರು ,,

೮ ಮ॥ರಾ॥ರಾ॥ ಸರಾಫ್ ಕಡಲಪ್ಪ, ಬೆಂಗಳೂರು. ,,

೯ ವೇ॥ ರ್ಯ. ಆರ್. ಕರಿಬಸವಶಾಸ್ತ್ರಿ ಮೈಸೂರು. ,,

೧೦. ಮ॥ರಾ॥ರಾ॥ ವೈ॥ ವಿರುಪಾಕ್ಷಯ್ಯ ಮೈಸೂರು ಸ್ಟಾರ್ ಪ್ರೊಪ್ರೈಟರ್ ,,

೧೧ ಮ॥ರಾ॥ರಾ॥ ಎಡೆಹಳ್ಳಿ ಶಾಂತಪ್ಪಶೆಟ್ಟರು, ಬೀರೂರು. ,,

೧೨ ಮ॥ರಾ॥ರಾ॥ ಸಾಹುಕಾರ್ ಕಾಡಪ್ಪ, ಚಿತ್ರಕಲ್‌ದುರ್ಗ. ,,

೧೩ ಮ॥ರಾ॥ರಾ॥ ಸಿ. ಸಿದ್ಧನಂಜಪ್ಪ ಪ್ಲೀಡರ್, ಚಿತ್ರಕಲ್‌ದುರ್ಗ. ,,

೧೪ ಮ॥ರಾ॥ರಾ॥ ಮಾಗಾನಹಳ್ಳಿ ಸಂಗಪ್ಪ ದಾವಣಗೆರೆ. ,,

೧೫ ಶಿ॥ರಾ॥ರಾ॥ ತಿರುಕಪ್ಪನವರ ಮಠದ ಷಡಾಕ್ಷರಪ್ಪಯ್ಯ, ದಾವಣಗೆರೆ. ,,

೧೬ ಮ॥ರಾ॥ರಾ॥ ಅಲ್ಲಮ ಬಸಪ್ಪ ಬಸಪ್ಪ, ಬಳ್ಳಾರಿ ,,

೧೭ ಶಿ॥ರಾ॥ರಾ॥ ದೊಡ್ಡವೀರಪ್ಪಯ್ಯ ಜಾಗಟಗೇರಿ, ಕೊಟ್ಟೂರು. ,,

೧೮ ಮ॥ರಾ॥ರಾ॥ ಗಡ್ಡಿವೀರಭದ್ರಪ್ಪ ಬಳ್ಳಾರಿ. ,,

೧೯ ಮ॥ರಾ॥ರಾ॥ ಸವುದ್ರಿ ಈಶ್ವರಪ್ಪ ಆದವಾನಿ. ,,

೨೦ ಮ॥ರಾ॥ರಾ॥ ತಾವರಗೇರಿ ಸಣ್ಣಬಸವಯ್ಯ ಆದವಾನಿ. ,,

೨೧ ಮ॥ರಾ॥ರಾ॥ ಗುತ್ತಿ ಚನ್ನಪ್ಪ ಹೊಸಪೇಟೆ. ,,

೨೨ ಮ॥ರಾ॥ರಾ॥ ಕುದಿರಿಮೋತಿ ಶಿವ್ದಲಿಂಗಯ್ಯ ಹೊಸಪೇಟೆ. ,,

೨೩ ಮ॥ರಾ॥ರಾ॥ ರೆಡ್ಡೇರ ಶಿದ್ದಲಿಂಗಪ್ಪ ಕಂಪ್ಲಿ. ,,

೨೪ ಮ॥ರಾ॥ರಾ॥ ಟೆಂಗಿನಕಾಯಿ ಶಿದ್ದಪ್ಪ ಕಂಪ್ಲಿ. ,,

೨೫ ಮ॥ರಾ॥ರಾ॥ ಮೊರಬದ ಮಹಲಿಂಗಪ್ಪ ಪ್ರೊದ್ದುಟೂರು. ,,

೨೬ ಮ॥ರಾ॥ರಾ॥ ಗೂಗಲ್ಲು ಆದೆಪ್ಪ ಗುಂತಕಲ್ಲು. ,,

೨೭ ಮ॥ರಾ॥ರಾ॥ ಆರ್. ಯಸ್. ಮುದ್ದಾನಪ್ಪ ಬಿ. ಏ. ಸಬ್‌ರಿಜಿಸ್ಟ್ರಾರ್ ಕೂಡ್ಲಿಗಿ ,,

೨೮ ಮ॥ರಾ॥ರಾ॥ ಅಪ್ಪಾಸ್ವಾಮಿ ಭಕ್ತರ್ ಪಾಂಡುಚೇರಿ. ,,

೨೯ ಮ॥ರಾ॥ರಾ॥ ಹೊಳಗುಂದಿ ಪೊಂಪನಗೌಡ. ,,

೩೦ ಮ॥ರಾ॥ರಾ॥ ನಾಡಗೌಡರ ಮರೇಗೌಡ ಕುರುಗೋಡು ,,

೩೧ ಮ॥ರಾ॥ರಾ॥ ವಿರೇಶಲಿಂಗಂ ದೇವರ ಚಿನಪರಿವು ಗುಂಟೂರು.

೩೨ ಮ ರಾ॥ರಾ॥ ನೀರಡಗುಂಭದ ಶಂಕರಪ್ಪ ಮಕ್ತಲ್ ಸ್ಟ್ಯಾಂಡಿಂಗ್ ಕಮಿಟಿ ಮೆಂಬರು.
೩೩ ಶ್ರೀಮಂತ್ರ ಬಾಪುರಾವು ರಾಜೇಶ್ವರರಾವು ದೇಶಮುಖ ಹೈಕೋರ್ಟ್ಟ ವಕೀಲ್ ಹೈದರಾಬಾದು.
೩೪ ಮ॥ರಾ॥ರಾ॥ ಚನ್ನಬಸಪ್ಪ ಶೆಟ್ರು ದೇವಿಹೊಸೂರು ಬ್ಯಾಡಿಗಿ ,,
೩೫ ರಾ॥ಸಾ॥ ರೇಣುಸಿದ್ಧಯ್ಯ ಕಿತ್ತೂರ ಎಲ್. ಸಿ. ಇ. ,,
೩೬ ಮ॥ರಾ॥ರಾ॥ ಕೊಟ್ರ ಬಸಪ್ಪ ಬಾವಿಕಟ್ಟ ನವಲಗುಂದ. ,,
೩೭ ವೇ॥ ಸಣ್ಣತಮ್ಮಪ್ಪ ಶಾಸ್ತ್ರಿ ವಿರಜಿ ,,
೩೮ ಮ॥ರಾ॥ರಾ॥ ಮುರಿಗೆಪ್ಪ ದಾಜೋಬಾ ಮಹಾಜನ ಅಪ್ಟೆ. ,,
೩೯ ಮ॥ರಾ॥ರಾ॥ ದಾಮೋದ ಪಾಂಡುರಂಗ ಬಾಪೂನೆ ಮಯಾಣಿ ಜಿಲ್ಲಾ ಸತಾರಾ, ,,
೪೦ ಮ॥ರಾ॥ರಾ॥ ಬಳವಂತರಾವ ತಾಂಬೇಕರ ಪುಣೆ. ,,
೪೧ ಮ॥ರಾ॥ರಾ॥ ಸತ್ಯಪ್ಪ ಘೂಳಿ, ಬಿ. ಏ. ಬೆಳಗಾಂವಿ. ,,
೪೨ ಮ॥ರಾ॥ರಾ॥ ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ ರಬಕವಿ. ,,
೪೩ ಮ॥ರಾ॥ರಾ॥ ಬಸೆಟ್ಟೆಪ್ಪ ಮುತ್ತೂರು ರಬಕವಿ. ,,
೪೪ ಮ॥ರಾ॥ರಾ॥ ನೂರೊಂದಪ್ಪ ಶೆಟ್ಟಿ ಅಥಣಿ. ,,
೪೫ ಮ॥ರಾ॥ರಾ॥ ಶಿವಮೂರ್ತಯ್ಯ ಕಣಬುರ್ಗಿ ಗೋಕಾಕ. ,,
೪೬ ಮ॥ರಾ॥ರಾ॥ ಸಾತಪ್ಪ ಸಿಂತ್ರೆ ಕುರ್ಲ್ಲಾ ನಿಪ್ಪಾಣಿ. ,,
೪೭ ಶ್ರೀಮಂತ ದೇಸಾಯಿ ರಕ್ಷಸಗಿ. ,,
೪೮ ಶ್ರೀಮಂತ ದೇಶಾಯಿ ಸೊಸ್ನಾ. ,,
೫೦ ಶ್ರೀಮಂತ ದೇಸಾಯಿ ಗಲಗಲಿ. ,,
೫೧ ಮ॥ರಾ॥ರಾ॥ ಸಿದ್ಧಪ್ಪ ಜಿಗಜಿನ್ನಿ ಬಾಗಲಕೋಟೆ. ,,
೫೨ ಶ್ರೀಮಂತ ಶಿವಲಿಂಗರಾವು ದೇಶಮುಖ ಆಲಮೇಲ. ,,
೫೩ ರಾ॥ ಸಾ॥ ವಿರುಪಾಕ್ಷಪ್ಪ ಕಲೊಳಗಿ ಬಿ. ಏ. ,,
೫೪ ಮ॥ರಾ॥ರಾ॥ ಕಲ್ಲಪ್ಪ ಅಂಗಡಿ ಎಲ್. ಸಿ. ಇ. ,,
೫೫ ಮ॥ರಾ॥ರಾ॥ ಮೂಗಪ್ಪ ಸವಪತ್ತಿ. ,,
೫೬ ಮ॥ರಾ॥ರಾ॥ ಗುರುಬಸಪ್ಪ ಪಳಕಟ್ಟಿ. ,,
೫೭ ಮ॥ರಾ॥ರಾ॥ ವೀರಪ್ಪ ಬಿಳಿ ಅಂಗಡಿ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ. ,,
೫೮ ಮ॥ರಾ॥ರಾ॥ ಚನ್ನಬಸಪ್ಪ ಶಿರಹಟ್ಟಿ. ,,
೫೯ ಶಿ॥ರಾ॥ರಾ॥ ಶಿದ್ಧಲಿಂಗಯ್ಯ ಆರಳೆಲೆ ಮಠ ಗದಗು. ,,
೬೦ ರಾ॥ ಸಾ॥ ಮಲ್ಲೇಶಪ್ಪ ಮಾನ್ವಿ ಗದಗು ,,
೬೧ ಮ॥ರಾ॥ರಾ॥ ಹೊಳಿಯಪ್ಪ ಬುಳ್ಳಾ, ಗದಗು. ,,

೬೦ ರಾ॥ ಸಾ॥ ರೇವಣಸಿದ್ಧಯ್ಯ ಬಾಗಲಕೋಟೆ ಮಾಮಲೇದಾರ್ ,,
೬೩ ಮ॥ರಾ॥ರಾ॥ ವೀರಭದ್ರಪ್ಪ ಹಾಲಬಾಂವಿ, ಬಿ. ಎ. ಎಲ್. ಎಲ್. ಬಿ. ಸಬ್‌ಜಡ್ಜ ಅಲ್ಲೀಬಾಗ. ,,

## ಬಳ್ಳಾರಿ ವೀರಶೈವ ವಿದ್ಯಾವರ್ಧಕ ಫಂಡಿಗೆ ಉದಾರ ಮನಸ್ಸಿನಿಂದ ದ್ರವ್ಯವನ್ನು ಕೊಡಲೊಪ್ಪಿದ ಮಹನೀಯರ ಹೆಸರುಗಳು.

ರು. ೫೦೦೦—ಶ್ರೀಮದುಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಚಕ್ರ ಪಟ್ಟಾಧ್ಯಕ್ಷ ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು.

೨೦೦—ಶ್ರೀಮನ್ನಿರಂಜನ ವುರವಕೊಂಡೆ ಸ್ವಾಮಿಗಳವರು.

ಮ॥ ರಾ॥ ರಾ॥

೨೦೦೦—ಕೊ॥ ಮಿ॥ ಮ॥ ಜಾಗಟಗೇರಿ ದೊಡ್ಡ ವೀರಪ್ಪಯ್ಯನವರು.

೧೦೦೦—ಕೌತಾಳದ ಗುರುಶಾಂತಪ್ಪ ನವರು.

೨೦೦೦—ಗಡಿಗಿ ಮರಿ॥ ವೀರಭದ್ರಪ್ಪ ನವರು.

೧೦೦೦—ಅಲ್ಲಂ ಬಸಪ್ಪ ನವರು.

೨೦೦೦—ಶಿಂದ್ಗಿ ಗವಿಯಪ್ಪ ನವರು.

೨೦೦೦—ಶಿಂದ್ಗಿ ವುದ್ದಾನಪ್ಪ ನವರು.

೫೦೦—ಪಾಲ್ತೂರು ನಾಡನಾಲಿಗಿ ದೊಡ್ಡಪ್ಪನ ಮಗ ಕುರುಗೋಡಪ್ಪ.

೨೦೦೦—ಕೊಂಡಕುಂದಿ ಚನ್ನಪ್ಪ ನವರು.

೧೦೦೦—ಜಾಜಿ ಪಾರಯ್ಯ ನವರು.

೫೦೦—ಆದವಾನಿ ಶೆಟ್ಟಿಮುದ್ದಪ್ಪ, ಪಟ್ನಶೆಟ್ನ ಸಿದ್ದಪ್ಪನ ಗುಜಾರತಿ.

೧೫೦೦—ಬೆಚ್ಚರೆಡ್ಡಿ ಚಂಗಳಪ್ಪ ನವರು.

೨೫—ಕೊಂಚಿಗೇರಿ ಮಠದ ವಿರುಪಯ್ಯ ನವರು.

೨೫—ಬಳಿ ಚನ್ನಬಸಯ್ಯ ನವರು.

೨೫—ತೊಗರಿ ವೀರಪ್ಪ ನವರು.

೨೫—ಗದಗಿನ ಮಂಗುಳೂರು ಶಿದ್ದಲಿಂಗಯ್ಯ ನವರು.

೨೫—ರಬಕವಿ ಮುತ್ತೂರು ಬಸೆಟ್ಟಪ್ಪ ನವರು.

೫೦—ವುತ್ತಂಗಿ ಗುಡೇಕೋಟೆ ತಿಪ್ಪಣ್ಣ ಹಡಗಲಿ.

೧೦೦—ಅಸ್ಪರಿ ಪಂಚಪ್ಪ ನವರು.
೧೦೦—ಆರಳಿ ಬಸಪ್ಪ ನವರು.
೨೫—ಗಾಳಿ ಚನ್ನಪ್ಪನ ಮಗ ಬಸಪ್ಪ.
೫೦—ಸಕ್ರಿ ನೀಲಮ್ಮ ನವರು.
೫೦—ವಡ್ಡಿನಶೆಟ್ರು ಶರಭಯ್ಯ ೫॥೦ ಯಕರೆ ಭೂಮಿ.
೨೫—ಅಣ್ಣಿ ಮುದ್ದಪ್ಪ ನವರು.
೫೦—ಆದವಾನಿ ತಾವರಗೇರಿ ಸಣ್ಣ ಬಸವಯ್ಯನವರು.
೧೦—ರಾಯಚೂರು ಸಿದ್ದಪ್ಪ ಆದವಾನಿ.
೧೦೦—ವುಂತಕಲ್ಲು ಆಸ್ಪಲ್ಲಿ ಹಂಪಣ್ಣ ನವರು.
೫೦—ಚಿಂತಕುಂಟೆ ದೊಡ್ಡನ ಗೌಡನ ಮಗ ವೀರಭದ್ರ ಗೌಡ್ರು.
೧೦೦—ಶಿಂಧ್ಗಿ ಶಿದ್ದಲಿಂಗಪ್ಪ ನವರು.
೧೦೦—ಜೋಳದ ಬಸಪ್ಪ ನವರು.
೧೦—ಕಲ್ಲುಬುರ್ಗಿ ಶರಣಪ್ಪ ವಕೀಲು.
೧೦೦—ಆದವಾನಿ ವಡ್ಡಿಗಿರಿ ಮಲ್ಲಿಕಾರ್ಜುನಪ್ಪ ನವರು.
೧೦೦೦—ಗಡ್ಗಿ ಪೊಂಪಣ್ಣನ ಮಗ ಮುದ್ದಪ್ಪನವರು ತರೀ ಭೂಮಿ, ಹಿರೇ ಸಮುದ್ರ ನಂ॥ ೨೭೩.
೫೦—ಪಂತರ ಚನ್ನಬಸಪ್ಪ ನವರು.
೨೫—ಬಳೆಗಾರ ಕಲ್ಲಪ್ಪ.
೨೫—ಮುಳ್ಗಿ ಶಾಂತವೀರಪ್ಪ ನವರು.
೨೫—ಕುರುಗೋಡು ಯಿಮ್ಮಿಗೌಡ್ರು ವಿರುಪಾಕ್ಷಪ್ಪ ನವರು.
೨೫—ಪಟ್ಟಶೆಟ್ಟ ಸಿದ್ದಪ್ಪ.
೫೦೦—ಉಜ್ಜಂಗಿ ದುರ್ಗದ ಸಿದ್ದನಗೌಡರು.

---

ಈ ಪ್ರಕಾರ ವಿದ್ಯಾಭಿವೃದ್ಧಿಗೆ ಹಣವನ್ನು ಕೊಡಲೊಪ್ಪಿದ ಮಹನೀಯರುಗಳ ಪೈಕಿ, ಶ್ರೀಮದುಜ್ಜಯಿನಿ ಸದ್ಧರ್ಮ ಸಿಹ್ಮಾಸನಾಧೀಶ್ವರ ಜಗದ್ಗುರು, ಚರ ಪಟ್ಟಾಧ್ಯಕ್ಷ ಸಿದ್ಧಲಿಂಗರಾಜ ದೇಶಿಕೇಂದ್ರ ಮಹಾ ಸ್ವಾಮಿಗಳವರ ಸಂಸ್ಥಾನದಿಂದ ಕೂಡಲೇ ಬಂದು ಸಹಸ್ರ ರೂಪಾಯಗಳು ಪಾವತಿ ಬಂದವು. ಈ ಮಹಾಸ್ವಾಮಿಗಳ ವಿದ್ಯಾಭಿಮಾನತೆಯು

ಮಹಾ ಸಂಸ್ಥಾನಕ್ಕೆ ತಕ್ಕ ಗೌರವವಾಗಿರುವದಲ್ಲದೆ, ಮಿಕ್ಕ ಸಂಸ್ಥಾನಾಧೀಶರಿಗೆ ಮಾರ್ಗದರ್ಶಕ ವಾಗಿರುವದು. ... ... .... ... *

ಮಿಕ್ಕ ಜನಗಳು ಮೇಲೆ ಕಂಡಂತೆ ವಿದ್ಯಾಫಂಡಿಗೆ ದ್ರವ್ಯವನ್ನು ಕೊಡಲೊಪ್ಪಿರುವರು. ಮಹಾ ಸಭೆಯಲ್ಲಿ ಹಣವನ್ನು ವಸೂಲುಮಾಡುವದಿಲ್ಲವೆಂದು ಪ್ರಸಿದ್ಧಪತ್ರಿಕೆಗಳಲ್ಲಿ ಪ್ರಕಟನೆ ಮಾಡಿದ್ದಕಾರಣ, ಮಿಕ್ಕ ದಾತೃಗಳಿಗೆ ಅವಕಾಶವು ದೊರಿಯಲಿಲ್ಲವು. ಅವರಾವರು ಫಂಡು ಸ್ಥಾಪನೆಯಾಗಿ ವಿದ್ಯಾಭಿವೃದ್ಧಿಯನ್ನು ಕಾರ್ಯತಃ ತೋರಿಸಿದ್ದಾದರೆ ಯಥಾಶಕ್ತಿ ಸಹಾಯ ಮಾಡುವರೆಂಬ ಭರವಸ ಇದ್ದೇ ಇರುವದು. ಇನ್ನು ವ್ಯವಹಾರಸ್ಥರ ಧರ್ಮಾದಾಯದ ವಿಷಯದಲ್ಲಿ ಸಂಪೂರ್ಣ ಸುಧಾರಣೆ ಮಾಡಿ, ಈ ಬಳ್ಳಾರಿ ಪಟ್ಟಣದಲ್ಲಿಯೇ ವರ್ಷಕ್ಕೆ ಹತ್ತೆಂಟುಸಾವಿರ ರೂಪಾಯಿ ಆದಾಯವಾಗುತ್ತಿರುವ ಧರ್ಮಾದಾಯದ ಹಣವನ್ನು ಅನೇಕ ಸದ್ವಿನಿಯೋಗಗಳಿಗೆ ವೆಚ್ಚಮಾಡುವದರಲ್ಲಿ ಹೆಚ್ಚುಭಾಗವು ವಿದ್ಯಾಫಂಡಿಗೆಸೇರ್ಪಡೆಯಾಗುವಂತೆ ಮಾಡುವದವಶ್ಯ ಕರ್ತವ್ಯವಿದ್ದು, ಸಮಸ್ತ ಸಭ್ಯಗೃಹಸ್ಥರೂ ಇದಕ್ಕನುಮೋದನೆಯನ್ನು ಕೊಟ್ಟಿರುವದರಿಂದ, ಈ ಪ್ರಾಂತದ ವಿದ್ಯಾಫಂಡು ಬಹುಬೇಗನೇ ತಕ್ಕ ಪ್ರಯತ್ನಪಟ್ಟಲ್ಲಿ ವೃದ್ಧಿಗೆ ಬರುವದೆಂಬ ಕುತೂಹಲವಿದೆ. ... ... *

ಈ ಮದ್ರಾಸು ಪ್ರಾಂತದ ವೀರಶೈವರನೇಕರು ಕೃಷಿ, ವಾಣಿಜ್ಯಾದಿಗಳಲ್ಲಿ ವಿಶೇಷ ನಿರತರಾಗಿರುವಕಾರಣ, ಅವರುನ್ನು ವಿದ್ಯಾನಿಧಿಯನ್ನು ಸ್ವಹಸ್ತ ಪರಹಸ್ತಗಳಿಂದ ವೃದ್ಧಿಮಾಡುವದಕ್ಕೆ ಅತುರಪಡುತ್ತಿರುವಂತೆ ಕಾಣುತ್ತಿದೆ. ಈ ನಮ್ಮ ಇಚ್ಛೆಯು ಜಗದೀಶನ ಕೃಪೆಯಿಂದಲು, ಮಹನೀಯರ ಕರಾವಲಂಬನದಿಂದಲು ನೆರವೇರಿ, ನಮ್ಮಪ್ರಾಂತವು ದಿನೇದಿನೇ ಪ್ರತಿಯೊಂದು ವಿಷಯದಲ್ಲಿಯು ಪ್ರವೃದ್ಧಿಯನ್ನೈದುವದೆಂದು ನಾವುನಂಬಿರುತ್ತೇವೆ

# ಮೊದಲನೇ ವೀರಶೈವ ಮಹಿಳಾ ಪರಿಷತ್ತು,

## ಬಳ್ಳಾರಿ.

ಮಹಾಸಭಾ ಮಂಟಪದಲ್ಲೇ ಈ ಮಹಿಳಾಪರಿಷತ್ತು ಕೂಡುವಂತೆ ಏರ್ಪಾಟು ಮಾಡಿದ್ದಿತು. ಈ ನೂತನ ಪರಿಷತ್ತಿಗೆ ಮಧ್ಯಾಹ್ನ ೧ ಗಂಟೆ ಯೊಳಗಾಗಿ ಸ್ಥಲ ಪರಸ್ಥಲದ ವೀರಶೈವ ಸ್ತ್ರೀಮಂಡಲವು ೧೨೦೦ ವರೆಗೆ ಬಂದು ಸಭಾ ಮಂಟಪವ ನ್ನಲಂಕರಿಸಿದ್ದಿತು. ತಮ್ಮ ಬಿಡಾರದಿಂದ ಆಲಮೇಲ ದೇಶಾಯರ ಪತ್ನಿ ಶ್ರೀಮತಿ ನಾಗಮ್ಮನವರು, ವಾದ್ಯ ಘೋಷಗಳಾಗುತ್ತಿರಲು, ಸಭಾಮಂಟಪಕ್ಕೆ ಚಿತ್ತೈಸಿದರು. ಕೂಡಲೇ ಸ್ವಾಗತಕಮಿಟಿ ಅಧ್ಯಕ್ಷರಾದ ಶ್ರೀಮತಿ ಗಡಿಗಿ ರುದ್ರಮ್ಮನವರು, ಮರ್ಯಾದ ಪುರಸ್ಸರವಾಗಿ ಹಸ್ತಲಾಘವವ ನ್ನಿತ್ತು ಬರಮಾಡಿಕೊಂಡು ಉತ್ತಮಾಸನದಲ್ಲಿ ಮೂರ್ತಗೊಳಿಸಿದರು. ... *

### ೩೦-ನೇ ತೇದಿ ಮಧ್ಯಾಹ್ನ ೧ ಘಂಟೆಯಿಂದ, ೩ ಘಂಟೆ ವರೆಗು.

ಅನಂತರ ಸತ್ಕಾರಕಸಂಘದ ಅಧ್ಯಕ್ಷೆಯರಾದ ಶ್ರೀಮತಿ ಗಡಿಗಿ ರುದ್ರಮ್ಮನವರು ಈ ಕೆಳಗೆ ಕಂಡಂತೆ ಸ್ವಾಗತಪರ ಭಾಷಣವನ್ನು ಸರಸವಾಗಿ ಮಾಡಿದರು. ... *

### ವೀರಶೈವ ಮಹಿಳಾಪರಿಷತ್ತಿನ ಸತ್ಕಾರಕ ಸಂಘಾಧ್ಯಕ್ಷೆ ಯರು ಮಾಡಿದ ಭಾಷಣ.

ಈ ಸಭಾಮಂಟಪದಲ್ಲಿ ಕುಳಿತಿರುವ ಸಕಲ ವೀರಶೈವ ಧರ್ಮಾಭಿಮಾನಿಗಳಾದ ವನಿತಾಮಣಿಗಳೆ ? ಬಳ್ಳಾರಿ ಜಿಲ್ಲೆಯ ವೀರಶೈವ ಸ್ತ್ರೀಯರ ಪಕ್ಷದಿಂದಲೂ, ನನ್ನ ಪಕ್ಷ ದಿಂದಲೂ ಪ್ರೀತಿಪೂರ್ವಕವಾಗಿ ತಮ್ಮೆಲ್ಲರ ಉಪಕಾರವನ್ನು ಸ್ಮರಿಸಿ, ಅತ್ಯಂತ ವಿಶ್ವಾಸದಿಂದ ಸ್ವಾಗತವನ್ನು ಮಾಡುತ್ತೇನೆ:— ... ... ... *

೧. ತಾವೆಲ್ಲರೂ ಸ್ತ್ರೀಸಭಾ ಉತ್ತೇಜನಕ್ಕೋಸ್ಕರ ನಮ್ಮ ಸಮಾಜದ ಮೇಲಿನ ಪ್ರೀತಿಯಿಂದ ನಮ್ಮ ಆಮಂತ್ರಣವನ್ನು ಮನ್ನಿಸಿ, ಮಾರ್ಗಾಯಾಸಕ್ಕೂ ದ್ರವ್ಯದ ವೆಚ್ಚ ಕ್ಕೂ ಲಕ್ಷ್ಯಕೊಡದೆ ತಮ್ಮ ಬೆಲೆಯಿಲ್ಲದ ಸಮಯವನ್ನು ವೆಚ್ಚಮಾಡಿ, ಭರತಖಂಡದ ದೂರದೂರ ಪ್ರಾಂತಗಳಿಂದ ಈ ಸ್ಥಳಕ್ಕೆ ದಯಮಾಡಿಸಿರುವುದನ್ನು ನೋಡಿ, ನನಗೆ ಅಧಿ ಕಾನಂದವಾಗುತ್ತಿದೆ. ಯಾಕಂದರೆ;—ಇತರ ಪ್ರಾಂತಗಳಲ್ಲಿ ಕೆಲವು ವೀರಶೈವ ಸ್ತ್ರೀಯರು ವಿದ್ಯಾವತಿಯ ರಾಗಿಯೂ, ಅನೇಕ ಪ್ರಕಾರಗಳಿಂದ ಸುಧಾರಿಸಿದವರಾಗಿಯೂ ಇರುವರು. ಈ ಪ್ರಾಂತದವರಾದರೊ ವಿದ್ಯಾಗಂಧವು ಸ್ವಲ್ಪವಾದರೂ ಇಲ್ಲದೆ ತೀರ ಹೀನಸ್ಥಿತಿಯಲ್ಲಿರು ವರು. ಇದಲ್ಲದೆ ಸಭೆಯು ನೂತನವಾಗಿ ಅನೇಕರಿಗೆ ಸಂಶಯವನ್ನುಂಟುಮಾಡಿರುವುದು

ಹೀಗಿರುವ ನಾವು ಕೈಕೊಂಡ ಸ್ತ್ರೀಸಭೆಗೆ ಇಷ್ಟು ಜನಗಳು ಹೊರಟುಬಂದುದನ್ನು ನೋಡಿ ಯಾರಿಗಾದರೂ ಆಶ್ಚರ್ಯವಾಗದಿರದು. ... ... ... *

೨. ಇಂತಹ ಸ್ತ್ರೀಸಭೆಯು ಹುಟ್ಟುವುದಕ್ಕೆ ಮಹಾಸಭೆಯೇ ಮೂಲಕಾರಣವಾಗಿರುವುದು. ಈ ಪರಿಣಾಮವು ಹಿಂದಿನ ನಾಲ್ಕು ಸಭೆಗಳಿಂದಾದ ಸುಪ್ರಯೋಜನವೆಂದು ಹೇಳುವುದಕ್ಕಾವಸಂಶಯವೂ ಇಲ್ಲವು. ... ... ... ... *

೩. ಮಹಾಸಭಾ ಕಾರ್ಯನಿರ್ವಾಹಕ ಸಂಘದ ಪ್ರಮುಖರು, ಸ್ತ್ರೀಯರು ತಮಗೆ ಬೇಕಾಗುವ ವಿದ್ಯೆಯನ್ನು ಕಲಿತು ಸುಶಿಕ್ಷಿತರಾಗಬೇಕೆಂಬ ಸದುದ್ದೇಶದಿಂದ ಸ್ತ್ರೀಸಭೆಯು ಸಹಾ ಬಂದುದಿನ ನಡೆಯುವಂತೆ ಏರ್ಪಡಿಸಿರಲು, ಅದಕ್ಕೆ ಸಂತೋಷದಿಂದ ಮಹಾಸಭೆಯ ಪ್ರೆಸಿಡೆಂಟರಾಗಿರುವ ಶ್ರೀಮಂತ ರಾವುಸಾಹೇಬ್ ಮಲ್ಲಪ್ಪಣ್ಣಾ ವಾರದ ಇವರು ತುಂಬಾ ಪ್ರೋತ್ಸಾಹಮಾಡಿದುದಕ್ಕಾಗಿ ಅವರ ಉಪಕಾರವನ್ನು ನಾವೆಲ್ಲರೂ ಸ್ಮರಿಸಬೇಕಾಗಿದೆ.

೪. ನಾವು ಸಭೆಯಲ್ಲಿ ಚರ್ಚಿಸುವುದಕ್ಕೆಂದು ನಿಯಮಿಸಿರುವ (೧) ಪಾತಿವ್ರತ್ಯ ಮಹಾತ್ಮೆ, (೨) ದಂಪತಿಗಳು ಇರತಕ್ಕ ಬಗೆ, (೩) ಶಿಶುಸಂರಕ್ಷಣಾ ವಿಧಾನ, (೪) ಸ್ತ್ರೀ ವಿದ್ಯಾಭ್ಯಾಸ ಕರ್ತವ್ಯ, ಈ ನಾಲ್ಕು ವಿಷಯಗಳು ಅತ್ಯಂತ ಮಹತ್ವವುಳ್ಳವುಗಳಾದಕಾರಣ ಆ ವಿಷಯಗಳನ್ನು ಚರ್ಚಿಸಿ ಅದಷ್ಟುಮಟ್ಟಿಗೆ ನಮ್ಮ ಸಮಾಜದಲ್ಲಿ ಆಚರಣೆಯಲ್ಲಿ ಬರುವಂತೆ ಮಾಡಬೇಕೆಂದು ಕೋರುತ್ತೇನೆ. ... ... ... ... *

೫. ನಾವು ಮಾಡುವ ಆದರೋಪಚಾರಗಳಲ್ಲಿ ಏನಾದರೂ ಕುಂದುಕೊರತೆಗಳು ಕಂಡುಬಂದರೂ ಲಕ್ಷ್ಯದಲ್ಲಿ ತಾರದೆ ಸಮಾಜಸುಧಾರಣೆಯಲ್ಲಿ ಮನವನ್ನು ಕೊಟ್ಟು ಕೀರ್ತಿವಂತರಾಗಬೇಕೆಂದು ಪ್ರಾರ್ಥಿಸುತ್ತೇವೆ. ... ... ... ... *

೬. ಇಂತಹ ಸಭೆಗಳು ಕೂಡುವುದಕ್ಕೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವ ಇಂಗ್ಲೀಷ್ ಸಾರ್ವಭೌಮರ ರಾಜ್ಯಪರಿಪಾಲನೆಯು ಭರತಖಂಡದಲ್ಲಿ ಚಿರಕಾಲವಿರುವಂತೆಯೂ ಮತ್ತೂ ಈಗಿನ ಏಳನೇ ಚಕ್ರವರ್ತಿ ದಂಪತಿಗಳಿಗೆ ದೀರ್ಘಾಯುಷ್ಯವನ್ನು ಕೊಡುವಂತೆಯೂ ಆಶೀರ್ವದಿಸಬೇಕೆಂದು ನಾವೆಲ್ಲರೂ ಶ್ರೀ ಪರಶಿವನನ್ನು ಕುರಿತು ನಿರ್ಮಲ ಚಿತ್ತದಿಂದ ಬೇಡಿಕೊಳ್ಳತಕ್ಕದು. ... ... ... ... *

೭. ಪ್ರಿಯ ಸಹೋದರಿಯರೆ? ನನ್ನ ಭಾಷಣವನ್ನು ಸಾವಧಾನ ಮನಸ್ಸಿನಿಂದ ಇಷ್ಟುಹೊತ್ತು ಕೇಳಿದುದಕ್ಕಾಗಿ, ತಮ್ಮೆಲ್ಲರ ಉಪಕಾರವನ್ನು ಮತ್ತೊಮ್ಮೆ ಸ್ಮರಿಸಿ, ಇನ್ನು ಮೇಲೆ ಅಧ್ಯಕ್ಷೆಯರನ್ನು ನಿಯಮಿಸಿಕೊಂಡು ಮುಂದಿನ ಕೆಲಸವನ್ನು ಸಾಂಗವಾಗಿ ನಡೆಯಿಸಬೇಕೆಂದು ಬೇಡುತ್ತೇನೆ. ಮತ್ತೂ ನಮ್ಮ ಕೆಲಸಕ್ಕೆ ಕೀರ್ತಿಯನ್ನು ಕೊಡಲೆಂದು ಜಗತ್ತಿನ ತಾಯಿತಂದೆಗಳಾದ ಪಾರ್ವತೀಪರಮೇಶ್ವರರನ್ನು ಪ್ರಾರ್ಥಿಸಿ, ತಮ್ಮೆಲ್ಲರ ಅಪ್ಪಣೆಯನ್ನು ಪಡೆದು ಕುಳಿತುಕೊಳ್ಳುತ್ತೇನೆ. ... ... ...

ಬಳಿಕ ಅಲವೋಲ ದೇಶಾಯರ ಧರ್ಮಪತ್ನಿ ಶ್ರೀಮಂತ ನಾಗಮ್ಮನವರ ಯೋಗ್ಯತೆಯನ್ನು ಪ್ರಶಂಸಿಸಿ, ಅವರಿಗೆ ಈ ಸಭೆಯ ಅಧ್ಯಕ್ಷತೆಯನ್ನು ವಹಿಸಬೇಕೆಂದು ಮೈಸೂರಿನ ಶ್ರೀಮತಿ ಬಸಮ್ಮನವರು ಸೂಚನೆ ಕೊಟ್ಟರು. ... ... *

ಶಿಂದಗಿ ಗವಿಯಪ್ಪನವರ ಪತ್ನಿ, ಶ್ರೀಮತಿ ಕರಿಬಸವಮ್ಮನವರು ಅದಕ್ಕೆ ಅನುಮೋದನಕೊಟ್ಟರು. ಬಳಿಕ ಸಭಿಕರ ಕರತಾಡನವಾಗುವಾಗ ಅಧ್ಯಕ್ಷೆಯರು ಉನ್ನತಾಸನವನ್ನಲಂಕರಿಸಿದರು. ತಕ್ಷಣವೇ ಶ್ರೀಮತಿ ಗಡಿಗಿ ರುದ್ರಮ್ಮನವರು ಪುಷ್ಪಹಾರದಿಂದ ಆಸನಾಧಿಪತಿಗಳನ್ನಲಂಕರಿಸಿದರು. ಸ್ತ್ರೀಬೃಂದದ ಕರಾರಾವಗಳು ಭೋರ್ಗರೆದವು.

ಅನಂತರ ಸುರಸವಾಣಿಯಿಂದ ಅಧ್ಯಕ್ಷೆಯರು ಈ ಕೆಳಗೆ ಕಂಡಂತೆ ಗಂಭೀರ ಭಾಷಣ ಮಾಡಿದರು. ... ... ... ... *

## ವೀರಶೈವ ಮಹಿಳಾ ಪರಿಷತ್ತಿನಲ್ಲಿ ಸಭಾಧ್ಯಕ್ಷೆಯರು ಮಾಡಿದ ಭಾಷಣವು.

ಶ್ರೀಮತಿ ರುದ್ರಮ್ಮನವರೇ? ಮತ್ತೂ ಭಗಿನಿಯರೇ?

ಈ ಸಭೆಯ ಅಧ್ಯಕ್ಷಳೆಂದು ಭಾಷಣಮಾಡುವ ಪೂರ್ವದಲ್ಲಿ ಕೆಲವು ಸಂಗತಿಗಳನ್ನು ತಮಗೆ ತಿಳಿಸುವುದು ಅವಶ್ಯಕವೆಂದು ಕಂಡುಬಂದಕಾರಣ ಅವುಗಳನ್ನು ಸ್ವಲ್ಪದರಲ್ಲಿ ಹೇಳುತ್ತೇನೆ. ... ... ... ... *

ಈ ನಮ್ಮ ಮೊದಲನೇ ವೀರಶೈವ ಮಹಿಳಾಪರಿಷತ್ತಿನ (ಸ್ತ್ರೀಸಭೆಯ) ಅಧ್ಯಕ್ಷಸ್ಥಾನವನ್ನು ಸ್ವೀಕರಿಸುವುದು ಮಹತ್ತರವಾದ ಕೆಲಸವು. ನಮ್ಮ ಸಮಾಜದೊಳಗೆ ನನಗಿಂತಲೂ ಹೆಚ್ಚಿಗೆ ಶಿಕ್ಷಣ ಪೊಂದಿದ-ಹೆಚ್ಚು ವಯಸ್ಸಿನ-ಹೆಚ್ಚು ಅನುಭವದ-ಭಗಿನಿಯರು, ಈ ಕೆಲಸದ ಭಾರವನ್ನು ವಹಿಸಿದ್ದರೆ ಅವರಿಂದ ಸಮಾಜದಸೇವೆಯು ಉತ್ತಮರೀತಿಯಿಂದ ಆಗುತ್ತಿತ್ತು. ಯಾಕಂದರೆ ಈಗ ಈ ಸಭೆಯ ಬೀಜಾರೋಪಣವು ಆಗತಕ್ಕದ್ದಾಗಿದೆ. ಮೊದಲನೇ ವೀರಶೈವ ಮಹಾಸಭೆಗೆ ಕೈಲಾಸವಾಸಿ ಶ್ರೀಮಂತ ಸರದೇಸಾಯರಂಥ ಅಧ್ಯಕ್ಷರು ದೊರೆತು ಮೊದಲನೇ ವೀರಶೈವ ಮಹಿಲಾಪರಿಷತ್ತಿಗೆ ಮಾತ್ರ ನನ್ನನ್ನು ಆರಿಸಿದ್ದನ್ನು ನೋಡಿ ತುಸು ಆಶ್ಚರ್ಯವಾಗುತ್ತದೆ. ವೀರಶೈವರಲ್ಲಿಯ ಸ್ತ್ರೀಯರ ನಿಜವಾದಯೋಗ್ಯತೆಯು ನನ್ನನ್ನು ಈ ಸಭೆಯ ಅಧ್ಯಕ್ಷಸ್ಥಾನಕ್ಕೆ ನಿಯಮ ಮಾಡಿದ್ದರಮೇಲಿಂದ ನಮ್ಮ ಬಂಧುವರ್ಗಕ್ಕೆ ಚೆನ್ನಾಗಿ ತಿಳಿದಿರುತ್ತದೆ. ಆದರೂ ನಮ್ಮ ಬಳ್ಳಾರಿಯ ಭಗಿನಿಯರು ನನಗೆ ಈ ಗೌರವವನ್ನು ಕೊಟ್ಟದ್ದಕ್ಕಾಗಿ ಅವರ ಉಪಕಾರವನ್ನು ಬಹಳವಾಗಿ ನೆನೆದು ಸಭೆಯ ಕೆಲಸವನ್ನು ಆರಂಭಮಾಡುತ್ತೇನೆ. ... ... ... *

ನಮ್ಮ ಮುಖ್ಯ ವಿಷಯವನ್ನು ಕೈಕೊಳ್ಳುವ ಪೂರ್ವದಲ್ಲಿ ಈ ಸಭೆಯನ್ನು ಕೂಡಿಸಲಿಕ್ಕೆ ಕಾರಣವಾದ ನಮ್ಮ ವೀರಶೈವರಲ್ಲಿಯ ಜಾಗ್ರುತೆಯ ವಿಷಯವಾಗಿ ಹೇಳುವುದು ಅವಶ್ಯವೆಂದು ಕಂಡುಬಂದಕಾರಣ ಸ್ವಲ್ಪದರಲ್ಲಿ ಹೇಳುತ್ತೇನೆ. ... *

ನಮ್ಮ ವೀರಶೈವರಲ್ಲಿ ಜಾಗ್ರುತೆಯ ಚಿಹ್ನೆಗಳು ತೋರಹತ್ತಿ ಇಂದಿಗೆ ಸುಮಾರು ೩೫ ವರ್ಷಗಳಾದುವು. ಧಾರವಾಡ ವಿದ್ಯಾವರ್ಧಕ ಫಂಡು, ಈ ಜಾಗ್ರುತೆಯ ಮೊದಲನೇ ಚಿಹ್ನವು. ರಾವಬಹದ್ದೂರ ಗಿಲಗಂಚಿಸಾಹೇಬರು ಮತ್ತು ರಾವಬಹದ್ದೂರ ಅರಟಾಳಸಾಹೇಬರ ಪ್ರಯತ್ನದಿಂದಲೇ ನಾವು ಈ ಸುದಿನವನ್ನು ನೋಡಿದೆವು. ಈ ಜಾಗ್ರುತೆಯು ಆ ವೇಳೆಗೆ ಆಗದಿದ್ದರೆ ಇನ್ನು ಎಷ್ಟು ವರ್ಷಗಳು ನಮ್ಮ ಈ ಸಭೆಗೆ ಹತ್ತುತ್ತಿದ್ದವೊ ದೇವರೇಬಲ್ಲ. ಈ ಜಾಗ್ರುತೆಯಾದನಂತರ ೨೦ ವರ್ಷಗಳಮೇಲೆ ನಮ್ಮ ಬಾಂಧವರಿಗೆ ಇಷ್ಟರಿಂದಲೇ ಇಷ್ಟಸಿದ್ಧಿಯಾಗದೆಂದು ತಿಳಿದು ಮಹಾಸಭೆಯನ್ನು ಕೂಡಿಸುವ ವಿಚಾರವು ಮನಸ್ಸಿನಲ್ಲಿ ಬಂತು. ಇದರ ಯಾವತ್ತೂ ಶ್ರೇಯಸ್ಸು, ಶ್ರೀ ಹಾನಗಲ್ಲ ಮಹಾಸ್ವಾಮಿಗಳಿಗೂ, ಕೈಲಾಸವಾಸಿ ಶ್ರೀಮಂತ ಸಿರಸಂಗಿ ಸರದೇಶಾಯರಿಗೂ, ಮತ್ತು ರಾವಬಹದ್ದೂರ ಅರಟಾಳ ಸಾಹೇಬರಿಗೂ ಇರುತ್ತದೆ. ಬಾಗಲಕೋಟೆಯಲ್ಲಿ ಕೂಡಿದ ನಾಲ್ಕನೇ ಮಹಾಸಭೆಯಲ್ಲಿ ಶಿವಯೋಗಮಂದಿರದ ವಿಷಯವಾಗಿ ಚರ್ಚೆನಡೆದು ಶ್ರೀ ಹಾನಗಲ್ಲ ಮಹಾಸ್ವಾಮಿಗಳವರಿಂದ ಧರ್ಮಜಾಗ್ರುತೆಗೆ ಅವಶ್ಯವಾದ ಶಿವಯೋಗಮಂದಿರವು ಸ್ಥಾಪಿಸಲ್ಪಟ್ಟಿತು. ಇದಾದ ಬಂದು ವರ್ಷದನಂತರ ಈ ೫ನೇ ಮಹಾಸಭೆಗೆ ವೀರಶೈವ ಮಹಿಲಾಪರಿಷತ್ತನ್ನು ಜೋಡಿಸುವ ಯೋಜನೆಯು ಆಯಿತು. ಪ್ರಿಯಭಗಿನಿಯರೆ! ಇಷ್ಟರಲ್ಲಿಯೇ ನಮ್ಮಬಂಧುಗಳಿಗೆ ನಮ್ಮ ಸಹಾನುಭೂತಿ ಮತ್ತು ಸಹಾಯವು ಅವಶ್ಯವೆಂದು ತೋರಿದ್ದು ನಮ್ಮ ವರ್ಗಕ್ಕೆ ಬಹು ಆನಂದದ ಮಾತಾಗಿದೆ. ಇಲ್ಲದಿದ್ದರೆ ನಮ್ಮ ಅಜ್ಞಾನಸ್ಥಿತಿಯು ಇನ್ನು ಎಷ್ಟುತಲೆಗಳವರೆಗೆ ಇರುತ್ತಿತ್ತೊ ನಾವರಿಯೆವು. ನಾವೆಲ್ಲರೂ ಈದಿನ ಈ ಸಭಾಮಂಟಪದಲ್ಲಿ ಕೂಡಿರುವೆವು. ಇದು ನಮ್ಮ ವೀರಶೈವರ ಇತಿಹಾಸದಲ್ಲಿ ಅತಿ ಮಹತ್ತರವಾದ ಸಂಗತಿಯಾಗಿದ್ದು ತಲಾಂತರಗಳವರೆಗೆ ಚಿರಸ್ಮರಣೀಯವಾಗಿ ನಿಲ್ಲುವುದೆಂದು ನನ್ನ ಪೂರ್ಣ ನಂಬುಗೆಯುಂಟು. ಈ ತರದ ಸಭೆಗಳನ್ನು ಶ್ರೀ ಬಸವೇಶ್ವರರ ಕಾಲಕ್ಕೆ ಅಕ್ಕನಾಗಮ್ಮನವರು ಮತ್ತು ಅಕ್ಕನೀಲಮ್ಮನವರು ಕೂಡಿಸಿ, ಸಮಾಜಸುಧಾರಣೆಯ ಕೆಲಸವನ್ನು ಕೈಕೊಂಡಿದ್ದರೆಂದು ಇತಿಹಾಸದಿಂದ ಕಂಡುಬರುತ್ತದೆ. ಇದರಮೇಲಿಂದ ಸಮಾಜದಲ್ಲಿ ಆ ಕಾಲಕ್ಕೆ ಸ್ತ್ರೀಯರ ಯೋಗ್ಯತೆಯು ಹೆಚ್ಚಾಗಿತ್ತೆಂದು ತಿಳಿಯುತ್ತದೆ. ಆದರೆ ಈಗ ನಿಜವಾದ ನಮ್ಮ ಯೋಗ್ಯತೆಯನ್ನು ನೋಡಿರಿ. ಈ ಮೊದಲು ಸಭಾಯೆಂಬ ಶಬ್ದವೇ ನಮಗೆ ಗೊತ್ತಿದ್ದಿಲ್ಲ. ಜಾತ್ರೆನಿಬ್ಬಣಗಳ ಆಚೆಗೆ ನಮ್ಮ ವಿಚಾರವೇ ಇಲ್ಲ. ಮನೆಯ ನಾಲ್ಕುಗೋಡೆಗಳ ಹೊರಗಿನ ಕೆಲಸಕ್ಕೆ ನಾವು ಕುರುಡರು. ಮೂರು ನಾಲ್ಕು ವರ್ಷಗಳ ಮಕ್ಕಳ ಲಗ್ನವನ್ನು ಆಗ್ರಹದಿಂದ ಮಾಡುವವರು ನಾವು. ಹೆಣ್ಣುಮಕ್ಕಳಿಗೆ ಶಾಲೆಗೆ ಕಳಿಸದೆ ಇರುವ ಹಕ್ಕು ನಮ್ಮದು. ನೋಡಿರಿ ನಮ್ಮ

ಪಲಿನಸ್ಥಿತಿಗೂ ಈಗಿನಸ್ಥಿತಿಗೂ ಎಷ್ಟುಭೇದವಾಗಿರುವುದು ? ... *

ಇಷ್ಟು ಪರಿಶ್ರಮದಿಂದ ಕೂಡಿಸಿರುವ ಈ ನಮ್ಮ ಸಭೆಯಿಂದ ಸಮಾಜದ ಸೇವೆಯು ಎಷ್ಟರಮಟ್ಟಿಗೆ ಆಗುವಂತೆ ಅದೆ ಎಂಬುದನ್ನು ವಿಚಾರಮಾಡುವ;—ಸ್ತ್ರೀಪುರುಷರ ಯೋಗ್ಯತೆಯು ಮತ್ತೂ ಕರ್ತವ್ಯಕರ್ಮವು ಸಮಾಜದಲ್ಲಿ ಸಮನಾಗಿರುವವೋ, ಅಥವಾ ಹೆಚ್ಚುಕಡಿಮೆ ಇರುವವೊ ನೋಡುವ—ಸ್ತ್ರೀಯರಿಗೆ ಗೃಹಿಣಿ, ಅರ್ಧಾಂಗಿ ಎಂಬ ಹೆಸರುಗಳು ಲಗ್ನವಾದಮೇಲೆ ಬರುವುವು. ಅರ್ಧಾಂಗಿ ಎಂದರೆ ಪತಿಯ ಅರ್ಧಶರೀರವು. ಎಂದರೆ ಅರ್ಧ ಕೆಲಸವು ಸ್ತ್ರೀಯರದೆಂದು ಹಂಚಿದಂತಾಯಿತು. ಆದ್ದರಿಂದಲೇ ಮಹಾಸಭೆಯ ಚಾಲಕರಿಗೆ ಈ ಸಭೆಯ ಆವಶ್ಯಕತೆಯು ಕಂಡುಬಂದದ್ದು ಆಶ್ಚರ್ಯವಲ್ಲ. ಈ ಅರ್ಧ ಕೆಲಸದ ಭಾರವನ್ನು ನಮಗೆ ವಹಿಸುವ ಯೋಗ್ಯತೆಯು ಸದ್ಯಕ್ಕೆ ಇಲ್ಲದಿದ್ದರೂ ಕ್ರಮಕ್ರಮವಾಗಿ ತಂದುಕೊಳ್ಳಲಿಕ್ಕೆ ಪ್ರಯತ್ನ ನಡಿಸಬೇಕು. ... ... *

ಸ್ತ್ರೀಯರು ಹುಟ್ಟಿದಂದಿನಿಂದ ೩ ತರದ ಅವಸ್ಥೆಯಲ್ಲಿ ಅಂದರೆ ಮಗಳು, ಹೇಂಡತಿ ತಾಯಿ, ಎಂಬ ಸ್ಥಿತಿಗಳಲ್ಲಿ ಇರಬೇಕಾಗುತ್ತದೆ. ಈ ಮೂರು ಅವಸ್ಥೆಗಳಲ್ಲಿ ನಾವು ಏನು ಮಾಡತಕ್ಕದು ? ಎಂಬ ಬಗ್ಗೆ ವಿಚಾರಮಾಡುವ;—ಮಗಳು ಎಂಬ ಅವಸ್ಥೆಯು ನಮ್ಮ ಈಸಂಸಾರಯಾತ್ರೆಗೆ ತಕ್ಕವರನ್ನಾಗಿ ಮಾಡುವ ಶಾಲೆಯು, ಸಂಸಾರ ಸುಖಕರವಾಗಬೇಕಾದರೆ ಈ ಕಾಲದಲ್ಲಿ ನಾವು ವಿದ್ಯೆಕಲಿತು, ಮುಂದಿನ ನಮ್ಮ ಜವಾಬದಾರಿಯ ಕೆಲಸಕ್ಕೆ ತಕ್ಕವರಾಗಬೇಕಾಗುತ್ತದೆ. ನಮಗೆ ಚೆನ್ನಾಗಿ ಶಿಕ್ಷಣ ಸಿಗಬೇಕಾದರೆ ನಮ್ಮಲ್ಲಿಯ ಲಗ್ನದ ವಯಸ್ಸಿನ ತರಗತಿಯನ್ನು ಬೆಳಸಬೇಕಾಗುತ್ತದೆ. ಚಿಕ್ಕಂದಿನಲ್ಲಿ ಲಗ್ನವಾಗಿ ಹತ್ತು ಹನ್ನೆರಡು ವರ್ಷಗಳ ಒಳಗಾಗಿಯೇ ಹೆಣ್ಣುಮಕ್ಕಳಿಗೆ ತವರಮನೆ ಬಿಡುವಪ್ರಸಂಗ ಬರುವುದರಿಂದ ಶಿಕ್ಷಣಕ್ಕೆ ಅವಕಾಶ ಸಿಗುವುದಿಲ್ಲ. ಈ ವಿಷಯಕ್ಕೆ ಪುರಾತನ ಕಾಲದ ರೂಢಿಯನ್ನು ನೋಡಿದರೆ ನಮ್ಮ ಪೂರ್ವಜರಲ್ಲಿ ಪ್ರಾಫ್ರವಿವಾಹವು, ಸ್ವಯಂವರವು ರೂಢಿಯಲ್ಲಿದ್ದವೆಂದು ಪುರಾಣ ಮೊದಲಾದ ಗ್ರಂಥಗಳಿಂದ ತಿಳಿಯಬರುತ್ತಿದೆ. ಈ ಪದ್ಧತಿಯು ಏನು ಕಾರಣಗಳ ಮೂಲಕ ನಿಂತುಹೋಗಿ ಸಮಾಜವನ್ನು ಕೆಟ್ಟಸ್ಥಿತಿಗೆ ತರುವ ಬಾಲವಿವಾಹ ಪದ್ಧತಿಯು ನಮ್ಮಲ್ಲಿ ಸೇರಿರುತ್ತದೆ; ಈ ರೂಢಿಯು ಬೆಳೆಯುತ್ತ ಬೆಳೆಯುತ್ತ ತೊಟ್ಟಲಿಗೆ ಬಾಸಿಂಗ ಕಟ್ಟುವವರೆಗೆ ಹೋಗಿರುತ್ತದೆ. ಈ ಕೆಟ್ಟಪದ್ಧತಿಯನ್ನು ನಾವು ಆದಷ್ಟು ತೀವ್ರಮುರಿಯಬೇಕು. ಆಮೇಲೆ ನಮ್ಮ ಇಷ್ಟಕಾರ್ಯವು ಅಂದರೆ ಯೋಗ್ಯಶಿಕ್ಷಣ ಸಿಗುವ ಉಪಾಯವು ಸಾಧ್ಯವಾಗುವದು. ನಮ್ಮ ಜನರಲ್ಲಿ ಶಿಕ್ಷಣದ ಉದ್ದೇಶವೇ ಬಂದು ತೆರನಾಗಿರುವುದು. ನಾವು ಗಂಡುಹುಡುಗರನ್ನು ಶಾಲೆಗೆ ಕಳಿಸುವುದರಲ್ಲಿ ಅವರುಮುಂದೆ ಸರಕಾರಿ ಅಧಿಕಾರಸ್ಥರು ವಕೀಲರು, ಅಥವಾ ಕಾರಕೂನರು ಆಗಬೇಕೆಂದು ಇಚ್ಛೆ ಇರುತ್ತದೆ. ಆದ್ದರಿಂದಲೇ ಸ್ತ್ರೀ ಶಿಕ್ಷಣದ ವಿಷಯವಾಗಿ ಜನರ ಉದ್ಗಾರವು ,, ಇವರು ಕಲಿತು ಕಾರಕೂನರು ಅಥವ ವಕೀ

ಲರು ಆಗುವರೊ? ,, ಅಂತ ಇರುತ್ತದೆ. ನಮ್ಮಲ್ಲಿ ಶಿಕ್ಷಣ ಕೊಡುವುದರ ತಿಳುವಳಿಕೆಯೇ ಮೊದಲು ತಪ್ಪಿ ಇರುತ್ತದೆ. ... ... ... *

ನಾನು ಶಾಲೆಗೆ ಹೋಗುವ ಕಾಲಕ್ಕೆ ಮದ್ರಾಸಿನಂಥ ದೊಡ್ಡ ಪಟ್ಟಣದಲ್ಲಿ ಹಿಂದು ಹುಡುಗಿಯರಿಗೆ ಸಾಕಷ್ಟು ಶಾಲೆಗಳು ಇದ್ದಿಲ್ಲ. ಆದ್ದರಿಂದ ನನಗೆ ಸ್ವತಃ ಮಿಷನರಿ ಶಾಲೆಯಲ್ಲಿ ಕಲಿಯಬೇಕಾಯಿತು. ನೋಡಿರಿ ಕ್ರಿಶ್ಚಿಯನ್ ಮಿಷನರಿಗಳು ಸ್ತ್ರೀಶಿಕ್ಷಣದ ವಿಷಯದಲ್ಲಿ ಎಷ್ಟು ಶ್ರಮ ಬಡುತ್ತಿರುವರು! ಈ ವಿಷಯಕ್ಕೆ ಅವರ ಮಾರ್ಗದರ್ಶಕ ಕೆಲಸದ ಸಲುವಾಗಿ ನಾವು ತುಂಬಾ ಅವರ ಆಭಾರಿಯಾಗಿದ್ದೇವೆ. ಆದರೆ ಆ ಶಾಲೆಗಳಲ್ಲಿಯ ಶಿಕ್ಷಣವು ಅವರವರ ಧರ್ಮಗಳನ್ನು ಅವರಿಗೆ ಕಲಿಸದೆ ಕ್ರಿಶ್ಚಿಯನ್ ಧರ್ಮವನ್ನು ಮಾತ್ರ ಉಪದೇಶಿಸುವುದರಿಂದ ಅದು ನಮ್ಮ ಧರ್ಮದ ಉನ್ನತಿಗೆ ಅಹಿತಕಾರಕವು. ... *

ಇದನ್ನು ವಿಚಾರಮಾಡಿ ಅಲ್ಲಿಯ ಪ್ರಮುಖ ಜನರು ಈಗ್ಯೆ ಕೇವಲ ಹಿಂದು ಹುಡುಗಿಯರ ಸಲುವಾಗಿ ಕೆಲವು ಶಾಲೆಗಳನ್ನು ತೆಗೆದಿರುವರು. ನಮ್ಮ ಯಾವತ್ತು ವೀರಶೈವ ಬಾಲಕಿಯರ ಪ್ರಾಥಮಿಕ ಶಿಕ್ಷಣವು ಮುಗಿದ ಬಳಿಕ ಹೆಚ್ಚಿನ ಶಿಕ್ಷಣಕ್ಕಾಗಿ ಒಂದು ಶಾಲೆಯು ಅವಶ್ಯವಾಗಿಬೇಕು. ಅಲ್ಲಿಯ ಶಿಕ್ಷಣವು ಕೇವಲ ಭಾಷೆಯನ್ನಷ್ಟೇ ಕಲಿಸದೆ ಅವರ ಮುಂದಿನ ಆಯುಷ್ಯಕ್ರಮದಲ್ಲಿ ಬೇಕಾಗುವ ಎಲ್ಲತರದ ಜ್ಞಾನವು ಅಂದರೆ ಬಾಲಸಂಗೋಪನ, ಗೃಹವ್ಯವಸ್ಥೆ, ಆರೋಗ್ಯಶಾಸ್ತ್ರ, ವೈದ್ಯಶಾಸ್ತ್ರ, ಮುಂತಾದವುಗಳ ಜ್ಞಾನವು ಅವರಿಗೆ ಸಿಕ್ಕುವಂತೆ ಇರಬೇಕು. ಈ ವಿಷಯಕ್ಕೆ ಕೇವಲ ನಮ್ಮಿಂದ ಏನೂ ಆಗುವಂತಿಲ್ಲ. ಆದುದರಿಂದ ನಮ್ಮ ಬಂಧುಗಳು ಈ ವಿಷಯವನ್ನು ವಿಚಾರಮಾಡಿ ಏನಾದರೂ ವ್ಯವಸ್ಥೆ ಮಾಡುವರೆಂದೂ ಶ್ರೀಮಂತ ಶಿರಸಂಗಿ ಸರದೇಶಾಯರ ಫಂಡಿನಲ್ಲಿಯ ಕೆಲವು ಹಣವನ್ನು ಸ್ತ್ರೀಶಿಕ್ಷಣಕ್ಕೆ ಅವರ ಮೃತ್ಯುಪತ್ರದ ಮೇರೆ ಉಪಯೋಗಿಸಲಿಕ್ಕೆ ಬರುವಂತೆ ಇದ್ದರೆ ವಿಚಾರಮಾಡಬೇಕೆಂದೂ ವೀರಶೈವ ಸ್ತ್ರೀವರ್ಗದ ವತಿಯಿಂದ ನನ್ನ ವಿನಂತಿಯುಂಟು. ಯಾಕೆಂದರೆ— ನಮ್ಮ ವೈಸ್ರಾಯರ ಪತ್ನಿಯರಾದ ಮಿಂಟೋ ದೊರೆಸಾನಿಯವರು ಒಂದುಕಡೆಯಲ್ಲಿ ಸ್ತ್ರೀಶಿಕ್ಷಣದ ವಿಷಯವಾಗಿ ಮಾಡಿದ ಭಾಷಣದಲ್ಲಿ ಹೆನರಿ ಲುರ್ಡರವರ ಒಂದುವಾಕ್ಯವು ಬಹಳ ಮಹತ್ವದ್ದಿದ್ದ ಕಾರಣ ಅದನ್ನು ಇಲ್ಲಿ ಹೇಳುತ್ತೇನೆ;— " By female education a far greater proportional influence is imparted to the educational and moral tone of the people than by the education of men." ಅಂದರೆ ಪುರುಷ ಶಿಕ್ಷಣಕ್ಕಿಂತ ಸ್ತ್ರೀಶಿಕ್ಷಣದಿಂದ ಜನರ ನೀತಿಯ ಮತ್ತೂ ವಿದ್ಯೆಯಮೇಲೆ ಹೆಚ್ಚು ಪ್ರಮಾಣದಿಂದ ಪರಿಣಾಮವು ಆಗುತ್ತಿದೆ. ... ... ... *

ಈ ಕಾಲಕ್ಕೆ ನಮ್ಮ ಲೋಕಪ್ರಿಯ ಭಗಿನಿಯರಾದ ಕೈಲಾಸವಾಸಿ ಶ್ರೀಮತಿ ವಾರದ ಬಸವಮ್ಮನವರು ಇದ್ದರೆ ಅವರಿಂದ ಈ ಕೆಲಸಕ್ಕೆ ಬಹಳ ಸಹಾಯವಾಗುತ್ತಿತ್ತು. ಆದರೆ

ಅವರ ಅಕಾಲಮರಣದಿಂದ ನಮ್ಮ ವರ್ಗಕ್ಕೆ ಬಹಳ ಹಾನಿಯಾಗಿದೆಯೆಂದು ತಿಳಿಸಲಿಕ್ಕೆ ನನ
ಗೆ ಬಹಳ ದುಃಖವೆನಿಸುತ್ತದೆ. ... ... ... *

ಇನ್ನು ನಮ್ಮ ೬-ನೆಯ ಅವಸ್ಥೆ ಬಗ್ಗೆ ವಿಚಾರಮಾಡುವ;—ಬಾಲಬಾಲಿಕೆಯರ ವಿವಾಹವು ಕೇವಲ ಹಿರಿಯರ ವಿಚಾರದಿಂದ ಆಗುವಕಾರಣ, ಕೆಲವುವೇಳೆ ಆ ಜೋಡಿಯಲ್ಲಿ ಪರಸ್ಪರ ಸಹಾಯ ಮತ್ತು ಪ್ರೀತಿಯ ಕೊರತೆಯು ಕಂಡುಬರುತ್ತದೆ. ಅಂದಮೇಲೆ ಅವರ ಸಂಸಾರವು ಕಷ್ಟಮಯವಾಗುವುದು ಸಹಜವು. ಈ ಮಹತ್ವವಾದ ಕೆಲಸವನ್ನು ಸಂಪೂರ್ಣವಾಗಿ ತಾಯಿತಂದೆಗಳಿಗೆ ಅಥವಾ ಬಾಲಬಾಲಿಕೆಯರಿಗೆ ವಹಿಸದೆ, ಅವರಲ್ಲಿ ಉಭಯತರ ಅನುಮೋದನವು ಅವಶ್ಯವಾಗಿರುವಂತೆ ಮಾಡುವುದು ಉತ್ತಮವು. ನಮ್ಮ ಪವಿತ್ರವಾದ ಲಗ್ನಕ್ಕೆ ವ್ಯಾಪಾರದ ಸ್ವರೂಪವು ಬಂದಿರುತ್ತದೆ. ಈಗ ಬಡವರು ದುಡ್ಡಿನ ಆಸೆಯಿಂದ ಎಂಥವನಿಗಾದರೂ ಐವತ್ತೈವತ್ತು ಮುದುಕನಿಗೂ ಸಹ ತಮ್ಮ ಎಳೆಯ ಕಂದಮ್ಮನನ್ನು ಕಟುಕನಿಗೆ ಕುರಿಯನ್ನು ಮಾರಿದಂತೆ ಮಾರಿಬಿಡುತ್ತಾರೆ. ಶ್ರೀಮಂತರುಸಹ ದುಡ್ಡಿಗಾಗಿ ಗತಿಗೆಟ್ಟು ಕನ್ಯೆಯ ಗುಣಗಳನ್ನೂ ಯೋಗ್ಯತೆಯನ್ನೂ ವಿಚಾರಮಾಡದೆ ವರದಕ್ಷಿಣೆ ಹೆಚ್ಚುಕೊಡುವ ಸ್ಥಲವನ್ನು ನೋಡುತ್ತಾರೆ. ಉಳಿದ ಎಲ್ಲ ವಿಷಯಗಳೂ ಮನಸ್ಸಿಗೆ ಬಂದರೂ ವರದಕ್ಷಿಣೆಯ ಹಣದಲ್ಲಿ ಹೆಚ್ಚುಕಡಿಮೆ ಬಂದರೆ ಲಗ್ನವನ್ನು ಮುರಿಯುತ್ತಾರೆ. ಈ ತರದ ವರದಕ್ಷಿಣೆಯು ತೆರವಿನಷ್ಟೇ ನಿಂದ್ಯವಿರುತ್ತದೆ. ಒಟ್ಟಿಗೆ ಈ ಯಾವತ್ತು ಸಂಗತಿಗಳಮೇಲಿಂದ ಜನರ ಪ್ರೀತಿಯು ಗುಣಕ್ಕಿಂತಲೂ ಹಣದಮೇಲೆ ವಿಶೇಷವಿದ್ದಂತೆ ಕಂಡುಬರುತ್ತದೆ. ಆದ್ದರಿಂದ ಕನ್ಯಾ ಅಥವಾ ವರನನ್ನು ಆರಿಸುವುದರಲ್ಲಿ ಹಣದ ಆಸೆಯನ್ನು ಬಿಟ್ಟು ಅವರಲ್ಲಿಯ ಗುಣಗಳ ಕಡೆಗೆ ಮುಖ್ಯವಾಗಿ ಲಕ್ಷ್ಯಕೊಡಬೇಕು. ಯಾಕಂದರೆ:—ಹೆಂಡತಿಯು ಧರ್ಮ, ಅರ್ಥ, ಕಾಮಗಳ ಮೂಲವು. ಮತ್ತು ಸಂಸಾರವೆಂಬ ಸಮುದ್ರವನ್ನು ದಾಟುವ ನಾವೆಯು, ಈ ಸಂಸಾರಯಂತ್ರವೆಂಬ ಗಾಡಿಗೆ ಸ್ತ್ರೀಪುರುಷರು ಗಾಲಿಗಳಂತೆ ಇರುವರು. ಗಾಲಿಗಳು ಸಮನಾಗಿ ಇರದ ಹೊರ್ತು ಗಾಡಿಯ ಗತಿಯು ಮುಂದಕ್ಕೆ ಸಾಗುವುದಿಲ್ಲ ಆದ್ದರಿಂದ ಲಗ್ನದ ವಿಷಯವಾಗಿ ನಾವು ಬಹಳ ಜಾಗ್ರುತರಾಗಿರಬೇಕು. ಅಕ್ಷರಶತ್ರುವಾದ ಹೆಂಡತಿಯು ತನ್ನ ಸುಶಿಕ್ಷಿತಪತಿಯನ್ನು ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ರೀತಿಯಿಂದ ಹಿಂದಕ್ಕೆ ಜಗ್ಗುವಳು. ಇಂಥ ಇಜ್ಜೋಡಿನ ದಂಪತಿಗಳ ಸಂಸಾರವು ಕಲಹ ಕಷ್ಟಗಳಿಗೆ ಗುರಿಯಾಗುತ್ತಿದೆ. ಲಗ್ನವಾದಮೇಲೆ ಗೃಹಿಣೀತ್ವದಿಂದ ಸ್ತ್ರೀಯರ ಜವಾಬದಾರಿಗಳು ಹೆಚ್ಚುತ್ತವೆ. ಗಂಡಹೆಂಡರಿಗೆ ದಂಪತಿಯೆಂಬ ಸಂಜ್ಞೆಯಿರುವುದು. ದಂಪತಿಗಳು ಮನೆಯ ಇಬ್ಬರು ಯಜಮಾನರಾಗಿರುವರು. ಇದರಿಂದ ಮನೆತನದಲ್ಲಿ ಸುಖಸಮಾಧಾನವು ಇರಬೇಕಾದರೆ ಮನೆಯ ಇಬ್ಬರು ಯಜಮಾನರಲ್ಲಿ ವಿವೇಕವೂ ತಾಳ್ಮೆಯೂ ಸಮನಾಗಿ ಸ್ಥಿರವಾಗಿ ನೆಲೆಗೊಂಡಿರಲಿಕ್ಕೇಬೇಕು. ಇದಲ್ಲದೆ ಗೃಹಿಣಿ ಅಂದರೆ ಹೆಂಡತಿಯಲ್ಲಿ ಗುರುಹಿರಿಯರ ವಿಷಯ

ವಾಗಿ ಪೂಜ್ಯಬುದ್ಧಿಯೂ, ಪತಿಯ ವಿಷಯವಾಗಿ ಭಕ್ತಿಯೂ ಸರಿಸಮಾನರ ಸಂಗಡ ಆದರವೂ ಕಿರಿಯರ ವಿಷಯವಾಗಿ ಪ್ರೇಮವೂ ಇರಬೇಕಾಗುತ್ತದೆ. ... *

ಇನ್ನು ಸ್ತ್ರೀಯು ತಾಯಿಯಾದಳೆಂದರೆ ಅವಳ ಜವಾಬದಾರಿಗೆಮೇರೆಯೇ ಇರುವುದಿಲ್ಲ. ಕೂಸು ಹೊಟ್ಟೆಯೊಳಗೆ ಇದ್ದಾಗ್ಯೆ ಸಹ ಅವಳ ಮಾತೃತ್ವಸಂಬಂಧದ ಕರ್ತವ್ಯವು ಪ್ರಾರಂಭವಾಗುತ್ತದೆ. ಆಕೆಯ ಆಚಾರ ವಿಚಾರಗಳ ಪರಿಣಾಮವು ಕೂಸಿನಮೇಲೆ ಈಗಿನಿಂದಲೇ ಪ್ರಾರಂಭವಾಗುತ್ತದೆ. ಕೂಸು ಹುಟ್ಟಿದಕೂಡಲೇ ಅದರ ಮೊದಲನೇ ಉಸುರಿನಿಂದ ಅದು ನೋಡಿದ ಮೊದಲನೇ ನೋಟದಿಂದ, ಅದು ಕೇಳಿದ ಮೊದಲನೇ ಶಬ್ದದಿಂದ ಅದರ ಶಿಕ್ಷಣವು ಪ್ರಾರಂಭವಾಗುತ್ತದೆ. „ಮೂರುವರ್ಷದಬುದ್ಧಿ ನೂರುವರ್ಷದತನಕ,, ಎಂಬ ಗಾದೆಯು ಮಾತ್ರವಾದರೂ ಚಿಕ್ಕಂದಿನಲ್ಲಿಯ ಶಿಕ್ಷಣದ ಮಹತ್ವವನ್ನು ತೋರಿಸುತ್ತದೆ. ಹುಡುಗರ ಶಿಕ್ಷಣದ ಮುಖ್ಯಸೂತ್ರವು ತಾಯಿಯೇ, ಯಾವಳಕೈಯಲ್ಲಿ ತೊಟ್ಟಿಲದಸೂತ್ರವಿರುವುದೋ ಅವಳಕೈಯಲ್ಲಿ ರಾಷ್ಟ್ರದ ಸೂತ್ರವಿರುವುದು. ಅವಳ ಶಿಕ್ಷಣದಂತೆಯೇ ಹುಡುಗರು ಮುಂದೆ ಕೆಟ್ಟವರಾಗಲಿ, ಒಳ್ಳೆಯವರಾಗಲಿ ಆಗುತ್ತಾರೆ. ಮಾನವ ಪ್ರಾಣಿಗಳಲ್ಲಿ ಶ್ರೇಷ್ಠತರವಾದ ಮನೋವೃತ್ತಿಗಳು ಸ್ಥಿರವಾಗಿ ನೆಲೆಗೊಳ್ಳಬೇಕಾದರೆ ಆ ಮನೋವೃತ್ತಿಗಳ ಬೀಜಾರೋಪಣವು, ಸಂಗೋಪನವು ಬಾಲ್ಯಾವಸ್ಥೆಯಿಂದಲೇ ಪ್ರಾರಂಭವಾಗಲಿಕ್ಕೇಬೇಕು. ಬೆಳೆಗೆ ಬೀಜವು ಹೇಗೋ ಹಾಗೆ ರಾಷ್ಟ್ರಕ್ಕೆ ಕೂಸು, ಉತ್ತಮವಾದ ಬೆಳೆಯು ಬರಬೇಕಾದರೆ ಬೀಜವನ್ನು ಜೋಕೆಯಿಂದ ಹಸನಾದ ಉತ್ತಮಭೂಮಿಯಲ್ಲಿ ತಕ್ಕಕಾಲಕ್ಕೆ ಬಿತ್ತಿ, ಕಸಕಡ್ಡಿಗಳು ಏಳದಂತೆ ಎಚ್ಚರಪಟ್ಟು, ವೇಳೆವೇಳೆಗೆ ನೀರನ್ನುಹಾಕಿ ಜೋಪಾನಮಾಡಬೇಕಾಗುತ್ತದೆ. ಕೂಸುಗಳ ಬೆಳವಣಿಗೆಗಾದರೂ ಈಮಾತು ಹತ್ತುತ್ತದೆ. ಕೂಸಿನ ಮತ್ತೂ ಸಸಿಯ ಬೆಳವಣಿಗೆಯಲ್ಲಿ ವಿಶೇಷ ಹೆಚ್ಚುಕಡಿಮೆಯಿಲ್ಲ. ಕೂಸಿನಲ್ಲಿ ಯಾವದಾದರೊಂದು ಮನದೊಲವು ನಿಮಗೆ ಕಂಡುಬಂದಲ್ಲಿ ಅಥವಾ ಯಾವುದಾದರೊಂದು ಗುಣವನ್ನು ಅವರಲ್ಲಿ ಬೆಳಸಬೇಕೆಂಬ ಇಚ್ಛೆಯು ನಿಮಗೆ ಆದಲ್ಲಿ ಯಾವಾಗಲೂ ಆ ತರದ ವಿಷಯಗಳನ್ನು ಅವರಮುಂದೆ ಇಡಬೇಕು. ಮತ್ತೂ ಸುತ್ತುಮುತ್ತಿನ ಸಂಗತಿಗಳು ಆ ಗುಣವನ್ನು ಬೆಳಸಲಿಕ್ಕೆ ಸಹಾಯವಾಗುವಂತಿರಬೇಕು. ಉತ್ತಮ ಶಿಕ್ಷಣದಿಂದ ಇಷ್ಟು ಉಳಿತಾಯವಾಗುವುದು ನೋಡಿರಿ. ಈಗಿನ ಕಾಲದ ಸುಧಾರಿಸಿದವರ ಅಭಿಪ್ರಾಯವು—ಅಪರಾಧಿಗಳನ್ನು ಶಿಕ್ಷಿಸುವುದಕ್ಕಿಂತ ಹುಡುಗರನ್ನೇ ಸುಧಾರಿಸುವುದು ಸ್ವಲ್ಪ ಖರ್ಚಿನ ಕೆಲಸವು. ಕೋರ್ಟುಗಳು, ಪೋಲೀಸುಖಾತೆಯು ಚಿಕ್ಕಬೈದಿಗಳ ಶಾಲೆಗಳು, ಬಂದೀಖಾನೆಗಳು, ಕರಿನೀರಿನ ನಡುಗಡ್ಡೆಗಳು ಬಹಳ ಖರ್ಚಿನವು. ಇಷ್ಟುತರದಿಂದ ದೇಶಕ್ಕೆ ಖರ್ಚಿನಭಾರವು ಯಾರಿಂದ ಬೀಳುತ್ತದೆ! ಅಪರಾಧಿಗಳಿಂದಲ್ಲವೆ? ಇದೇ ಅಪರಾಧಿಗಳು ಹುಡುಗರಿರುವಾಗ್ಗೆ ಅವರ ಕೆಟ್ಟವಿಚಾರಗಳನ್ನು ಒಳ್ಳೇ ಶಿಕ್ಷಣದಿಂದ ಬುಡದಲ್ಲಿಯೇ ತೆಗೆದುಹಾಕಿದ್ದರೆ ಅವರು ಕಾಯಿದೆಯ ಶಾಸನಕ್ಕೆ ಪಾತ್ರರಾಗುತ್ತಿದ್ದಿಲ್ಲ. ಅದರಿಂದ ಜನರಿಗೆ ಇಂಥ ತಪ್ಪುಗಾರರನ್ನು ಶಿಕ್ಷಿಸ

ಸುಧಾರಿಸುವ ಮೇಲೆ ಹೇಳಿದ ಸಂಸ್ಥೆಗಳ ಪೋಷಣಕ್ಕಾಗಿ ಕರಗಳನ್ನು ಕೊಡುವ ಪ್ರಸಂಗ ಬರುತ್ತಿದ್ದಿಲ್ಲ. ನೋಡಿರಿ ಮಕ್ಕಳು ಸುವಿಚಾರಿಗಳೂ ಸದ್ಗುಣಿಗಳೂ ಆಗಬೇಕಾದರೆ ಸುಶಿಕ್ಷಿತಳಾದತಾಯಿಯ ಅವಶ್ಯಕತೆಯು ಎಷ್ಟಿರುವುದು ಈ ವಿಷಯಕ್ಕೆ ಒಬ್ಬ ಪ್ರಸಿದ್ಧಗ್ರಂಥಕರ್ತರು ಅಂದದ್ದು. ' One good mother is worth a hundred school masters ' ಅಂದರೆ ಒಬ್ಬ ಒಳ್ಳೆತಾಯಿಯು ನೂರುಜನ ಶಿಕ್ಷಕರ ಸಮಾನಳು. ಹುಡುಗರು ಚಿಕ್ಕವರಿರುವಾಗ ತಾಯಿಯ ಮಾತಿನಮೇಲೆ ನಂಬಿಗೆಯಿಟ್ಟಷ್ಟು ಎರಡನೆಯವರನ್ನು ನಂಬುವದಿಲ್ಲ. ಬಹಳ ಪ್ರೀತಿಯಿಂದ ಎಷ್ಟೋ ಹುಡುಗರು ಕೆಡುತ್ತಾರೆ. ಹುಡುಗರ ಜೀವನಕ್ರಮದಲ್ಲಿ ಕೆಲವು ವೇಳೆ ಒಳ್ಳೇತಾಯಿಯು ಕೆಟ್ಟವಳಾಗುತ್ತಾಳೆ. ಒಮ್ಮೊಮ್ಮೆ ಸೇರದ ಮಲತಾಯಿಗಿಂತ ಅತಿ ಪ್ರೀತಿಮಾಡುವ ತಾಯಿಯಿಂದ ಬಹಳ ಅನಿಷ್ಟಪರಿಣಾಮಗಳು ಸಂಭವಿಸುತ್ತವೆ. ನಮ್ಮಲ್ಲಿ ಮಕ್ಕಳನ್ನು ತಯಾರಮಾಡುವ ಯೋಗ್ಯತೆಯು ಇರದಿದ್ದರೂ ಮಕ್ಕಳನ್ನು ಹಡೆಯುವ ಹಂಬಲವು ಬಹಳ. ಮತ್ತೂ ಹಿರಿಯರು ಆಶೀರ್ವದಿಸುವಾಗ್ಗೆ ಅಷ್ಟಪುತ್ರ ಸೌಭಾಗ್ಯವತೀಭವ ಎಂದು ಅನ್ನುತ್ತಾರೆ. ಆದರೆ ಇಷ್ಟು ಮಹತ್ವವಾದ ಜವಾಬದಾರಿಯ ಕೆಲಸಕ್ಕೆ ಮೊದಲು ಅವಳನ್ನು ತಕ್ಕವಳನ್ನಾಗಿಮಾಡುವ ವಿಚಾರವೇ ಅವರ ಕನಸುಮನಸ್ಸಿನಲ್ಲಿ ಬರುವುದಿಲ್ಲ. ಆದುದರಿಂದ ತಾಯಿಯು ಜವಾಬುದಾರಿಯನ್ನು ಮೊದಲು ಅರಿತುಕೊಳ್ಳಬೇಕು. ... ... ... ... *

ಮನೆತನದ ಊರ್ಜಿತಾವಸ್ಥೆಗೆ ಮಿತವ್ಯಯವು ಒಂದು ಮುಖ್ಯ ಕಾರಣವಾಗಿರುವುದು. ಆದಾಯವನ್ನು ವಿಚಾರಮಾಡಿ ಜಿಪುಣರೆಂದು ಹೆಸರಿಡಿಸಿಕೊಳ್ಳದೆ ಖರ್ಚನ್ನು ಮಾಡುತ್ತಿರಬೇಕು. ಎಷ್ಟೋ ಸ್ತ್ರೀಯರು ಆಭರಣಗಳ ವಿಷಯವಾಗಿ ಕಲಹಮಾಡಿ, ಪತಿಗೆ ಸಾಲದ ಹೊರೆಯನ್ನು ಹೊರಿಸಿ, ತಾವು ಆಭರಣಗಳನ್ನು ಹಾಕಿಕೊಳ್ಳುವರು. ಈ ವಿಷಯಕ್ಕೆ ಒಂದು ಗಾದೆಯಮಾತು ನೆನಪಿಡುವಹಾಗೆ ಇರುವುದು. ಅದು ಯಾವದೆಂದರೆ;—ಸರೀಕಳು ಸರಿಗೆ ಹಾಕಿದರೆ ನೆರೆಮನೆಯವಳು ಉರುಲುಹಾಕಿದಳು,, ಅಂದರೆ ಗಂಡನಿಗೆ ಸಾಲದ ಉರಲನ್ನು ಹಾಕಿದಳು. ದುಡ್ಡನ್ನು ಆಭರಣಕ್ಕಿಂತ ಉತ್ಪನ್ನದ ಕೆಲಸಕ್ಕೆ ಹಚ್ಚಿಸಿದರೆ ದೇಶದ ಸಂಪತ್ತು ಬೆಳೆಯುವುದು. ಮಿತವ್ಯಯದ ಸ್ಪಷ್ಟ ವಿಚಾರವು ನಿಮ್ಮ ಮನಸ್ಸಿನೊಳಗೆ ಬರುವಹಾಗೆ ಒಂದು ಸಣ್ಣಕಥೆಯನ್ನು ಹೇಳುವೆನು. ,, ಒಬ್ಬ ತರುಣ ಕೋಟ್ಯಾಧೀಶನು ಲಗ್ನಮಾಡಿಕೊಳ್ಳಬೇಕೆಂದು ಯೋಚಿಸಿ, ಎಲ್ಲ ರೀತಿಯಿಂದಲೂ ತನಗೆ ತಕ್ಕ ಕನ್ನೆಯನ್ನು ನೋಡಬೇಕೆಂದು ವೇಷ ಬದಲಾಯಿಸಿ, ಸಂಗಡ ಎರಡುಸೇರು ಬತ್ತವನ್ನು ತೆಗೆದುಕೊಂಡು ಹೊರಟನು, ಸುಲಕ್ಷಣವುಳ್ಳ ಕನ್ನೆಯರನ್ನು ನೋಡಿದಾಗ್ಗೆ ಅವನು ' ಈ ಬತ್ತವನ್ನು ತೆಗೆದುಕೊಂಡು ನನಗೆ ಊಟಕ್ಕೆ ಹಾಕುವಿರಾ ? , ಎಂದು ಕೇಳಿದ ಕೂಡಲೇ ಎಲ್ಲರೂ ಈ ಮಾತಿಗೆ ನಗುತ್ತಿದ್ದರು. ಈ ರೀತಿಯಿಂದ ಕನ್ಯೆಯ ಶೋಧನಾರ್ಥ ಹೊರಟ

ರಲು, ಒಂದು ಪಟ್ಟಣದಲ್ಲಿ ಒಬ್ಬ ಬಡ ದಿಕ್ಕಿಲ್ಲದ ಸುಲಕ್ಷಣ ಕನ್ನೆಯನ್ನು ಅವನುನೋಡಿ ಅವಳ ಅಂತರಂಗವಾದರೂ ಬಾಹ್ಯಲಕ್ಷಣಗಳಂತೆ ನಿರ್ಮಲವಿರಬೇಕೆಂದು ಯೋಚಿಸಿ ಅವಳಿಗೆ ತನ್ನ ಊಟದ ವಿಷಯವಾದ ಪ್ರಶ್ನವನ್ನು ಹಾಕಿದನು. ಆ ವಿಚಾರಿ ಕನ್ಯೆಯು ಕೂಡಲೇ ಅವನವಾತಿನ ಇಂಗಿತವನ್ನು ಅರಿತು ಬತ್ತವನ್ನು ತೆಗೆದುಕೊಂಡು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ಸ್ವಲ್ಪಹೊತ್ತು ಕುಳ್ಳಿರಹೇಳಿದಳು. ಬತ್ತವನ್ನುಕುಟ್ಟಿ ಅಕ್ಕಿಯನ್ನೂ ಹೊಟ್ಟನ್ನೂ ಬೇರೆಮಾಡಿದಳು. ಆ ಹೊಟ್ಟು ಅಕ್ಕಸಾಲಿಗರಿಗೆ ಆಭರಣಗಳನ್ನು ತೊಳೆಯಲಿಕ್ಕೆ ಬೇಕಾಗುವಕಾರಣ ಅವರಿಗೆಮಾರಿ, ಬಂದಹಣದಿಂದ ಕಟ್ಟಿಗೆ ಮತ್ತೂ ಅಡಿಗೆ ಮಾಡಲಿಕೆ ಮಣ್ಣಿನಪಾತ್ರೆಗಳನ್ನು ಕೊಂಡುತಂದಳು. ಅಡಿಗೆಯು ಆದಕೂಡಲೇ ಬೆಂಕಿಯನ್ನು ನೀರಿನಿಂದ ಆರಿಸಿ, ಹೊರಟ ಇದ್ದಲಿಯನ್ನು ಮಾರಿ ಅದರಿಂದ ಪಲ್ಲೆ ತುಪ್ಪ ಎಣ್ಣೆ, ಮೊಸರು ಮುಂತಾದ ಅವಶ್ಯಪದಾರ್ಥಗಳನ್ನು ತರಿಸಿದಳು. ಆಮೇಲೆ ಆತನನ್ನು ಸ್ನಾನಕ್ಕೆಯೆಬ್ಬಿಸಿ ಮೈಗೆ ಹಚ್ಚಿಕೊಳ್ಳಲಿಕ್ಕೆ ಎಣ್ಣೆಯನ್ನು ಕೊಟ್ಟಳು. ಸ್ನಾನವಾದನಂತರ ಅನ್ನ, ತುಪ್ಪ, ಮೊಸರು, ಸಾರು ಮೊದಲಾದ ಪದಾರ್ಥಗಳನ್ನು ಬಡಿಸಲಾಗಿ ಅವನು ಬಹಳ ರುಚಿಯಾದ ಊಟಮಾಡಿದನು. ಆ ತರುಣನು ತನಗೆ ತಕ್ಕಕನ್ಯೆಯು ಇವಳೇ ಎಂದು ಅವಳನ್ನು ಲಗ್ನಮಾಡಿಕೊಂಡು ತನ್ನಮನೆಗೆ ಕರೆದೊಯ್ದನು. ,, ಈ ಕಥೆಯಮೇಲಿಂದ ಸುಶಿಕ್ಷಿತ ಹೆಂಡತಿಯು ಒಳ್ಳೇಗುಣಗಳಲ್ಲಿ ಮಿತವ್ಯಯ ಮತ್ತೂ ಕಾಳಜಿಯುಪೂರ್ವಕ ಮನೆತನದ ವ್ಯವಸ್ಥೆಮಾಡುವುದು ಬಂದಾಗಿದೆ. ಆದುದರಿಂದ ಹೆಣ್ಣುಮಕ್ಕಳಿಗೆ ಶಿಕ್ಷಣಕೊಡುವಾಗ್ಗೆ ನಾವು ವಿಶೇಷವಾಗಿ ಇತ್ತಕಡೆಗೆ ಲಕ್ಷ್ಯಕೊಡತಕ್ಕದ್ದು. ... *

ಪ್ರಿಯಭಗಿನಿಯರೆ? ನನ್ನ ಭಾಷಣವು ಬಹಳಹೊತ್ತು ನಡೆಯಿತು. ನಿಮ್ಮೆಲ್ಲರಿಗೆ ಸ್ವಲ್ಪಬೇಸರು ಬಂದಿರಬಹುದು. ಆದರೆ ಒಂದೆರಡುಮಾತುಗಳನ್ನು ಸದ್ಗತಿಯ ವಿಷಯವಾಗಿಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ. ಯಾವತ್ತೂ ಮಾನವಜಾತಿಯು ಉತ್ತರತ್ತರ ಉತ್ಕರ್ಷವೇ ಆಗುತ್ತದೆಂದು ನಮ್ಮ ತಿಳುವಳಿಕೆ ಇರುವುದು. ಆದರೂ ವ್ಯಕ್ತಿಯ ವಿಷಯವಾಗಿ ವಿಚಾರಮಾಡಿದರೆ ಮಾನವಜಾತಿಯು ಇಳಿತರದ ವಯಸ್ಸಿನಲ್ಲಿ ಹಲವರು ಕಷ್ಟಕ್ಕೆ ಗುರಿಯಾಗುತ್ತಾರೆ. ಮುಪ್ಪಿನಕಾಲದಲ್ಲಿ ನಮಗೆ ನಿಜವಾದಸುಖವು ಸಿಕ್ಕಬೇಕಾದರೆ ತಾರುಣ್ಯದಲ್ಲಿಯು ನಮ್ಮ ಆಚರಣೆಯು ಶುದ್ಧವಾಗಿರಲಿಕ್ಕೆಬೇಕು. ಇಲ್ಲದಿದ್ದರೆ ನಮ್ಮ ಪೂರ್ವವಯಸ್ಸಿನಲ್ಲಿ ಮಾಡಿದ ದುಷ್ಕರ್ಮಗಳು ಉತ್ತರವಯಸ್ಸಿನಲ್ಲಿ ಮನಸ್ಸಿಗೆಚುಚ್ಚಿ ನರಕಯಾತನೆಯನ್ನು ಕೊಡುತ್ತವೆ. ತಾರುಣ್ಯದಲ್ಲಿ ನಾವು ಯಾವಾಗಲೂ ಉದ್ಯೋಗದಲ್ಲಿ ತೊಡಗಿರಲಿಕ್ಕೆಬೇಕು. ಯಾಕೆಂದರೆ—ನಿರುದ್ಯೋಗವು ಎಲ್ಲತರದ ಅನಾಚಾರಗಳ ದುರಾಲೋಚನೆಗಳ ಮತ್ತೂ ಬಡತನದ ತವರಮನೆಯಾಗಿದೆ. ನಮ್ಮ ವೀರಶೈವರಲ್ಲಿಯು ಮಧ್ಯಮ ಮತ್ತೂ ಸಾಧಾರಣ ತರಗತಿಯ ಸ್ತ್ರೀಯರು ಯಾವಾಗಲೂ ಒಂದಿಲ್ಲೊಂದು ತರದ ಕೆಲಸ

ವಲ್ಲಿ ತೊಡಗಿರುವವರು. ಆದರೆ ಮೇಲ್ತರದ ಅಂದರೆ ಶ್ರೀಮಂತ ಸ್ತ್ರೀಯರು ಬಹಳವಾಗಿ ಕೆಲಸವಿಲ್ಲದೆ ಕೂಡುವವರು. ಅದರಿಂದ ಅವರಲ್ಲಿ ಆಲಸ್ಯವು ಬೆಳೆದು ಅಲ್ಪಾಯುಷಿಗಳಾಗಿ ಅನೇಕ ಕಷ್ಟಗಳಿಗೆ ಗುರಿಯಾಗುವರು. ಈ ಮಾತು ಎರಡನೆಯವರಲ್ಲಿಯ ಕುಂದುಕೊರ ತೆಗಳನ್ನು ಆರಿಸುವ ಉದ್ದೇಶ್ಯವಾಗಿ ಹೇಳದೆ, ಅವರಿಗೆ ನಿಜವಾದ ಶಾಶ್ವತಸುಖವು ಸಿಕ್ಕಬೇಕೆಂದು ನಾನುಹೇಳಿದ್ದೇನೆ. 'ಕಷ್ಟದಂತೆ ಫಲ' ಎಂಬ ಗಾದೆಯ ಮಾತಿನಂತೆ ನಮಗೆಫಲವು ಎಂದರೆ ಸುಖವು ದೊರೆಯಬೇಕಾದರೆ ನಾವು ಮೊದಲು ಶ್ರಮವನ್ನು ಮಾಡಲಿಕ್ಕೇಬೇಕು.

ನಮ್ಮ ಪುರುಸತ್ತಿನ ಕಾಲವನ್ನು ಎರಡನೆಯವರನ್ನು ಆಡಿಕೊಳ್ಳುವುದರಲ್ಲಿ ಕಳೆಯದೆ, ನಮ್ಮ ಸ್ತ್ರೀವರ್ಗದ ಸುಧಾರಣೆಯ ವಿಷಯವಾಗಿ ಮಕ್ಕಳ ಸಂರಕ್ಷಣ ಮತ್ತು ಶಿಕ್ಷಣವಿಷಯವಾಗಿ, ನೀತಿಯವಿಷಯವಾಗಿ, ವಿಚಾರಮಾಡುವುದರಲ್ಲಿ ಕಳೆಯಬೇಕು. ನಮ್ಮ ಶುದ್ಧಾಚರಣೆಯ ವಿಷಯವಾಗಿ ನಮಗೆ ಬರವಸವಿದ್ದರೆ ನಮಗೆ ಇಹದಲ್ಲಿ ಸುಖಸಮಾಧಾನಗಳೂ ಉಂಟಾಗಿ, ಪರದಲ್ಲಿ ಸದ್ಗತಿಯಾಗುವುದು. ಭಗಿನಿಯರೆ? ತಾವೆಲ್ಲರೂ ನನ್ನ ಭಾಷಣನನ್ನು ಶಾಂತಚಿತ್ತದಿಂದ ಕೇಳಿದ್ದಕ್ಕೆ ತಮ್ಮ ಆಭಾರವನ್ನು ಮನ್ನಿಸಿ, ನನಗೆ ಅಧ್ಯಕ್ಷಸ್ಥಾನವನ್ನು ಕೊಟ್ಟದ್ದಕ್ಕಾಗಿ ಪುನಃ ತಮ್ಮ ಉಪಕಾರವನ್ನು ಸ್ಮರಿಸಿ, ನನ್ನ ಭಾಷಣವನ್ನು ಮುಗಿಸುತ್ತೇನೆ. ... ... ... ... *

ನಾ ಗ ಮ್ಮ.
ಮೊದಲನೆ ವೀರಶೈವ ಮಹಿಳಾಪರಿಷತ್ತಿನ
ಅಧ್ಯಕ್ಷಳು.

---

## ಅನಂತರ ಶ್ರೀಮತಿ ಚೆನ್ನಮ್ಮನವರು (ಮೈಸೂರು ಮಹಾರಾಣೀ ಕಾಲೇಜಿನ ಸಹಾಯೋಪಾಧ್ಯಾಯಿನಿಯರು) ಮಾಡಿದ ಭಾಷಣವು.

ಇದುವರೆಗೆ ವಿದ್ಯಾಭ್ಯಾಸದಿಂದ ಜ್ಞಾನವನ್ನು ವೃದ್ಧಿಪಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅಲ್ಲಲ್ಲಿ ಸ್ತ್ರೀಸಮಾಜಗಳು ಏರ್ಪಡಿಸಲ್ಪಟ್ಟವೆ. ಆದರೆ ಈ ಬಳ್ಳಾರಿಯಲ್ಲಿ ನಡೆಯುವ ಶ್ರೀಮದ್ವೀರಶೈವ ಮಹಾಸಭೆಗೆ ಅಂಗವಾಗಿ, ಶ್ರೀ ವೀರಶೈವ ಸ್ತ್ರೀ ಸಮಾಜವನ್ನೂ ಏರ್ಪಡಿಸಿದ್ದು ಬಹು ಶ್ಲಾಘನೀಯವಾಗಿಯೂ, ಸಂತೋಷಪ್ರದಾಯಕವಾಗಿಯೂ ಇದೆ. ವೀರಶೈವ

ಸ್ತ್ರೀ ಸಮಾಜಕ್ಕೆ ಇದೇ ಮೊದಲನೆಯದಾಗಿದೆ. ಇದನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡು ಮುಖ್ಯಮುಖ್ಯ ಪ್ರದೇಶಗಳಲ್ಲಿ ನಡೆಸುತ್ತಾ ಬಂದರೆ, ಸ್ವಲ್ಪಕಾಲದಲ್ಲಿಯೇ ವೀರಶೈವ ಮತೀಯರಾದ ಸ್ತ್ರೀಯರಿಗೆ ವಿದ್ಯಾಸಕ್ತಿ, ಮತವಾತ್ಸಲ್ಯ, ಐಕಮತ್ಯ, ಮುಂತಾದ ಗುಣಗಳು ಹೆಚ್ಚಿ ವೀರಶೈವಮತದ ಅಭಿವೃದ್ಧಿಗೆ ದಾರಿಯಾಗುವುದೆಂದು ಹೇಳುವಲ್ಲಿ ಯಾವ ಸಂಶಯವೂ ಇಲ್ಲ. ... ... ... ... ... *

ಇಲ್ಲಿ ನೆರದಿರುವ ವೀರಶೈವಾಂಗನೆಯರ ಮಂಡಲಿಯಲ್ಲಿ ಕೆಲವು ಸಂಗತಿಗಳನ್ನು ಆದರಪೂರ್ವಕವಾಗಿ ವಿಜ್ಞಾಪಿಸಬೇಕೆಂಬ ಕುತೂಹಲವು ನನ್ನನ್ನು ಬಹುಳವಾಗಿ ಪ್ರೇರಿಸುವುದರಿಂದ, ನನಗೆ ಮಹಾಸಭೆಯವರು ದಯೆಯಿಟ್ಟು ಕೊಟ್ಟಿರುವ ಸಮಯವನ್ನು ಇದಕ್ಕಾಗಿ ವಿನಿಯೋಗಿಸುವುದಕ್ಕೆ ಎತ್ನಿಸಿದ್ದೇನೆ. ... ... *

ನಾನು ಮೈಸೂರು ಮಹಾರಾಣೀ ಕಾಲೇಜಿನಲ್ಲಿ ಉಪಾಧ್ಯಾಯಿನಿಯಾಗಿದ್ದಾಗ್ಯೂ ಈ ವಿಧವಾದ ಸಮಾಜದಲ್ಲಿ ಉಪನ್ಯಾಸಮಾಡುವುದಕ್ಕೆ ಇದೇ ಆರಂಭವಾಗಿರುವುದರಿಂದಲೂ ಮೈಸೂರು ಕನ್ನಡವಾಗಿರುವುದರಿಂದಲೂ, ನಾನು ಹೇಳುವ ಸಂಗತಿಗಳು ಸರ್ವರ ಮನಸ್ಸನ್ನು ಆಕರ್ಷಿಸುತ್ತವೆ ಎಂದು ದೃಢವಾಗಿ ಹೇಳಲಾರೆನು. ಆದರೂ ಗುಣಗ್ರಾಹಿಣಿಯರಾದ ನೀವುಗಳು ಸಹೋದರಿಯಾದ ನನ್ನ ಮೇಲಣ ಅಭಿಮಾನದಿಂದ ಕಿವಿಗೊಟ್ಟು ಮನ್ನಣೆಗೊಳಿಸುವಿರೆಂದು ನಂಬುತ್ತೇನೆ. ... ... ... *

ಭೂಲೋಕದಲ್ಲಿರುವ ಸಕಲಪ್ರಾಣಿಗಳೊಳಗೆ ಮನುಷ್ಯ ಜನ್ಮವೇ ಶ್ರೇಷ್ಠವಾದದ್ದು. ಮನುಷ್ಯನಿಗೆ ಬುದ್ಧಿ, ವಿಚಾರ, ಇವೆರಡೇ ಮುಖ್ಯಧರ್ಮಗಳು. ಇವುಗಳಸಹಾಯದಿಂದಲೇ ಮನುಷ್ಯನಾದವನು ಧೈರ್ಯ, ಉಪಾಯ ಚೇತನೆ, ಉದ್ಯೋಗ ಶೀಲತೆ ಮೊದಲಾದ ಗುಣವಿಶೇಷಗಳನ್ನು ಹೊಂದಿ ಪುರುಷಾರ್ಥವಂ ಸಾಧಿಸುವನು. ಪುರುಷಾರ್ಥವು ಧರ್ಮ ಅರ್ಥ, ಕಾಮ, ಮೋಕ್ಷ ಎಂದು ನಾಲ್ಕುವಿಧವು. ಧರ್ಮ, ಅರ್ಥ, ಕಾಮ, ಈ ಮೂರಕ್ಕೆ ತ್ರಿವರ್ಗವೆಂದು ಸಂಜ್ಞೆ, ಧರ್ಮ, ಅರ್ಥ, ಕಾಮಗಳೇ ಐಹಿಕ ಆಮುಷ್ಮಿಕಸುಖಕ್ಕೆ ಕಾರಣಗಳು. ಐಹಿಕ ಸುಖವೆಂದರೆ—ದೇಹದೊಡನಿರುವಾಗ ಭೂಮಿಯಲ್ಲಿ ಅನುಭವಿಸುವ ಸುಖವು. ಆಮುಷ್ಮಿಕ ಸುಖವೆಂದರೆ ಧರ್ಮಸಂಸ್ಕಾರ ಬಲದಿಂದ ದೇಹಾನಂತರದಲ್ಲಿ ಸ್ವರ್ಗಾದಿ ಲೋಕಗಳಲ್ಲಿ ಅನುಭವಿಸುವ ಸುಖವು. ಮೋಕ್ಷವೆಂಬುವುದು ಪಾರಮಾರ್ಥಿಕವು. ಮೋಕ್ಷ ಸಂಪಾದನೆಗೆ ಸ್ತ್ರೀಪುರುಷರೊಳಗೆ ಒಬ್ಬರಿಗೊಬ್ಬರ ಸಹಾಯವು ಅನಾವಶ್ಯಕವಾಗಿದ್ದರೂ ಧರ್ಮ, ಅರ್ಥ, ಕಾಮಗಳ ಸಿದ್ಧಿಗೆ ಪರಸ್ಪರಸಹಾಯವು ಅತ್ಯಾವಶ್ಯಕವಾಗಿದೆ. ಪುರುಷನು ಸ್ತ್ರೀಯ ಜತೆಯಲ್ಲಿಯೂ, ಸ್ತ್ರೀಯು ಪುರುಷನ ಜತೆಯಲ್ಲಿಯೂ ಬಾಳುವುದರಿಂದಲೇ ಜಗದ್ವ್ಯಾಪಾರಗಳು ಪರಿಣಮಿಸುವುವು. ಪುರುಷರೇ ಬೇರೆ, ಸ್ತ್ರೀಯರೇ ಬೇರೆ ಬಾಳುವುದಾಗಿದ್ದರೆ, ಆದಿಯಲ್ಲಿ ಭಗವಂತನಿಂದ ಸೃಷ್ಟಿಸಲ್ಪಟ್ಟ ಸ್ತ್ರೀ ಪುರುಷರೇ ಪ್ರಳಯದವರೆಗೂ ಇರ

ಬೇಕಾಗಿದ್ದಿತು. ಉಭಯರ ಸಮ್ಮೇಳನವೇ ಮನುಷ್ಯರ ಸೃಷ್ಟಿ, ಸ್ಥಿತಿ, ಸಂಹಾರ, ವ್ಯಾಪಾರಗಳಿಗೆ ಮುಖ್ಯಕಾರಣವಾಗಿದೆ. ಆದರೆ ನಿಯಮವಿಲ್ಲದೆ ಮನಸ್ಸಿಗೆ ಬಂದಂತೆ ಯಾವ ಪುರುಷನು ಯಾವಸ್ತ್ರೀಯನ್ನಾದರೂ, ಯಾವ ಸ್ತ್ರೀಯು ಯಾವ ಪುರುಷನನ್ನಾದರೂ ಪರಿಗ್ರಹಿಸುವುದಕ್ಕೆ ಅವಕಾಶವಿಲ್ಲ. ಹಾಗಾಗುವ ಪಕ್ಷದಲ್ಲಿ ಲೋಕವೇ ಅವ್ಯವಸ್ಥೆಯಿಂದ ದುಸ್ಥಿತಿಗೆ ಗುರಿಯಾಗುತ್ತಿತ್ತು. ಪುರಾತನರಾದ ಮಹರ್ಷಿಗಳು ದೈವೇಚ್ಛೆಗನುಗುಣವಾಗಿ, ಸ್ತ್ರೀಪುರುಷರಿಗೆ ಪುರುಷಾರ್ಥ ಫಲವನ್ನನುಭವಿಸುವುದಕ್ಕೆ ನಿಯಮಗಳನ್ನೂ ಸಾಧನೆಗಳನ್ನೂ ಶಾಸ್ತ್ರಮೂಲಕವಾಗಿ ತೋರ್ಪಡಿಸಿದರು. ಆದುದರಿಂದ ಮನುಷ್ಯರು ಆ ನಿಯಮಗಳಿಗೆ ಬದ್ಧರಾಗಿ ಆ ಸಾಧನೆಗಳಿಂದ ಪುರುಷಾರ್ಥಗಳನ್ನು ಪಡೆಯಬೇಕಲ್ಲದೆ ಬೇರೆ ಮಾರ್ಗವಿಲ್ಲ.

ಕ್ರೈಸ್ತ, ಮಹಮ್ಮದೀಯ, ಹಿಂದು, ಬೌದ್ಧ ಮುಂತಾದ ಮತಗಳಲ್ಲಿ ಸ್ತ್ರೀಪುರುಷರ ನಡವಳಿಗಳು ಬೇರೆಬೇರೆ ತೆರಗಳಾಗಿವೆ. ಹಿಂದುಗಳಾದ ನಾವು ಹೀನಸ್ಥಿತಿಯಲ್ಲಿರುವ ನಮ್ಮ ಅಭಿವೃದ್ಧಿಗಾಗಿ ವೃದ್ಧಿದಶೆಯಲ್ಲಿರುವ ಬೇರೆ ಜನಾಂಗದ ಸ್ತ್ರೀಪುರುಷರ ನಡವಳಿಗಳನ್ನು ದೃಷ್ಟಾಂತವಾಗಿಟ್ಟುಕೊಳ್ಳದೆ; ನಮ್ಮ ಹಿಂದೂಮತ ಪದ್ಧತಿಗಳನ್ನನುಸರಿಸಿ, ಬೇರೆ ಜನಾಂಗದವರ ವಿದ್ಯೆ, ಬುದ್ಧಿ, ಕೌಶಲ್ಯ ಮುಂತಾದ ಗುಣಗಳನ್ನು ಗ್ರಹಿಸಿಕೊಳ್ಳಬೇಕಾಗಿದೆ. ಹಿಂದುಗಳೊಳಗೆ ಯಾವ ಮತದವರಾದರೂ ಈಗ ಪ್ರಾಯಶಃ ಐಹಿಕ ಸುಖವನ್ನೇ ಪ್ರಧಾನವಾಗಿಟ್ಟುಕೊಂಡು ನಡೆಯುತ್ತಾರೆ. ಆಮುಷ್ಮಿಕ ಸುಖಾಭಿಲಾಷೆಯುಳ್ಳವರು ವಿರಳರಾಗಿದ್ದಾರೆ. ಮೋಕ್ಷಾಪೇಕ್ಷಿಗಳಂತೂ ದುರ್ಲಭವೆಂದೇ ಹೇಳಬೇಕು. ವೀರಶೈವ ಮತವಾದರೊ ಸ್ತ್ರೀಪುರುಷರೆಲ್ಲರೂ ಸ್ವಮತಕ್ಕೆ ವಿರುದ್ಧವಲ್ಲದ ವೃತ್ತಿಯಿಂದಲೂ, ನಿತ್ಯಕರ್ಮಗಳಿಂದಲೂ ದೇಹವ್ಯಾಪಾರಗಳನ್ನು ನಿರ್ವಹಿಸುತ್ತಾ ಕಡೆಗೆ ಶಿವಸಾಯುಜ್ಯ ರೂಪವಾದ ಮುಕ್ತಿಯನ್ನು ಹೊಂದಬೇಕೆಂದು ವಿಧಿಸುತ್ತದೆ. ಆದುದರಿಂದ ನಾವು ಮೋಕ್ಷಾಪೇಕ್ಷೆಯನ್ನೇ ಪ್ರಧಾನವಾಗಿಟ್ಟುಕೊಂಡು ಮತಧರ್ಮಗಳನ್ನೂ, ಜೀವನ ಸಾಧನಸದ್ವೃತ್ತಿಗಳನ್ನೂ ಆಚರಿಸಬೇಕು. ಮತಧರ್ಮಗಳನ್ನು ಬಿಟ್ಟು ಕೇವಲ ಲೌಕಿಕ ಧರ್ಮಗಳಿಂದಲೇ ಉಚ್ಚಾಶ್ರಯ ಸ್ಥಿತಿಗೆ ಬರಬೇಕೆಂಬ ಪ್ರಯತ್ನಮಾಡುವವರಾದರೆ, ನಮ್ಮ ವೀರಶೈವಮತವೇ ಮರೆತು ಹೋಗಿ, ನಾವು ಐಹಿಕಸುಖವನ್ನು ಮಾತ್ರ ಅನುಭವಿಸುವಂಥ ಸಾಧಾರಣ ಸ್ತ್ರೀಯರಂತಾಗಬಹುದೇ ಹೊರತು, ನಮ್ಮ ಮತಕ್ಕೆ ಯಾವ ಪ್ರಾಶಸ್ತ್ಯವೂ ಬರುವುದಿಲ್ಲ. ಮತಾಂತರದಲ್ಲಿ ಮೋಕ್ಷವನ್ನು ಪಡೆಯಬೇಕಾದರೆ ಸನ್ಯಾಸಾಶ್ರಮವನ್ನೇ ವಹಿಸಬೇಕು. ವೀರಶೈವ ಮತದಲ್ಲಿ ಸ್ತ್ರೀಯರಿಗೂ ಪುರುಷರಿಗೂ ಯಾವ ಆಶ್ರಮದಲ್ಲಾದರೂ ಮೋಕ್ಷವನ್ನು ಪಡೆಯುವುದಕ್ಕೆ ಅವಕಾಶವುಂಟು. ಪಾಲಗುರ್ಕ್ಕರ, ಮೋಳಿಗೆಮಾರ, ಬಸವಣ್ಣ ಮೊದಲಾದವರು ಗೃಹಸ್ಥಾಶ್ರಮದಲ್ಲಿಯೇ ಇದ್ದು, ಮುಕ್ತರಾದರೆಂದು ಚರಿತ್ರೆಗಳಲ್ಲಿ ಬರೆಯಲ್ಪಟ್ಟಿದೆ. ನಮ್ಮ ಮತದಲ್ಲಿ ವೈದಿಕ ವಂಶೀಯರಾದ ಪುರುಷರು ವೈದಿಕವಿದ್ಯೆಗಳಲ್ಲಿಯೂ, ವೀರಶೈವ

ಸಿದ್ಧಾಂತವಲ್ಲಿಯೂ ಪಂಡಿತರಾಗಿ ನಿತ್ಯನೈಮಿತ್ತಿಕಾದಿ ಸದಾಚಾರಗಳನ್ನು ಆಚರಿಸುತ್ತ ಇತರರಿಗೆ ಬೋಧಿಸುವಂಥಾವರಾಗಬೇಕು. ವೈದಿಕಲೌಕಿಕ ವಿಶೇಯರಾದ ಸಕಲಸ್ತ್ರೀಯರೂ ಬಾಲ್ಯವಲ್ಲಿ ಗೃಹಕೃತ್ಯಕ್ಕೆ ತಕ್ಕಷ್ಟು ವಿದ್ಯೆಯನ್ನು ಕಲಿತು, ಮದುವೆಯಾದನಂತರ ಪತಿಶುಶ್ರೂಷೆಯಲ್ಲಿ ಪರಾಯಣೆಯರಾಗಿ ಸಂತಾನವಂ ಪಡೆದು, ತಕ್ಕ ರೀತಿಯಲ್ಲಿ ಮಕ್ಕಳನ್ನು ಬೆಳಸುತ್ತ ಅವರಿಗೆ ವಿದ್ಯಾಭ್ಯಾಸದಲ್ಲಿ ಆಸಕ್ತಿಯನ್ನು ಹುಟ್ಟಿಸಿ, ಆಚಾರಗಳನ್ನು ಕಲಿಸುತ್ತ, ತಿದ್ದುತ್ತ, ತಮ್ಮತಮ್ಮ ಪತಿಗಳಿಗೆ ಅನುಕೂಲೆಯರಾಗಿದ್ದು, ಅವರ ಕಾರ್ಯಗಳಿಗೆ ತಕ್ಕಮಟ್ಟಿಗೆ ಸಹಾಯಗಳನ್ನು ಕೊಟ್ಟುಕೊಂಡು ಅವರ ಮುಖದಿಂದ ಉಚ್ಛ್ರಾಯ ಸ್ಥಿತಿಗೆ ತರಬೇಕು. ... ... ... ... *

ಸಾಧಾರಣವಾಗಿ ಮಕ್ಕಳು ತಾಯಿಗರ್ಭದಲ್ಲಿರುವಾಗಲೂ, ಕೂಸಾಗಿರುವಾಗಲೂ ಬಾಲಕನಾಗುವ ಪರಿಯಂತ, ಅಂದರೆ ೬-೭ ವರ್ಷ ವಯಸ್ಸಾಗುವವರೆಗೂ ಅವುಗಳಿಗೆ ತಾಯಿಯ ಪರಿಚಯವೇ ಹೆಚ್ಚಾಗಿದೆಯಲ್ಲದೆ, ತಂದೆಯಪರಿಚಯವು ಹೆಚ್ಚಾಗಿ ಸಂಭವಿಸುವುದಿಲ್ಲ. ಬಳ್ಳಿಯು ಎಳದಾಗಿರುವಾಗ ಯಾವಕಡೆ ತಿರುಗಿಸಬೇಕಾದರೂ ಸುಲಭವಾಗಿತಿರುಗಿಸಬಹುದು. ಆದರೆ ಬಲಿತಮೇಲೆ ಅಸಾಧ್ಯವಾಗುವುದು. ಹಾಗೆಯೇ ಮಕ್ಕಳಿಗೆ ಬಾಲ್ಯದಲ್ಲಿ ತಾಯಿಯೇ ಸನ್ಮಾರ್ಗವನ್ನು ತೋರಿಸಬೇಕು. ಆ ಕಾಲವು ಅತಿಕ್ರಮಿಸಿದರೆ ತಂದೆಯ ಶಿಕ್ಷಣವು ಅಷ್ಟು ಫಲವನ್ನುಂಟುಮಾಡುವುದಿಲ್ಲ. ಆದಕಾರಣ ತಾಯಿಯೇ ಮಕ್ಕಳಕ್ಷೇಮಕ್ಕೆ ಮುಖ್ಯಕಾರಣವು. ಈ ಭಾವದಿಂದಲೇ ವೇದದಲ್ಲಿ , ಮಾತೃದೇವೋ ಭವ, ಪಿತೃದೇವೋಭವ, ಆಚಾರ್ಯದೇವೋ ಭವ ಎಂದು ತಾಯಿಯು ಮೊದಲನೆಯವಳಾಗಿಯೂ, ತಂದೆಯು ಎರಡನೆಯವನಾಗಿಯೂ ಗುರುವು ಮೂರನೆಯವನಾಗಿಯೂ ಹೇಳಲ್ಪಟ್ಟದ್ದಾರೆ ಆದುದರಿಂದ ಮನುಷ್ಯನಾದವನು ತಾಯಿಯನ್ನು ತಂದೆಗಿಂತಲೂ ಗುರುವುಗಿಂತಲೂ ಅಧಿಕವೆಂದು ಭಾವಿಸಬೇಕು. ಪತಿಯಾದವನಿಗೆ ಹೊರಗೆ ತನ್ನ ಯೋಗ್ಯತಾನುಸಾರವಾದ ಉದ್ಯೋಗವನ್ನುಮಾಡಿ, ಸಂಪಾದಿತವಾದುವನ್ನು ತಂದು ಪತ್ನಿಯಕೈಗೆ ಕೊಡುವುದು ಧರ್ಮವು. ಪತ್ನಿಗಾದರೂ ತಂದುಕೊಟ್ಟುದನ್ನು ಜೋಪಾನವಾಗಿಟ್ಟು, ಸರಿಯಾದ ಮಾರ್ಗದಲ್ಲಿ ಉಪಯೋಗಿಸುತ್ತಾ ಅಡಿಗೆ ಮುಂತಾದವುಗಳನ್ನು ಮಾಡುತ್ತಾ, ಪತಿಯನ್ನು ಸೇವಿಸುತ್ತಾ, ನೆರೆಹೊರೆಯವರಿಗೂ ಬಂಧುಬಾಂಧವರಿಗೂ ಸರಿಯಾಗಿನಡೆಯುವುದು ಮುಖ್ಯಧರ್ಮವು. ಈ ವಿಧವಾದ ವರ್ತನೆವುಳ್ಳ ಕುಲವತಿಯರೇ ಪತಿವ್ರತೆಯರೆನಿಸುವರು. ಈ ವಿಷಯದಲ್ಲಿ ಒಂದು ಸಣ್ಣ ಉಪನ್ಯಾಸವನ್ನು ಮಾಡುವೆನು;— ... ... ... *

## ಹಿಂದೂ ಸ್ತ್ರೀ ಧರ್ಮ;—

ಪ್ರಾಣಿಗಳಲ್ಲಿ ಹೆಣ್ಣು, ಗಂಡು ಎಂದು ಎರಡುವಿಧ ಮನುಷ್ಯ ಜಾತಿಯಲ್ಲಿ ಹೊರತು ಬೇರೆ ಯಾವ ಜಾತಿಯಲ್ಲಾಗಲಿ, ಜೀವಿಸುವುದಕ್ಕಾಗಿ ಹೆಣ್ಣುಗಂಡುಗಳಿಗೆ ಪರಸ್ಪರ

ಸಹಾಯವು ಆವಶ್ಯಕವಾದುದಲ್ಲ ಪಶುಗಳಾಗಲಿ ಪಕ್ಷಿಗಳಾಗಲಿ, ಮೃಗಗಳಾಗಲಿ ಬೇರೆಯಾವ ಜಂತುಗಳಾಗಲಿ ಪ್ರತಿಯೊಂದೂ ಇತರಾಪೇಕ್ಷೆಯಿಲ್ಲದೆ ಸ್ವತಂತ್ರವಾಗಿ ಆಹಾರವನ್ನು ಸಂಪಾದಿಸಿಕೊಂಡು, ಬದುಕುತ್ತ ಸಂತತಿಯನ್ನು ವೃದ್ಧಿಗೊಳಿಸುತ್ತವೆ. ಮನುಷ್ಯರಲ್ಲಿಯೊದರೊ ಸ್ತ್ರೀಪುರುಷರು ಐಕಮತ್ಯದಿಂದ ಒಬ್ಬರಿಗೊಬ್ಬರು ಸಹಾಯಕರಾಗಿರದಿದ್ದರೆ ಸಂಸಾರಧರ್ಮವನ್ನು ನಿರ್ವಹಿಸುವುದಕ್ಕಾಗುವುದಿಲ್ಲ. ಮೋಕ್ಷಾಪೇಕ್ಷೆಯಿಂದ ಸರ್ವಸಂಗ ಪರಿತ್ಯಾಗಮಾಡಿದ ಜಿತೇಂದ್ರಿಯರು ಹೊರತು ಲೌಕಿಕ ವ್ಯಾಪಾರಾದಿಗಳಿಂದ ಜೀವಿಸಬೇಕೆಂಬ ಅಪೇಕ್ಷೆಯುಳ್ಳ ಯಾವ ಪುರುಷರಾದಾಗ್ಯೂ ಅನುಕೂಲೆಯರಾದ ಹೆಂಡತಿಯರಸಹಾಯವಿಲ್ಲದಿದ್ದರೆ ಎಂದಿಗೂ ತಮ್ಮ ಉದ್ದೇಶವನ್ನು ನೆರವೇರಿಸಿಕೊಳ್ಳಲಾರರು. ಒಬ್ಬಕವಿಯು ಹೇಳಿರುವುದೇನೆಂದರೆ,

ಅನುಕೂಲಾಂ ವಿಮಲಾಂಗೀಂ ಕುಲಜಾಂ ಕುಶಲಾಂ ಸುಶೀಲಸಂಪನ್ನಾಂ ॥
ಪಂಚಲಕಾರಾಂ ಭಾರ್ಯಾಂ ಪುರುಷಃ ಪುಣ್ಯೋದಯಾಲ್ಲಭತೆ ॥ ॥೧॥

ಲೋಕದಲ್ಲಿ ಪುರುಷನಾದವನಿಗೆ ಮನೋನುಸಾರವಾಗಿ ನಡೆಯತಕ್ಕವಳಾಗಿಯೂ ಅಂತರಂಗ ಬಹಿರಂಗಗಳಲ್ಲಿ ಶುದ್ಧಳಾಗಿಯೂ, ಸತ್ಕುಲಪ್ರಸೂತಳಾಗಿಯೂ, ಪ್ರವೀಣೆಯೂಗಿಯೂ, ಒಳ್ಳೆಸ್ವಭಾವ ನಡತೆಗಳುಳ್ಳವಳಾಗಿಯೂ ಇರುವ ಹೆಂಡತಿಯು ದೊರೆಯಬೇಕಾದರೆ, ಜನ್ಮಾಂತರದಲ್ಲಿ ಅವನು ಎಷ್ಟೋ ಪುಣ್ಯವನ್ನು ಮಾಡಿರಬೇಕೆಂದು ಆಶ್ಲೋಕದ ತಾತ್ಪರ್ಯ. ಹಿಂದುಗಳೊಳಗೆ ಅಂಥ ಗುಣಗಳುಳ್ಳ ಸ್ತ್ರೀಯರು ಬಹುವಿರಳರಾಗಿರುವುದರಿಂದ ಆಶ್ಲೋಕವು ಹುಟ್ಟಿರಬಹುದೆಂದು ಆಲೋಚಿಸಬೇಕಾಗಿದೆ. ಹಿಂದು ಸ್ತ್ರೀಯರು ಯಥೋಚಿತವಾಗಿ ವಿದ್ಯಾವತಿಯರಾದರೆ ಅವರಿಗೆ ಅನುಕೂಲ್ಯ, ನೈರ್ಮಲ್ಯ, ಕೌಶಲ್ಯ, ಸೌಶೀಲ್ಯ, ಮುಂತಾದ ಧರ್ಮಗಳು ಸ್ವತಸ್ಸಿದ್ಧವಾಗಿ ಬರುವುದಕ್ಕೇನೂ ಅಡ್ಡಿಯಿಲ್ಲ. ಹಿಂದೆ ನಮ್ಮಲ್ಲಿ ಅನೇಕ ಸ್ತ್ರೀಯರು ವಿದ್ಯಾವತಿಯರಾಗಿದ್ದರು. ಈಚೆಗೆ ವಿದ್ಯಾಹೀನೆಯರಾದುದರಿಂದಲೇ ನಿರ್ದಿಷ್ಟವಾದ ಗುಣಗಳಿಲ್ಲದವರಾಗಿ ದುಸ್ಥಿತಿಯಲ್ಲಿದ್ದಾರೆ. ಪ್ರಾಯಶಃ ಹಿಂದೂ ಸ್ತ್ರೀಯರು ಉಣ್ಣುವುದಕ್ಕೆ ಅನ್ನವೂ, ಉಡುವುದಕ್ಕೆ ಬಟ್ಟೆಯೂ, ತೊಡುವುದಕ್ಕೆ ಯೋಗ್ಯತಾನುಸಾರ ಒಡವೆಯೂ ಅಣಿಯಾಗಿದ್ದರೆ, ಶಚೀದೇವಿ ಲಕ್ಷ್ಮೀದೇವಿ ಮುಂತಾದವರೂ ಕೂಡ ತಮಗೆ ಸಮಾನರಾಗಲಾರರೆಂದು ತಿಳಿದುಕೊಳ್ಳುತ್ತಾರೆ. ಗಂಡಂದಿರು ಬೇರೆಬೇರೆ ಉದ್ಯೋಗಗಳಿಂದ ದ್ರವ್ಯಸಂಪಾದನೆಮಾಡಿ, ಅನ್ನವಸ್ತ್ರಾದಿಗಳನ್ನು ಕೊರತೆಯಿಲ್ಲದೆ ಕೊಡುತ್ತಿದ್ದಲ್ಲಿ ತಮಗೆ ಬೇರೆ ಯಾವ ಸದ್ಗುಣಗಳಿಲ್ಲದಿದ್ದಾಗ್ಯೂ ಗಂಡನನ್ನು ಪ್ರೀತಿಸುತ್ತಿರುವವರೇ ಒಳ್ಳೆ ಹೆಂಗುಸರೆನ್ನಿಸಿಕೊಂಡಿದ್ದಾರೆ. ಇಂಥವರು ಪತಿಯ ಮನೋಭಾವವನ್ನು ತಿಳಿಯತಕ್ಕ ಯೋಗ್ಯತೆಯೂ ಗೃಹಕೃತ್ಯಗಳನ್ನು ನಡಿಸತಕ್ಕ ಕ್ರಮವೂ, ಮಕ್ಕಳನ್ನು ಪೋಷಣೆಮಾಡಿ ಅವರಿಗೆ ಒಳ್ಳೇ ಮಾರ್ಗವನ್ನು ಕಲಿಸತಕ್ಕ ತಿಳುವಳಿಕೆಯೂ ಇಲ್ಲದವರಾ ಗಿರುವುದರಿಂದ ಕೇವಲ ಅನರ್ಥಗಳಿಗೆ ಭಾಜನರಾಗಿದ್ದಾರೆ. ಹೊರಗೆ ಜೀವನಕ್ಕೆ ಬೇಕಾದ ಪದಾರ್ಥಗಳನ್ನು

ಸಂಪಾದಿಸಿಕೊಂಡು ಬರುವುದು ಗಂಡಂದಿರ ಕರ್ತವ್ಯವೆಂತಲೂ, ತಂದುದನ್ನು ಜೋಯಿಸಿ ಗಂಡಬಂದಕಾಲಕ್ಕೆ ಊಟಕ್ಕೆ ಬಡಿಸುವುದು ಹೆಂಡತಿಯರ ಕರ್ತವ್ಯವೆಂತಲೂ ತಿಳಿದುಕೊಂಡಿರುವ ಹೆಂಗುಸರೇಬಹುಳ. ಇಂಥವರು ಅನೇಕ ಸಮಯಗಳಲ್ಲಿ ಗಂಡಂದಿರ ಕೋಪಕ್ಕೂ ಅಪ್ರೀತಿಗೂ ಪಾತ್ರರಾಗಿ, ಅದಕ್ಕೆ ಪರಿಹಾರವನ್ನು ತಿಳಿಯದೆ ದಂಡನೆಗೆ ಗುರಿಯಾಗುತ್ತಾರೆ. ವಿವಾಹಿತರಾದ ದಂಪತಿಗಳು ಒಬ್ಬರಿಗೊಬ್ಬರಲ್ಲಿ ಪ್ರೇಮವುಳ್ಳವರಾಗಿದ್ದರೆ ಸುಖಿಗಳಾಗಿರುತ್ತಾರೆ. ಹಾಗಿಲ್ಲದಿದ್ದರೆ ಅವರು ದೇಹವಿರುವ ಪರಿಯಂತ ದುಃಖವನ್ನೇ ಅನುಭವಿಸಬೇಕೆಂಬುದು ಸರ್ವರಿಗೂ ಗೊತ್ತಾಗಿದೆ. ಅಂಥಾ ಪ್ರೇಮವು ಶಾಶ್ವತವಾಗಿ ಪತಿಯಲ್ಲಿರುವಂತೆಮಾಡಿಕೊಳ್ಳಬೇಕಾದರೆ, ಹೆಂಡತಿಯರು ಇಂಗಿತಜ್ಞೆಯರಾಗಬೇಕು. ಮತ್ತೂ ಲೋಕ ಸ್ವಭಾವವನ್ನು ತಿಳಿದವರಾಗಿರಬೇಕು. ಅಂಥಾ ಯೋಗ್ಯತೆಯುಂಟಾಗಬೇಕಾದರೆ ಬಾಲ್ಯದಲ್ಲಿ ತಕ್ಕಮಟ್ಟಿಗೆ ವಿದ್ಯಾಭ್ಯಾಸವನ್ನು ಮಾಡಿರಬೇಕು. ವಿದ್ಯಾವತಿಯರಲ್ಲದ ಸ್ತ್ರೀಯರಿಗೆ ಲೋಕಸ್ವಭಾವವೂ ತಿಳಿಯುವುದಿಲ್ಲ. ಕರ್ತವ್ಯಾಕರ್ತವ್ಯ ವಿಮರ್ಶೆಯೂ ಹುಟ್ಟುವುದಿಲ್ಲ. ಹೆಂಡತಿಯರು ನಾಗರಿಕರಾಗಿದ್ದರೆ ಗಂಡಂದಿರಲ್ಲಿ ಡೊಂಕಿದ್ದರೂ ತಿದ್ದಿಕೊಂಡು ಹೋಗುತ್ತಾರೆ. ನಾಗರೀಕತೆ ಯೆಂಬುವುದು ತಿಳುವಳಿಕೆಯಿಂದ ಬರಬೇಕು. ತಿಳುವಳಿಕೆಯೆಂಬುದು ವಿದ್ಯಾಭ್ಯಾಸದಿಂದ ಹೊರತು ಬರುವುದಿಲ್ಲ. ನಾಗರೀಕತೆಯಿಲ್ಲದೆ ಅನೇಕ ಸ್ತ್ರೀಯರು ಹಾನಿವೃದ್ಧಿಗಳ ಕಾರಣವನ್ನೂ, ಗುಣದೋಷಗಳ ಸ್ವರೂಪವನ್ನೂ ತಿಳಿಯದೆ, ಅನೇಕ ಸಂದರ್ಭಗಳಲ್ಲಿ ಗಂಡಂದಿರ ವೈಮನಸ್ಯಕ್ಕೆ ಪಾತ್ರರಾಗುತ್ತಾರೆ. ಯಾವ ಮನೆಯಲ್ಲಿ ವಿದ್ಯೆ, ವಿನಯ, ವಿವೇಕ ಮುಂತಾದ ಸದ್ಗುಣಗಳಿಂದ ಕೂಡಿದ ಹೆಂಗುಸಿದ್ದಾಳೋ ಆ ಮನೆಯ ನಡವಳಿಕೆಯು ಶ್ಲಾಘನೀಯವಾಗಿರುತ್ತದೆ. ಗಂಡುಸರೂ ಮಕ್ಕಳೂ ಸನ್ಮಾರ್ಗದಲ್ಲಿ ವರ್ತಿಸುತ್ತಾರೆ. ಹೊರಗೆ ದುಡಿದು ಮನೆಗೆಬಂದ ಪತಿಗೆ ತಕ್ಕ ಉಪಚಾರಗಳಿಂದ ದೇಹಾಯಾಸವನ್ನು ಹೋಗಲಾಡಿಸಿ, ತನ್ನಿಂದ ತಿದ್ದಲ್ಪಟ್ಟ ಮಕ್ಕಳ ಆರೋಗ್ಯ, ಬುದ್ಧಿ, ಚಾಕಚಕ್ಯ, ವಿಧೇಯತ್ವ, ಮುಂತಾದ ಗುಣಗಳನ್ನು ಪತಿಗೆತೋರಿಸಿ ಮನೆಯ ಚಿಂತೆಯೊಂದಾದರೂ ಪತಿಯ ಮನಸ್ಸಿಗೆ ತಗಲದಂತೆ ಎಚ್ಚರಿಕೆಯಿಂದ ನಡೆಯತಕ್ಕ ಹೆಂಡತಿಯಲ್ಲಿ ಪತಿಗೆ ನಿರಂತರವಾದ ಪ್ರೇಮವು ದೃಢವಾಗುವುದರಲ್ಲೇನೂ ಸಂಶಯವಿಲ್ಲ. ಸಂಸಾರವೆಂಬ ವೃಕ್ಷದ ಬೆಳವಳಿಗೆಗೆ ಗಂಡಹೆಂಡಂದಿರಿಬ್ಬರೂ ಕಾರಣರಾಗಿರುವಲ್ಲಿ ಗಂಡನು ಎಷ್ಟೇ ಸಮರ್ಥನಾದಾಗ್ಯೂ ಹೆಂಡತಿಯು ಬುದ್ಧಿವಂತೆಯಲ್ಲದಿದ್ದರೆ ಸಂಸಾರವೃಕ್ಷವು ಚೆನ್ನಾಗಿಬೆಳೆಯುವುದಿಲ್ಲ. ಗಂಡನು ಬುದ್ಧಿಯಲ್ಲಿ ಕಡಿಮೆಯಾದಾಗ್ಯೂ ಹೆಂಡತಿಯು ಯೋಗ್ಯಳಾಗಿದ್ದರೆ, ಚೆನ್ನಾಗಿ ಬೆಳೆಯುತ್ತದೆ. ಏಕೆಂದರೆ ಸಂಸಾರವೃಕ್ಷಕ್ಕೆ ಬುದ್ಧಿಶಾಲಿಯಾದ ಗಂಡನ ಸಹಾಯವು ಹೊಯ್ನೀರಿನ ಹಾಗಿರುವುದು. ಬುದ್ಧಿಶಾಲಿಯಾದ ಹೆಂಡತಿಯ ಸಹಾಯವು ಮಳೆಯ ನೀರಿನಹಾಗಿರುವುದು. ಹೊಯ್ನೀರಿನ ಪ್ರಯೋಜನಕ್ಕಿಂತಲೂ ಮಳೆಯ ನೀರಿನ ಪ್ರಯೋಜನವು ಮುಖ್ಯವಲ್ಲವೆ? ಕೆಲವರು ಪಾತಿವ್ರತ್ಯಗುಣವುಳ್ಳವರಾಗಿದ್ದಾಗ್ಯೂ ತಿಳುವಳಿಕೆಯಿಲ್ಲದವರಾಗಿರುವುದರಿಂದ ಯಾವುದೊಂದು

ಲ್ಲಿಯೂ ಧೈರ್ಯವಿಲ್ಲದವರಾಗಿ, ಪತಿಯನ್ನು ಕಂಡರೆ ಗರುಡನನ್ನು ಕಂಡ "ಸರ್ಪದಂತೆ ನೆಕ್ಕೆ ಹುದುಗಿಹೋಗುತ್ತಾರೆ. ಹೀಗಿರುವಲ್ಲಿ ಪತಿಯು ಸಂಗಡ ಲಲಿತವಾಗಿ ಮಾತನಾಡುವುದೆಲ್ಲಿಬಂತು! ಇಂಥ ಹೆಂಡತಿಯರಲ್ಲಿ ಗಂಡಂದಿರಿಗೆ ಪ್ರೀತಿ ವಿಶ್ವಾಸಗಳು ಸಂಪೂರ್ಣವಾಗಿದ್ದಾಗ್ಯೂ, ಗಂಡಹೆಂಡರಿಗೆ ಪರಸ್ಪರ ಸಾಮರಸ್ಯವೆಂಬುವುಧು ಎಂದಿಗೂ ಇರುವುದಿಲ್ಲ. ಹಸುವನ್ನು ಪೋಷಿಸುವವನಿಗೆ ಹಸುವಿನ ವಿಷಯದಲ್ಲಿ ಪ್ರೇಮವೂ, ಹಸುವಿಗೆ ಪೋಷಕನಲ್ಲಿ ನಂಬುವಿಶ್ವಾಸಗಳೂ ಇದ್ದಮಾತ್ರದಿಂದ ಅವರಿಬ್ಬರಿಗೆ ಪರಸ್ಪರ ಸಾಮರಸ್ಯವುಂಟೆಂದು ಹೇಳುವುದಕ್ಕಾದೀತೆ! ರಾಜ ಪ್ರಜೆಗಳಿಗೂ, ಗುರು ಶಿಷ್ಯರಿಗೂ, ಸ್ವಾಮಿ ಭೃತ್ಯರಿಗೂ, ಗಂಡ ಹೆಂಡರಿಗೂ ಸಾಮರಸ್ಯವು ಬೇಕು. ರಾಜಪ್ರಜೆಗಳಿಗೆ ಸಾಮರಸ್ಯವಿಲ್ಲದಿದ್ದಲ್ಲಿ ರಾಜ್ಯನಿರ್ವಾಹವೂ, ಗುರುಶಿಷ್ಯರಿಗೆ ಸಾಮರಸ್ಯವಿಲ್ಲದಿದ್ದಲ್ಲಿ ಜ್ಞಾನನಿರ್ವಾಹವೂ, ಸ್ವಾಮಿಭೃತ್ಯರಿಗೆ ಸಾಮರಸ್ಯವಿರದಿದ್ದಲ್ಲಿ ಸೇವಾನಿರ್ವಾಹವೂ, ಗಂಡಹೆಂಡರಿಗೆ ಸಾಮರಸ್ಯವಿಲ್ಲದಿದ್ದಲ್ಲಿ ಸಂಸಾರನಿರ್ವಾಹವೂ ಆಗುವುದಿಲ್ಲ. ಯಾರಮನೆಯು ಸಂಸಾರದಲ್ಲಿ ದೋಷಗಳು ಪ್ರಕಾಶಕ್ಕೆ ಬರುತ್ತವೋ ಆ ಮನೆಯುಲ್ಲಿ ಗಂಡಹೆಂಡಿರ ಸಾಮರಸ್ಯವಿಲ್ಲವೆಂದು ನಿರ್ಧರಿಸಬೇಕು. ಸ್ತ್ರೀಯರಿಗೆ ಪಾತಿವ್ರತ್ಯದ ಸಂಗಡ ಬುದ್ಧಿ, ಧೈರ್ಯ, ವಿನಯ, ವಿವೇಕ ಮುಂತಾದ ಗುಣಗಳಿರಬೇಕು. ಪಾತಿವ್ರತ್ಯವೆಂಥಾದ್ದೆಂದರೆ;—„ ಪೂರ್ವಕಾಲದಲ್ಲಿ ಧಾರಾನಗರವೆಂಬ ಪಟ್ಟಣದಲ್ಲಿ ಭೋಜರಾಜನೆಂಬ ಒಬ್ಬ ದೊರೆ ಇದ್ದನು. ಇವನು ಒಂದಾನೊಂದು ದಿವಸ ಸಾಯಂಕಾಲದಲ್ಲಿ ತನ್ನ ಪಟ್ಟಣದಲ್ಲಿ, ಒಳ್ಳೇ ಜನಗಳಿರುವರೋ ಅಥವಾ ಕೆಟ್ಟಜನಗಳಿರುವರೋ ಎಂದು ನಿರ್ಧರಿಸಲು ಸಂಚಾರಹೊರಟು, ಪಟ್ಟಣವನ್ನೆಲ್ಲಾ ಒಂದುಸಾರಿ ಸುತ್ತಿ, ಕೊನೆಗೆ ಒಬ್ಬಾನೊಬ್ಬ ಬಡಬ್ರಾಹ್ಮಣನ ಮನೆಗೆ ಬಂದು ಬಾಗಲಿನ ಜಗತಿಯಮೇಲೆ ನಿಂತನು. ಆ ಬ್ರಾಹ್ಮಣನ ಮನೆಯಲ್ಲಿ ಪದ್ಧತಿಯ ಪ್ರಕಾರ ಅಗ್ನಿಯು ಉರಿಯುತ್ತಿತ್ತು. ಅದರ ಸಮೀಪದಲ್ಲಿ ಒಂದು ಮಗುವು ಮಲಗಿತ್ತು. ಬ್ರಾಹ್ಮಣನು ಮತ್ತೂ ಅವನ ಹೆಂಡತಿಯು ಒಂದುಕಡೆ ಮಲಗಿದ್ದರು. ಮಗುವು ನಿದ್ದೆಯಿಂದೆಚ್ಚತ್ತು ಉರಿಯುತ್ತಿದ್ದ ಕೆಂಡವನ್ನು ಹಿಡಿದುಕೊಳ್ಳಲು ತೆವಳಿಕೊಂಡು ಹೊರಡುವುದಕ್ಕೆ ಪ್ರಾರಂಭಮಾಡಿತು. ಅಷ್ಟರಲ್ಲಿ ಮಗುವಿನ ತಾಯಿಗೆ ಎಚ್ಚರವಾಗಿ ನೋಡುವಲ್ಲಿ, ತಾನು ಎದ್ದರೆ ಗಂಡನಿಗೆ ನಿದ್ರಾಭಂಗವಾಗುತ್ತದೆ; ಪತಿವ್ರತಾ ಧರ್ಮಕ್ಕೆ ಕುಂದಕಬರುವುದು. ಏಳದಿರಲು ಮಗುವು ಅಗ್ನಿಯೊಳಗೆಬಿದ್ದು ಸುಟ್ಟುಹೋಗುತ್ತೆಂದು ಶಕ್ತಿಮೇ ಅಗ್ನಿಯನ್ನು ಕುರಿತು „ ನಾನು ನಿಜವಾಗಿಯೂ ಪತಿವ್ರತೆಯಾಗಿದ್ದ ಪಕ್ಷದಲ್ಲಿ, ನೀನು ಸುಡುವ ಸ್ವಭಾವವನ್ನು ಬಿಟ್ಟು ಶಾಂತವಾಗೆಂದು ಪ್ರಾರ್ಥಿಸಲು, ಅಗ್ನಿಯು ಅವಳ ಪತಿವ್ರತ್ಯಧರ್ಮಕ್ಕೆ ಮೆಚ್ಚಿ ಶಾಂತವಾಗಲು, ಅಷ್ಟರಲ್ಲಿ ಮಗುವು ಹೋಗಿ ಅಗ್ನಿಯಲ್ಲಿ ಒಂದು ಕ್ಷಣಪರ್ಯಂತ ಬೀಳಲು ಏನೂ ಆಗಲಿಲ್ಲ. ಮೊದಲಿಗಿಂತಲೂ ಮಗುವು ಇನ್ನೂ ಚೆನ್ನಾಯಿತು. ಅಷ್ಟರಲ್ಲಿ ಗಂಡನಿಗೆ ಎಚ್ಚರವಾಗಲು, ತತ್‌ಕ್ಷಣವೇ ಆಕೆಯು ಎದ್ದು ಮಗುವನ್ನು ಮೇಲಕ್ಕೆತ್ತಿ ಮುದ್ದಾಡಲು ಮಗುವು ಸಂತೋಷವಾಗಿಯೇ ಇತ್ತು. ಇದನ್ನೆಲ್ಲಾ

ಭೋಜರಾಜನು ಬಾಗಲಿನಲ್ಲಿ ನೋಡುತ್ತಿದ್ದು ತನ್ನ ಮನಸ್ಸಿನಲ್ಲಿ ಆಹಾ? ನಾನು ಎಷ್ಟು ಪುಣ್ಯವಂತ? ನನ್ನ ಪಟ್ಟಣದಲ್ಲಿ ಇಂಥಾ ಪತಿವ್ರತೆಯರೂ ಕೂಡ ಇದ್ದಾರೆಂದು ಬಗೆದು, ಬೆಳಗಾಯಿತೆಂದು ತನ್ನ ಅರಮನೆಗೆ ಹೊರಟುಹೋದನು. ಕಟ್ಟಳೆಯ ಪ್ರಕಾರ ದರ್ಬಾರಾಗಲು, ಅದರಲ್ಲಿ ಅನೇಕ ಕವಿಗಳು ಸೇರಿದ್ದರು. ಅವರೊಳಗೆ ಕಾಳಿದಾಸನೆಂಬ ಒಬ್ಬ ಕವಿಯೂ ಇದ್ದನು. ದೊರೆಯು ಅವರುಗಳನ್ನು ಕುರಿತು ಹೇಳಿದ್ದೇನೆಂದರೆ;—„ ಹುತಾಶನಶ್ಚಂದನ ಪಂಕಶೀತಲಃ „ ಎಂಬ ಶ್ಲೋಕದ ಕೊನೆಯಭಾಗವನ್ನು ಬಾಯಲ್ಲಿ ಹೇಳಿ ಪೂರ್ತಿಮಾಡಿರೆಂದು ಕೇಳಲು ಒಬ್ಬರಿಗೂ ಗೊತ್ತಾಗದೆ, ಕಾಳಿದಾಸನಿಗೆ ಮಾತ್ರ ಕಾಳಿಕಾದೇವಿಯ ವರವಾದ್ದರಿಂದ, ಅವನು ಮನಸ್ಸಿನಲ್ಲಿ ಧ್ಯಾನಿಸಿ, ಕೊನೆಗೆ ಆ ಶ್ಲೋಕವನ್ನು ಕೆಳಗೆ ಹೇಳುವ ಪ್ರಕಾರ ಪೂರ್ತಿಯಾಗಿ ಹೇಳಿಬಿಟ್ಟನು:— ... ... *

ಸುತಂಪತಂತಂಪ್ರಸಮೀಕ್ಷ್ಯಪಾವಕೇ। ನಬೋಧಯಾಮಾಸಪತಿಂಪತಿವ್ರತಾ॥
ತದಾಭವತ್ತತ್ಪತಿಭಕ್ತಿಗೌರವಾತ್। ಹುತಾಶನಶ್ಚಂದನಪಂಕಶೀತಲಃ॥

ಆದ್ದರಿಂದ ಪತಿವ್ರತೆಯರಿಗೆ ಎಂಥ ವಿಪತ್ತು ಬಂದರೂ ಸುಖಪ್ರದಾಯಕವಾಗುವುದು. ಪಾತಿವ್ರತ್ಯವು ಮಾತ್ರವಿದ್ದು ಮಿಕ್ಕಾದ ಸುಗುಣಗಳಿಲ್ಲದಿದ್ದರೆ, ಪತಿಯಲ್ಲಿ ಸಾಮರಸ್ಯ ಉಂಟಾಗುವುದಿಲ್ಲ. ಸಾಮರಸ್ಯವೆಂದರೆ ಏಕದೇಹದಂತಿರುವುದು. ಸ್ತ್ರೀಯರು ಬಾಲ್ಯದಲ್ಲಿ ತಂದೆತಾಯಿಗಳಿಂದ ಪೋಷಣೆ ರಕ್ಷಣೆಗಳನ್ನು ಹೊಂದಿದಾಗ್ಯೂ, ಯೋಗ್ಯರಾದ ಪುರುಷರನ್ನು ಕೈಹಿಡಿದಮೇಲೆ, ಉಭಯರಿಗೂ ಸಾಮರಸ್ಯ ವುಂಟಾಗದಿದ್ದರೆ, ದೇಹವಿರುವಪರ್ಯಂತವೂ ಒಂದೇವಿಧವಾದ ಪ್ರೇಮವು ಸ್ಥಿರವಾಗಿ ನಿಲ್ಲಲಾರದು. ... *

ಲೋಕದಲ್ಲಿ ಪ್ರಕೃತಿಯು ವಿಚಿತ್ರವಾದುದರಿಂದ ಒಬ್ಬೊಬ್ಬರ ಗುಣಶೀಲಗಳು ಒಂದೊಂದು ವಿಧವಾಗಿರುತ್ತವೆ. ಇಬ್ಬರಿಗೆ ಸ್ನೇಹವುಂಟಾಗಬೇಕಾದರೆ, ಇಬ್ಬರವಯಸ್ಸು ಶೀಲ, ಸ್ವಭಾವ ಮುಂತಾದ ಗುಣಗಳು ಒಂದೇವಿಧವಾಗಿರಬೇಕು. ಹಾಗಿದ್ದರೆ ಆವರಿಬ್ಬರ ಸ್ನೇಹವು ಶಾಶ್ವತವಾಗಿರುತ್ತದೆ. ಯಾವುದೋ ಒಂದು ಕಾರ್ಯನಿಮಿತ್ತವಾಗಿ ಸಮಾನ ಧರ್ಮವಿಲ್ಲದ ಇಬ್ಬರಿಗೆ ಸ್ನೇಹವುಂಟಾಗುವುದುಂಟು. ಆ ಸ್ನೇಹವು ಆ ಕಾರ್ಯ ಪೂರೈಸುವಪರ್ಯಂತವೇ ಹೊರತು ಯಾವಾಗಲೂ ಇರುವುದಿಲ್ಲ. ಗಂಡಹೆಂಡಿರ ಸ್ನೇಹವೆಂಬುವುದು ತಾತ್ಕಾಲಿಕವಾದುದಲ್ಲ. ಮರಣ ಪರ್ಯಂತರ ಒಬ್ಬರಿಗೊಬ್ಬರು ಲೋಕಯಾತ್ರೆಯಲ್ಲಿ ಸಹಾಯಕರಾಗಿರಬೇಕೆಂಬ ಇಚ್ಛೆಯಿಂದ ಉಂಟಾಗುತ್ತದೆ. ಯಾರ ಸ್ನೇಹಕ್ಕಾದರೂ ನಡುವೆ ವಿಘಾತ ಬರಬಹುದು. ಗಂಡಹೆಂಡಿರ ಸ್ನೇಹಕ್ಕೆ ವಿಘಾತವುಬರಕೂಡದು. ಬಂದರೆ ಇಹಪರಗಳಲ್ಲಿ ಅನೇಕಾನರ್ಥಗಳು ಸಂಭವಿಸುವುವು. ಆದಕಾರಣ ಸ್ನೇಹವಿಘಾತ ಉಂಟಾಗದಂತೆ ಸ್ತ್ರೀಯರು ವಿವೇಕದಿಂದ ಪತಿಗಳಲ್ಲಿ ಸಾಮರಸ್ಯವುಳ್ಳವರಾಗಿರಬೇಕು. ...

ಸ್ತ್ರೀಯರಿಗೆ ವಿದ್ಯೆ, ಮರ್ಯಾದೆ, ಧರ್ಮ, ಪಾತಿವ್ರತ್ಯ, ಗೃಹಕೃತ್ಯ, ಮಕ್ಕಳ ಪೋಷಣೆ, ಶಿಕ್ಷಣೆ, ದೈವಭಕ್ತಿ ಇವೇ ಮುಖ್ಯಲಕ್ಷಣಗಳು. ಈ ಲಕ್ಷಣಗಳುಳ್ಳ ಸ್ತ್ರೀಯೇ ಕುಲಸ್ತ್ರೀ ಎನಿಸುವಳು. ಇಂಥಾವಳನ್ನು ಹೊಂದಿದ ಪುರುಷನಿಗೆ ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳು ಕರತಲಾಮಲಕವಾಗಿರುವುದಲ್ಲದೆ ಆಕೆಯೇ ಗೃಹರತ್ನವೆನಿಸುವಳು. ಈ ಅರ್ಥದಲ್ಲಿ ಒಬ್ಬ ಕವಿಯು ಹೇಳುವುದೇನೆಂದರೆ;— ... *

ವಿದ್ಯಾವತೀಧರ್ಮಪರಾಕುಲಸ್ತ್ರೀಲೋಕೇನರಾಣಾಂ ರಮಣೀಯರತ್ನಂ ।
ತತ್ಶೋಭತೆಯಸ್ಯಗೃಹೆಸದೈವಧರ್ಮಾರ್ಥ ಕಾಮಾರ್ಲಭತೆಸಧನ್ಯಃ॥

ಸಹೋದರಿಯರೇ? ಈಗ ಮುಖ್ಯವಾಗಿ ಜ್ಞಾಪಕದಲ್ಲಿಡಬೇಕಾದ ಕೆಲವು ಮಾತುಗಳನ್ನು ಹೇಳಿ ನನ್ನ ಉಪನ್ಯಾಸವನ್ನು ನಿಲ್ಲಿಸುವೆನು. ... ... *

ಅರ್ಧಂಭಾರ್ಯಾಮನುಷ್ಯಸ್ಯ ಭಾರ್ಯಾಶ್ರೇಷ್ಠತಮಸ್ಸಖಾ ॥
ಭಾರ್ಯಾಮೂಲಂತ್ರಿವರ್ಗಸ್ಯ ಭಾರ್ಯಾಮೂಲಂಕರಿಷ್ಯತಃ ॥೧॥

ಎಂಬಂತೆ ಮನುಷ್ಯನಿಗೆ ಹೆಂಡತಿಯು ಅರ್ಧಾಂಗಿಯಾಗಿಯೂ, ಮಿತ್ರರೊಳಗೆ ಶ್ರೇಷ್ಠಮಿತ್ರಳಾಗಿಯೂ, ಧರ್ಮಾರ್ಥಕಾಮಗಳಿಗೆ ಆಧಾರಳಾಗಿಯೂ ಇರುವುದರಿಂದ, ಕುಲವತಿಯರಾದವರು ವಿದ್ಯಾವತಿಯರಾಗಿ ತಮ್ಮ ಪತಿಗಳ ಮನೋವೃತ್ತಿಯನ್ನು ಹಿಡಿದು ನಡೆಯುತ್ತಾ ಪತಿಯ ಪ್ರೀತಿಗೆ ಪಾತ್ರರಾಗಿ, ಬುದ್ಧಿಯಿಂದ ಗೃಹಕೃತ್ಯಗಳನ್ನು ಸಾಗಿಸುತ್ತಾ, ಮಕ್ಕಳನ್ನು ಬೆಳಸಿ, ಸನ್ಮಾರ್ಗಕ್ಕೆ ತಂದು ಇಹಪರಗಳಲ್ಲಿ ಸುಖವನ್ನು ಹೊಂದುವುದೇ ಸ್ತ್ರೀಜನ್ಮ ಸಾಫಲ್ಯವೆಂಬುದು ಹಿಂದುಮತದ ಸ್ತ್ರೀಧರ್ಮ ಸಂಗ್ರಹವಾಗಿರುವುದೆಂದರಿಯಬೇಕು. ... ... ... ... *

ಜ ನ್ನ ಮ್ಮ.
ಅಸಿಸ್ಟೆಂಟ್ ಮಿಸ್ಟ್ರೆಸ್ ಮಹಾರಾಣಿ ಕಾಲೇಜಿ
ಮೈಸೂರು.

## ಸ್ತ್ರೀಜನೋತ್ಕರ್ಷದ ಸಾರಾಸಾರ ವಿಚಾರ.

### ಈ ವಿಷಯವನ್ನು ಕುರಿತು ಶ್ರೀಮತಿ ಭಾಗೀರಥಿಬಾಯಿ ಸೋಲಾಪುರ ಇವರು ಮಾಡಿದ ಭಾಷಣವು.

ಮಹನೀಯರಾದ ಸಭಾಧ್ಯಕ್ಷರೇ? ಮತ್ತು ನನ್ನ ಪ್ರಿಯ ಸೋದರಿಯರೇ! ಈ ವೀರಶೈವ ಮಹಾಸಭೆಯು ಐದನೇಯ ದಾವರೂ ನಮ್ಮ ಈ ಸ್ತ್ರೀವರ್ಗಕ್ಕೆ ಇದು ಮೊದಲನೆಯ ದಾಗಿರುವದು. ಇದು ಅಲ್ಲದೆ ಮುಂದಿನ ಶ್ರೀಮದ್ವೀರಶೈವ ಮಹಾಸಭೆಯನ್ನು ಕೂಡಿಸುವ ಮಹನೀಯ ಪುರುಷರಿಗೆ ಮಾರ್ಗದರ್ಶಕವಾಗಿರುತ್ತದೆ. ನಮ್ಮ ಬಳ್ಳಾರಿಯ ವಿದ್ವಾಂಸರಾದ ಪ್ರಮುಖ ಜನರು ಈ ನಮ್ಮ ಸ್ತ್ರೀವರ್ಗವನ್ನು ಒಂದೇ ಸ್ಥಲದಲ್ಲಿ ಕೂಡಿಸಿ, ಪರಸ್ಪರ ಐಕ್ಯಮತ್ಯವನ್ನು ಹುಟ್ಟಿಸುವ ಉತ್ತಮ ವಿಚಾರವನ್ನು ಮಾಡುವ ಈ ಒಳ್ಳೇಸಂಧಿಯನ್ನು ಕೂಡಿಸಿಕೊಟ್ಟದ್ದಕ್ಕೆ ನಾವೆಲ್ಲರೂ ಅವರ ಆಭಾರವನ್ನು ಪ್ರೇಮಪೂರ್ವಕ ಅಭಿನಂದಿಸಬೇಕಾಗುತ್ತದೆ. ಮುಂದೆ ಕೂಡಿಸುವ ಪ್ರತಿಸಂದು ಸಭೆಯ ಕೂಡ ಈ ಸ್ತ್ರೀಸಭೆಯನ್ನು ಕೂಡಿಸಬೇಕೆಂಬದಾಗಿ ಮಹಾಸಭೆಯ ಪ್ರಮುಖಮಂಡಲಿಗೆ ನನ್ನ ಸವಿನಯ ಪ್ರಾರ್ಥನೆಯದೆ. ಈ ಪ್ರಸಂಗದ ಮೂಲಕವಾದ ತಮ್ಮೆಲ್ಲರ ದರ್ಶನಲಾಭದಿಂದುಂಟಾದ ಆನಂದವು ನನ್ನ ಹೃದಯಾಕಾಶದಲ್ಲಿ ತುಂಬಿ, ಹೊರಸೂಸುತ್ತಿದೆ. ಈ ಆನಂದ ಭರದಿಂದ ಹೊರಡುವ ಎರಡು ತೊದಲು ಮಾತುಗಳನ್ನು ತಮ್ಮಗಳ ಮುಂದಿಡಲು ಇಚ್ಛಿಸುತ್ತೇನೆ. ಆದರೆ ಸಭೆಯಲ್ಲಿ ಮಾತನಾಡುವ ಪ್ರಸಂಗವು ಇದು ಮೊದಲನೆಯದು ಇದ್ದು, ನನಗೆ ಕನ್ನಡದಲ್ಲಿ ಮಾತನಾಡುವ ಅಭ್ಯಾಸವು ಸರಿಯಾಗಿ ಇರುವದಿಲ್ಲ. ಆದುದರಿಂದ ನನ್ನ ಮಾತುಗಳಲ್ಲಿ ಉಂಟಾಗಿರುವ ಶಬ್ದದೋಷಗಳನ್ನು ಬಿಟ್ಟು, ಸಾರಾಂಶವನ್ನು ಕ್ಷೀರ ನೀರ ನ್ಯಾಯದಂತೆ ಗ್ರಹಿಸಬೇಕೆಂಬದಾಗಿ ತಮ್ಮೆಲ್ಲರನ್ನು ಪ್ರಾರ್ಥಿಸುತ್ತೇನೆ. ... ... *

### ಶಿಕ್ಷಣದಿಂದಾಗುವ ಲಾಭವು.

ಅಮ್ಮಗಳಿರಾ? ನಮ್ಮ ಸಮಾಜದಲ್ಲಿ ಶಿಕ್ಷಣದ ಪ್ರಸಾರವು ಆಗದಿ ಕಡಿಮೆ ಇರುವದರಿಂದ ಜಗತ್ತಿನಲ್ಲಿ ಎಲ್ಲಿ ಏನು ನಡೆದಿರುವದೆಂಬುದು ತಿಳಿಯದಂತಾಗಿರುವದು. ಮತ್ತು ನಮ್ಮ ಈ ಸ್ತ್ರೀ ಸಮಾಜವು ಧಾರ್ಮಿಕ ನೈತಿಕ ವಿಷಯಗಳಲ್ಲಿ ಬಹು ಶೋಚನೀಯ ಸ್ಥಿತಿಯಲ್ಲಿದ್ದು, ಎಷ್ಟು ಹಿಂದುಳಿದಿರುವದು ಇದರ ವಿಚಾರವನ್ನು ಅವಶ್ಯವಾಗಿಮಾಡಿ ಶಿಕ್ಷಣದ ಕೊರತೆಯನ್ನು ದೂರ ಮಾಡಬೇಕು. ಇದರಿಂದ ನಮ್ಮಗಳಿಗೆ ಸಂಸಾರದಲ್ಲಿಯ ಅನೇಕ ಪ್ರಕಾರವಾದ ಉತ್ತಮ ಸುಖದ ಅನುಭವವು ಸಿಗುವದಲ್ಲದೆ, ನಮ್ಮಲ್ಲಿ ಹುಟ್ಟುವ ಸಂತತಿಯನ್ನುಕೂಡಾ ಜ್ಞಾನವುಳ್ಳದ್ದನಾಗಿಮಾಡುವ ಪ್ರಬಲೇಚ್ಛೆಯು ನಮ್ಮಗಳಲ್ಲಿಹುಟ್ಟುವದು

ನಮ್ಮ ಸ್ತ್ರೀವರ್ಗದ ಕಡಿಗೆ ಹುಡುಗರ ಸಂರಕ್ಷಣದ ಕೆಲಸ ಇದ್ದದರಿಂದ ಏಳು ಎಂಟು ವರ್ಷ ವಯಸ್ಸಿನವರಿಗೂ ಹುಡುಗರು ನಮ್ಮಗಳ ಸ್ವಾಧೀನದಲ್ಲಿದ್ದು ಅಜ್ಞಾಪಾಲನೆ ಮಾಡಬೇಕಾಗುವದು. ನಮಗೆ ಶಿಕ್ಷಣವು ಇಲ್ಲದಿದ್ದರೆ ನಮ್ಮಗಳ ಸ್ವಾಧೀನದಲ್ಲಿಯೇ ೭-೮ ವರ್ಷ ವಯಸಾಗುವವರಿಗೂ ಇರುವ ಹುಡುಗರಿಗೆ ನಮ್ಮಿಂದ ವಿದ್ಯಾಪ್ರಾಪ್ತಿಯು ಹ್ಯಾಗಾಗುವದು. ಅಷ್ಟುಕಾಲವಾದರೂ ವ್ಯರ್ಥ ಕಳೆದಂತಾಗುವದಲ್ಲದೇ, ಮನಬಂದಂತೆ ತಿರುಗಾಡಿ ಮುತಾಳರಾಗುತ್ತಾರೆ. ಮುಂದೆ ಪುರುಷರ ಸ್ವಾಧೀನದಲ್ಲಿ ಹೋದನಂತರ ಅವರಿಗಾದರೂ ಶಿಕ್ಷಣಕೊಡುವ ವಿಷಯದಲ್ಲಿ ಬಹು ಶ್ರಮವನ್ನು ಹೊಂದಿ, ಹುಡುಗರನ್ನು ಮಾರ್ಗಕ್ಕೆ ತರಬೇಕಾದರೆ ೩-೪ ವರ್ಷಗಳು ಬೇಕಾಗುತ್ತವೆ. ಇಷ್ಟರಲ್ಲಿಯೇ ಹುಡುಗರು ೧೧-೧೨, ವರ್ಷದವರಾಗುತ್ತಾರೆ. ಇಷ್ಟು ವಯಸ್ಸಿನಲ್ಲಿಯೇ ತಾಯಿಯರು ಸುಶಿಕ್ಷಿತರಿದ್ದರೆ, ಹುಡುಗರಿಗೆ ೩-೪ನೇ ಈಯತ್ತೆಗಳು ಸಹಜ ಆಗುತ್ತವೆ. ಇಷ್ಟೇವಯಸ್ಸಿನ ಅಶಿಕ್ಷಿತ ಸ್ತ್ರೀಯರ ಹುಡುಗರ ಅಭ್ಯಾಸದ ಆರಂಭವಾಗುತ್ತದೆ. ಆ ಅಭ್ಯಾಸವು ೩-೪ವರ್ಷ ಅಲ್ಪಸ್ವಲ್ಪವಾಗುವದರಲ್ಲಿಯೇ ಎಷ್ಟೋ ಹುಡುಗರಿಗೆ ಹೊಟ್ಟೆ ಹೊರಿಯುವದಕ್ಕೆ ಬೇರೇ ಕೆಲಸದಲ್ಲಿ ಬೀಳುವ ಪ್ರಸಂಗವು ಪ್ರಾಪ್ತವಾಗುತ್ತದೆ. ಆದರೆ ಅಂಥವರು ವಿದ್ವಾಂಸರಾಗುವದು ಹ್ಯಾಗೆ, ಮೂರ್ಖತನದಲ್ಲಿಯೇ ಅವರು ಅಮೂಲ್ಯವಾದ ನರಜನ್ಮವನ್ನು ಕಳೆಯಬೇಕಾಗುತ್ತೆ. ಆದ್ದರಿಂದ ನಮ್ಮ ಪುರುಷವರ್ಗದವರು ವ್ಯಾಪಾರದಲ್ಲಿ ಅತಿನಿಷ್ಣಾತರಾಗಿ ಇದ್ದದರಿಂದ ವಾಣಿ(ವ್ಯಾಪಾರಿ ಎಂಬ ನಾಮವನ್ನು ಸಂಪಾದಿಸಿದರು. ಈಗ ಅನ್ಯ ಜಾತಿಯವರಕಿಂತಲೂ ನಮ್ಮ ವರ್ಗದವರು ಶಿಕ್ಷಣದಲ್ಲಿ ಹಿಂದುಳಿದಿರುವದರಿಂದ ಸರ್ವ ಸಮಾಜದವರಿಕಿಂತ ನಮ್ಮ ಸಮಾಜದವರು ದಿನೇದಿನೇ ಕೆಳಗೆ ನಡೆದಿರುವರು. ಮತ್ತು ವ್ಯವಹಾರಿ ಈ ಶಬ್ದವು ಎರಡನೇ ದವರನ್ನು ಹೊಂದಿರುತ್ತದೆ; ಮತ್ತು ಹೊಂದುತ್ತಾ ಇರುತ್ತದೆ. ಇದಕ್ಕೆ ಸ್ತ್ರೀಯರಾದ ನಾವೇ ಮುಖ್ಯ ಕಾರಣವು. ಆದ್ದರಿಂದ ಮಕ್ಕಳ ಸಣ್ಣ ವಯಸ್ಸಿನಲ್ಲಿ ಪುರುಷರಕಡಿಯಿಂದ ಯಾವದೊಂದು ಕಾರ್ಯವು ಆಗಲಾರದು. ಈ ಕಾರಣ ನಾವೆಲ್ಲರೂ ಸುಶಿಕ್ಷಿತರಾಗಿ ಪುರುಷವರ್ಗಕ್ಕೆ ಸಹಾಯವನ್ನು ಮಾಡುವದು, ನಮ್ಮಗಳ ಕರ್ತವ್ಯಕರ್ಮವಾಗಿರುತ್ತದೆ. ಇದಲ್ಲದೆ ಯಥಾರ್ಥವಾಗಿ ವಿಚಾರವನ್ನು ಮಾಡಿ ನೋಡಿದರೆ ಮನುಷ್ಯಜನ್ಮದಲ್ಲಿ ಉತ್ಪನ್ನರಾಗಿ ಅಜ್ಞಾನವೆಂಬ ಅಂಧಕಾರದಲ್ಲಿ ಸಂಕಟಪಡುವದಕ್ಕಿಂತಲು, ಜ್ಞಾನವೆಂಬ ಬೆಳಕಿನಲ್ಲಿ ಸುಖವಾಗಿರುವದು ಒಳ್ಳೇದಲ್ಲವೇ? ಜನ್ಮದ ಸಾರ್ಥಕವಾದರೂ ಮಾಡಿದಂತಾಗುವದಿಲ್ಲವೇ ? ನಮ್ಮ ಸಮಾಜೋನ್ನತಿಯ ಸಮೀಪದ ಮಾರ್ಗವಾದರೂ ಸ್ತ್ರೀಯರಲ್ಲಿ ಸಮಾಜ ಜಾಗ್ರುತಿ ಮಾಡುವದಾಗಿರುತ್ತದೆ.

ಯಾವದಾದರೊಂದು ತತ್ವದ ಪ್ರಸಾರವು ಸ್ತ್ರೀಯರಲ್ಲಿ ಆದರೆ ಆ ತತ್ವವು ಸಮಾಜದಲ್ಲಿ ಸ್ಥಾಯಿಯಾಗಿ ಇರುವದೆಂದು ತಿಳಿಯಬೇಕಾಗುತ್ತೆ. ಸರ್ವಸಾಧಾರಣವಾಗಿ ನಿಯಮವು

ಹೀಗೆ ಇರುತ್ತದೆ. ಏನೆಂದರೇ;—ಬುದ್ಧಿಯು ಪುರುಷರಿಗೆ ಸಾಧಿಸುತ್ತದೆ, ಅಂತಃಕರಣದ ಪರಿಣಾಮ ಧರ್ಮವು ಸ್ತ್ರೀಯರಲ್ಲಿ ವಿಶೇಷವಿರುತ್ತದೆ. ... ... *

ಇದರಿಂದ ವಿಚಾರಮಾಡುವ ಕೆಲಸವನ್ನು ಮುಖ್ಯವಾಗಿ ಪುರುಷರು ಮಾಡುತ್ತಾರೆ ಮತ್ತು ಪವಿತ್ರತ್ವ, ಶುಚಿರ್ಭೂತತ್ವ, ನಿರ್ಮಲತ್ವ, ಭೂತದಯಾ ಇವೇ ಮೊದಲಾದ ಉಚ್ಚತಮ ಮನೋವೃತ್ತಿಗಳನ್ನು ರಕ್ಷಿಸುವ ಭಾರವು ಸ್ತ್ರೀಯರಕಡಿಗೆ ಇರುತ್ತದೆ. ಸಮಾಜದ ಸ್ಥೈರ್ಯ ಮತ್ತು ಉತ್ಕರ್ಷ ಇವು ಸ್ತ್ರೀಯರ ಇಂಥ ಗುಣಗಳನ್ನೇ ಅವಲಂಬಿಸಿರುತ್ತವೆ. ಈ ಕಾರಣ ಸ್ತ್ರೀಯರಿಗೆ ತಕ್ಕ ಶಿಕ್ಷಣವನ್ನು ಅವಶ್ಯ ಕೊಡಬೇಕೆಂದು ಬೇರೇ ಹೇಳಬೇಕಾಗಿಲ್ಲ. ಆ ಪ್ರಕಾರ ಶಿಕ್ಷಣವನ್ನು ಕೊಟ್ಟರೆ, ಸಮಾಜದ ಜಾಗ್ರುತಿಯು ತೀವ್ರವಾಗುವದು ಇದರಲ್ಲಿ ಯಾವ ಸಂಶಯವು ತೋರುವದಿಲ್ಲ ಸ್ತ್ರೀಯರಿಗೆ ಅವರವರ ಪರಿಸ್ಥಿತಿಗೆ ತಕ್ಕಂತೆ ನೈತಿಕ ಶಿಕ್ಷಣವನ್ನು ಕೊಟ್ಟದ್ದಾದರೆ ಅವರು ಪ್ರಪಂಚ, ಮತ್ತು ಪಾರಮಾರ್ಥ ಇವೆರಡು ಸುಖಗಳಿಗೆ ಪಾತ್ರರಾಗುತ್ತಾರೆ. ಯಲ್ಲಿ ಪ್ರಪಂಚ ಜ್ಞಾನದ ಅಭಾವ ವಿರುತ್ತದೆಯೋ ಅಲ್ಲಿ ಪಾರಮಾರ್ಥಿಕ ವಿಚಾರದ ಬುದ್ಧಿಯು ಎತ್ತಣದು. ... ... *

ಮೇಲೆ ಹೇಳಿರುವ ಈ ಮಹಾವಾಕ್ಯವನ್ನನುಸರಿಸಿ, ಸ್ತ್ರೀಯರಾದ ನಾವೆಲ್ಲರೂ ಶಿಕ್ಷಣವನ್ನು ಸಂಪಾದಿಸಲೇಬೇಕು. ಶಿಕ್ಷಣದಿಂದುಂಟಾದ ಲಾಭದ ವಿಷಯದಲ್ಲಿ ನವೀನವಾದ ಒಂದು ಉದಾಹರಣವನ್ನು ತಮ್ಮಮುಂದೆ ಇಡುತ್ತೇನೆ. ನಮ್ಮ ವೀರಶೈವ ಸಮಾಜದಲ್ಲಿ ಲೋಕಮಾನ್ಯರಾದ ಶ್ರೀಮತಿ ಸೌಭಾಗ್ಯವತಿ ಮಾತೃಶ್ರೀ ಬಸವ್ವಾ ಅವ್ವಾ ವಾರದ ಇವರ ವಿಷಯವನ್ನು ಹೇಳುವದಕ್ಕೆ ನನಗೆ ದುಃಖವಾಗುತ್ತದೆ. ಇವರು ಚರಿತ್ರಯೋಗ್ಯರು. ಆದರೆ ಇವರಿಗೆ ಶಿಕ್ಷಣವು ಸ್ವಲ್ಪ ದೊರೆದಾಗ್ಯೂ, ಶ್ರೀಮಂತ ಅಪ್ಪಾಸಾಹೇಬ ವಾರದ, ಈ ಮಹಾ ವಿಭೂತಿಗಳ ನಿರಂತರ ಸಹವಾಸದಿಂದ, ಇವರು ವಿಚಾರದಿಂದ ಪ್ರಗಲ್ಭರಾಗಿ ಲೋಕದಲ್ಲಿ ಶಾಶ್ವತವಾದ ನಿರ್ಮಲ ಕೀರ್ತಿಯನ್ನು ಸಂಪಾದಿಸಿದರು. ಹ್ಯಾಗೆ ಪರಲೋಕದಲ್ಲಿ ಮಾತೃ ಶ್ರೀಯವರು ಅಮರರಾದರೋ ಅದರಂತೆ ಕೀರ್ತಿಯನ್ನಾದರೂ ಮರ್ತ್ಯಲೋಕದಲ್ಲಿ ಅಮರವನ್ನಾಗಿ ಮಾಡಿದರೆಂದು ನಾನುಖಂಡಿತವಾಗಿ ಹೇಳುತ್ತೇನೆ. ಈ ಸಾಧ್ವೀಶಿರೋಮಣಿಯರಿಗೆ ನಮ್ಮ ವೀರಶೈವ ಸ್ತ್ರೀಸಮಾಜದ ಉತ್ಕರ್ಷದ ವಿಷಯದಲ್ಲಿ ಉತ್ಕಟೇಚ್ಛೆಯು ಇತ್ತು. ಈ ಮಹನೀಯರು ಅಕಾಲದಲ್ಲಿಯೇ ನಮ್ಮ ಸಮಾಜದ ಕೈಬಿಟ್ಟು ಹೋದದ್ದು, ನಮ್ಮ ಸ್ತ್ರೀ ಸಮಾಜಕ್ಕೆ ಬಹಳ ಹಾನಿಯಾಗಿರುತ್ತದೆ. ಈ ಹಾನಿಯು ನಿವಾರಣೆಯು ಅಶಕ್ಯವಾದದೆ ಇವರು ಇನ್ನು ಕೆಲವು ದಿವಸಗಳವರೆಗೂ ಇದ್ದರೆ ಎಲ್ಲಾ ಕಡಿಗಾಗದಿದ್ದರೂ ನಮ್ಮ ಮಹಾರಾಷ್ಟ್ರ ಪ್ರಾಂತದ ವಲ್ಲಿಯ ಸ್ತ್ರೀಯರ ಉನ್ನತಿಯು ಸ್ವಲ್ಪಕಾಲದಲ್ಲಿಯೇ ಆಗುವಂತಿತ್ತು.

ಸ್ತ್ರೀಯರಿಗೆ ಸಾಧಾರಣವಾಗಿ ಬರಿಯುವದಕ್ಕೆ ಓದುವದಕ್ಕೆ ಬರುತಿದ್ದರೆ ಸಾಕು. ಇಲ್ಲದ ಅಭಿಮಾನವುಳ್ಳವರಾಗಿ ಲೋಕನಿಂದೆಗೆ ಪಾತ್ರರಾಗುತ್ತಾರೆ. ಇಂಥ ಸ್ತ್ರೀಯರು ಶ್ರೀ

ಸಾ॥ ಬಸವ್ವಾ ಅವ್ವಾ ವಾರದ, ಇವರ ಅನುಕರಣವನ್ನು ಅವಶ್ಯಮಾಡಬೇಕು. ಅವರಿಗೆ ಸರಿಯಾಗಿ ಓದುವದಕ್ಕೂ ಬರಿಯುವದಕ್ಕೂ ಬರುತ್ತಿದ್ದುದರಿಂದ, ಅವರು ಸ್ತ್ರೀಯರ ಧಾರ್ಮಿಕ, ನೈತಿಕ, ಗ್ರಂಥಗಳನ್ನು ಓದಿ ಅವುಗಳ ಮನನವನ್ನು ಚನ್ನಾಗಿಮಾಡುತ್ತಿದ್ದರು. ಅದರಿಂದಲೇ ಆ ಮಹಾಸಾಧ್ವಿಯು ತಮ್ಮ ಅಮೂಲ್ಯ ಗುಣಗಳ ಉತ್ಪತ್ತಿಯಮಾರ್ಗವನ್ನು ನಮ್ಮ ಸ್ತ್ರೀವರ್ಗಕ್ಕೆ ತೋರಿಸಿಕೊಟ್ಟರೆಂದು ನಾನು ಸಂಪೂರ್ಣನಂಬಿದ್ದೇನೆ. ಲೀನತೆ ಗಾಂಭೀರ್ಯ, ಸಮತಾ ಸತ್ಯತ್ವ, ಏಕನಿಷ್ಠಾಪತಿಯ ಆಜ್ಞಾಪರತ್ವ ಇವೇ ಮೊದಲಾದ ಉದಾತ್ತ ಗುಣಗಳು ಅವರಲ್ಲಿ ನೈಜಾಂಗಗಳಾಗಿದ್ದವು. ಮತ್ತು ಅಭಿಮಾನವು ಅವರನ್ನು ಸ್ವಲ್ಪಾದರೂ ಮುಟ್ಟುತ್ತಿರಲಿಲ್ಲ. ಅವರ ಅಪೂರ್ವ ಸೌಂದರ್ಯವನ್ನು ವರ್ಣನಮಾಡಿ ಅಮೂಲ್ಯವಾದ ತಮ್ಮಗಳ ವೇಳೆಯನ್ನು ನಾನು ಕಳೆಯಲು ಇಚ್ಛಿಸುವದಿಲ್ಲ. ಯಾತಕ್ಕೆಂದರೆ ಆ ಸಾಧ್ವೀಮಣಿಯರ ಜೀವನ ಚರಿತ್ರವು ಸ್ವಲ್ಪ ದಿವಸಗಳಲ್ಲಿಯೇ ತಯಾರಾಗುವದಿರುತ್ತದೆ. *

ಆ ಮಾತ್ರುಶ್ರೀಗಳವರು ಈ ದಿವಸ ಇಲ್ಲಿ ಇದ್ದಿದ್ದಾದರೆ ತಮ್ಮಗಳಿಗೆ ಈಗಾಗಿರುವ ಆನಂದಕ್ಕಿಂತಲು ನೂರುಪಾಲು ಹೆಚ್ಚಿಗೆ ಆಗುತ್ತಿತ್ತು. ಅವರ ಚರಿತ್ರದ ಬೋಧವನ್ನು ನಮ್ಮ ಸಹ ವರ್ಗಿಯರಾದ ತಾವೆಲ್ಲರೂ ಸ್ವೀಕರಿಸಬೇಕೆಂದು ಇಚ್ಛಿಸುತ್ತೇನೆ. ಯಥಾರ್ಥವಾಗಿ ವಿಚಾರವನ್ನು ಮಾಡಿ ನೋಡಿದ್ದಾದರೆ ಸಂಸಾರದಲ್ಲಿ ನಮ್ಮ ಸ್ತ್ರೀಯರ ಮಹತ್ವವು, ಅಧಿಕವಾಗಿರುತ್ತದೆ. ಆ ಮರ್ಯಾದೆಯಿಂದ ನಮ್ಮಗಳಲ್ಲಿ ಜವಾಬದಾರಿಯು ಅಧಿಕವಾಗಿಯೇ ಇರುತ್ತದೆ. ಆದುದರಿಂದ ನಮ್ಮ ಸ್ತ್ರೀವರ್ಗಕ್ಕೆ ವಿದ್ಯೆಯನ್ನು ಕಲಿಯುವದು ಅತ್ಯವಶ್ಯಕವದೆ. ಈ ರೀತಿಯಾದ ಸುಶಿಕ್ಷಿತ ಸ್ತ್ರೀಯರ ಉಪಯೋಗವು ಎಷ್ಟರಮಟ್ಟಿಗಿರುವದೆಂಬುವದನ್ನು ಸೂಜ್ಞರಾದ ಸ್ತ್ರೀಯರು ಮತ್ತು ಪುರುಷರು ತಿಳಿದಿರುವರು. ಸರಿಯಾಗಿಕಲಿತಿರುವ ಸ್ತ್ರೀಯರು ಸಂಸಾರದಲ್ಲಿರುವ ತಮ್ಮ ಜವಾಬದಾರಿಯನ್ನು ಚನ್ನಾಗಿ ತಿಳಿದು, ಅದರಲ್ಲಿ ಬರುವ ಒಳ್ಳೇ ಮತ್ತು ಕೆಟ್ಟ ಪ್ರಸಂಗಗಳಲ್ಲಿ ಧೈರ್ಯದಿಂದಾಚರಿಸಿ, ತಮ್ಮ ಪತಿಗಳಿಗೆ ಸಹಾಯವನ್ನು ಮಾಡುವರು. ಇದರಲ್ಲಿ ಯಾವಸಂಶಯ ವಿಲ್ಲವು. ಇತ್ತಿತ್ತ ಸ್ತ್ರೀ ಶಿಕ್ಷಣದ ವಿಷಯದಲ್ಲಿ ಸರ್ವಸಮಾಜಗಳಲ್ಲಿಯು ಪುರುಷವರ್ಗದ ಲಕ್ಷವು ಅಂಕುರಿಸುತ್ತನಡಿದು ಆದಷ್ಟುಮಟ್ಟಿಗೆ ಪ್ರಯತ್ನವು ಆರಂಭಿಸಿರುತ್ತದೆ ಇದು ಒಳ್ಳೇ ಸಂತೋಷಕಾರಕವಾದ ಮಾತಾಗಿದೆ. ತಥಾಪಿ ನಮ್ಮ ವೀರಶೈವ ಸಮಾಜದಲ್ಲಿ ಈ ವರಿಗೂ ಈ ಮಾತಿನಕಡಿಗೆ ಆದಷ್ಟು ಲಕ್ಷ್ಯ ಹೋಗದೆ ಇದ್ದದರಿಂದ ನಮ್ಮ ಸ್ತ್ರೀ ಸಮಾಜವು ಅಜ್ಞಾನವೆಂಬ ಅಂಧಕಾರದಲ್ಲಿ ಮುಳುಗಿ ಹೋಗಿರುವದು. ಇದು ಅತಿದುಃಖ ಕಾರಕವಾಗಿರುವದು. ಸ್ತ್ರೀಯರಿಗೆ ಶಿಕ್ಷಣ ಕೊಡುವದರಿಂದಾಗುವ ಲಾಭವೇನು, ಅವರು ನೌಕರಿಯನ್ನು ಮಾಡುವರೇನು, ಮತ್ತು ಸ್ತ್ರೀಯರು ವಿದ್ಯಾವತಿಯರಾದರೆ ಸಂಸಾರದಲ್ಲಿ ಅವರ ಪ್ರವೃತ್ತಿಯೇ ಆಗುವದಿಲ್ಲ. ಸ್ವೇಚ್ಛಾಚಾರಿಗಳಾಗಿ ದುರ್ವರ್ತನಿಯರಾಗುವರು ಎಂಬುದೇ ಮೊದಲಾದ ಆಕ್ಷೇಪವನ್ನು ಎಷ್ಟೋಜನರು ಮಾಡುತ್ತಿರುವರು. ಇದನ್ನು ಸ್ಥಿರಪಡಿಸುವದಕ್ಕೆ ಕೆಲವು ಉದಾಹರಣಗಳನ್ನು ಕೊಡುವರು. ಅವ

ರನ್ನು ನಾನು ಅತಿ ವಿನಯಪೂರ್ವಕ ಕೇಳುತ್ತೇನೆ. ಏನೆಂದರೆ;—ಶಿಕ್ಷಣವುಳ್ಳ ಸ್ತ್ರೀಯರೇ ಹೀಗಾಗುತ್ತಿದ್ದರೆ, ಶಿಕ್ಷಣವಿಲ್ಲದ ಸ್ತ್ರೀಯರು ದುರಾಚಾರಿಗಳು ಯಾಕಾಗುವರು. ಇದರ ಕಾರಣವನ್ನು ಪುರುಷವರ್ಗ್ಗದವರು ಹೇಳಬಲ್ಲರೋ ಮತ್ತು ಯಾವವಿದ್ಯೆಯಿಂದ ಪುರುಷರು ಸುಸಂಸ್ಕೃತರಾಗುವರೋ ಅದೇ ವಿದ್ಯೆಯು ಸ್ತ್ರೀಯರನ್ನು ಮಾತ್ರ ನೀಚಕೋಟಿಯಲ್ಲಿ ಹಾ ಕುವದೆಂದು ಹೇಳುವದು ಕೇವಲ ದುರಾಗ್ರಹದ ಮಾತಾಗುವದು. ... *

ನೀರಿನಲ್ಲಿ ವಿಷಮಭಾವ ಹ್ಯಾಗಿಲ್ಲವೋ ಅದರಂತೆ ವಿದ್ಯೆಯಲ್ಲಿಯಾದರೂ ವಿಷನು ಭಾವನೆಯು ಇರುವದಿಲ್ಲ. ವಿದ್ಯೆಯ ಗಂಧವು ಕೂಡಾ ಇಲ್ಲದಿರುವ ನೂರಾರು ಸ್ತ್ರೀಯರು ಮತ್ತು ಪುರುಷರು ಇವರಂತೆ ವಿದ್ಯಾಸಂಪನ್ನರಾಗಿ. ಉತ್ತಮ ಪದವಿಯನ್ನು ಸಂಪಾದಿಸಿ ರುವ ಪುರುಷರು ಕೂಡಾ ದುರ್ವರ್ತನದಲ್ಲಿ ಮಗ್ನರಾದದ್ದು ತಮ್ಮ ದೃಷ್ಟಿಗೆ ಬೀಳುತ್ತಿರು ವರು. ಇದರಿಂದ ವಿದ್ಯೆಯು ಮುಖ್ಯವಾಗಿ ಜ್ಞಾನಸಂಪಾದನಕ್ಕೆ ಶುದ್ಧಾಚರಣೆಗೆ(ನೀತಿಯಿಂದ ಆಚರಿಸುವದಕ್ಕೆ) ಕಾರಣವಾಗುತ್ತದಲ್ಲದೆ, ಕೆಡಕಿಗೆ ಕಾರಣವಲ್ಲೆಂದು ಸಿದ್ಧವಾಗುತ್ತದೆ. ಆದರೆ ವಿದ್ಯಾ, ಮತ್ತು ನೀತಿ ಇವಗಳ ಸಂಪಾದನಮಾಡುವದರಿಂದ ಸ್ತ್ರೀಯರ ಕಡಿಯಿಂದ ದುಷ್ಟಕಾರ್ಯವಾಗುವದೆಂಬ ಸಂಶಯವನ್ನು ಮಾಡುವದು ಅಸಮಂಜಸವಲ್ಲವೇ ? ಮನು ಷ್ಯನಕಡಿಯಿಂದ ಕೆಟ್ಟ ಕೆಲಸಗಳು ಸಂಭವಿಸಿದರೆ ಅದು ಅದೃಷ್ಟಮೂಲಕವೆಂದು ತಿಳಿಯ ಬೇಕು ಆ ಕೆಟ್ಟ ಕರ್ಮವನ್ನು ದೂರೀಕರಿಸುವ ಮಾರ್ಗವಾದರೂ ವಿದ್ಯಾ ಸಂಪಾದನವೇ ಎಂದು ಹೇಳಬೇಕಾಗುತ್ತದೆ. ಆದರೆ ಸ್ತ್ರೀಯರು ವಿದ್ಯೆಯನ್ನು ಕಲಿಯಕೂಡದು, ಸಾಧಾ ರಣ ಕೆಟ್ಟಕೆಲಸಗಳನ್ನೇಮಾಡಿ, ತಮ್ಮ ಆಯುಷ್ಯವನ್ನು ಕಳೆಯಬೇಕೆಂದು ಯಾವಶಾಸ್ತ್ರ ವಾದರೂ ಹೇಳಲಾರದು. ಒಂದುವೇಳೆ ಹಾಗೇ ಹೇಳುವದಾದರೆ ,, ಜ್ಞಾನೇನಹೀನಾಃ ಪಶು ಭಿಃಸಮಾನಾಃ ,, ಎಂಬದಾಗಿ ಮನುಷ್ಯಕೋಟಿಯಲ್ಲಿ ಸಾಮಾನ್ಯವಾಗಿ ಎಂದೂ ಹೇಳುತ್ತಿ ರಲಿಲ್ಲ. ಸ್ತ್ರೀಯರು ಸುಶಿಕ್ಷಿತರಾಗಿ ಇರಬೇಕೆಂಬುವ ವಿಷಯದಲ್ಲಿ ನೂರಾರು ಉದಾಹರಣ ಗಳು ಪ್ರಾಚೀನ ಗ್ರಂಥಗಳಲ್ಲಿ ದೊರಿಯುತ್ತವೆ. ಇತಿಹಾಸದಕಡಿಗೆ ದೃಷ್ಟಿಯನ್ನು ಚಲ್ಲಿದರೆ ವಿದ್ಯಾದಿ ಸದ್ಗುಣಸಂಪನ್ನರಾದ ಸ್ತ್ರೀಯರ ನಿರ್ಮಲಕೀರ್ತಿಯು ಆಯಾ ಇತಿಹಾಸಗಳನ್ನು ಪವಿತ್ರಮಾಡಿರುತ್ತದೆ. ಆದರೆ ಇಂಥ ಸುಧಾರಣೆಯ ಕಾಲದಲ್ಲಿ ನಮ್ಮ ಈ ಸ್ತ್ರೀಮಂಡಲಿಯ ಉನ್ನತಿಯು ಆಗದಿದ್ದರೆ, ನಮ್ಮಗಳ ಜೀವನವೇ ವ್ಯರ್ಥವಾಗುವದು. ಪ್ರೊಫೆಸರ ಛತ್ರೇ ಮತ್ತು ದೇವಲ ಇವರ ಸರ್ಕಸದಕಡಿಗೆ ಸ್ವಲ್ಪಲಕ್ಷ್ಯಕೊಟ್ಟು ನೋಡಿದರೆ ಮರ್ಕಟವೊದ ಲಾದ ವನಚರ ಪ್ರಾಣಿಗಳು, ಪಶುಪಕ್ಷಿಗಳು ಇವುಗಳಿಗೆ ಸರಿಯಾದ ಶಿಕ್ಷಣವನ್ನುಕೊಟ್ಟು ಅವುಗಳ ಕಡಿಯಿಂದಲೂ ಕೂಡಾ ಆಶ್ಚರ್ಯಕರಗಳಾದ ಕೆಲಸಗಳನ್ನು ಮಾಡಿಸುವರು. ಆದರೆ ಬುದ್ಧಿಯಿಂದಲೂ, ಜ್ಞಾನದಿಂದಲೂ ಸಮಾನವಾದ ಮನುಷ್ಯಕೋಟಿಯಲ್ಲಿಯ ಸ್ತ್ರೀಮಂಡ ಲಿಯ ಉನ್ನತಿಯ ವಿಷಯದಲ್ಲಿ ಪ್ರಯತ್ನವನ್ನು ಮಾಡಬಾರದೆಂಬುವದಿದು ಅತಿ ಶೋಚ ನೀಯವಾಗಿದೆ. ... ... ... ... *

## ವ್ಯವಹಾರದ ವಿಷಯದಲ್ಲಿ ಸ್ತ್ರೀಯರ ಉಪಯೋಗ.

ನಮ್ಮ ಸಮಾಜದಲ್ಲಿಯೇ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವದು ಅತ್ಯವಶ್ಯ ವಿರುತ್ತದೆ. ಯಾತಕ್ಕಂದರೆ;—ನಮ್ಮ ಸಮಾಜದಲ್ಲಿ ವ್ಯಾಪಾರ, ಉದ್ಯೋಗ, ನೇಯುವದು, ಮೊದಲಾದ ಸ್ವತಂತ್ರ ಕೆಲಸಗಳೇ ಮುಖ್ಯವಾಗಿ ಇರುವದರಿಂದ, ಪುರುಷರಿಗೆ ಆಯಾವ ಕಾರ್ಯವು ಮಾಡುವದಾಗಿರುತ್ತದೆ. ಆಯಾ ಕೆಲಸದಲ್ಲಿ ಸ್ತ್ರೀಯರ ಸಹಾಯವು ಅವಶ್ಯಬೇಕಾಗುತ್ತದೆ. ಹ್ಯಾಗಂದರೆ ವ್ಯಾಪಾರಿ, ನೈಕಾರ, ವಕ್ಕಲಿಗ ಇವರ ಎಷ್ಟೋ ಸ್ತ್ರೀಯರು ಕಾಲಕ್ಕನುಸರಿಸಿ, ಪುರುಷರಕೂಡಾ ಅಂಗಡಿ, ಮತ್ತು ಕೊಡ ತೆಗೆದುಕೊಳ್ಳೋಣ, ಹಾಗೂ ಹೊಲದಕೆಲಸವೇ ಮೊದಲಾದವಗಳನ್ನು ಮಾಡುವ ಪ್ರಚಾರವು ರೂಢಿಯಲ್ಲಿರುತ್ತದೆ. ಅದರಲ್ಲಿ ಕೊಡ ತೆಗದುಕೊಳ್ಳುವ ವ್ಯವಹಾರವು ಮನುಷ್ಯರ ಸಂಬಳವನ್ನು ಕೊಡುವದು ಕೆಲಸದಲ್ಲಿ ನಿಗಾಯಿಡೋಣ, ಧಾನ್ಯವೇ ಮೊದಲಾದದ್ದನ್ನು ತೂಗುವದು, ಇವೇ ಮೊದಲಾದ ಪ್ರಪಂಚದಲ್ಲಿಯ ಎಲ್ಲ ಕೆಲಸಗಳನ್ನು ಸ್ತ್ರೀಯರೇ ಮಾಡಬೇಕಾಗುತ್ತದೆ. ಆದರೆ ಅವರಿಗೆ ಓದುವದು ಬರಿಯುವದು ಬಾರದೆ ಹೋದರೆ, ಲೆಕ್ಕದವಿಚಾರವು ಅವರಲ್ಲಿರದಮೂಲಕ ಕೇವಲ ಪರಾವಲಂಬಿಗಳಾಗಿರಬೇಕಾಗುತ್ತೆ. ಬರಿಯುವದು ಓದುವದೇ ಮೊದಲಾದದ್ದು ಬಂದಿದ್ದರೆ ಸಂಸಾರದ ಕೆಲಸದಲ್ಲಿ ಪುರುಷರಿಗೆ ಅವರು ಎಷ್ಟು ಸಹಾಯಕರಾಗುವರು. ... *

## ಸುಶೀಲತನ ಮತ್ತು ಪವಿತ್ರತಾ.

ಮೂಲತಃ ವ್ಯವಹಾರ ದೃಷ್ಟಿಯನ್ನು ಬಿಟ್ಟುಕೊಟ್ಟು, ಮನೇಕೆಲಸದಲ್ಲಿ ಸುಶಿಕ್ಷಿತ ಸ್ತ್ರೀಯರ ಉಪಯೋಗವು ಧರ್ಮದೃಷ್ಟಿಯಿಂದ ಎಷ್ಟಾಗುವದೆಂಬುವದನ್ನು ಇಲ್ಲಿ ಸ್ವಲ್ಪವಿಚಾರಿಸುವ;—ಸ್ತ್ರೀಯರ ಆಚಾರವು ನಮ್ಮ ಧರ್ಮದಂತೆ, ಪವಿತ್ರವಾಗಿ ಇರಲೇಬೇಕಾಗುತ್ತದೆ. ಆದರೆ ಧರ್ಮಜ್ಞಾನದ ಗಂಧವು ಲೇಶವಾದರೂ ಇಲ್ಲದಿರುವದರಿಂದಲೂ, ಅನೇಕ ಪ್ರಕಾರವಾದ ಪವಿತ್ರಾಚಾರದ ಮಹತ್ವವನ್ನು ತಿಳಿಯದೇ ಇರುವದರಿಂದಲೂ ಎಷ್ಟೋ ಸ್ತ್ರೀಯರು ಶಾಸ್ತ್ರವಿರುದ್ಧವಾದ ನಡಾವಳಿಯನ್ನು ಮನಬಂದಂತೆ ಮಾಡುತ್ತಾರೆ. ಶಾಸ್ತ್ರದಲ್ಲಿ ಹೇಳಿದಂತೆ ಶುಚಿರ್ಭೂತರಾಗಿ ಇಷ್ಟಲಿಂಗದ ಪೂಜೆಯನ್ನು ಮಾಡದೇ, ಸ್ನಾನವನ್ನುಮಾಡದೇ ಅಡಗಿಯನ್ನು ಮಾಡುವದು ಅದೇ ಅನ್ನವನ್ನೇ ಹಾಗೇ ಉಣ್ಣುವರು. ಮತ್ತು ಎರಡನೇದವರನ್ನು ಉಣಿಸುವರು, ಇದು ಎಂಥ ಅನಾಚಾರವು. ನಿತ್ಯಸ್ನಾನವನ್ನು ಮಾಡುವದವರಿಗೆ ಬೇಸರವಾಗುತ್ತದೆ ಮತ್ತು ನಾವು ಮನಿಯನ್ನು ಬಿಟ್ಟು ಹೊರಗೆ ಹೋಗುವದಿಲ್ಲ, ಮುಡಿಚಟ್ಟುಪದಾರ್ಥವನ್ನು ಮುಟ್ಟುವದಿಲ್ಲ, ಇದರಿಂದ ಪ್ರತಿದಿನ ಮೈತೊಳೆಯಬೇಕೆಂಬ ಅವಶ್ಯಕತೆ ಇರುವದಿಲ್ಲವೆಂದು ಅನೇಕಸ್ತ್ರೀಯರು ಗೊಣಗುಟ್ಟುವದುಂಟು ಆದರೆ ಅವರಿಗೆ ಧರ್ಮಶಾಸ್ತ್ರದ ಗುಟ್ಟು ತಿಳಿಯದಮೂಲಕ ಅದರಂತಾಚರಿಸಲು ಮನವಲ್ಲದಿದ್ದರೂ ವೈದ್ಯಶಾಸ್ತ್ರದ ಹಿತೋಕ್ತಿಯನ್ನಾದರು ಯಾತಕ್ಕಾಲಿಸಬಾರದು. ನಿತ್ಯಸ್ನಾನದಿಂದ ಶರೀ

ರಕ್ಕೆ ಆರೋಗ್ಯವು ಉಂಟಾಗುವದಲ್ಲದೆ, ಧರ್ಮಶಾಸ್ತ್ರವನ್ನು ಮರ್ಯಾದಿಸಿದಂತಾಗುವದು. ಸ್ತ್ರೀಯರು ಈ ವಚನವನ್ನು ಅನುಸರಿಸಿ ನಡೆಯಬೇಕು. ಪವಿತ್ರತ್ವವು ಸ್ತ್ರೀಯರ ಧರ್ಮದಲ್ಲಿ ಮುಖ್ಯಾಂಗವಾಗಿರುವದು. ಮನೆಯಲ್ಲಿರುವ ಸ್ತ್ರೀಯರ ಪವಿತ್ರವಾದ ಆಚಾರದಿಂದ ಮನೆಯ ಶೋಭೆಯು ಹೆಚ್ಚಾಗುತ್ತದೆ. ಇದರಿಂದ ಆ ಕುಟುಂಬವು ಜನರಮರ್ಯಾದೆಗೆ ಸಂಪೂರ್ಣ ಪಾತ್ರವಾಗುತ್ತದೆ. ... ... ... ... *

## ಹುಡುಗರ ಶಿಕ್ಷಣಕ್ಕೆ ಸ್ತ್ರೀಯರ ಸಹಾಯವು.

ಸ್ತ್ರೀಯರಿಗೆ ಶಿಕ್ಷಣವಿಲ್ಲದಿದ್ದರೆ ಹಾನಿಯನ್ನುವದು ಆವದುಂಟೋ, ಅದು ಬಾಲ ಶಿಕ್ಷಣವು. ಅನೇಕ ಕೆಲಸಗಳ ಮೂಲಕ ಪುರುಷರಿಗೆ ಹುಡುಗರ ಅಭ್ಯಾಸದ ವಿಷಯದಲ್ಲಿ ಮೂಲತಃ ಲಕ್ಷವನ್ನು ಕೊಡುವದಾಗುವದಿಲ್ಲ. ಇದರಿಂದ ಮಕ್ಕಳು ಹ್ಯಾಗಾಗಬೇಕೋ ಹಾಗೇನು ವಿದ್ವಾಂಸರು ಮತ್ತು ಸದಾಚಾರಿಗಳಾಗುವದಿಲ್ಲ. ಆ ಮಕ್ಕಳ ತಾಯಿಯು ತಾನು ಕಲಿತವಳಾಗಿ ನೀತಿಯುಳ್ಳವಳಾಗಿದ್ದರೆ ಆ ಸ್ತ್ರೀಯಳು ತನಗೆ ಅವಕಾಶದೊರೆದ ವೇಳೆಯಲ್ಲಿ ಶಿಕ್ಷಣವನ್ನು ತನ್ನ ಪ್ರೀತಿಪಾತ್ರರಾದ ಮಕ್ಕಳಿಗೆ ಅಕ್ಕರದಿಂದ ಕೊಡುವಳು. ಆದರೆ ಇದ ರಿಂದ ಎಷ್ಟು ಉಪಯೋಗವಾಗುವದೆಂಬುದು ತಾವೇ ಊಹಿಸರಿ. ಮತ್ತು ಇದರಿಂದ ತಮ್ಮ ಮನೇಕೆಲಸದಿಂದ ಶಿಕ್ಕಿರುವ ಅವಕಾಶವನ್ನು ಸ್ತ್ರೀಯರು ಬಳ್ಳೇದರಲ್ಲಿಯೇ ಕಳೆದಂತಾಗು ವದಿಲ್ಲವೇ! ಇಲ್ಲವಾದರೆ ನಮ್ಮ ಸ್ತ್ರೀಯರ ಪುರಸತಿನ ವೇಳೆಯ ಕೆಲಸವಾದರೂ ಬಬ್ಬರ ಗೊಬ್ಬರು ಪರಿಹಾಸಮಾಡುವದು, ಇಲ್ಲವೇ ಬಡವಿವಸ್ತುಗಳ ವಿಷಯಕವಾಗಿ ಕೆಲಸಕೆಬಾ ರದ ಮಾತುಗಳಾಡೋಣವು, ಪರಸ್ಪರ ಮರ್ಮದ ಮಾತುಗಳನ್ನು ನಿಷ್ಕಾರಣವಾಗಾಡಿ ಕಲ ಹಕ್ಕೆ ಕಾಲುಕೆದರುವದು ಇದು ಆಗಿರುತ್ತದೆ. ಈ ಸರ್ವ ಪ್ರಾದುರ್ಭಾವವು ಅನಭ್ಯಾಸವೂ ಲಕವೆಂದು ಯಾತಕ್ಕನ್ನಬಾರದು. ಆದರೂ ಇತ್ತಕಡೆಗೆ ನಮ್ಮ ಸಮಾಜವು ಹ್ಯಾಗೆ ಕೊಡ ಬೇಕೋ ಹಾಗೇನು ಲಕ್ಷವನ್ನು ಕೊಡುವದಿಲ್ಲ. ವಾಸ್ತವಿಕವಾಗಿ ನೋಡಿದರೆ ಯಾವಸಮಾ ಜದಲ್ಲಿ ನೂರರಲ್ಲಿ ಐದುಜನರೂ ಕೂಡಾ ಪುರುಷರು ವಿದ್ವಾಂಸರಿಲ್ಲವು. ಅಂದಬಳಿಕ ಅಂಥ ಸಮಾಜದಲ್ಲಿ ಸ್ತ್ರೀಯರ ಶಿಕ್ಷಣದವಿಷಯದಲ್ಲಿ ಇಚ್ಛೆಯು ಹ್ಯಾಗೆ ತಾನೇ ಉತ್ಪನ್ನವಾದೀತು ಪ್ರಸ್ತುತ ಕಾಲದಲ್ಲಿ ಬಾಲಕರ ಸಮಾನವಾಗಿ, ಬಾಲಕಿಯರಿಗೂ ಶಿಕ್ಷಣವನ್ನು ಕೊಟ್ಟು ನ ಮ್ಮ ಹಿಂದುಳಿದಿರುವ ಸಮಾಜವನ್ನು ವಿದ್ಯಾವಿಭೂಷಿತವನ್ನಾಗಿ ಮಾಡಬೇಕೆಂಬುದೇ ನನ್ನ ಇಚ್ಛೆಯು. ಹೀಗೆ ಮಾಡದ ಹೊರ್ತು ನಮ್ಮ ಸಮಾಜದಲ್ಲಿ ವಿದ್ಯಾಪ್ರಸಾರವು ಎಂದು ಆ ಲಾರದೆಂದು ನಂಬುತ್ತೇನೆ. ಯಾವಸಮಾಜದಲ್ಲಿ ಬಾಲಬಾಲಕಿಯರ ಶಿಕ್ಷಣದ ಕಾಳಜಿಯು ಸಮಾನವಾಗಿದೆಯೋ ಅಂಥ ಸಮಾಜದ ಭರಭರಾಟೆಯು ಅವಶ್ಯ ಆಗುವದು. ಈ ವಿಷಯ ದಲ್ಲಿ ಯುರೋಪಿಯನ್ ಪಾರಸೀ ಇವರ ಉದಾಹರಣವು ನಮ್ಮಗಳ ಕಣ್ಣಮುಂದೆ ಇರು ವದು. ಏಕಂದರೆ ಪ್ರತಿಯೊಬ್ಬ ಸ್ತ್ರೀಯಳು ಕಲಿತವಳಿರುವದರಿಂದ ಆ ಸಮಾಜದಲ್ಲಿಯೇ ಪ

ಹುಗರು ಅಶಿಕ್ಷಿತ ಅನಾಥ್ಯ, ಆಲಸೀ, ಸ್ವೇಚ್ಛಾಚಾರೀ ಹೀಗಿರುವವರು ಬಹುಶಃ ಶಿಗುವದಿಲ್ಲ. ಆದುದರಿಂದ ನಮ್ಮ ಸಮಾಜದ ಉನ್ನತಿಯು ಆಗಬೇಕೆಂಬುವ ಇಚ್ಛೆಯು ನಮ್ಮ ಸಮಾಜದ ಪ್ರಮುಖ ಪುರುಷರಿಗೆ ಮತ್ತು ನನ್ನ ಪ್ರಿಯಸಹೋದರಿಯರಿಗೂ ಇದ್ದರೆ ಬಾಲಬಾಲಕಿಯರ ಗೃಹಶಿಕ್ಷಣದ ಸುಲಭವಾಗುವದರುದ್ದಿಶ್ಯ ಸ್ತ್ರೀಯರಿಗೆ ಶಿಕ್ಷಣವು, ಅವಶ್ಯ ಕೊಡಬೇಕು. ... ... ... ... *

## ಗೃಹವ್ಯವಸ್ಥೆಯ ಕೆಲಸದಲ್ಲಿ ಸ್ತ್ರೀಯರ ದಕ್ಷತೆ.

ಪ್ರಪಂಚದಲ್ಲಿರುವ ಸರ್ವ ವ್ಯವಸ್ಥೆಯು ಸ್ತ್ರೀಯರ ಕೈಯಲ್ಲಿ ಇರುತ್ತದೆ. ಆದರೆ ಅಶಿಕ್ಷಿತ ಹೆಣ್ಣುಮಕ್ಕಳು ಬಹುಶಃ ಬಂಡೇ ಪ್ರವೃತ್ತಿಯುಳ್ಳ ದುರಾಗ್ರಹಿ ಗರ್ವಿಷ್ಟ ಇಂಥವರೇ ಗೋಚರರಾಗುವರು. ಇಂಥ ಸ್ತ್ರೀಯರ ಕಡಿಯಿಂದ ಪ್ರಪಂಚದ ಕೆಲಸವು ಸರಿಯಾಗಿ ಆಗದೇ ಇರುವದರಿಂದ, ಅದರಲ್ಲಿ ಅನೇಕಪ್ರಕಾರ ತೊಂದರೆಗಳು ಹುಟ್ಟದೆ ಇರುವದಿಲ್ಲ. ಸಂಸಾರದಲ್ಲಿ ಮನಿಯ ವ್ಯವಸ್ಥೆಯ ಕೆಲಸದಲ್ಲಿ ಬಹುದಕ್ಷರಾಗಿ ಇರಬೇಕಾದರೆ ಸೂಜ್ಞ, ಮತ್ತು ಸುಶಿಕ್ಷಿತ ಸ್ತ್ರೀಯರೇ ಇರಬೇಕಾಗುತ್ತದೆ. ಗೃಹವ್ಯವಸ್ಥೆಯೆಂದರೆ ಬಂದು ಹೋದವರ ಸರಿಯಾಗಿ ಅದರ ಸತ್ಕಾರವನ್ನು ಮಾಡುವದು, ತಮ್ಮ ಮನಿತನದ ಲೌಕಿಕವನ್ನು ಮನಸಿಗೆ ತಂದು ಎಲ್ಲರಕೂಡಾ ಸಮಭಾವದಿಂದ ವರ್ತಿಸುವದು, ಅತ್ತಿಮಾವ ನೆಗೆಣ್ಣು ನಾದನೀ ಭಾವಮೈದುನ ಇವರಲ್ಲಿ ಸನ್ಮಾನವನ್ನಿಟ್ಟು, ಸರ್ವರಲ್ಲಿ ತನ್ನ ಮಮತ್ವದ ಪ್ರಕಾಶ ಬೀಳಗೊಡಬೇಕು, ಈ ನಮ್ಮ ಸಮಾಜದಲ್ಲಿ ಅತಿಥಿ ಅಭ್ಯಾಗತರ ಹಾಗೇ ಬಂಧುಗಳ ಪರಾಮರ್ಶವನ್ನು ತೆಗೆದುಕೊಳ್ಳುವದು, ಸರ್ವರ ಹಸಿವು ನೀರಡಿಕೆಯನ್ನು ತಿಳಿಯುವದು, ಕುಟುಂಬದಲ್ಲಿಯೇ ರೋಗಿ ಗೃಹಸ್ಥರ ಶುಶ್ರೂಷೆಯನ್ನು ಕಾಳಜಿಯಿಂದ ಹಾಗೇ ಬುದ್ಧಿಮತ್ತಿನಿಂದ ಮಾಡುವದು, ಸಣ್ಣಸಣ್ಣ ಮಕ್ಕಳ ಸ್ವಚ್ಛತಾಕಡಿಗೆ ಊಟ ಉಡಿಗಿಯಕಡಿಗೆ ಆಗಾಗ್ಗೆ ಲಕ್ಷವನ್ನಿತ್ತು ಅವರ ವರ್ತನದಕಡಿಗೆ ಲಕ್ಷವನ್ನು ಕೊಡುವದು ಇದೇ ಮೊದಲಾದುದಕ್ಕೆ ಗೃಹವ್ಯವಸ್ಥೆಯ ಕೆಲಸವೆನ್ನುವರು. ಈ ತರದ ನೂರಾರು ಕೆಲಸಗಳು ಸ್ತ್ರೀಯರವಾಗಿರುತ್ತವೆ ಅವು ಅಶಿಕ್ಷಿತ ಸ್ತ್ರೀಯರಕಡಿಯಿಂದ ಪ್ರಸ್ತುತಕಾಲದಲ್ಲಿ ಹ್ಯಾಗಾದಾವು. ಇತ್ತಕಡಿಗೆ ಲಕ್ಷ್ಯವನ್ನು ಕೊಟ್ಟರೆ, ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವದವಶ್ಯವೋ ಇಲ್ಲವೋ ಈ ಪ್ರಶ್ನದ ಸ್ಫುಟೀಕರಣವು ಸಹಜವೇ ತಾನೇಯಾಗುವದು. ಎಷ್ಟೋ ಅಶಿಕ್ಷಿತರಾದ ಸ್ತ್ರೀಯರು ಬುದ್ಧಿಮತಿಯರಾಗಿದ್ದು, ಸಂಸಾರದಲ್ಲಿ ಬಳ್ಳೇ ದಕ್ಷರಾಗಿರುವರು. ಆದರೆ ಅವರು ಕೇವಲ ಅತ್ತಿಯವರಇಲ್ಲವೇ ತಾಯಿಯವರ ಅನುಕರಣದಿಂದ ಜಾಗರೂಕರಾಗಿ ಇರುತ್ತಾರೆ ಇಂಥ ಉದಾಹರಣಗಳು ಕ್ವಚಿತ್ ಶಿಗುತ್ತವೆ. ಇಂಥ ಸ್ತ್ರೀಯರಿಗೆ ಶಿಕ್ಷಣವು ದೊರಕಿದ್ದರೆ ಅವರು ಅವರ್ಣನೀಯರಾಗುತ್ತಿದ್ದರು. ಸ್ತ್ರೀಯರು ಕಲಿತವರಿದ್ದರೆ ತನ್ನ ಮನಿಯಲ್ಲಿ ಸಂಬಳಗರಾಗಿದ್ದ ನಾಕರರಲ್ಲಿ ಬಂದುರೀತಿ ಜರಬು ಇರುತ್ತದೆ. ಅಂಥ ಸ್ಥಲದಲ್ಲಿ ಆಳು ಮನುಷ್ಯರ

ಆಟ ಏನೂಸಾಗುವದಿಲ್ಲ. ಪುರುಷರ ಪಶ್ಚಾತ್ಕಾಲದಲ್ಲಿ ದೊಡ್ಡ ದೊಡ್ಡ ಮನೆತನದ ಸ್ತ್ರೀಯರ ಸರ್ವಸ್ವವು (ಜಿಂದಿಗಿಯು) ಅವರು ಅಶಿಕ್ಷಿತರಾಗಿರುವದರಿಂದಲು, ತಮ್ಮ ಹಿತಚಿಕಿಯನ್ನು ಸಾಧಿಸುವವರ ಸವಿಮಾತುಗಳಿಂದಲು ಹಾಳಾಗಿರುವ ನೂರಾರು ಉದಾಹರಣಗಳು ತಮ್ಮ ಕಣ್ಣೆದುರಿರುವವು. ಈಕಾರಣ ,, ಅಬಲಾಯತ್ರಪ್ರಬಲಾಬಾಲೋರಾಜಾನಿರಕ್ಷರೋಮಂತ್ರಿ। ನಹಿನಹಿತತ್ರಧನಾಶಾಜೀವಿತಮಾಶಾಪಿದುರ್ಲಭ ಭವತಿ,, ಎಂದು ಗ್ರಂಥಕಾರನು ನೀತಿಯಲ್ಲಿ ಹೇಳಿರುವನು. ಈ ವಿಷ್ಯದಲ್ಲಿ ಅಶಿಕ್ಷಿತತನದ ಟೀಕೆಯನ್ನು ಬಹಳ ಮಾಡಿರುವನೆಂದು ತೋರುತ್ತದೆ. ಇದರಿಂದ ವಿಚಾರಮಾಡಿ ನೋಡಿದರೆ ಸ್ತ್ರೀಯರಿಗೆ ಶಿಕ್ಷಣವನ್ನುಕೊಡುವದರಿಂದ ಅವರಿಂದ ಮನೆಯವ್ಯವಸ್ಥೆಯ ಕೆಲಸದಲ್ಲಿ ವಿಶೇಷ ಸಹಾಯವು ಆಗುವದೆಂದು ತೋರುತ್ತದೆ. ... ... ... ... *

## ಬಾಲಸಂಗೋಪನೆ.

ಸಣ್ಣ ಮಕ್ಕಳನ್ನು ರಕ್ಷಿಸುವ ಕೆಲಸದಲ್ಲಿ ಕೂಡಾ ಸುಶಿಕ್ಷಿತ ಸ್ತ್ರೀಯರ ಅವಶ್ಯಕತೆಯು ಬಹಳಿರುವದು. ಈ ರೀತಿ ಸರ್ವರಿಗೂ ತಿಳಿಯಲಾರಂಭಿಸಿರುತ್ತೆ. ಆದರೆ ಸ್ತ್ರೀಯರು ಅಜ್ಞಾನಿಗಳಾಗಿರುವದರಿಂದ ಅವರಿಗೆ ತಮ್ಮ ಸಣ್ಣಮಕ್ಕಳ ಶುಶ್ರೂಷೆಯನ್ನು ತ್ಯಾಗ ಮಾಡಬೇಕೆಂಬುದು ಏನು ತಿಳಿಯುವದಿಲ್ಲ. ಬಾಲರಕ್ಷಣದ ಪುಸ್ತಕಗಳು, ಇತ್ತಿತ್ತ ಪ್ರಕಟಗಳಾಗಿರುತ್ತವೆ. ಆ ಪುಸ್ತಕಗಳನ್ನು ಪ್ರತಿಯೊಬ್ಬ ಸ್ತ್ರೀಯರು ಓದಿದ್ದಾದರೆ ಸಣ್ಣ ಮಕ್ಕಳ ಸಮ್ಮಂಧವಾಗಿ ಹ್ಯಾಗೆಹ್ಯಾಗೆ ಕಾಳಜಿಯನ್ನು ಮಾಡಬೇಕು, ಮತ್ತು ತಮ್ಮ ಊಟ ಪಾಟಗಳನ್ನು ಹ್ಯಾಗೆ ಇಟ್ಟದ್ದರೆ ಹುಡುಗರಿಗೆ ಆರೋಗ್ಯವಾಗುವದು, ಇದಲ್ಲದೆ ಆ ಬಾಲಕರಿಗೆ ಯಾವರೋಗವು ಆಗದಂತೆ ಅವರ ಬೆಳವಣಿಗಿಯು ಆಗುವದಕ್ಕೆ ಎಂಥ ಎಂಥ ಉಪಾಯಗಳನ್ನು ಯೋಚಿಸಬೇಕಾಗುತ್ತದೆ ಅದರ ತಿಳವಳಿಕಿಯು ಆಗುವದು. ಬಂದುವೇಳೆ ಹವೆಯು ಕೆಟ್ಟದ್ದಾದರೆ ಪ್ರಕೃತಿಯಧರ್ಮದಂತೆ ರೋಗ ಉತ್ಪನ್ನವಾದರೆ ಸ್ಥಲಾಂತರವನ್ನು ಮಾಡುವದು, ಮತ್ತು ಸಾಧ್ಯವಾದ ಔಷಧದ ಉಪಯೋಗವನ್ನು ಮಾಡುವದು, ಇದು ಆ ಪುಸ್ತಕಗಳಲ್ಲಿ ಹೇಳಿರುವದರಿಂದ ಎರಡನೇ ವೈದ್ಯರ ಮಾರ್ಗನಿರೀಕ್ಷಣಮಾಡದೆ ವೇಳೆವೇಳೆಯಲ್ಲಿ ಸರಿಯಾಗಿ ಉಪಾಯವನ್ನು ಮಾಡಿದ್ದಾದರೆ, ಅದು ಬಹು ಹಿತಕರವಾಗುತ್ತದೆ. ತಮ್ಮ ಸಮಾಜದಲ್ಲಿಯ ತಿಳಗೇಡಿ ಸ್ತ್ರೀಯರು ತನ್ನ ಮಗುವಿಗೆ ಯಾವದೋ ಬಂದು ರೋಗ ಬಂದದ್ದಾದರೆ ಮೊದಲು ಮಂತ್ರಿಸಿದಬೂದಿ, ಮಂತ್ರಿಸಿದ ಲೋಬಾನದ ಹೊಗೆಯು, ಅಥವಾ ಮಂತ್ರಿಸಿದ ದಾರ ಕಟ್ಟೋಣ ಇವುಗಳಲ್ಲಿ ನಿರರ್ಥಕ ಕಾಲವನ್ನು ಕಳೆದು, ಮಾಡಬೇಕಾದ ಯೋಗ್ಯ ಉಪಾಯಗಳನ್ನು ಮಾಡುವದು ಬಿಡುತ್ತಾರೆ. ಇಲ್ಲವೇ ಯಾವನೋ ಬಚ್ಚನಾದ ತಿಳಗೇಡಿ ವೈದ್ಯನ ಔಷಧವನ್ನು ಕೊಟ್ಟು, ಹುಡುಗರ ಪ್ರಕೃತಿಯನ್ನು ಕೆಡಿಸಿ ಬಿಡುತ್ತಾರೆ. ಈ ತಿಳವಳಿಕೆ ಇಲ್ಲದ ಮೂಲಕ ಸಾವಿರಾರು ಹುಡುಗರು. ಮೃತ್ಯುವಿಗೆ ತುತ್ತಾ

ಗುತ್ತಾರೆ; ಇದು ತಮ್ಮೆಲ್ಲರ ಪ್ರತ್ಯಕ್ಷಾನುಭವದಲ್ಲಿರಬಹುದು. ಯಥಾರ್ಥ ವಿಚಾರವನ್ನು ಮಾಡಿ ನೋಡಿದರೆ ಬಾಲರಕ್ಷಣದ ಕಾಳಜಿಯು ಮುಖ್ಯವಾಗಿ ಸ್ತ್ರೀಯರದೇ ಇದ್ದು, ಪುರುಷರ ಲಕ್ಷ್ಯವು ಅತ್ತಕಡಿಗೆ ಸ್ವಲ್ಪಾದರೂ ಇರುವದಿಲ್ಲ. ಇಂಥ ಸೂಕ್ಷ್ಮಕೆಲಸದ ವಿಷಯದಲ್ಲಿ ಬಾಲರಕ್ಷಣೆಯು ಉದ್ದಿಶ್ಯವಾದರೂ ಸ್ತ್ರೀಯರಿಗೆ ಶಿಕ್ಷಣವು ಅವಶ್ಯವಾಗಿ ಇರಬೇಕಾಗುತ್ತದೆ ಪಾರಶಿ, ಯುರೋಪಿಯನ್, ಈ ಜನಗಳಲ್ಲಿ ಬಾಲಸಂರಕ್ಷಣವು ಸಶಾಸ್ತ್ರವಾಗುವದರಿಂದ ಅವರ ಹುಡುಗರು ಎಂಥಾ ಸಶಕ್ತರೂ, ಸುಂದರರೂ, ತೇಜಸ್ವಿಗಳೂ ಬುದ್ಧಿವಾನರುಗಳಾಗಿ ಹೊರಡುತ್ತಾರೆ. ಇದರ ಕಾರಣವು ಆ ಹುಡುಗರ ತಾಯಿಯರು ಸುಶಿಕ್ಷಿತರಾಗಿದ್ದಾರೆಂದು ತಿಳಿಯುವದು. ಇದರಿಂದ ನಮ್ಮ ಸಮಾಜ ಸುಧಾರಣ ಧುರೀಣರು ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವ ವಿಷಯದಲ್ಲಿ ಅದಷ್ಟು ಕಳಕಳಿಯಿಂದ ಮೊದಲು ಲಕ್ಷವನ್ನು ಕೊಟ್ಟು ಸ್ತ್ರೀಯರನ್ನು ಸುಶಿಕ್ಷಿತರನ್ನಾಗಿ ಮಾಡದ ವಿನಹಾ ಸಮಾಜ ಸುಧಾರಣದ ಉಜ್ವಲ ಸ್ವರೂಪವು ಅವರ ದೃಷ್ಟಿಗೆ ಎಂದಿಗೂ ಬೀಳಲಾರದೆಂದು ನಾನು ಖಂಡಿತವಾಗಿ ಹೇಳುತ್ತೇನೆ. *

(ಕೈಚಪ್ಪಾಳೆ.)

ಭಾ ಗೀ ರ ಥಿ ಬಾ ಯಿ,

ಸೋಲಾಪುರ.

---

## ದಾಂಪತ್ಯಾನುಕೂಲ್ಯದ ಫಲವು.

### ಈ ವಿಷಯದಮೇಲೆ ಮೈಸೂರು ಶ್ರೀಮತಿ ಬಸಮ್ಮನವರು ಮಾಡಿದ ಭಾಷಣವು.

ಸರ್ವಶಕ್ತನಾದ ದೇವರಿಂದ ಸೃಷ್ಟಿಸಲ್ಪಟ್ಟ ಪ್ರಾಣಿಗಳೊಳಗೆ ಸ್ತ್ರೀಜಾತಿ, ಪುರುಷ ಜಾತಿ, ಎಂಬೆರಡು ವ್ಯಕ್ತಿಗಳುಂಟು. ಕ್ರಿಮಿಕೀಟ ಪಶುಪಕ್ಷಿ ಮೃಗಾದಿಗಳಲ್ಲಿರುವ ಸ್ತ್ರೀ ಪುರುಷ ಭೇದಕ್ಕೆ ಸಂತಾನಮಾತ್ರವೇ ಫಲವಲ್ಲದೆ ಮತ್ತೊಂದಿಲ್ಲ. ಪ್ರಾಣಿಗಳಲ್ಲಿ ಎಲ್ಲವೂ ತಮ್ಮತಮ್ಮ ಆಹಾರವನ್ನು ತಾವೇ ಸಂಪಾದಿಸಿಕೊಳ್ಳುತ್ತವೆ. ಆ ಪ್ರಾಣಿಗಳೊಳಗೆ ರೋಗಾದಿಗಳಲ್ಲಿ ಒಂದಕ್ಕೊಂದು ಉಪಕಾರಿಗಳಾಗಿರುವದಿಲ್ಲ. ಮನುಷ್ಯನಿಗೆ ಬುದ್ಧಿ, ವಿಚಾರಶಕ್ತಿ ಎಂಬೆರಡು ಮುಖ್ಯಧರ್ಮಗಳು. ಮನುಷ್ಯಜನ್ಮಕ್ಕೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬೀ ಪುರುಷಾರ್ಥಗಳನ್ನು ಸಂಪಾದಿಸುವುದೆ ಮುಖ್ಯಫಲವು. ಪುರುಷಾರ್ಥಗಳೊಳಗೆ ಮೊದಲನೆಯ ಮೂರು ಲೌಕೀಕಗಳು, ಮೋಕ್ಷವು ಪಾರಮಾರ್ಥಿಕವಾದದ್ದು. ಧರ್ಮಾರ್ಥಕಾಮಗಳಿಂದ ಐಹಿಕಾ ಮುಷ್ಮಿಕ ಸುಖಸಿದ್ಧಿಯುಂಟಾಗುವದು. ಮೋಕ್ಷದಿಂದ ಜನನ ಮರಣ ಪ್ರವಾಹ

ರೂಪ ಸಂಸಾರನಿವೃತ್ತಿ ಪೂರ್ವಕ ನಿತ್ಯಾನಂದಸಿದ್ಧಿಯಾಗುವದು. ಐಹಿಕಾ ಮುಷ್ಮಿಕ ಸುಖದಾಯಕವಾದ ತ್ರಿವರ್ಗವು, ಸ್ತ್ರೀಪುರುಷರಿಬ್ಬರಿಗೂ ಅವಶ್ಯಕವು. ಇವುಗಳನ್ನು ಹೊಂದಬೇಕಾದರೆ ಪರಸ್ಪರ ಸಹಾಯವು ಅತ್ಯಾವಶ್ಯಕವು. ... ... *

ಪರಸ್ಪರ ಸಹಾಯ ಮಾಡದೆ ಇದ್ದರೆ, ಸಂಸಾರಕ್ಕೆ ತುಂಬಾ ಕೊರತೆಯುಂಟಾಗುತ್ತದೆ. ಸಂಸಾರಕ್ಕೆ ಸ್ತ್ರೀಪುರುಷರಿಬ್ಬರೂ ಅಂಗವಾಗಿರುತ್ತಾರೆ. ನಮ್ಮ ಶರೀರದಲ್ಲಿ ಯಾವದಾದರೂ ಒಂದು ಅವಯವ ಕಡಮೆಯಾಗಿದ್ದರೆ, ಆ ಶರೀರವು ಚನ್ನಾಗಿ ಕಾಣುವದಿಲ್ಲ. ಮತ್ತು ನಾವು ಮಾಡಬೇಕಾದ ಸರ್ವಕಾರ್ಯವೂ ಆಗಲಾರದು. ಹೀಗೆಯೇ ಗೃಹಸ್ಥಾಶ್ರಮವನ್ನು ಹೊಂದಿದ ಪುರುಷನು ಎಂಥಾ ವಿದ್ವಾಂಸನಾದಾಗ್ಯೂ, ಶೂರನಾದಾಗ್ಯೂ, ಧನಿಕನಾದಾಗ್ಯೂ, ನಿಸ್ಪೃಹನಾದಾಗ್ಯೂ ಹೆಂಗಸರ ಸಹಾಯವಿಲ್ಲದೆ ಆತನು ಪೂರ್ಣವಾದ ಸೌಖ್ಯ ಸಂತೋಷಗಳನ್ನು ಹೊಂದಲಾರನು. ಆತನಿಂದ ಯಾವಕೆಲಸವೂ ಚನ್ನಾಗಿ ಆಗುವದಿಲ್ಲವು ಸ್ತ್ರೀಯರ ಸಹಾಯವು ಅವಶ್ಯವಾಗಿ ಬೇಕಾಗಿರುವ ಕೆಲಸಗಳಿಗೆ ಅವರ ಸಹಾಯದೊರೆಯದೆ ಹೋದರೆ ಎಲ್ಲಾ ಕೆಲಸವನ್ನೂ ಒಬ್ಬನೇ ಮಾಡಬೇಕಾಗುವದರಿಂದ, ಆತನ ಚಿತ್ತವುಕೆಟ್ಟು ಹೆಚ್ಚುಶ್ರಮದಿಂದ ಆತನ ಶರೀರಸ್ಥಿತಿಯು ಕೆಡುವುದಲ್ಲದೆ, ಅನೇಕ ಅನರ್ಥಗಳುಂಟಾಗುತ್ತವೆ. ಸ್ತ್ರೀಯರ ವಿಷಯವೂ ಹೀಗೆಯೇ ಸರಿ. ಸ್ತ್ರೀಪುರುಷರಿಬ್ಬರೂ ಪರಸ್ಪರ ಸಹಾಯಕರಾಗಿರಬೇಕೆಂಬುವದೇ ದೇವರ ನಿಬಂಧನೆಯು. ಈ ನಿಬಂಧನೆಯನ್ನು ಕೆಲವರು ಅಲಕ್ಷ್ಯ ಮಾಡಿ, ಚತುಷ್ಪಾದ ಜಂತುಗಳಂತೆ ಸ್ವೇಚ್ಛಾವಿಹಾರಿಗಳಾಗಿರುತ್ತಾರೆ. ಇವರು ದೈವನಿಬಂಧನೆಯನ್ನು ಮೀರಿದ ಪಾಪಕ್ಕೆ ಫಲರೂಪವಾದ ದುಃಖವನ್ನು, ಅನುತಾಪವನ್ನು, ಅವಮಾನವನ್ನು ಅನುಭವಿಸಬೇಕಾಗುತ್ತೆ. ಆದ್ದರಿಂದ ಬುದ್ಧಿಶಾಲಿಗಳಾದ ಸ್ತ್ರೀಪುರುಷರು ದೇವರಿಂದ ಗೊತ್ತುಮಾಡಲ್ಪಟ್ಟಿರುವ ಧರ್ಮಕ್ಕೆ ಅನುಸಾರವಾಗಿಯೂ, ಸುಖಕರವಾಗಿಯೂ ಇರುವ ಪರಸ್ಪರ ಸಂಬಂಧವನ್ನು ಇಟ್ಟುಕೊಂಡಿರಬೇಕು. ಈ ಸಂಬಂಧಕ್ಕೆ ವಿವಾಹವೆನ್ನುತ್ತಾರೆ. ... ... ... ... *

ವಿವಾಹ ಮಾಡತಕ್ಕ ರೀತಿಗಳು ಅನೇಕ ದೇಶಗಳಲ್ಲಿ ಅನೇಕ ವಿಧಗಳಾಗಿವೆ. ಅವೆಲ್ಲವೂ ಚನ್ನಾಗಿವೆ ಎಂದು ಹೇಳಲಿಕ್ಕಾಗುವದಿಲ್ಲವು. ನಮ್ಮ ದೇಶದಲ್ಲಿ ಹೆಣ್ಣುಮಕ್ಕಳಿಗೆ ೯—೧೦ ವರ್ಷ ತುಂಬುವದರೊಳಗೆ ಯಾವನಾದರೂ ಒಬ್ಬ ಅಪ್ರಬುದ್ಧನಾದ ಹುಡುಗನಿಗೆ ಲಗ್ನಮಾಡಿ ಕೊಡತಕ್ಕ ಸಂಪ್ರದಾಯವಿದೆ. ಈ ಕಾಲದಲ್ಲಿ ವಧೂವರರಿಬ್ಬರಿಗೂ ತಮ್ಮ ಪರಸ್ಪರ ಸಂಬಂಧವೆಂಥಾದ್ದು? ಅದನ್ನು ಕಾಪಾಡಿಕೊಳ್ಳುವ ಕ್ರಮಹ್ಯಾಗೆ! ಪರಸ್ಪರ ಐಕಮತ್ಯವೂ ಸನ್ಮಾನವೂ ಏತರಿಂದುಂಟಾಗುತ್ತೆಂಬ ವಿಷಯಗಳ್ಯಾವದೂ ತಿಳಿದಿರುವದಿಲ್ಲ. ಆದ್ದರಿಂದ ಇವರಿಗೆ ಯಾವಸುಖ ಉಂಟಾಗಬೇಕೆಂದು ಇವರ ಹಿರಿಯರು ಇವರಿಗೆ ಲಗ್ನಮಾಡುತ್ತಾರೋ? ಅದು ಪ್ರಾಯೇಣ ಲಭಿಸುವದಿಲ್ಲವು. ಮನುಷ್ಯನು ಎಂಟುವರ್ಷದಿಂದ ೨೦

೨೫ ವರ್ಷದವರಿಗೆ ಜ್ಞಾನವನ್ನು ಸಂಪಾದಿಸತಕ್ಕ ಕಾಲವು. ಅಷ್ಟರೊಳಗೆ ಲಗ್ನವಾದರೆ ಈ ಜ್ಞಾನಸಂಪಾದನೆಯು ನಿಂತುಹೋಗಿ, ದಂಪತಿಗಳಿಬ್ಬರೂ ಸಂಸಾರದಲ್ಲಿ ಸಿಕ್ಕಿಕೊಳ್ಳುತ್ತಾರೆ. ಅನಂತರ ಜ್ಞಾನಸಂಪಾದನೆಯನ್ನು ಮಾಡುವುದಕ್ಕೆ ಎಷ್ಟು ಯತ್ನಿಸಿದಾಗ್ಯೂ ಸಂಪೂರ್ಣವಾಗಿ ಸಿದ್ಧಿಸುವದಿಲ್ಲ. ಜ್ಞಾನಾರ್ಜನೆಗೆ ಅನುಕೂಲವಾದ ಪೂರ್ವ ವಯಸ್ಸಿನಂತ ಅಮೂಲ್ಯವಾದ ಕಾಲವು ಮೀರಿಹೋದಮೇಲೆ ಏನುಮಾಡಿದಾಗ್ಯೂ ತಿರಿಗಿಸಿಕ್ಕುವದಿಲ್ಲವು. ಮನುಷ್ಯಜನ್ಮವನ್ನೆತ್ತಿ ಜ್ಞಾನವನ್ನು ಸಂಪಾದಿಸದೆ ಇದ್ದರೆ ಅವನನ್ನು ಪಶುವಿಗಿಂತಲೂ ಕಡೆಯೆಂದು ತಿಳಿಯಬೇಕು. ಪೂರ್ವ ವಯಸ್ಸಿನಲ್ಲಿ ವಿವಾಹಮಾಡಿಕೊಳ್ಳುವದು ಕೇವಲ ಅನುಚಿತವಾದ ಕಾರ್ಯವು. ಸ್ತ್ರೀಯರಿಗಾಗಲಿ ಪುರುಷರಿಗಾಗಲಿ ವಿದ್ಯೆಯೆ ಪರಮಧನವು. ... *

ಶ್ಲೋ॥ ವಿದ್ಯಾನಾಮನರಸ್ಯರೂಪಮಧಿಕಂ ಪ್ರಚ್ಛನ್ನಗುಪ್ತಂಧನಂ ॥
ವಿದ್ಯಾಭೋಗಕರೀಯಶಸ್ಸುಖಕರೀ ವಿದ್ಯಾಗುರೂಣಾಂಗುರುಃ ।
ವಿದ್ಯಾಬಂಧುಜನೋವಿದೇಶಗಮನೆ ವಿದ್ಯಾಪರಾದೇವತಾ ।
ವಿದ್ಯಾರಾಜಸುಪೂಜ್ಯತೆನಹಿಧನಂ ವಿದ್ಯಾವಿಹೀನಃಪಶುಃ ॥

ಕೆಲವರು ಧನವಾಗಲಿ, ರೂಪವಾಗಲಿ ಇರುವದನ್ನು ಮಾತ್ರ ನೋಡಿ ಲಗ್ನಮಾಡುತ್ತಾರೆ, ಧನವೂ ರೂಪವೂ ಯಾರಲ್ಲಿಯೂ ಸ್ಥಿರವಾಗಿ ನಿಲ್ಲುವದಿಲ್ಲವು. ಆದ್ದರಿಂದ ಹೀಗೆ ಮಾಡುವುದು ಯುಕ್ತವಲ್ಲವು. ಇಂಥಾ ಧನರೂಪಗಳನ್ನು ಮಾತ್ರ ಅವಲಂಬಿಸಿರುವ ಮನಸ್ಸು ಇವುಗಳು ನಷ್ಟವಾದ ಬಳಿಕ ಅನ್ಯತ್ರ ಪ್ರವೃತ್ತವಾಗುವುದೇ ಸರಿ. ಇಂಥಾದ್ದರಲ್ಲಿ ಪರಸ್ಪರ ಪ್ರೇಮ ಹ್ಯಾಗೆನಿಂತೀತು. ಆದಕಾರಣ ಮುಖ್ಯವಾಗಿ ಸದ್ಗುಣವನ್ನು, ವಿದ್ಯೆಯನ್ನು, ಪ್ರೇಮವನ್ನು, ಔದಾರ್ಯವನ್ನು ನೋಡಿ ಲಗ್ನಮಾಡಬೇಕು. ಇಂಥಾ ಉಪಯುಕ್ತ ಸಂಬಂಧವುಳ್ಳ ದಂಪತಿಗಳಲ್ಲಿ ಅತಿಶಯವಾದ ಪ್ರೇಮವು ಬೆಳೆದು, ಇವರು ಪರಸ್ಪರ ಸುಖದುಃಖಗಳಲ್ಲಿ ಭಾಗಿಗಳಾಗಿರುತ್ತಾರೆ. ಇದರಿಂದ ಇಂಥಾ ದಾಂಪತ್ಯಾನುಕೂಲದಲ್ಲಿ ಸ್ವರ್ಗಸಮವಾದ ಸುಖವುಂಟಾಗುವದಲ್ಲದೆ, ಸಂಸಾರವು ಔನ್ನತ್ಯವಂ ಪಡೆಯುತ್ತದೆ. ಈ ಪ್ರಪಂಚದಲ್ಲಿ ಇಂಥಾ ಯೋಗ್ಯವಾದ ಸಂಬಂಧವುಳ್ಳ ಸ್ತ್ರೀಪುರುಷರೇ ಧನ್ಯರು. ಇವರಿಗೆ ಯಂಥಾ ವಿಪತ್ತಿನಲ್ಲಿಯೂ, ಪರಸ್ಪರಪ್ರೇಮ ಕಡಿಮೆಯಾಗದೆ ಒಬ್ಬರನ್ನೊಬ್ಬರು ನೋಡಿಕೊಂಡು ಸುಖವಾಗಿಯೇ ಕಾಲಕ್ಷೇಪವನ್ನು ಮಾಡುತ್ತಾರೆ. ಜಗತ್ತಿನಲ್ಲಿ ಪ್ರೇಮವೇ ಸರ್ವವಿಧವಾದ ಸುಖಕ್ಕೂ ಉತ್ಪತ್ತಿಸ್ಥಾನವು. ಪ್ರೇಮವಿಲ್ಲದವರು ಎಂದಿಗೂ ಸುಖಿಗಳಾಗುವದಿಲ್ಲ. ದಂಪತಿಗಳ ಪರಸ್ಪರ ಪ್ರೇಮದ ಮಹಿಮೆಯಿಂದಲೇ ಶ್ರೀರಾಮಚಂದ್ರ, ನಳಮಹಾರಾಜ, ಹರಿಶ್ಚಂದ್ರ ಇವರೇ ಮೊದಲಾದವರು ಅಚಲವಾದ ತಮ್ಮ ಕೀರ್ತಿಯನ್ನು ಈ ಲೋಕದಲ್ಲಿ ನೆಲೆಗೊಳಿಸಿದ್ದಾರೆ. ಇವರಂತೆಯೇ ಸೀತೆ, ಸಾವಿತ್ರಿ, ಅರುಂಧತಿ, ದಮಯಂತಿ, ಅನುಸೂಯೆ ಮುಂತಾದವರು ಅತಿಶಯವಾದ ತಮ್ಮ ಪಾತಿವ್ರತ್ಯಧರ್ಮದಿಂದ ಸರ್ವರಿಗೂ ಮನೋರಂ-

ಜಕವಾಗಿರುವಂತೆ, ತಮ್ಮ ಪುಣ್ಯಕೀರ್ತಿಯನ್ನು ಸ್ಥಾಪಿಸಿದ್ದಾರೆ. ಆದ್ದರಿಂದ ಎಲ್ಲರೂ ತಮ್ಮ ಹೃದಯದಲ್ಲಿ ಸ್ವರ್ಗಕ್ಕೆ ಸಮಾನವಾದ ಸುಖವನ್ನುಂಟುಮಾಡುವ ಪ್ರೇಮವನ್ನು ಬೆಳೆಸಬೇಕು. ಪ್ರೇಮವು ನಾನಾವಿಧವಾಗಿದೆ. ಹ್ಯಾಗೆಂದರೆ, ಮಕ್ಕಳು ಮುಂತಾದವರಲ್ಲಿರುವ ಪ್ರೀತಿಗೆ ವಾತ್ಸಲ್ಯವೆನ್ನುತ್ತಾರೆ. ತಂದೆತಾಯಿಗಳಲ್ಲಿಯೂ, ಗುರುಜನಗಳಲ್ಲಿಯೂ ಈಶ್ವರನಲ್ಲಿಯೂ ಇರುವ ಪ್ರೀತಿಗೆ ಭಕ್ತಿಯೆಂದು ಹೆಸರು. ಅಣ್ಣತಮ್ಮಂದಿರು, ಅಕ್ಕತಂಗಿಯರು ಸ್ನೇಹಿತರು ಇವರುಗಳಲ್ಲಿರುವ ಪ್ರೀತಿಗೆ ಸ್ನೇಹವೆಂದು ಹೆಸರು. ಔದಾರ್ಯವುಳ್ಳವರಿಗೆ ಬಡವರಲ್ಲಿರುವ ಪ್ರೀತಿಗೆ ದಯೆ ಎಂದು ಸಂಜ್ಞೆ. ಆದರೆ ಪರಸ್ಪರ ಸುಖದುಃಖಗಳಲ್ಲಿ ಸಮಭಾಗಿಗಳಾಗಿ ಶರೀರಗಳು ಎರಡಿದ್ದಾಗ್ಯೂ, ಪ್ರಾಣಗಳು ಮಾತ್ರ ಒಂದಾಗಿರುವಂತೆ ವರ್ತಿಸುವ ದಂಪತಿಗಳಲ್ಲಿರುವ ಪ್ರೀತಿಗೆ ಪ್ರೇಮವೆಂದಲ್ಲದೆ ಬೇರೆ ಹೆಸರೇ ಇಲ್ಲ. ದಂಪತಿಗಳಲ್ಲಿ ಮಾತ್ರ ಪರಸ್ಪರ ಪ್ರೇಮವು ಸಂಪೂರ್ಣವಾಗಿರುತ್ತದೆ. ಇತರ ಸ್ಥಳಗಳಲ್ಲಿ ಇದರ ಅಂಶಮಾತ್ರ ವಿಧುತ್ತದೆಯೇ ಹೊರತು ಸಂಪೂರ್ಣವಾಗಿರುವದಿಲ್ಲ. ಇಂಥಾ ಪ್ರೇಮವೆಂಬ ಧನವನ್ನು ಸದ್ವ್ಯಯವನ್ನು ಮಾಡಿ, ಇನ್ನೂ ಅಭಿವೃದ್ಧಿಪಡಿಸಿಕೊಳ್ಳದೆ ಸಾವಿರಾರು ಜನರು ದುರ್ವ್ಯಯಮಾಡುವುದನ್ನು ನೋಡಿ ದುಃಖದಿಂದಲೂ, ನಾಚಿಕೆಯಿಂದಲೂ ತಲೆಯನ್ನು ತಗ್ಗಿಸಬೇಕಾಗಿದೆ. ಜನರು ವಿಷಯಲಂಪಟರಾಗಿ ಅಯೋಗ್ಯವಾದಸ್ಥಾನದಲ್ಲಿ ಈ ಪ್ರೇಮಧನವನ್ನು ವಿನಿಯೋಗಿಸುತ್ತಾರೆ. ಇದರಿಂದ ಅವರಿಗೆ ಹಾನಿಯಲ್ಲದೆ ಶ್ರೇಯಸ್ಸುಂಟಾಗುವದಿಲ್ಲ ಮದುವೆಯಾದವರಲ್ಲಿ ವಿಶ್ವಾಸ ಘಾತಕತನವನ್ನು ಮಾಡಿ ಪ್ರೇಮವನ್ನು ಕಳೆದುಕೊಳ್ಳಬಾರದೆಂಬುವದೇ ವಿವಾಹದ ಮುಖ್ಯೋದ್ದೇಶವು. ಕೋಮಲತೆ ಮಾಧುರ್ಯವೊದಲಾದ ರಮಣೀಯವಾದ ಗುಣಗಳು ಸ್ತ್ರೀಯರಲ್ಲಿ ಸಹಜವಾಗಿರುತ್ತವೆ; ಪುರುಷರಲ್ಲಿರುವದಿಲ್ಲ. ಇದರಂತೆಯೇ ಸಾಹಸ, ಸಹಿಷ್ಣುತೆ, ಧೈರ್ಯ ಮೊದಲಾದ ಗುಣಗಳು ಪುರುಷರಲ್ಲಿ ಸಹಜವಾಗಿರುತ್ತವೆ; ಸ್ತ್ರೀಜನರಲ್ಲಿರುವದಿಲ್ಲ. ಈ ಎರಡು ವಿಧವಾದ ಗುಣಗಳು ಬೇರೆಬೇರೆಯಾಗಿರುವದು ಸರಿಯಲ್ಲ. ಯಾವ ಪುರುಷನಲ್ಲಿ ಸಾಹಸ, ಧೈರ್ಯ, ಶೌರ್ಯ ಮೊದಲಾದ ಕಠೋರಗುಣಗಳೊಡನೆ ದಯೆ, ನಮ್ರತೆ, ಸ್ನೇಹ ಮೊದಲಾದ ಕೋಮಲಗುಣಗಳ ಮೇಳನವಿಲ್ಲವೋ ಆ ಪುರುಷನು ಅತಿಕ್ರೂರನಾಗಿರುತ್ತಾನೆ. ಇದರಂತೆಯೆ ಕೋಮಲತೆ, ನಮ್ರತೆ, ದಯೆ ಮಮತೆ ಲಜ್ಜೆ ಮೊದಲಾದ ಗುಣಗಳುಳ್ಳ ಸ್ತ್ರೀಯರಲ್ಲಿ ಧೈರ್ಯ, ಸಹಿಷ್ಣುತೆ, ಸತ್ಯತ್ವ ಮೊದಲಾದ ಗುಣಗಳ ಮೇಳನವಿಲ್ಲದಿದ್ದರೆ ಅವರು ಅತ್ಯಂತ ಭೀರುಗಳಾಗಿ ಯಾವ ಕೆಲಸವನ್ನು ಮಾಡುವದಕ್ಕೂ ಅಶಕ್ತರಾಗಿರುತ್ತಾರೆ. ಆದಕಾರಣ ಸ್ತ್ರೀಪುರುಷರಿಬ್ಬರೂ ತಮ್ಮತಮ್ಮ ಗುಣಗಳ ಪರಸ್ಪರ ಮೇಳನವನ್ನು ಮಾಡಿದರೆ ಸಂಸಾರದಲ್ಲಿ ಸುಖಾಭಿವೃದ್ಧಿಯುಂಟಾಗುವುದು. ನಿರಂತರ ಸಹವಾಸವಿಲ್ಲದೆ ಇದ್ದರೆ ಒಬ್ಬರಗುಣ ಮತ್ತೊಬ್ಬರಿಗೆ ಬರುವದಿಲ್ಲ. ಇಂಥಾ ನಿರಂತರ ಸಹವಾಸವು ಗಂಡಹೆಂಡರ ಹೊರತು, ಉಳಿದವರಲ್ಲಿದ್ದದ್ದೆ ಯಾದರೆ ಅದು ಲೋಕಾಚಾರಕ್ಕೂ ಧರ್ಮಕ್ಕೂ ವಿರುದ್ಧವಾದದ್ದು. ಇಂಥಾ ಜೊತೆಯು ಹೆಂಗಸಿಗೆ ಗಂಡನಲ್ಲಿದೆ. ಗಂಡಸಿಗೆ

ಹೆಂಡತಿಯಲ್ಲಿದೆ; ಮತ್ತೊಬ್ಬರಲ್ಲವು. ದಂಪತಿಗಳಲ್ಲಿರುವ ಅಕೃತ್ರಿಮವಾದ ಪರಸ್ಪರ ಮೈತ್ರಿಯು ಇತರರಲ್ಲಿರುವದಿಲ್ಲ. ... ... ... *

ವಿಹಿತವಾದ ದಂಪತಿಗಳಲ್ಲಿ ಪರಸ್ಪರ ಪ್ರೇಮ ವಿದ್ದರೇನೆ ಸುಖಿಗಳಾಗಿರುತ್ತಾರೆ. ಇಲ್ಲದ ಪಕ್ಷದಲ್ಲಿ ಅವರ ದುಃಖಕ್ಕೆ ಕೊನೆಯೇ ಇಲ್ಲವೆಂಬುವದು ಎಲ್ಲರಿಗೂ ತಿಳಿದೇ ಇದೆ ಸುಖದುಃಖಗಳಲ್ಲಿ ಯಾವಜ್ಜೀವವೂ ಭಾಗಿಯಾಗಿ ಪತಿಯೇಸರ್ವಸ್ವವೆಂದೆಣಿಸಿಕೊಂಡು ಪತಿಯು ತನ್ನಲ್ಲಿ ಒಳ್ಳೇಮಾತನಾಡಿದರೆ ಸ್ವರ್ಗವೇಕೈಸೇರಿದಂತೆ ಸಂತೋಷಪಡುತ್ತಾ ಇರುವ ಹೆಂಡತಿಯಲ್ಲಿ ಗಂಡನು ಯಾವದಾದರೂ ಒಂದು ಸಣ್ಣಮಾತಿಗಾಗಿ ವೈಮನಸ್ಯವನ್ನು ಹೊಂದಿ ಅಕೆಯನ್ನು ನಿರಾಕರಿಸುವುದು, ಅಥವಾ ಆಕೆಯನ್ನು ಪರಿತ್ಯಾಗಮಾಡಿ ಎರಡನೆ ಮದುವೆ ಮಾಡಿಕೊಳ್ಳುವದು ಮೊದಲಾದ ಪಾಪಾಚರಣೆಗಳನ್ನು ಮಾಡಬಾರದು. *

ಪುರುಷರು ಸ್ತ್ರೀಯರಿಗಿಂತ ಬಲಿಷ್ಟರಾದ್ದರಿಂದ ಪಕ್ಷಿಮವನ್ನು ಪೂರ್ವವೆಂದಾಗ್ಯೂ ನಡೆಯುತ್ತೆ. ಆದರೆ ಈ ರೀತಿಯಾಗಿ ಅನ್ಯಾಯಮಾಡುವದು ಪುರುಷರಿಗೆ ಸರ್ವಥಾ ನ್ಯಾಯವಲ್ಲಾ. ಸ್ತ್ರೀಯರ ವಿಷಯದಲ್ಲಿ ಅನ್ಯಾಯಮಾಡಿ ಅವರನ್ನು ದುಃಖಪಡಿಸುವದಕ್ಕೋಸ್ಕರ ಪುರುಷರಿಗೆ ಈಶ್ವರನು ಸ್ತ್ರೀಯರಿಗಿಂತ ಹೆಚ್ಚುಬಲವನ್ನು ಕೊಟ್ಟಿಲ್ಲ, ಆದ್ದರಿಂದ ಪುರುಷರು ಸ್ತ್ರೀಯರನ್ನು ಉದಾಶೀನಮಾಡದೆ ಮಮತೆಯಿಂದ ಸ್ವಾಧೀನ ಪಡಿಸಿಕೊಂಡು ಅವರಲ್ಲಿ ಸ್ಥಿರವಾದ ತಮ್ಮಪ್ರೇಮವನ್ನು ಇಡಬೇಕಾದದ್ದು ಯುಕ್ತವಾಗಿದೆ. ... *

ಸ್ತ್ರೀಯರು ಪುರುಷರಿಗಿಂತ ಬಲದಲ್ಲಿ ಎಷ್ಟೋ ಕಡಿಮೆಯಾದ್ದರಿಂದಲೇ ಅಬಲೆಯರೆಂಬ ಹೆಸರನ್ನು ಪಡೆದರು. ಈ ಅಬಲೆಯರು ತಮ್ಮ ನಡತೆಯನ್ನು ತಮ್ಮಗಂಡಂದಿರ ಮನಸ್ಸು ಒಪ್ಪುವಂತೆ ಇಟ್ಟುಕೊಂಡಿರಬೇಕು. ಅವರಿಗೆ ಬೇಡವಾದದ್ದನ್ನು ಎಂದಿಗೂ ಮಾಡಬಾರದು. ಅವರೆದುರಿಗೆ ಘಟ್ಟಿಯಾಗಿ ಯಾವಾಗಲೂ ಮಾತನಾಡಬಾರದು. ಅವರನ್ನು ಎಂದಿಗೂ ನಿರಾಕರಿಸಬಾರದು. ಧರ್ಮಕ್ಕನುಸಾರವಾಗಿ ಯಾವಕೆಲಸವನ್ನೇ ಹೇಳಿದಾಗ್ಯೂ ಅದು ಶ್ರಮಸಾಧ್ಯವಾದಾಗ್ಯೂ ಮಾಡಬೇಕು. ಅವರು ಹೇಳಿದಕೆಲಸವು ತಮ್ಮಿಂದಾಗುವದಿಲ್ಲ ವೆಂತಾಗಲಿ, ಅದನ್ನು ಮಾಡುವುದರಲ್ಲಿ ಬೇಸರಿಕೆಯಾಗುತ್ತೆಂತಾಗಲಿ, ಉದ್ಧತ ತನದಿಂದ ಹೇಳಬಾರದು. ಆ ಕೆಲಸವು ತಮ್ಮಿಂದಾಗದ ಪಕ್ಷದಲ್ಲಿ ನಮ್ರತೆಯಿಂದ ಅದರ ಕಾರಣಗಳನ್ನು ತಿಳಿಯಪಡಿಸಬೇಕು. ಅವರಲ್ಲಿ ಯಾವವಿಧವಾದ ಸುಳ್ಳನ್ನೂ ಹೇಳಬಾರದು. ನಿಷ್ಕಾರಣವಾಗಿ ಕೋಪಮಾಡಿಕೊಂಡು ಅವರ ಎದುರಿಗೆ ಬಾಯಿಗೆಬಂದಂತೆ ಮಾತನಾಡಬಾರದು ಅವರನ್ನು ಮೋಸಗೊಳಿಸಬಾರದು. ಅವರು ಮಾಡುವ ಒಳ್ಳೇಕೆಲಸಕ್ಕೆ ಅಡ್ಡಿಮಾಡಬಾರದು. ಅವರ ಮನಸ್ಸು ನೋಯುವ ಕೆಲಸವನ್ನು ಮಾಡಬಾರದು ಪತಿಯು ಹೊರಗಡೆಯಿಂದ ಬಂದರೆ ಕೈಕಾಲು ತೊಳೆದುಕೊಳ್ಳುವದಕ್ಕೆ ನೀರನ್ನುಕೊಟ್ಟು ಪೀಠವನ್ನು ಹಾಕಿ

ಭಕ್ತಿಯಿಂದುಪಚರಿಸಬೇಕು. ಪತಿಗೆ ಇಷ್ಟವಾದ ಅಡಿಗೆಯನ್ನು ಮಾಡಿ ಬಡಿಸಬೇಕು. ಮಕ್ಕಳು, ವೃದ್ಧರು, ಬಂಧುಗಳು, ಅತಿಥಿಗಳು, ಇವರನ್ನು ವಂಚಿಸಿ ತಿನ್ನಬಾರದು. ಪತಿಗೆ ಹಿತವಾದ ಕಾರ್ಯವನ್ನೇ ಮಾಡಬೇಕು ಪತಿಯು ದೇಶಾಂತರಕ್ಕೆ ಹೋಗಿರುವಾಗ ಬರುವ ಪರಿಯಂತರ ಗಂಧಮಾಲ್ಯಾಭರಣಗಳನ್ನೂ ಮತ್ತೂ ಶ್ರೇಷ್ಠವಾದ ವಸ್ತ್ರಗಳನ್ನೂ ಧರಿಸಬಾರದು ರುಚಿಕರವಾದ ಊಟವನ್ನು ಮಾಡಬಾರದು ಅತ್ತೆಮಾವಂದರಿಗೆ ವಿಧೇಯಳಾಗಿರಬೇಕು ಅವರಲ್ಲಿ ಹೆಚ್ಚುಮಾತುಗಳನ್ನಾಡಬಾರದು ಅವರ ಎದುರಿಗೆ ಪ್ರತಿಕೂಲವಾದ ಉತ್ತರವನ್ನು ಕೊಡಬಾರದು. ದೇವರುಗಳಲ್ಲಿಯೂ ಗುರುಗಳಲ್ಲಿಯೂ ವಂಚನೆಯನ್ನು ಮಾಡಬಾರದು ನಿಷ್ಕಾರಣವಾಗಿ ಮನೆಯನ್ನು ಬಿಟ್ಟು ಹೊರಗೆ ಹೋಗಬಾರದು ಪರ ಪುರುಷರನ್ನು ದುರ್ಭಾವದಿಂದ ನೋಡಬಾರದು ಅತಿಥಿಗಳನ್ನು ಬಂಧುಗಳನ್ನು ತಕ್ಕಹಾಗೆ ಸತ್ಕರಿಸಬೇಕು. ಮನೆಸ್ಸಿಗೆ ಬಂದಂತೆ ಘಟ್ಟಿಯಾಗಿ ನಗಬಾರದು ದಾಸದಾಸೀ ಜನಗಳನ್ನು ದಯೆಯಿಂದ ನಡೆಸಬೇಕು ರಹಸ್ಯವಾದ ಮಾತುಗಳನ್ನು ಹೊರಗಾಡಬಾರದು ಸರ್ವರಲ್ಲಿಯೂ ವಿನಯವನ್ನು ತೋರಿಸಬೇಕು ಶಾಂತಸ್ವಭಾವವುಳ್ಳವರಾಗಿರಬೇಕು ತಮ್ಮಿಂದಾದಷ್ಟು ಪ್ರೇಮದಿಂದ ಶಿಶ್ರೂಷೆಯನ್ನು ಮಾಡಬೇಕು. ಪತಿಯು ಒಂದುಕಡ್ಡಿಯನ್ನು ಪ್ರೀತಿಪೂರ್ವಕವಾಗಿ ಕೈಯೆತ್ತಿ ಕೊಟ್ಟರೂ ಅದನ್ನು ಅನಾದರಣೆಮಾಡದೆ ಪ್ರೇಮದಿಂದ ಸ್ವೀಕರಿಸಬೇಕು. ಸ್ಪರ್ಶಪರುಷವು ಸ್ವಲ್ಪಮಣಿ ಸೋಕಿದಮಾತ್ರಕ್ಕೆ ಕಬ್ಬಿಣ ಬಂಗಾರವಾಗುವಂತೆ ಪ್ರೇಮದ ಸಂಸರ್ಗವಾದಮಾತ್ರಕ್ಕೆ ಬೆಲೆಯಿಲ್ಲದಪದಾರ್ಥವು ಬೆಲೆಯುಳ್ಳದ್ದಾಗುತ್ತದೆ. ಪ್ರೇಮವಿಲ್ಲದೆ ಕೊಟ್ಟ ಭಂಗಾರದ ಒಡವೆಗಳಿಗಿಂತಲೂ, ಪ್ರೇಮದಿಂದ ಕೊಟ್ಟ ಕಲ್ಲುಗಳ ಬೆಲೆ ಹೆಚ್ಚು, ಅನೇಕ ಸ್ತ್ರೀಯರು ಲೋಭಗ್ರಸ್ತರಾಗಿ ತಮ್ಮಪತಿಗಳು ತಮಗೆ ಬೇಕಾದ ವಸ್ತುಗಳನ್ನು ಸಂಪಾದಿಸಿ ತಂದು ಕೊಡಲಾರದೆ ಹೋದರೆ ನಾನಾವಿಧವಾದ ಕೆಟ್ಟ ಕೆಲಸವನ್ನು ಮಾಡುವದಕ್ಕೆ ಆರಂಭಿಸುತ್ತಾರೆ. ಇದರಿಂದ ಅವರಿಗೆ ತಾವು ಅಪೇಕ್ಷಿಸುವ ಸುಖವುಂಟಾಗದೆ ಅತ್ಯಂತದುಃಖ ಉಂಟಾಗುವದಲ್ಲದೆ, ಮಾನವೂ ಉಳಿಯುವದಿಲ್ಲ; ಹೋದಮಾನ ಎಂದಿಗೂ ಬರುವದಿಲ್ಲ. ಆದಕಾರಣ ಪ್ರಾಣವಿರುವವರಿವಿಗೂ ದುಃಖವನ್ನನುಭವಿಸಿ ಕೊಂಡಿರಬೇಕಾಗುತ್ತದೆ. ಆದ್ದರಿಂದ ತಮ್ಮತಮ್ಮ ಪತಿಗಳಲ್ಲಿ ಸಂತುಷ್ಟರಾಗಿದ್ದರೆ ಪ್ರತಿಷ್ಠೆಯೂ, ಮಹತ್ವವೂ ಸುಖವೂ ಉಂಟು. ... ... ... *

ಹೀಗೆ ಪತಿಯಮನಸ್ಸನ್ನನುಸರಿಸಿ ಧರ್ಮಕ್ಕೂ ಪಾಪಕ್ಕೂ ಹೆದರಿಕೊಂಡು ತಮ್ಮ ನಡತೆಯನ್ನು ಪವಿತ್ರವಾಗಿಟ್ಟುಕೊಳ್ಳುವ ಸ್ತ್ರೀಯರೆ ಪತಿವ್ರತೆಯರೆನಿಸಿಕೊಳ್ಳುತ್ತಾರೆ.

ಈ ಪ್ರಕಾರ ದಂಪತಿಗಳು ಪರಸ್ಪರ ಪ್ರೀತಿಯುಳ್ಳವರಾಗಿ ಮಾನವಜನ್ಮ ತಮಗೆ ಲಭಿಸಿದ್ದಕ್ಕೆ ಯಾವದನ್ನು ತಿಳಿಯಬೇಕೋ ಅದನ್ನು ತಿಳಿದು, ಕೃತಕೃತ್ಯರಾಗತಕ್ಕದ್ದೇ ದಾಂಪತ್ಯಾನುಕೂಲದ ಫಲವು. ಈ ವಿಷಯವನ್ನೆಲ್ಲಾ ಸಂಗ್ರಹಿಸಿ, ಒಬ್ಬ ವಿದ್ವಾಂಸನು ರಚಿಸಿರುವ ಒಂದು ಶ್ಲೋಕವನ್ನು ಉದಾಹರಿಸಿ ನನ್ನ ಉಪನ್ಯಾಸವನ್ನು ವಿರಮಿಸುತ್ತೇನೆ

ಶ್ಲೋ॥ ಅನುಕೂಲಾಂ ವಿಮಲಾಂಗೀಂ ಕುಲಜಾಂ ಕುಶಲಾಂ ಸುಶೀಲ
ಸಂಪನ್ನಾಂ । ಪಂಚಲಕಾರಾಂ ಭಾರ್ಯಾಂ ಪುರುಷಃ ಪುಣ್ಯೋ
ದಯಾಲ್ಲಭತೇ ॥ ... ... ॥೧॥

ಇದರಲ್ಲಿ ಕುಲವತಿಯರಾದ ಪತ್ನಿಯರಿಗೆ ಇರಬೇಕಾದ ಧರ್ಮಗಳೊಳಗೆ ,, ಅನು ಕೂಲಾಂ ,, ಎಂಬ ವಿಶೇಷಣದಿಂದ ಪತಿಯ ಮನೋನುಗುಣವಾಗಿ ನಡೆಯುವದು, ,, ವಿಮಲಾಂ ,, ಎಂಬ ವಿಶೇಷಣದಿಂದ ಗೃಹಶುದ್ಧಿ, ಪಾತ್ರಶುದ್ಧಿ, ದೇಹಶುದ್ಧಿ, ವಸ್ತ್ರಶುದ್ಧಿ, ಮನಶ್ಶುದ್ಧಿಗಳು. ,,ಕುಶಲಾಂ,, ಎಂಬ ವಿಶೇಷಣದಿಂದ ಯಥೋಚಿತ ವಿದ್ಯಾಭ್ಯಾಸವು. ,, ಸುಶೀಲಸಂಪನ್ನಾಂ,, ಎಂಬ ವಿಶೇಷಣದಿಂದ ದೇವರ ವಿಷಯದಲ್ಲಿಯೂ, ಜನಗಳ ವಿಷಯದಲ್ಲಿಯೂ, ತೋರಿಸಬೇಕಾದ ನಡತೆಯು ಸೂಚಿಸಲ್ಪಟ್ಟದೆ. ನಮ್ಮ ಆರ್ಯ ಮಹಿಳೆಯರು ವಿದ್ಯೆಯನ್ನು ವಿದ್ಯೆಯಸಂಗಡ ಸೌಶೀಲ್ಯ ಮೊದಲಾದವುಗಳನ್ನು ಸಂಪಾದಿಸಿ, ಆಚರಣೆಗೆ ತಂದಲ್ಲಿ ಹಿಂದೂ ದೇಶವು ಉನ್ನತಸ್ಥಿತಿಗೆ ಬರುವದರಲ್ಲೇನು ಸಂಶಯವಿಲ್ಲ.

( ಕೈಚಪ್ಪಾಳೆ )

ಮೈ ಸೂ ರು.

ಶಿವಾಚಾರದ ಬಿಡದಿ ಗುರುಕಾರು ದೇವಣ್ಣನವರ ಮೊಮ್ಮಗಳು,

ಬ ಸ ವ್ವ.

---

## ಪಾತಿವ್ರತ್ಯ ಮಹಾತ್ಮೆ.

### ಈ ವಿಷಯದಮೇಲೆ ಶ್ರೀಮತಿ ಚನ್ನಬಸವ್ವ ಶಾಲಾಮಾಸ್ತರ್ ಬೆಳಗಾಂವಿ, ಇವರು ಮಾಡಿದ ಭಾಷಣವು.

ಸಭಾಧ್ಯಕ್ಷರೇ ? ಹಾಗು ಸಭಿಕರೇ ? ಮತ್ತು, ಮಹನೀಯರಾದ ಸ್ವಧರ್ಮಭಗಿನಿಯರೇ ? ನಿಮ್ಮೆಲ್ಲರಿಗೆ ಸವಿನಯದಿಂ ಮಣಿದು, ನಾನು ಕೈಕೊಂಡ ಪಾತಿವ್ರತ್ಯಮಹಾತ್ಮೆಯೆಂಬ, ವಿಷಯವನ್ನು ಕುರಿತು ಮಾತಾಡಲು ನಿಮ್ಮಪ್ಪಣೆಯನ್ನು ಬೇಡುತ್ತೇನೆ.

ಈಶ್ವರನು ನಮ್ಮಲ್ಲಿ ಸುಂದರವಾದ ರೂಪವನ್ನೂ, ಮೃದುವಾದ ಶರೀರವನ್ನೂ ಸೌಮ್ಯವಾದ ಸ್ವಭಾವವನ್ನೂ ಇಟ್ಟಿರುವದರಿಂದ, ಇದಕ್ಕೆ ನೂರಾರುವರ್ಷ ಅರಣ್ಯದಲ್ಲಿ ತಪಸ್ಸನ್ನೂ ಆಚರಿಸಿದ ಮಹನ್ ಮಹನ್ ಯೋಗಿಗಳು ಕೂಡ ಭ್ರಾಂತರಾಗಿ ಕಾಮಾಂಧತೆಯಿಂದ ದುಷ್ಟತನಕ್ಕೆಳಸಿ, ತಾವೂ ನರಕಗಾಮಿಗಳಾಗುವರಲ್ಲದೆ, ಸ್ತ್ರೀಯರನ್ನೂ ಕೂಡ ಧರ್ಮಭ್ರಷ್ಟರೂ ನೀತಿಭ್ರಷ್ಟರನ್ನಾಗಿ ಮಾಡುವರು. ... ...

ಇಂಥ ಪಾಪಹೇತುವಾಗಿರುವ ಪುರುಷರಿಂದುಂಟಾದ ಕಾಮಜಾಲಗಳಿಗೆ ವಳಗಾಗದೇ ನಾವು ದೃಢಚಿತ್ತರಾಗಿ ಪಾತಿವ್ರತ್ಯವೆಂಬವ್ರತವನ್ನು ನಮ್ಮಪ್ರಾಣದಕಿಂತಲೂ ಅಧಿಕವೆಂದು ತಿಳಿದು, ಬಿಡದಾಚರಿಸಿದರೆ, ನಮ್ಮ ಯೋಗ್ಯತೆಯೂ ಜಗತ್ತಿನಲ್ಲಿ ಪ್ರಜ್ವಲಿಸುವದು ಮತ್ತು ಕೀರ್ತಿಕಾಯರಾಗಿರುವೆವು. ಸಾವಿರಾರು ವರ್ಷ ತಪಸನ್ನಾಚರಿಸಿದರೂ ಕೂಡ ಬಾರದಷ್ಟು ಫಲವು ಅಂದರೆ ಶಾಪಾನುಗ್ರಹ ಶಕ್ತಿಯು ನಮ್ಮಲ್ಲಿ ಉಂಟಾಗುತ್ತದೆ. ಇದಕ್ಕೆ ಇಂದ್ರನು, ಚಂದ್ರನು, ವಿಶ್ವಾಮಿತ್ರ ಮುಂತಾದ ಋಷಿಗಳು, ಪತಿವ್ರತಾ ಸ್ತ್ರೀಯರ ಶಾಪಕ್ಕೊಳಗಾದರೆಂದು ಅನೇಕ ಗ್ರಂಥಗಳಿಂದ ತಿಳಿಯುತ್ತದೆ. ಇದು ಅಲ್ಲದೆ ಇಹಲೋಕದಲ್ಲಿ ತಮಗೊದಗತಕ್ಕ ಕಂಟಕಗಳನ್ನು ಅನಾಯಾಸವಾಗಿ ಪರಿಹರಿಸಿಕೊಳ್ಳಬಲ್ಲರು. ಈ ಪತಿವ್ರತೆಯರ ಪಾದ ಸೋಂಕಿದಕ್ಷಣವೇ ಭಯಂಕರವಾಗಿ ಸುಡುತ್ತಿರುವ ಬೆಂಕಿಯು ತಣ್ಣಗಾಗುವದು. ಇವರ ದರ್ಶನ ಮಾತ್ರದಿಂದಲೇ ಸಿಂಹ, ಶಾರ್ದೂಲ, ಹುಲಿ, ಕರಡಿ, ಮುಂತಾದ ಜೀವಹಿಂಸಕ ಪ್ರಾಣಿಗಳೆಲ್ಲವೂ ದೂರ ದೂರ ಫಲಾಯನ ಮಾಡುವವು. ಸತ್ಪುರುಷರೆಲ್ಲರು ಇಂಥ ಸ್ತ್ರೀಯರ ಪಾದ ದರ್ಶನಾಪೇಕ್ಷಿಗಳಾಗುವರು. ಬಹಳ ಹೇಳುವದೇನು ಯಾವ ಸ್ತ್ರೀಯಳು ಪತಿಯೇ ತನ್ನ ಪ್ರಾಣವೆಂದು, ಪತಿಯ ಸುಖದುಃಖಗಳು ತನ್ನ ಸುಖದುಃಖಗಳೆಂದು ತಿಳಿದು, ಅದರಂತೆ ಆಚರಿಸುವಳೋ ಅವಳೇ ಧನ್ಯಳು, ಜಗತ್ಪೂಜ್ಯಳು, ಜಗದ್ವಂದ್ಯಳು ಆಗಿ, ತನ್ನ ವಂಶವನ್ನೇ ಪವಿತ್ರವನ್ನಾಗಿ ಮಾಡುವಳಲ್ಲದೆ, ತನ್ನ ನೆರೆಹೊರೆಯವರನ್ನು ಸಹ ಉದ್ಧರಿಸುವಳು. ಇಂಥ ಅತ್ಯಂತ ಶ್ರೇಷ್ಠವಾದ ವ್ರತವನ್ನು ನಾವೆಲ್ಲರೂ ಬಿಡದೇ ಆಚರಿಸಿದ್ದಾದರೆ ಇದರ ಪ್ರಭಾವದಿಂದ ನಮ್ಮ ಸಮಾಜವು ಬೇಗನೇ ಮುಂದಕ್ಕೆ ಬಂದು ನಾವೆಲ್ಲರೂ ಪ್ರಪಂಚದ ಸಕಲ ಸುಖಗಳನ್ನನುಭವಿಸಿ, ಪರದಲ್ಲಿಯೂ ಕೂಡ ಶ್ರೀಮತ್ಪರಮೇಶ್ವರನ ಪ್ರೀತಿಗೆ ಪಾತ್ರರಾಗಿ ನಿತ್ಯಸುಖಿಗಳಾಗುವೆವು. ಇಂಥ ಅಧಿಕವಾದ ವ್ರತವನ್ನು ಸರ್ವರು ತಪ್ಪದೇ ಆಚರಿಸಬೇಕೆಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

(ಕೈಚಪ್ಪಾಳೆ.)

ಚನಬಸವ್ವಾ ಮಲ್ಲಯ್ಯಾ ವಸ್ತ್ರದ
ಶಾಲಾಮಾಸ್ತರ್ ಬೆಳಗಾಂವಿ.

## ಇದನ್ನೇ ಅನುಮೋದಿಸುತ್ತಾ ಶ್ರೀಮತಿ ಶಾಂತವೀರವ್ವನವರು ಮಾಡಿದ ಭಾಷಣವು.

ಈ ಸಭೆಯೆಂಬ ಆಕಾಶದಲ್ಲಿ ಸ್ತ್ರೀ ಸಮೂಹವೆಂಬ ನಕ್ಷತ್ರಗಳಿಗೆ ಚಂದ್ರಸ್ವರೂಪರಾದ ಸ್ತ್ರೀಸಭಾಧ್ಯಕ್ಷರೇ? ಮತ್ತು ಮಹನೀಯರೇ! ಪತಿವ್ರತಮಹತ್ವ ಎಂಥಾದ್ದು ಎಂಬ ಬಗ್ಗೆ ಈಗ ನಮ್ಮ ಮಾತೃಸ್ವರೂಪಿಣಿಯರಾದ ಬೆಳಗಾವಿಯ ಶಾಲೆಯ ಮಾಸ್ತರರಾದ ಚನಬಸವ್ವನವರು ಮಾತಾಡಿದ್ದನ್ನು ತಾವೆಲ್ಲರು ಒಂದೇ ಮನಸ್ಸಿನಿಂದ ಆಲಿಸಿರುವಿರಾದ್ದರಿಂದ ಅದರ ಮಹತ್ವ ಎಂಥಾದ್ದು ಎಂಬುವದು ತಮಗೆ ಗೊತ್ತಾಗಿಯೇ ಇರುವದು. ಈ ವಿಷಯವಾಗಿ ನಾನು ವಿಶೇಷ ಹೇಳಬೇಕಾದ ಅವಶ್ಯಕವಿಲ್ಲ. ... ... *

ಈ ಪತಿವ್ರತವನ್ನಾಚರಿಸುವದು ಸಾಧಾರಣವಾದ ಕೆಲಸವಲ್ಲ. ಇದಕ್ಕೆ ಜ್ಞಾನವೇ ಮುಖ್ಯವಾಗಿರುವದು. ಜ್ಞಾನವಿಲ್ಲದವರು ಶುದ್ಧ ಪಶುಗಳ ಹಾಗೆ ಇರುವರೆಂದು ಹೇಳಿದರೆ, ಯಾರೂ ಸಿಟ್ಟಾಗಲಿಕ್ಕಿಲ್ಲ ಯಾಕಂದರೆ;— ... ... *

ವಿದ್ಯಾನಾಮನರಸ್ಯರೂಪಮಖಿಲಂ । ಪ್ರಚ್ಛನ್ನಗುಪ್ತಂಧನಂ ।
ವಿದ್ಯಾಭೋಗಕರೀಯಶಸ್ಸುಖಕರೀ । ವಿದ್ಯಾಗುರೂಣಾಂಗುರುಃ ।
ವಿದ್ಯಾರಾಜಸುಪೂಜಿತಾನಹಿಧನಂ । ವಿದ್ಯಾವಿಹೀನಪಶುಃ ॥ ೧ ॥

ಅಂದರೆ ವಿದ್ಯೆಯೆಂಬುವಂಥಾದ್ದು ಮನುಷ್ಯನಿಗೆ ಉತ್ತಮವಾದ ಸ್ವರೂಪವಾಗಿಯೂ, ಸಮಸ್ತವಾದ ಧನದಕಿಂತಲೂ ಛಿಪ್ರವಾಗದೇ ಇರುವ ಗುಪ್ತ ಧನವಾಗಿಯೂ, ಸಕಲ ಭೋಗಗಳನ್ನೂ ಕೀರ್ತಿಯನ್ನೂ ಸುಖವನ್ನೂ ಕೊಡುವಂಥಾದ್ದಾಗಿಯೂ, ಗುರುವಿಗು ಕೂಡಾ ಗುರುಸ್ವರೂಪವಾಗಿಯೂ ಇರುವದು. ಇಂಥಾ ವಿದ್ಯವನ್ನೇ ರಾಜನು ಪೂಜಿಸುವನಲ್ಲದೆ ದ್ರವ್ಯವನ್ನು ಪೂಜಿಸುವದಿಲ್ಲವು. ಇದ್ದರಿಂದ ಯಾವನಲ್ಲಿ ವಿದ್ಯೆಯಿಲ್ಲವೋ ಅವನೇ ಸಾಕ್ಷಾತ್ಪಶುವೆಂದು ಹೇಳಿಸಿಕೊಳ್ಳುತ್ತಾನೆ. ... ... *

ಇಂಥಾ ವಿದ್ಯದ ಗಾಳಿಯೇ ನಮ್ಮ ಸ್ತ್ರೀಕುಲದಮೇಲೆ ಬೀಸದಿದ್ದರೇ ನಾವು ಪಶುಗಳಹಾಗೆ ವರ್ತಿಸುತ್ತಾ ಸನ್ಮಾರ್ಗಭ್ರಷ್ಟರೂ, ಅಸನ್ಮಾರ್ಗಾವಲಂಬಿಗಳೂ, ಆಗುವದೇನಾಶ್ಚರ್ಯ. ಪುರುಷರನ್ನು ನೋಡಿ ಸ್ತ್ರೀಯರೂ, ಸ್ತ್ರೀಯರನ್ನು ನೋಡಿ ಪುರುಷರೂ ಪರಸ್ಪರ ಮೋಹಿಸಿ, ದುರಾಚಾರಪ್ರವರ್ತಕರಾಗುವರೆಂದು ಹೇಳುವದಕ್ಕೆ ಸಂಶಯವಿಲ್ಲ. ಆದ್ದರಿಂದ ಇಂಥಾ ಕಠಿಣವಾದ ಪ್ರಸಂಗದಲ್ಲಿ ಜ್ಞಾನದ ಅವಶ್ಯಕತೆಯು ಹೆಚ್ಚಾಗಿರಬೇಕಾಗುತ್ತದೆ ಜ್ಞಾನವನ್ನು ಹೆಚ್ಚಿಸುವದಕ್ಕೆ ವಿದ್ಯೆಯು ಮೂಲವಾದದ್ದು. ಇದರಿಂದ ನಾವು ಪತಿವ್ರತೆಯರ ಚರಿತ್ರಗಳನ್ನು ನೀತಿಪರವಾಗಿಯೂ ಧರ್ಮಪರವಾಗಿಯೂ ಇರುವ ಗ್ರಂಥಗಳನ್ನು ಓದಬೇಕಾದದ್ದು ಅವಶ್ಯಕವು; ಇದರಿಂದಲೇ ನಮ್ಮ ಜ್ಞಾನವು ಹೆಚ್ಚುವದು. ನಾವು ಸದಾ

ಚಾರಿಗಳಾಗುವೆವು, ಅದ್ದರಿಂದಲೇ ವಿದ್ಯೆಯು ನಮಗೆ ಅವಶ್ಯಕವಾಗಿರುತ್ತದೆ. ಹಾಗಿಲ್ಲದೆ ಪತಿವ್ರತದ ಮಹಿಮೆಯನ್ನರಿಯದೆ ನಾವು ಪತಿವ್ರತವನ್ನಾಚರಿಸುವದು ಜ್ಞಾನರಹಿತರಾದ ಅಬಲೆಯರಿಗೆ ಬಹುತೊಂದರೆಯನ್ನುಂಟುಮಾಡುವದು. ಪತಿವ್ರತವನ್ನು ಹ್ಯಾಗೆ ಪಾಲನ ಮಾಡಬೇಕು ಅದರಿಂದ ಫಲವೇನು ಎಂಬದನ್ನು ತಿಳಿಯುವಬಗ್ಗೆ ಶಾಂತಗಿರಿ ಹಿರೇಮಠದ ಅಯ್ಯಪ್ಪಯ್ಯನವರಿಂದ ರಚಿಸಲ್ಪಟ್ಟು, ಗದಗ ಚಂಡೂರಮಠದ ಚನ್ನಬಸವಯ್ಯನವರಿಂದ ಪ್ರಸಿದ್ಧಿಸಲ್ಪಟ್ಟ ಬಾಲಿಕಾಗೀತಾ ಶತಕದಲ್ಲಿಯ ಪತಿಭಕ್ತಿಯೆಂಬ ವಿಷಯದ ಕೆಲವು ಪದಗಳನ್ನು ಇಲ್ಲಿ ತಮಗೆ ತಿಳಿಯುವಂತೆ ಹಾಡಿ ತೋರಿಸುವೆನು ಆಲಿಸಬೇಕು. ... *

ಆ ಪದಗಳನ್ನು ಆ ಶತಕಗಳಲ್ಲಿ ನೋಡಿರಿ:—

ಮಹನೀಯರೇ ನಮ್ಮ ಧರ್ಮ ನೀತಿ ಆಚಾರ ಇವುಗಳು ಬಲಪಡುವದಕ್ಕೆ ಬಾಲಿಕಾಗೀತಾ ಶತಕ, ಮತ್ತು ಬೀಗತಿಯರಪದವೆಂಬ ಎರಡು ಪುಸ್ತಕಗಳು ಅತ್ಯಂತಸಹಾಯಕಾರಿಗಳಾಗಿರುತ್ತವೆ. ಇವುಗಳನ್ನು ಇಲ್ಲಿ ನೆರೆದಿರುವ ನಮ್ಮ ಭಗಿನಿಯರು ಅವಶ್ಯಕವಾಗಿ ಕಲಿಯಬೇಕೆಂದು ಹೇಳಿ, ನನ್ನ ಭಾಷಣವನ್ನು ಮುಗಿಸುತ್ತೇನೆ. ... *

(ಕೈಚಪ್ಪಾಳೆ.)

ಶಾಂತವೀರವ್ವಾ ಬಿಳೂರ, ಸಾಕೀನ ಸೂಳೇಭಾವಿ

ವಸ್ತಿ ಶಹಪೂರ.

---

## ಸ್ತ್ರೀ ಶಿಕ್ಷಣದ ಅವಶ್ಯಕತೆ.

### ಈ ವಿಷಯದಮೇಲೆ ಶ್ರೀಮತಿ ಭಾಗೀರಥಿಬಾಯಿ ಮುತ್ತೂರು ಇವರು ಮಾಡಿದ ಭಾಷಣವು.

ಈ ವಿಷಯವನ್ನು ನಾನು ಓದುವ ಮೊದಲು ಶ್ರೀ ಪಾರ್ವತೀ ಮಾತೆಯನ್ನು ವಂದಿಸುತ್ತೇನೆ. ಮತ್ತು ವಿದ್ಯಾ ವಿಶಾರದಳು, ಸುಶೀಲಳು, ಸುಶಿಕ್ಷಿತಳು, ಮತ್ತು ನನಗೆ ತಾಯಿಯಂತೆ ಒಪ್ಪುವ, ಅಧ್ಯಕ್ಷ ಮಹನೀಯಳಾದ ಈ ನಾಗಮ್ಮ ನವರಿಗೆ ವಂದಿಸುವೆನು ಮತ್ತು ಈಗ ಇಲ್ಲಿ ಕೂಡಿಕೊಂಡಿರುವಂಥ ಯಾವತ್ತು ಅಕ್ಕ ತಂಗಿಯರಿಗೆ ನಮಸ್ಕಾರಮಾಡುವೆನು. ... ... ... ... ... *

ಇನ್ನು ನಾನು ಭಾಷಣವನ್ನು ನನ್ನ ಅಲ್ಪಬುದ್ಧಿಗೆ ತಿಳಿದಷ್ಟು ಓದಿ ತೋರಿಸುವೆನು. ನನಗೆ ಸಭೆಯಲ್ಲಿ ಓದುವದು ಇದು ಮೊದಲನೇ ಪ್ರಸಂಗ ವಿರುವದರಿಂದ ತಪ್ಪು

ತಡಿಗಳು ಆಗುವದು ಸಹಜವು. ಆದುದರಿಂದ ಯಾವತ್ತರೂ ಕ್ಷಮಿಸಬೇಕೆಂದು ಬೇಡಿಕೊಳ್ಳುತ್ತೇನೆ. ... ... ... ... ... *

ನಮ್ಮಂಥ ಹೆಣ್ಣುಮಕ್ಕಳಿಗೆ ವಿದ್ಯೆಕಲಿಸುವದಕ್ಕೆ ಎಷ್ಟೋ ಪುರುಷರು ಇನ್ನೂವರಿಗೂ ಅನುಕೂಲಿಸುವದಿಲ್ಲ; ಇದು ಬಹಳ ದುಃಖದ ಸಂಗತಿಯಾಗಿದೆ. ಯಾಕಂದರೆ;— ಪುರುಷರ ಶಿಕ್ಷಣದಕಿಂತಲೂ, ನಮ್ಮ ಹೆಣ್ಣು ಮಕ್ಕಳಿಗೆ ವಿದ್ಯೆಕಲಿಸುವದು ಬಳ್ಳೇ ಮಹತ್ವದ ಸಂಗತಿಯಾಗಿದೆ; ಹೇಗಂದರೆ—ಕೂಸು ಹುಟ್ಟಿದಂದಿನಿಂದ ಏಳೆಂಟು ವರುಷಗಳತನಕ ಆ ಕೂಸಿಗೆ ತಂದಿಯಸಂಬಂಧವು ಇರುವದಿಲ್ಲ. ತಾಯಿಯು ಹತ್ತರವೇ ಇರಬೇಕಾಗುತ್ತದೆ ಆ ಎಳೆ ಕೋಮಲವಾದ ಕೂಸಿನ ಮನಸು ಒಂದು ನಿರ್ಮಲವಾದ ಕನ್ನಡಿಯಂತೆ ಇರುವದರಿಂದ, ತಾಯಿಯು ಯಾವ ತರಹದ ಛಾಯೆಯನ್ನು ಕೂಸಿನ ಮನಸಿನಲ್ಲಿ ಕೆಡಹುವಳೋ ಅದೇ ಪ್ರತಿಬಿಂಬವು ಮೂಡುತ್ತದೆ. ಇಂಥ ಕಾಲದಲ್ಲಿ ತಾಯಿಯು ಅಶಿಕ್ಷಿತಳು ಬುದ್ಧಿಹೀನಳು ಇದ್ದರೆ, ಆ ಕೂಸಿನ ಜನ್ಮದ ಹಾನಿಯಾಗುತ್ತದೆ. ಇಷ್ಟೇಅಲ್ಲ ಆ ಮನೆತನವು ಕೆಟ್ಟು, ಆ ಕುಟುಂಬದವರೆಲ್ಲರೂ ಅಪಕೀರ್ತಿಗೆ ಗುರಿಯಾಗುತ್ತಾರೆ. ಅದೇ ವಿದ್ಯೆ ಕಲಿತವಳೂ, ಬುದ್ಧಿವಂತಳೂ ತಾಯಿಯು ಇದ್ದರೆ; ಇಂಥವಳ ಸಹವಾಸದಲ್ಲಿ ಬೆಳೆದ ಕೂಸು, ತೇಜಃಪುಂಜವಾಗಿ ತನ್ನ ಏಳಿಗೆಯನ್ನು ಮಾಡಿಕೊಳ್ಳುವದಲ್ಲದೆ, ತನ್ನ ಮನೆತನದ ಏಳಿಗೆಯನ್ನೂ, ಬಂಧುವರ್ಗದ ಏಳಿಗೆಯನ್ನೂ ಮಾಡಿ, ದೇಶದ ಕಲ್ಯಾಣವನ್ನು ಸಹ ಮಾಡುವದು; ಇಂಥ ಉದಾಹರಣಗಳು ಇತಿಹಾಸದಲ್ಲಿ ಸಾವಿರಾರು ದೊರೆಯುತ್ತವೆ. ನೇಪೋಲಿಯನ ಬೋನಾಪಾರ್ಟನು, ಇಷ್ಟು ಪ್ರಸಿದ್ಧಿಯನ್ನು ಹೊಂದಬೇಕಾದರೆ ಅವನ ತಾಯಿಯ ವಿದ್ಯೆದಬಲದಿಂದಲ್ಲವೇ! ಸಾಕ್ರುಟೇಸನು ಇಷ್ಟು ಹೆಸರಿಗೆಬಂದು ಜಗತ್ತಿನಲ್ಲಿ ಕೀರ್ತಿಯನ್ನು ಪಡೆದದ್ದು ತನ್ನ ತಾಯಿಯ ಶಿಕ್ಷಣದ ಪ್ರಭಾವದಿಂದಲ್ಲವೇ? ಇದರಂತೆ ಶಿವಾಜಿ ಮಹಾರಾಜರು, ತನ್ನ ತಾಯಿಯು ಕೊಟ್ಟ ವಿದ್ಯೆಯಿಂದಲೇ ಕೀರ್ತಿ ಹೊಂದಿದರು. ಇವರೆಲ್ಲರೂ ತಮ್ಮತಮ್ಮ ತಾಯಂದಿರಿಂದ ಚಿಕ್ಕಂದಿನಲ್ಲಿ ಹೊಂದಿದ ವಿದ್ಯೆದಬಲದಿಂದಲ್ಲೇ ಕೀರ್ತಿಯನ್ನು ಪಡೆದು, ತಮ್ಮತಮ್ಮ ಹೆಸರುಗಳನ್ನು ಜಗತ್ತಿನಲ್ಲಿ ಅಚ್ಚಳಿಯದಂತೆ ಮಾಡಿದರು. ಇದೆಲ್ಲ ಹೆಣ್ಣುಮಕ್ಕಳಿಗೆ ವಿದ್ಯೆಕಲಿಸಿದ ಫಲವೇ ಹೊರ್ತು ಇನ್ನೊಂದಲ್ಲ. ಇದರಂತೆ ಪ್ರಾಚೀನ ಕಾಲದಲ್ಲಿ ನಮ್ಮ ವೀರಶೈವರಲ್ಲಿಯ ಅಕ್ಕ ನಾಗಮ್ಮನವರ ಬುದ್ಧಿ ಪ್ರಭಾವದಿಂದ ಆವಳ ಸತ್ಪುತ್ರನಾದ ಶ್ರೀ ಚನ್ನಬಸವೇಶ ದೇವರು, ಮಿಗಿಲಾದ ಜ್ಞಾನವಂತರಾಗಿ, ತಮ್ಮಂತೆಯೇ ಎಷ್ಟೋ ಪ್ರಾಣಿಗಳನ್ನು ಉದ್ಧಾರಮಾಡಿದರು. ಅದರಿಂದ ಅಮ್ಮಗಳಿರಾ? ನಮ್ಮಂಥ ಹೆಂಣುಮಕ್ಕಳಿಗೆ ವಿದ್ಯೆಯನ್ನು ಕಲಿಸುವದರಲ್ಲಿ ನೀವು ಸಾಹಸ ಪಡಬೇಕಲ್ಲದೇ ನಿಮ್ಮ ನಿಮ್ಮ ಗಂಡಂದಿರಿಗೂ ಇದರ ವಿಷಯಕ್ಕೆ ಸಾಹಸ ಪಡುವದಕ್ಕೆ ನಮ್ರಭಾವದಿಂದ ಬಳ್ಳೇ ಘಟ್ಟಿಗರಾಗಿ ಅಗ್ರಹ ಪೂರ್ವಕವಾಗಿ ಹೇಳಿಕೊಳ್ಳತಕ್ಕದ್ದು; ಇದರ ಹೊರ್ತು ನಮ್ಮದೂ ನಮ್ಮ ಕುಟುಂಬ ಸಮಾಜಗಳ ಉನ್ನತಿಯಾಗಲಿಕ್ಕಿಲ್ಲ. ಇದು ನಿಚ್ಚಯವು. ಇನ್ನು ಇಷ್ಟು ಹೊ

ತ್ತಿನ ತನಕ ನಾನು ಓದಿ ತೋರಿಸಿದ ಭಾಷಣವನ್ನು ತಾವೆಲ್ಲರೂ ಶಾಂತಚಿತ್ತದಿಂದ ಕೇಳಿ ಕೊಂಡದ್ದಕ್ಕೆ ತಮ್ಮೆಲ್ಲರ ಉಪಕಾರವನ್ನು ನೆನೆಸುತ್ತೇನೆ. ಮತ್ತು ತಮ್ಮತಮ್ಮ ಗಂಡಂದಿರಗೂ, ತಾಯಿ ತಂದೆಗಳಿಗೂ, ಹೆಣ್ಣುಮಕ್ಕಳಿಗೆ ವಿದ್ಯೆಕಲಿಸಲಿಕ್ಕೆ ಬಳ್ಳೇ ಆಸ್ಥಾಪೂರ್ವಕ ಬೇಡಿಕೊಳ್ಳಬೇಕೆಂದು ಇನ್ನೊಮ್ಮೆ ಹೇಳಿ, ನಾನು ತಮ್ಮೆಲ್ಲರ ಅಪ್ಪಣೆಯನ್ನು ತಕ್ಕೊಳ್ಳುತ್ತೇನೆ. ... ... ... ... ... *

(ಕೈಚಪ್ಪಾಳೆ.)

ಭಾಗಿರಥಿ ಬಾಯಿ ಮುತಗ್ತಾರ

ರ ಬ ಕ ವಿ.

---

## ಇವನ್ನೇ ಅನುಮೋದಿಸುತ್ತಾ ಅಂಬಾಬಾಯಿ ಶೇಟೆ, ಸೋಲಾಪುರ ಇವರು ಮಾಡಿದ ಭಾಷಣವು.

ಪ್ರಿಯಸುಂದರಿಯರೇ? ನಮ್ಮ ವೀರಶೈವ ಪ್ರಪಂಚದಲ್ಲಿ ಅಜ್ಞಾನಿಗಳಾದ ಸ್ತ್ರೀಯರು ಬಹಳ ಇರುವದರಿಂದ ಮನೆಕೆಲಸಗಳನ್ನು ಹ್ಯಾಗೆ ಮಾಡಬೇಕೆಂಬುವದು ಅವರಿಗೆ ತಿಳಿಯುವದಿಲ್ಲಾ. ಮನೆಗೆ ಸೊಸೆಯು ಬಂದರೆ ಅತ್ತಿಗೆ ಉರಗಡಿಕಿಯು ಇಲ್ಲವೆ ಧೊರೇತನ ಶಿಕ್ಷಂತಾಗುವದು. ಹ್ಯಾಗಂದರೆ—ಜನ್ಮದಾರಭ್ಯ ಯೌವನವತಿ ಯಾಗುವವರೆಗು ತಾಯಿ ತಂದೆಗಳ ಪೋಷಣೆಯಲ್ಲಿದ್ದು, ಯಾವತರದ ದುಃಖವು ಗೊತ್ತಿರದ ಸೊಸೆಯು ಹೊಸದಾಗಿ ಮನೆಗೆಬಂದರೆ ಕೂಡಲೇ ತಿಳಗೇಡಿ ಅತ್ತಿಯರು ಅವರಲ್ಲಿ ತೊತ್ತುಗಳಂತೆ ತಮ್ಮ ಅಧಿಕಾರ ನಡಿಸುತ್ತಾರೆ. ಮತ್ತು ತಮ್ಮ ಹೆಣ್ಣು ಮಕ್ಕಳಂತೆ ನೋಡದೆ, ಅನೇಕ ಕಷ್ಟಗಳನ್ನು ಕೊಡುತ್ತಾರೆ. ಮತ್ತು ಎರಡನೆ ಯವರ ಮನಿಗೆ ತಮ್ಮ ಹೆಣ್ಣುಮಕ್ಕಳು ಹೋದರೆ ನಾನುಮಾಡಿದಂತೆ ಅವರು ಮಾಡುವರಲ್ಲಾ ಎಂಬುವದು ಸಹಾ ತಿಳಿಯುವದಿಲ್ಲಾ ಇದರಿಂದ ಸಂಸಾರಗಳು ಎಷ್ಟೋ ಕೆಟ್ಟದ್ದು, ತಮ್ಮೆಲ್ಲರ ಅನುಭವದಲ್ಲಿ ಇರಬಹುದು, ಮತ್ತು ಬಂದು ಕುಟುಂಬದಲ್ಲಿ ಪುರುಷರಲ್ಲಿ ಯಾವ ಕಲಹವು ಹುಟ್ಟುವದಿಲ್ಲಾ. ಹುಟ್ಟದಂತೆ ಬಹುಶಃ ನಮಗೆ ಉದಾಹರಣೆ ಶಿಗುವಂತೆ ಇಲ್ಲಾ. ಸ್ತ್ರೀಯರ ಅಜ್ಞಾನಮೂಲಕವಾದ ವೈಮನಸ್ಸುಗಳೆ ಬಕ್ಕಟ್ಟಾಗಿ ನಡಿಯುವ ಕುಟುಂಬ ವಿಭಾಗಕ್ಕೆ (ಎರಡು) ಕಾರಣವೆಂದು ನಾನು ನಿಶ್ಚಯವಾಗಿ ಹೇಳುತ್ತೇನೆ. ಕುಟುಂಬವು ಬಂದೆ ಬಳಮನಸ್ಸಿನಿಂದ ಕೂಡಿ ನಡಿದರೆ ಜನರಲ್ಲಿ ಕೀರ್ತಿಯು ಎಷ್ಟು ಹಬ್ಬುತ್ತದೆಂಬುವದು ಸರ್ವರ ಅನುಭವದಲ್ಲಿ ಇರುವದು. ಆದರೆ ಮಹಿಳಾಮಣಿಯರೇ ಸಂಸಾರದಲ್ಲಿ ಇಂಥ ಕೆಡುಗಳಿಗೆ ಸ್ತ್ರೀಯರೆ ಕಾರಣವೆಂದು ಖಂಡಿತವಾಗಿ ನಿಶ್ಚ

ಋಸಬೇಕು. ಇಂಥ ಬುದ್ಧಿಯು ಅವರಿಗೆ ಉಂಟಾಗಬೇಕಾದರೆ ಅಜ್ಞಾನವೆ ಕಾರಣವು ಈ ಅಜ್ಞಾನ ಹೋಗಬೇಕಾದರೆ ಶಿಕ್ಷಣದಿಂದುಂಟಾಗುವ ಜ್ಞಾನವೆ ಕಾರಣ. ಆದರಿಂದ ನಾವೆಲ್ಲರು ಶಿಕ್ಷಣದ ವಿಷಯದಲ್ಲಿ ಪ್ರಯತ್ನಿಸಿ, ಸದ್ಯಃ ಕಾಲದಲ್ಲಿ ಉಂಟಾಗಿರುವ ಹೀನಸ್ಥಿತಿಯನ್ನು ಹೋಗಲಾಡಿಸಿ, ಕೀರ್ತಿಯಲ್ಲಿ ಸಮರ್ಥರಾಗುವಿರೆಂದು ಅನನ್ಯಭಾವದಿಂದ ಪಾರ್ವತೀ ಪತಿಯಾದ ಪರಮೇಶ್ವರನನ್ನು ಪ್ರಾರ್ಥಿಸಿ, ನನ್ನ ಭಾಷಣವನ್ನು ಮುಗಿಸುತ್ತೇನೆ. *

(ಕೈಚಪ್ಪಾಳೆ.)

ಅಂಬಾಬಾಯಿ ಶೇಟ, ಸೋಲಾಪುರ.

---

## ಇದನ್ನು ಪುಷ್ಟೀಕರಿಸುತ್ತಾ ಶ್ರೀಮತಿ ಗೌರವ್ವ ಮಡಿಕಿ ಸೋಲಾಪುರ ಇವರು ಮಾಡಿದ ಮಹರಾಷ್ಟ್ರ ಭಾಷಣದ ಭಾಷಾಂತರ.

ಮತ್ತಿ ್ರಯ ಭಾಗೀರಥಿ ಸಮಾನರಾದ ಮಹಿಳಾಮಣಿಯರೇ? ತಾವುಗಳು ಸ್ತ್ರೀಯರು ವಿದ್ಯಾಭ್ಯಾಸಮಾಡುವದು ಯುಕ್ತವೇ ಅಯುಕ್ತವೇ ಎಂದು ಈ ಪರಿಷತ್ತಿನಲ್ಲಿ ಪ್ರಶ್ನೆಯೊಗಿಟ್ಟಿರುವಿರಿ ವಿಚಾರಮಾಡಿ ನೋಡುವಲ್ಲಿ ಶಿಕ್ಷಣಯಿಲ್ಲದಪಕ್ಷಕ್ಕೆ ತಮ್ಮಗು ತಮ್ಮಸಮಾಜಕ್ಕು ಅತಿಶಯ ನಷ್ಟವುಂಟು ಆದರಲ್ಲಿಯು ತಮ್ಮಕುಟುಂಬದ ಏಳಿಗೆಗೆ ತುಂಬಾ ಕೆಡಕಾಗುವದು. ಸ್ತ್ರೀಯಳು ಪುರುಷಗೆ ಅರ್ಧಾಂಗಿಯಾಗಿದ್ದಾಳೆ. ಮತ್ತು ಸಂಸಾರದಲ್ಲಿ ಭಾಗಸ್ತಳಾಗಿದ್ದಾಳೆ. ಆದ್ದರಿಂದ ಸ್ತ್ರೀಯು ತನ್ನ ಪುರುಷನಿಗೆ ಸಕಲ ವಿಷಯಗಳಲ್ಲಿಯು ಸುಖವನ್ನುಂಟುಮಾಡಬೇಕಾದರೆ ಶಿಕ್ಷಣದ ಬಲವು ಬಹಳ ಉಪಯೋಗವಾಗುವದು. ಸತಿಯು ಪತಿಯ ಧರ್ಮವನ್ನು ರಕ್ಷಿಸುವದರಲ್ಲಿ ಸಂಪೂರ್ಣ ಲಕ್ಷ್ಯಕೊಟ್ಟಿರಬೇಕು. ಇದು ಸ್ತ್ರೀಯಳ ಮುಖ್ಯಧರ್ಮವು. ಇದನ್ನು ಕಾಪಾಡುವದಕ್ಕೆ ಶಿಕ್ಷಣವು ಅವಶ್ಯವಾಗಿ ಬೇಕಾಗುವದು. ಸ್ತ್ರೀಯಳಿಗೆ ವಿದ್ಯೆ ಇಲ್ಲದಿದ್ದಲ್ಲಿ ಸಂಸಾರ ನಿರ್ವಹಣದಲ್ಲಿಯು, ಪತಿಶೇವೆಯಲ್ಲಿಯು, ಧರ್ಮಾಚರಣೆ ಮಾಡುವದರಲ್ಲಿಯು ಅನುಕೂಲ್ಯತೆ ಇಲ್ಲದೆ, ವಿರುದ್ಧವು ಪ್ರಬಲವಾಗುವದು. ಆದಕಾರಣ ಮುಖ್ಯವಾಗಿ ನಾನು ಅರಿಕೆಮಾಡಿಕೊಳ್ಳುವದೇನಂದರೆ;—ಬಾಲಕಿಯರಿಗೆ ಅವಶ್ಯವಾಗಿ ವಿದ್ಯೆಯನ್ನು ಕಲಿಸುವದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವದಲ್ಲದೆ ತಮ್ಮ ತಮ್ಮ ಪತಿಗಳಿಗೆ ಸ್ತ್ರೀಶಿಕ್ಷಣದವಶ್ಯಕತೆಯನ್ನು ಕುರಿತು, ಅತಿ ವಿನಯದಿಂದ ಹೇಳಿ, ತಂ ತಮ್ಮ ಮಕ್ಕಳನ್ನು ಸುಶಿಕ್ಷಿತೆಯರನ್ನು ಮಾಡಬೇಕು. ಚಿಕ್ಕತನದಲ್ಲೇ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿ, ಬರಿಯಲು ಓದಲು ಬಂದನಂತರ ದೊಡ್ಡದೊಡ್ಡ ಪತಿವ್ರತಾ ಸ್ತ್ರೀಯರ ಇತಿಹಾ

ಸಗಳು, ಚರಿತ್ರಗಳು, ಧರ್ಮಗ್ರಂಥಗಳು ಓದುವ ಪರಿಪಾಠವನ್ನಿಡಬೇಕು. ಇದಲ್ಲದೇ ಮಕ್ಕಳನ್ನು ಪ್ರಪಂಚದ ಆಚರಣೆಯಲ್ಲಿ ಒಳ್ಳೇ ಸ್ಥಿತಿಯನ್ನುಂಟುಮಾಡಬೇಕು. ಈ ಮೊದಲಾದ ಸೌಲಭ್ಯಗಳುಂಟಾಗುವದಕ್ಕೆ ವಿದ್ಯೆಯೇ ಮುಖ್ಯಕಾರಣವೆಂದು ಹೇಳಿ, ನನ್ನ ಭಾಷಣವನ್ನು ಮುಗಿಸುತ್ತೇನೆ. .... ... ... *

(ಕೈಚಪ್ಪಾಳೆ.)

ಗೌರವ್ವ ಮುಡಿಕಿ, ಸೋಲಾಪುರ.

---

ಈ ಮಧ್ಯೆ ಪೂರ್ವಸಮುದ್ರ ತೀರ ವಾಸಿಗಳಾದ ತೆನಾಲಿ ಶ್ರೀಮತಿ ಮಲ್ಲಿಕಾದೇವಮ್ಮ, ಷಡಾಕ್ಷರಮ್ಮ, ಇವರು ಸ್ತ್ರೀಶಿಕ್ಷಣದವಶ್ಯಕತೆಯನ್ನು ಕುರಿತು ಆಂಧ್ರದಲ್ಲಿ ಭಾಷಣವನ್ನು ಮಾಡಿದರು. ... ... *

ಸ್ತ್ರೀಯರು ಧರ್ಮವನ್ನು ರಕ್ಷಿಸುವಬಗೆ.

ಇದನ್ನು ಕುರಿತು, ಶ್ರೀಮತಿ ಅಕ್ಕುಬಾಯಿ ದೇಶಾಯಿಣಿ, ಸಂಸ್ಥಾನ ಶಾಂತಗೇರಿ ಇವರು ಮಾಡಿದ ಭಾಷಣವು.

ಅಕ್ಕಾ ವೀರಶೈವ ನಾರೀಮಣಿಯರೆ? ನಾವೆಲ್ಲರೂ ಈ ದಿವಸ ಒಟ್ಟುಗೂಡಿ, ನಮ್ಮಲ್ಲಿ ಇರತಕ್ಕ ಏನಿಕೆ ಹೆಚ್ಚುಕುಂದುಗಳನ್ನು ತಿದ್ದಿಕೊಳ್ಳುವದಕ್ಕೆ ಈ ಅಮೌಲ್ಯವಾದ ಸಂಧಿ ದೊರೆತದ್ದು, ಶ್ರೀಮನ್ನಿರಂಜನ ಹಾನಗಲ್ಲ ಮಹಾಸ್ವಾಮಿಗಳ ಕೃಪಾಕಟಾಕ್ಷವಲ್ಲವೇ ಇದಕ್ಕಾಗಿ ಮಹಾಸ್ವಾಮಿ ಚರಣಾರವಿಂದವನ್ನು ಅನ್ಯೋನ್ಯಭಾವದಿಂದ ಹೊಗಳಿ, ನಾನು ಆಚಾರ ವಿಷಯಕವಾದ ಉಪನ್ಯಾಸವನ್ನು ಪ್ರಾರಂಭಿಸುತ್ತೇನೆ. ... *

,, ಆಚಾರಃ ಪ್ರಥಮೋಧರ್ಮಃ ,, ಎಂಬ ವಚನದಿಂದ ಸದಾಚಾರವು, ಇಹಪರ ಸುಖಗಳ ಸಾಧನಕ್ಕೆ ಮೊದಲನೇದು. ಈ ಆಚಾರವು ಮನೆತನದಲ್ಲಿ ನಡೆಯತಕ್ಕದ್ದಿದ್ದು, ಮನೆಯ ಅಧಿಕಾರವು ನಮ್ಮ ಕೈಯ್ಯೊಳಗೆ ಇರತಕ್ಕದ್ದಾಗಿದೆ. ಸ್ತ್ರೀಯರಿಗೆ ಶಾಸ್ತ್ರೀಯವಾದ ಆಚಾರವು ಅವಶ್ಯವಾದದ್ದು; ಆದರೆ ಯಾವತ್ತು ಪ್ರಾಣಿಕೋಟಿಗಳಲ್ಲಿ ಮನುಷ್ಯಜನ್ಮವೇ ಹೆಚ್ಚಿನದು. ಅದರಲ್ಲಿ ವೀರಶೈವ ಧರ್ಮವು ಶ್ರೇಷ್ಠವಾದದ್ದು. ಯಾಕಂದರೆ;—ಜಗತ್ತಿನ ವೈದೀಕ ಧರ್ಮಗಳಲ್ಲಿ ಇತರ ವೈದೀಕರಿಗೆ ವೇದವಿಹಿತ ಸಂಸ್ಕಾರವು ಯಾವದೊಂದು ಇಲ್ಲದೆ, ಈ ವೀರಶೈವ ಸ್ತ್ರೀಯರಿಗೆ ನಮ್ಮ ಪುರುಷರಿಗೆ ಇರತಕ್ಕ ದೀಕ್ಷಾ, ಲಿಂಗಧಾರಣ, ವೇದೋಕ್ತವಾದ ಮಹಾಮಂತ್ರ ಜಪ ಮುಂತಾದ ಯಾವತ್ತು ಅಧಿಕಾರಗಳು ನಮ್ಮಗಿದ್ದು

ನಾವು ಮಾಡತಕ್ಕ ಪಾಕವು, ಕೇವಲ ಲಿಂಗಾರ್ಪಿತಕ್ಕಾಗಿಯೇ ಇರುವದು. ಇಂಥಾ ಪಾಕ ವನ್ನು ನಾವು ಮಾಡಬೇಕಾದರೆ ಹ್ಯಾಗೆ ಮಾಡಬೇಕು, ಮತ್ತು ದೀಕ್ಷಾಸಂಸ್ಕಾರದಿಂದ ಪವಿತ್ರವಾದ ಶರೀರಕ್ಕೆ ಆಚಾರಗಳ ಸಮ್ಮಂಧ ಹ್ಯಾಗಿರಬೇಕು, ಇದನ್ನು ನನ್ನ ಅಲ್ಪಮತಿಗೆ ತಿಳಿದಷ್ಟು ಹೇಳುತ್ತೇನೆ ಚಿತ್ತೈಸಬೇಕು. ... ... *

ಅರುಣೋದಯ ವಾಗುವದಕ್ಕಿಂತ ಮೊದಲು ಶಿವನಾಮಸ್ಮರಣೆಯಿಂದ ಹಾಸಿಗೆ ಬಿಟ್ಟು ಎದ್ದು ಶೌಚಕ್ಕೆಹೋಗಿ ಬರುವಾಗ್ಯೆ ಎಡಗೈಲೆ ತಂಬಿಗೆಯನ್ನು ಮುಟ್ಟದೆ, ಬಲಗೈಲೆ ಹಿಡಿತಂದು ಎಡಗೈಗೆ ಮೂರುಸಾರೆ ಎರಡೂಕೈಗೆ ಮೂರುಸಾರೆ ಮಣ್ಣುಹಚ್ಚಿತೊಳೆದು, ಮೂರುಸಾರೆ ತಂಬಿಗೆ ಬೆಳಗಿ, ಮುಖತೊಳೆಯಬೇಕು. ಶಿವಮಂತ್ರ ವುಚ್ಚರಿಸುತ್ತ ವಿಭೂತಿಯನ್ನು ಧರಿಸಿ, ಲಿಂಗನಿರೀಕ್ಷಣ ಮಾಡಬೇಕು. ಆಮೇಲೆ ಗುರುಹಿರಿಯರಿಗೆ ನಮಸ್ಕರಿಸಿ, ಬಾಗಲತೊಳೆದು, ರಂಗವಲ್ಲಿ ಮುಂತಾದವುಗಳಿಂದ ಅಲಂಕರಿಸಬೇಕು. ಆ ಮೇಲೆ ಸ್ನಾನಮಾಡಿ, ಶುದ್ಧ ಮಡಿವಸ್ತ್ರವನ್ನು ವುಟ್ಟು ಪುಷ್ಪ, ಪತ್ರಿ, ಧೂಪ ಮುಂತಾದ ಉಪಚಾರಗಳಿಂದ ಮತ್ತೂ ಏಕಮನಸ್ಸಿನಿಂದ ಶಿವಪೂಜೆಯನ್ನು ಮಾಡಿ, ಮುನ್ನಾದಿವಸದರಾತ್ರಿ ಸಾರಣೆಮಾಡಿದ ಒಲೆಯಲ್ಲಿ ಅಡಿಗೆಯನ್ನು ಮಾಡುವದಕ್ಕೆ ಪ್ರಾರಂಭಿಸಬೇಕು. ಸ್ನಾನ ಶಿವಪೂಜೆಗಳಿಲ್ಲದೆ ಮಾಡಿದ ಪಾಕವು, ಲಿಂಗನೈವೇದ್ಯಕ್ಕೆ ಯೋಗ್ಯವಾದದ್ದಲ್ಲಾ. ಪುರುಷನು ಅನಾಚಾರಿಯಾದರೆ ತನ್ನಿಷ್ಟಕ್ಕೆ ತಾನೇ ಕೆಡುವನು. ನಾವು ಅನಾಚಾರಿಗಳಾದರೆ ನಾವು ಮಾಡಿದ ಇಂಥಾ ಪಾಕವು ನಮ್ಮ ಮನಿಯೊಳಗಿನ ಪುರುಷರು, ಗಣಂಗಳು ಭೋಜನಮಾಡುವದರಿಂದ ಅವರನ್ನು ನಾವೇ ಕೆಡಸಿದಂತಾಗುವದು; ಅಂದರೆ ನಾವು ಎಂಥಾ ಪಾಪಿಗಳಾದೆವು. ಸರ್ವರನ್ನು ಕೆಡಸಿದ ಪಾಪದ ಭಾರಕ್ಕೆ ನಾವೇ ಗುರಿಯಾಗುವೆವು. ಆದರಿಂದ ಶುದ್ಧಮಡಿಯಿಂದ ಅಡಿಗಿ ಆದನಂತರ ಜಂಗಮದೇವರು ಮುಂತಾದವರ ಲಿಂಗಾರ್ಪಿತಕ್ಕೆ ಯಡೆಮಾಡಿ, ಅವರ ಭೋಜನವಾದಮೇಲೆ ನಾವು ಲಿಂಗಾರ್ಪಿತ ಮಾಡಬೇಕು. ನಮ್ಮ ಊಟ ಆದಮೇಲೆ ವೃತ್ತ ರಾದ ಮಹೇಶ್ವರರಿಂದ ಆಚಾರದ ರೀತಿಗಳನ್ನು, ಮತ್ತು ನಮ್ಮ ಪೂರ್ವದ ನೀಲಲೋಚನಾಂಬಿಕ್ಕಾ, ಮಹದೇವಿಯಕ್ಕಾ, ಅಮ್ಮವ್ವೆ, ಗಂಗಾಂಬೆ ಮೊದಲಾದ ಶಿವಶರಣೆಯರ ಪುಣ್ಯ ಚರಿತ್ರಗಳನ್ನು ಶಿಕ್ಷಣಪಟ್ಟವ್ಯಾಳ್ಯ ಕೇಳುವದರಲ್ಲಿ ಕಾಲಕಳೆದು, ಆದರಂತೆ ಆಚರಿಸಿ, ಶಿವಪ್ರೀತಿಗೆ ಪಾತ್ರರಾಗಿ, ಜಗತ್ತಿನಲ್ಲಿ ಕೀರ್ತಿವಂತರಾಗಿ, ನಮ್ಮ ಯಾವತ್ತು ಸ್ತ್ರೀಜನಗಳು ಬಾಳಬೇಕೆಂದು ಬೇಡಿಕೊಂಡು, ನನ್ನ ಭಾಷಣವನ್ನು ಮುಗಿಸುತ್ತೇನೆ. ... *

( ಕೈಜಪ್ಪಾಳೆ )

ಅಕ್ಕುಬಾಯಿ ದೇಶಾಯಿಣಿ, ಸಂಸ್ಥಾನ ಶಾಂತಗೇರಿ.

## ಮಹಾಸಭೆಗಳ ಪ್ರಯೋಜನವನ್ನು ಕುರಿತು ಶ್ರೀಮತಿ ಸಿದ್ಧಲಿಂಗಮ್ಮ ಅಂಕಲಕೋಟೆ, ಇವರು ಮಾಡಿದ ಭಾಷಣದ ಸಾರಾಂಶ.

ಸೋದರೀ ಮಣಿಗಳೇ? ನಮ್ಮ ಸಮಾಜದಲ್ಲಿ ಎಂದಿನಂತೆ ಕೂಪಸ್ಥ ಮಂಡೂಕಗಳೋಪಾದಿಯಲ್ಲಿದ್ದುಕೊಂಡು ತಮ್ಮ ಪ್ರಗತಿಯ ಹಾದಿಯನ್ನು ಹುಡುಕದೆ ಮಹಾಸಭೆಗಳನ್ನು ನೆರೆಯಿಸದೆ ಇದ್ದಲ್ಲಿ, ಈಗಿರುವ ಸ್ಥಿತಿಗಿಂತಲೂ ಅತ್ಯಂತ ಶೋಚನೀಯವಾದ ಅವಸ್ಥೆಯು ಬಂದೊದಗುತ್ತಲಿತ್ತು. ಮಹನೀಯರಾದ ಕೈ॥ ರಾವಬಹದ್ದೂರ, ವೀರಭದ್ರ ಮಡಿವಾಳೇಶ್ವರ ಪಂಡಿತ, ಕೈ॥ ರಾ॥ ಬ॥ ಗಿಲಗಿಂಚಿಸಾಹೇಬರ ಪ್ರಪ್ರಥಮ ಮಾರ್ಗದರ್ಶಕತ್ವದಿಂದ ಅನೇಕ ಪ್ರಪ್ರಥವಿದ್ಯಾವಂತರು ಹುಟ್ಟಿ, ಮಹಾಸಭೆಯೆಂಬ ಸಂಸ್ಥೆಯನ್ನು ಸ್ಥಾಪಿಸಿ, ಇಲ್ಲಿಯವರೆಗೂ ನಿರಾತಂಕವಾಗಿ ೨೪ ಸಭೆಗಳನ್ನು ನಡೆಯಿಸಿಕೊಂಡು ಬಂದರು. ಆ ಮಹಾಸಭಾ ಸೂರ್ಯನ ಕಿರಣಪ್ರಸಾರವು ಈ ವರ್ಷ ಸ್ತ್ರೀ ಸಮಾಜದಮೇಲೆ ವಿಶೇಷವಾಗಿ ಹರಡಿ ಅನೇಕ ದೇಶಗಳ ನಮ್ಮ ಸ್ತ್ರೀ ಮಂಡಳಿಯು ಬಂದೆಡೆಯಲ್ಲಿ ಕುಳಿತು, ತಮ್ಮ ಪುರೋವೃದ್ಧಿಯನ್ನು ಕುರಿತು ವಿಚಾರಮಾಡುವ ಸುದಿನವು ಇಂದಿಗೆ ಪ್ರಾಪ್ತವಾಗುವಂತೆಮಾಡಿರುವದು. ಇದೆಲ್ಲವು ಮಹಾಸಭೆಯ ಫಲವೇ ಎಂದು ಘಂಟಾಘೋಷವಾಗಿ ಹೇಳಬಲ್ಲೆನು. ಆದರೆ ಈ ದಿನ ಮಾತ್ರವೇ ಮಾತನಾಡಿ ಪ್ರಯೋಜನವಿಲ್ಲ. ಮಹಾಸಭೆಯವರು, ಆಯಾ ಪ್ರಾಂತಗಳ ಪ್ರಮುಖರು, ವಿದ್ಯಾವತಿಯರಾದ ಸ್ತ್ರೀಯರು, ಸ್ತ್ರೀ ವಿದ್ಯಾಭ್ಯಾಸಕ್ಕಾಗಿ ತಕ್ಕ ಅನುಕೂಲಗಳನ್ನು ಮಾಡಿಕೊಳ್ಳುವದು ಅತ್ಯಗತ್ಯವಾದದ್ದು. ಇದಕ್ಕಾಗಿ ತಕ್ಕ ಠರಾವುಗಳನ್ನು ಮಾಡಬೇಕೆಂದು ಸಭಾಧ್ಯಕ್ಷೆಯರನ್ನು ಪ್ರಾರ್ಥಿಸಿ ನನ್ನ ಭಾಷಣವನ್ನು ನಿಲ್ಲಿಸುತ್ತೇನೆ.

(ಕೈಚಪ್ಪಾಳೆ.)

ಅಂಕಲಕೋಟೆ ಸಿದ್ದಲಿಂಗಮ್ಮ.

---

## ಅನಂತರ ಅಧ್ಯಕ್ಷೆಯರು ನಿರ್ಣಯಗಳನ್ನು ಓದಿ ಹೇಳಿದರು.

## ಮೊದಲನೇ ವೀರಶೈವ ಮಹಿಳಾಪರಿಷತ್ತಿನಲ್ಲಿ ಪಾಸಾದ ನಿರ್ಣಯಗಳು.

೧. ಶ್ರೀಮತಿ ಕೈಲಾಸವಾಸಿ ವಾರದ ಬಸಮ್ಮನವರು, ಮತ್ತು ಅವರ ಪುತ್ರರತ್ನವು ಶಿವಾಧೀನರಾದುದಕ್ಕಾಗಿ ವೀರಶೈವ ಮಹಿಳಾಪರಿಷತ್ತಿಗೆ ಬಹಳೇ ದುಃಖವೆನಿಸುತ್ತದೆ

೨. ಬಾಲಬಾಲಕಿಯರನ್ನು ಭೇದವಿಲ್ಲದೆ ಶಾಲೆಗೆ ಕಳುಹಿಸಬೇಕೆಂದು ಈ ಸಭೆಯವರು ನಿರ್ಣಯಿಸುತ್ತಾರೆ. ... ... ...

೩. ಹುಡುಗರ ಲಗ್ನವನ್ನು ೧೮ ವರ್ಷದೊಳಗಾಗಿಯೂ, ಹುಡುಗಿಯರ ಲಗ್ನವನ್ನು ೧೨ ವರ್ಷ ದೊಳಗಾಗಿಯೂ, ಮಾಡಕೂಡದೆಂದು ಈ ಸಭೆಯುವರು ನಿರ್ಣಯಿಸುತ್ತಾರೆ. ... ... ... ... ... *

೪. ಸುಶಿಕ್ಷಿತ ಸ್ತ್ರೀಯರು ತಾವು ಇರುವ ಸ್ಥಳಗಳಲ್ಲಿ ಸ್ತ್ರೀಯರ ಕಮಿಟಿಗಳನ್ನು ಸ್ಥಾಪಿಸಿ, ಶಿಕ್ಷಣ ಮತ್ತು ಸಮಾಜ ಸುಧಾರಣೆಯನ್ನು ಕೈಕೊಳ್ಳಬೇಕೆಂದು ಈ ಸಭೆಯುವರು ನಿರ್ಣಯಿಸುತ್ತಾರೆ. ... ... ... *

೫. ವೀರಶೈವ ಹುಡುಗಿಯರ ಪ್ರಾಥಮಿಕ ಶಿಕ್ಷಣವು ಮುಗಿದಮೇಲೆ ಅವರಿಗೆ ಪ್ರಪಂಚದಲ್ಲಿ ಅವಶ್ಯವಿರುವ ಎಲ್ಲ ತರದ ಜ್ಞಾನವು ಸಿಗುವಂಥ ಒಂದು ಶಾಲೆಯನ್ನು ಸ್ಥಾಪಿಸುವ ವಿಷಯವಾಗಿ ನಮ್ಮ ವೀರಶೈವ ಬಾಂಧವರಿಗೆ ನಮ್ಮ ವಿನಂತಿಯುಂಟು. *

೬. ಶ್ರೀಮತಿ ನೆಲ್ಯಾಳಂ ಮಹಾರಾಜ್ಞಿ ಬಾರಮ್ಮಣ್ಣಿಯವರು ಈ ವರ್ಷವು ಎಂದಿನಂತೆ ಸ್ತ್ರೀ ಪುರುಷ ಮಂಡಲಿಗೆ ಫಲಹಾರಕ್ಕಾಗಿ ಕಳುಹಿಸಿ, ಹೊಸದಾಗೇರ್ಪಟ್ಟಿರುವ ಮಹಿಳಾಪರಿಷತ್ತಿನ ವಿಷಯದಲ್ಲಿ ತಮ್ಮ ಸಂಪೂರ್ಣ ಸಹಾನುಭೂತಿಯನ್ನು ಪ್ರದರ್ಶನ ಮಾಡಿರುವದಕ್ಕಾಗಿ ಅವರ ಉಪಕಾರವನ್ನು ಚಿರಕಾಲ ನಮ್ಮ ಭಗಿನಿಯರು ಸ್ಮರಣೆಯಲ್ಲಿಡಬೇಕೆಂತಲು, ಇವರಂತೆ ನಮ್ಮ ಸಮಾಜದಲ್ಲಿ ಸ್ತ್ರೀವರ್ಗದವರೂ ಮುಂದಾಳುಗಳಾಗಬೇಕೆಂತಲು, ಈ ಸಭೆಯುವರು ನಿರ್ಣಯಿಸುತ್ತಾರೆ. ... ... ... *

ಈ ಪ್ರಕಾರ ನಿರ್ಣಯವಾದ ನಂತರ ಅಧ್ಯಕ್ಷೆಯರು ಎದ್ದು ನಿಂತು, ಪ್ರಿಯಭಗಿನಿಯರೇ ! ನನಗೆ ಈ ಸಭೆಯು ಅಧ್ಯಕ್ಷಸ್ಥಾನವನ್ನು ಕೊಟ್ಟದ್ದಕ್ಕಾಗಿ ತಮ್ಮೆಲ್ಲರ ಉಪಕಾರವನ್ನು ಪುನಃ ಸ್ಮರಿಸಿ, ಸಭೆಯ ಕೆಲಸವು ಸಾಂಗವಾಗಿ ಸಾಗಿದ್ದಕ್ಕೆ ಶ್ರೀ ಪಾರ್ವತಿ ಪರಮೇಶ್ವರರನ್ನು ಪ್ರಾರ್ಥಿಸಿ, ಸಭೆಯ ಕೆಲಸವನ್ನು ಮುಗಿಸುತ್ತೇನೆ. ... *

ಬಳಿಕ ಸ್ವಾಗತ ಸಂಘಾಧ್ಯಕ್ಷೆಯರು ಆಭಾರ ಮನ್ನಣೆ ಮಾಡಿದರು.

ಅನಂತರ ಬಾಲಕಿಯರಾದ ಶೆಟ್ರು ಮರಿಯಮ್ಮ, ಗಡಿಗಿ ಕಲ್ಲಮ್ಮ, ಮೊದಲಾದ ವಿದ್ಯಾರ್ಥಿನಿಯರು ಇಂಪಾಗಿ ಹಾಡಿದರು. ಅಧ್ಯಕ್ಷೆಯರಿಗು, ಸಭಾಸ್ತ್ರೀರಿಗು, ಹಾರ ಗುಚ್ಛಾದಿಗಳು ತಾಂಬೂಲವು ಸಮರ್ಪಿಸಲ್ಪಟ್ಟಿತು. ಸಭಿಕರು ಜಯಜಯ ಧ್ವನಿಯಿಂದ ಜಯಘೋಷವನ್ನು ಮಾಡಿ, ಸಭೆಯನ್ನು ಮುಕ್ತಾಯಮಾಡಿದರು. ಬಳಿಕ ಅಧ್ಯಕ್ಷ್ಯರೇ ಮುಂತಾದ ಪ್ರಮುಖ ಸ್ತ್ರೀಯರ ಛಾಯಾಚಿತ್ರಗಳು ತೆಗೆಯಲ್ಪಟ್ಟವು. ... *

---

೨೧೮-ನೇ ಪೇಜಿಯಿಂದ ಮುಂದೆ ಸಾಗಿದುದು.

ಆದರೆ ನಮ್ಮ ವೀರಶೈವ ಸಮಾಜದಲ್ಲಿ ವಿವಾಹಕಾಲವು ಕೂಸು ಹುಟ್ಟಿದಂದಿನಿಂದ ಸ್ವಲ್ಪ ತಿಂಗಳುಗಳಲ್ಲಿಯೇ ಆರಂಭವಾಗುತ್ತದೆ. ಸಭೆಯನ್ನು ಅಲಂಕೃತಗೈದ ಮಹಾರಾಜರೇ? ಈ ಸಂಗತಿಯನ್ನು ನಾನು ಸ್ವಕಪೋಲಕಲ್ಪನೆಯಿಂದ ಹೇಳುವದಿಲ್ಲ. ಗೋಣು ಸಹ ನೆಟ್ಟಗೆ ನಿಲ್ಲದಿರುವ ಎಳೆಗೂಸಿನ ವಿವಾಹಗಳನ್ನು ನಾನು ಕಣ್ಣಾರೆ ನೋಡಿದವನಿದ್ದೇನೆ. ಇಂತಹ ಎಳೆಗೂಸಿನ ವಿವಾಹಗಳನ್ನು ತಾಯಿತಂದೆಗಳೂ, ಶಿಷ್ಟರೂ, ಹಿರೇಮಠದ ಪಟ್ಟದ ದೇವರುಗಳೂ, ಯಾವ ಶಾಸ್ತ್ರಾಧಾರದಿಂದ ಮಾಡುತ್ತಿರುವರೋ ಅವರಿಗೇ ಗೊತ್ತು. ಶಾಸ್ತ್ರೋಕ್ತ ವಿವಾಹಕಾಲವನ್ನು ವಿವಾಹ ವಿಧಾನಗಳನ್ನೂ ಅವುಗಳ ಅರ್ಥವನ್ನೂ ಹತ್ತೇಟು ತಲಾಂತರಗಳಿಂದಲು ಓದಿ, ಕೇಳಿ, ಅರಿಯದ ಹಿರೇಮಠದವರ ಕೈಯಿಂದ ಇಂತಹ ಅಯೋಗ್ಯವಿವಾಹಗಳು ಆಗುವದೇನಾಶ್ಚರ್ಯವು? ಕೇವಲ ಭೋಜನ ದಕ್ಷಿಣೆಗಳ ಆಶೆಯಿಂದ ಎಳೆಗೂಸುಗಳ ವಿವಾಹಗಳನ್ನು ಮಾಡುತ್ತಿರುವ ಮಹಾತ್ಮರುಗಳ ಸಂಖ್ಯೆಯು ನಮ್ಮ ಗುರುವರ್ಗದಲ್ಲಿ ವಿಪುಲವಾಗಿರುವದು. ನಮ್ಮ ಸಮಾಜದಲ್ಲಿ ಅರ್ಧಕ್ಕಿಂತ ಹೆಚ್ಚು ವಿವಾಹಗಳು ಹುಟ್ಟಿದಂದಿನಿಂದ ಅನುಕ್ರಮವಾಗಿ ಹೆಣ್ಣು ಮತ್ತು ಗಂಡುಮಕ್ಕಳ ಎಂಟು ಮತ್ತು ಹನ್ನೆರಡು ವರ್ಷಗಳ ವಯಸ್ಸಿನಲ್ಲಿಯೇ ಆಗುತ್ತವೆ. ಇವುಗಳ ಮುಂದಿನ ವಯಸ್ಸಿನಲ್ಲಿ ಆಗುತ್ತಿರುವ ವಿವಾಹಗಳು ಬಹುತರವಾಗಿ ಹೆಣ್ಣಿನ ಪಕ್ಷದಿಂದ ತೆರವಿನ ಆಶೆಯಿಂದಲೂ, ಗಂಡಿನ ಪಕ್ಷದಿಂದ ಹಣದ ಅನನುಕೂಲತೆಯ ದೆಸೆಯಿಂದಲೂ ಆಗುತ್ತಿರುತ್ತವೆ. ವಧೂವರರ ವಿಷಯದಲ್ಲಿ ಯೋಗ್ಯ ಚಿಕಿತ್ಸೆಯನ್ನು ಮಾಡಿ, ಅವರ ಗುಣಾವಗುಣಗಳನ್ನು ಚೆನ್ನಾಗಿ ತಿಳಿದುಕೊಂಡು ವಿವಾಹವನ್ನು ಮಾಡುವ ಹೇತುವಿನಿಂದ ವಧೂವರರನ್ನು ಬೆಳಸುವವರು ತೀರ ಸ್ವಲ್ಪ ಜನರು. ಲಗ್ನಸಮಾರಂಭದಲ್ಲಿ ಚಿಕ್ಕವಯಸ್ಸಿನ ವಧೂವರರಿದ್ದರೇನೇ "ಚಂದವು ಹೀಗೆನ್ನುವ ಜನರೇ ಬಹಳ. ಕೆಲವರು ಲಗ್ನದಲ್ಲಿ ಮೆರೆಯುವದಕ್ಕಾಗಿಯೂ, ಕೆಲವರು ತಮ್ಮಮೇಲಿನ ಮಕ್ಕಳ ಲಗ್ನದ ಸಂಬಂಧದ ಹೊರೆಯನ್ನು ಹಗುರು ಮಾಡಿಕೊಳ್ಳುವ ಸಲುವಾಗಿಯೂ, ಮತ್ತೆ ಕೆಲವರು ತಮ್ಮ ಮಕ್ಕಳನ್ನು ಹೆಚ್ಚು ವಯಸ್ಸಿನ ವರೆಗೆ ಇಟ್ಟರೆ, ಇವರ ಲಗ್ನಗಳು ಯಾವ ನ್ಯೂನತೆಯ ಸಲುವಾಗಿ ಇಷ್ಟು ದಿವಸಗಳ ವರೆಗೆ ನಿಂತಿರುತ್ತವೋ ಎಂಬ ಸಂಶಯಗಳನ್ನು ಜನರು ತಕ್ಕೊಂಡಾರೆಂಬ ಹೆದರಿಕೆಯಿಂದಲೂ, ತಮ್ಮ ಮಕ್ಕಳ ಲಗ್ನಗಳನ್ನು ಆದಷ್ಟು ಚಿಕ್ಕಂದಿನಲ್ಲಿ ಮಾಡಿಬಿಡುತ್ತಾರೆ. ಈ ಕಾರಣಗಳ ಮುಪ್ಪುರಿಯಿಂದ ನಮ್ಮ ಸಮಾಜವು ಬಿಗಿಯಲ್ಪಟ್ಟಿರುವದು. ವಧುಗಳಿಗೆ ಯೋಗ್ಯವರರನ್ನೂ ವರರಿಗೆ ಯೋಗ್ಯ ವಧುಗಳನ್ನೂ ನೋಡಬೇಕೆಂಬ ಅರಿಕೆಯೇ ಯಾರಿಗೂ ಇರುವದಿಲ್ಲ. ಇವರು ಹಳೆ ಆಪ್ತರು; ಇವರು ರೊಕ್ಕಸ್ತರು; ಇಂಥವರು ಬಹಳ ಆಗ್ರಹವನ್ನು ಮಾಡುತ್ತಾರೆ ಎಂಬ ದಾಕ್ಷಿಣ್ಯಕ್ಕೆ ಒಳಗಾಗಿ ಅಸಂಗತ ವಧೂವರರ ಲಗ್ನಗಳನ್ನು ಮಾಡುವವರೇ ಬಹಳ ಮಂದಿ; ಗೃಹಸ್ಥಾಶ್ರಮಿಯಾದ ಮೇಲೆ ಬರುವ ಜವಾಬುದಾರಿಯನ್ನು ನಿರ್ವಹಿಸಲಿಕ್ಕೆ ಬೇಕಾದ

ಯೋಗ್ಯತೆಯು ಬಂದ ಮೇಲೆ ಲಗ್ನಮಾಡಬೇಕೆಂಬ ವಿಹಿತ ವಿಚಾರವನ್ನು ಯಾರೂ ಮಾ ಡುವದಿಲ್ಲ. ಒಮ್ಮೆ ಎರಡುಕೈಗಳನ್ನು ಯಾವಾಗ ಚತುರ್ಭುಜ ಮಾಡಿಬಿಟ್ಟೇವೆಂದು ಹವ ಣಿಸುತ್ತಿರುತ್ತಾರೆ. ಶಾಸ್ತ್ರಗಳಿಗೆ ಅಸಮ್ಮತವಾದ ಇಂತಹ ಬಾಲ್ಯವಿವಾಹಗಳಿಂದ ಆಗುವ ನ ಷ್ಟಗಳನ್ನು ಯಾರು ಪೂರ್ಣವಾಗಿ ವರ್ಣಿಸಬಲ್ಲರು ? ಆದರೂ ದಿಗ್ದರ್ಶನಾರ್ಥವಾಗಿ ಹಲ ಕೆಲವು ನಷ್ಟಗಳನ್ನು ಹೇಳುವ ಯತ್ನವನ್ನು ಮಾಡುತ್ತೇನೆ. ... *

ಬಾಲ್ಯವಿವಾಹದಿಂದ ಆಗುವ ನಷ್ಟಗಳಲ್ಲಿ ಮೊದಲನೇದು ಶಾರೀರಿಕ ಹ್ರಾಸವು. ಸ್ಪೆನ್ಸರ ಸಾಹೇಬರು ಹೇಳುವದೇನೆಂದರೆ;—" ಸಮಾಜದ ಜನರಲ್ಲಿರುವ ಲಗ್ನಪದ್ಧತಿಯ ಮೇಲೆ ಆ ಜನರ ಒಳಿತು ಇಲ್ಲವೆ ಕೆಡಕು ದೇಹಸ್ಥಿತಿಯು ಅವಲಂಬಿಸಿರುತ್ತದೆ " ಇದು ಸುಳ್ಳಲ್ಲ. ಬಾಲ್ಯವಿವಾಹದಿಂದ ಬಹುತರವಾಗಿ ಬಾಲಸಂಭೋಗಗಳಾಗುತ್ತವೆ. ಇದರಲ್ಲೇನು ಸಂದೇಹವಿಲ್ಲ. ಮೊದಲು ಸ್ತ್ರೀಯರ ವಿಷಯವಾಗಿಯೇ ವಿಚಾರವನ್ನು ಮಾಡುವಾ;—ಮೈ ನೆರೆಯುವ ಪೂರ್ವದಲ್ಲಿ ಗಂಡಹೇಡರ ಸಂಭೋಗವನ್ನೆಂಟು ಮಾಡುವ ಅಯೋಗ್ಯ ಪ್ರಸಂ ಗವು ಹಲವರಲ್ಲಿ ಪ್ರೌಢ ಹೆಂಗಸರಿಂದ ತರಲ್ಪಡುತ್ತಿರುವದು. ತಮಗೆ ಗೊತ್ತಿರ ಬಹುದು. ಇದಂತು ಅತಿಕ್ರೂರ ತರದ ರೂಢಿಯು. ಇದರ ಮಂಡನ ಮಾಡಲಿಕ್ಕೆ ಯತ್ಕಿಂಚಿತ್ತಾದರೂ ಆಧಾರವು ತೋರುವದಿಲ್ಲ. ಆದರೆ ಋತುಮತಿಯಾದಂದಿನಿಂದ ಸ್ತ್ರೀ ಪುರುಷರ ಸಂಯೋಗ ವಾಗಲಿಕ್ಕೆ ಏನೂ ಅಡ್ಡಿಯಿಲ್ಲವೆಂದು ಬಹುಶಃ ಎಲ್ಲರು ತಿಳಿಯುತ್ತಿರುವರು. ಈ ತಪ್ಪು ತಿಳುವಳಿಕೆಯಿಂದ ಸಮಾಜಕ್ಕೆ ದೊಡ್ಡ ಹಾನಿಯೊದಗಿರುತ್ತದೆ. ಈ ವಿಷಯದಮೇಲೆ ಅಭಿ ಪ್ರಾಯವನ್ನು ಕೊಡುವ ನಿಜವಾದ ಅಧಿಕಾರವು ಸ್ವಾಭಾವಿಕವಾಗಿ ಭಿಷಗ್ವರ್ಯರ ಕಡೆಗೆ ಹೋಗುತ್ತದೆ. ಅವರಲ್ಲಿ ಪರದೇಶೀಯ ವೈದ್ಯರಮೇಲೆ ಸಾಮಾನ್ಯ ಜನರ ನಂಬಿಗೆಯು ಸ್ವಭಾವತಃ ಕಡಿಮೆಯಿರುತ್ತದೆ. ಆದುದರಿಂದ ಸಂಭೋಗಕಾಲದ ವಿಷಯಕ್ಕೆ ನಮ್ಮ ಪ್ರ ಸಿದ್ಧ ಆರ್ಯ ಭಿಷಗ್ವರರಾದ ಸುಶ್ರುತರ ಅಭಿಪ್ರಾಯವನ್ನೇ ತಮಗೆ ಹೇಳಿದರೆ, ತಾವು ಅದ ನ್ನು ಒಪ್ಪಿಕೊಳ್ಳುವಿರೆಂಬುದಕ್ಕೆ ಸಂಶಯವಿಲ್ಲ. ಅವರು ಹೇಳಿದ್ದೇನೆಂದರೆ;— *

" ಊನಷೋಡಶ ವರ್ಷಾಯಾಮು ಪ್ರಾಪ್ತಃಪಂಚವಿಂಶತಿಮ್ ।
ಯದ್ಯಾಧತ್ತೇ ಪುಮಾನ್ ಗರ್ಭಂ ಕುಕ್ಷಿಸ್ಥಃ ಸವಿಪದ್ಯತೇ ॥೧॥
ಜಾತೋ ವಾನಚಿರಂಜೀವೇ ಜ್ಜೀವೇದ್ವಾ ದುರ್ಬಲೇಂದ್ರಿಯಃ " ॥

ಇದರ ಅರ್ಥವೇನೆಂದರೆ:—ಇಪ್ಪತ್ತೈದು ವರ್ಷದೊಳಗಿನ ಪುರುಷನು ಹದಿನಾ ರುವರ್ಷ ದೊಳಗಿನ ಸ್ತ್ರೀಯಲ್ಲಿ ಗರ್ಭಾಧಾನ ಮಾಡಿದರೆ, ಆ ಗರ್ಭವು ಹೊಟ್ಟೆಯಲ್ಲಿಯೇ ಕರಗುತ್ತದೆ; ಒಂದು ವೇಳೆ ಗರ್ಭನಿಂತು ಕೂಸು ಹುಟ್ಟಿದರೆ, ಅದು ಬಹಳದಿವಸ ಬದು ಕುವದಿಲ್ಲ; ಬದುಕಿದರೆ ಅಶಕ್ತವಾಗುವದು. ಇದರ ಮೇಲಿಂದ ತಮ್ಮ ಮನಸ್ಸಿನಲ್ಲಿ ಕೇವಲ ಋತುಮತಿಯಾದ ಕಾಲವು ಸಂಭೋಗಾರ್ಹವಲ್ಲವೆಂದು ನಿಶ್ಚಯವಾಗಿ ಬಂದಿರ ಬಹುದು.

ನಮ್ಮ ದೇಶದ ಸ್ತ್ರೀಯರು ಬಹುತರವಾಗಿ ೧೨ನೇವರ್ಷಕ್ಕೆ ಬಹಳವಾದರೆ ೧೪ನೇವರ್ಷಕ್ಕೆ ಋತುಮತಿ ಯಾಗುತ್ತಾರೆ. ಇದೇ ವಯಸ್ಸಿನಲ್ಲಿ ಸ್ತ್ರೀಪುರುಷರ ಸಂಯೋಗವಾಗುತ್ತಿರುವ ದೆಂಬುದನ್ನು ತಾವೆಲ್ಲರು ಒಪ್ಪಲೇಬೇಕು. ಈ ೧೨—೧೪ ವರ್ಷದ ವಯಸ್ಸಿನಲ್ಲಿ ಆಗುವ ಸ್ತ್ರೀ ಸಂಭೋಗವು ಬಾಲಸಂಭೋಗವೇ ಸರಿ. ಇಂತಹ ಬಾಲಸಂಭೋಗಗಳೇ ನಮ್ಮಲ್ಲಿ ವಾಡಿಕೆಯಲ್ಲಿ ಇರುತ್ತವೆ. ಅಂದಮೇಲೆ ನಮ್ಮ ಜನರು ಬಹುಶಃ ಬಾಲಸಂಭೋಗದಿಂದಲೇ ಹುಟ್ಟಿದವರಾದುದರಿಂದ ನಮ್ಮ ಸಮಾಜವೆಲ್ಲ ಅಶಕ್ತವೂ ಅಲ್ಪಾಯುವೂ ಆದುದೇನು ಆಶ್ಚರ್ಯವಲ್ಲ. ಇದೆಲ್ಲವೂ ಸುಶ್ರುತರ ವಚನಕ್ಕೇ ಬಲವನ್ನು ಕೊಡುವದು. ಶಾರೀರ ಶಾಸ್ತ್ರದ ಅಭ್ಯಾಸವನ್ನು ಸತತ ಮಾಡಿದವರ ಅನುಭವವು ಹೇಗೆ ಇರುವದೆಂದರೆ;—ಸ್ತ್ರೀಯರ ಶರೀರವು ಸೃಷ್ಟಿಕ್ರಮದ ನಿಯಮಗಳಿಗೆ ಒಳಗಾಗಿದೆ. ಆ ನಿಯಮಗಳಿಗನುಸರಿಸಿ ಇವರ ಶರೀರಾವಸ್ಥೆಗಳಾದರೂ ಮೂರೇ ಉಂಟು. ಅವು:—ವೃದ್ಧಿ, ಪೂರ್ಣತ್ವ, ಮತ್ತು ಕ್ಷಯವೆಂಬುವು ಇರುವವು. ಪೂರ್ಣತ್ವದ ಕಾಲದಲ್ಲಿ ಮಾಡತಕ್ಕ ಕ್ರಿಯೆಗಳು ವೃದ್ಧಿಕಾಲದಲ್ಲಿ ಘಟಿಸಿದರೆ, ಅಹಿತಕಾರಕ ಪರಿಣಾಮಗಳಾಗುತ್ತವೆಂಬುದನ್ನು ನಿಶ್ಚಯವಾಗಿ ತಿಳಿಯ ಬೇಕು. ಇನ್ನು ಸ್ತ್ರೀಯರ ಪೂರ್ಣತ್ವದ ಕಾಲವು ಯಾವಾಗ ಆರಂಭವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರವನ್ನು ಕೊಡಬೇಕಾಯಿತು. ಇದರ ಉತ್ತರವನ್ನು ಕೊಡಬೇಕಾದರೆ, ಯೋಗ್ಯ ಪ್ರಮಾಣಗಳನ್ನು ಲಕ್ಷ್ಯದಲ್ಲಿ ತಂದುಕೊಳ್ಳಬೇಕು. ... ... *

೧ನೇ ಪ್ರಮಾಣವು:—ಶರೀರ ದೊಳಗಿನ ಎಲುಬುಗಳ ಪೂರ್ಣ ಬೆಳವಣಿಗೆಯ ಕಾಲವು ಪುರುಷರಕಾಲಕ್ಕಿಂತ ಸ್ವಲ್ಪಕಡಿಮೆ, ಅಂದರೆ ಇಪ್ಪತ್ತೆರಡರಿಂದ ಇಪ್ಪತ್ತೈದುವರ್ಷ ವಯಸ್ಸಿನವರೆಗೆ ಇರುತ್ತದೆ.

೨ನೇ ಪ್ರಮಾಣವು:—ಶರೀರದ ಎತ್ತರದ ಬೆಳವಣಿಗೆ ಹದಿನೈದರಿಂದ ಇಪ್ಪತ್ತನೇ ವರ್ಷದ ವಯಸ್ಸಿನವರೆಗೆ ಇರುತ್ತದೆ. ಅದರ ಮುಂದೆ ಎತ್ತರವು ಬೆಳೆಯುವದಿಲ್ಲ ವೆಂದರೂ ಸಲ್ಲುವದು. ... *

೩ನೇ ಪ್ರಮಾಣವು:—ಶರೀರದ ಭಾರದ ಬೆಳವಣಿಗೆ ಯಾದರೂ ಎತ್ತರದ ಬೆಳವಣಿಗೆಯಂತೆಯೇ ಇರುತ್ತದೆ. ... ... *

ಈ ಮೂರು ಪ್ರಮಾಣಗಳಿಂದ ಹತ್ತೊಂಬತ್ತು ಇಲ್ಲವೆ ಇಪ್ಪತ್ತುವರ್ಷದ ವಯಸ್ಸಿನವರೆಗೆ ವೃದ್ಧಿಯ ಬಹುತರ ಯಾವತ್ತುಕಾಲವು ಮುಗಿಯುತ್ತದೆನ್ನಲಿಕ್ಕೆ ವಿಶೇಷ ಅಡ್ಡಿ ತೋರುವದಿಲ್ಲ. ಇದರಿಂದ ಸಿದ್ಧವಾಗುವದೇನೆಂದರೆ, ಸ್ತ್ರೀಪುರುಷರ ಸಮಾಗಮಕ್ಕೆ ಸ್ತ್ರೀಯ ವಯಸ್ಸು ಹತ್ತೊಂಬತ್ತು ಅಥವಾ ಇಪ್ಪತ್ತು ಇರಲಿಕ್ಕೆಬೇಕು. ನಿದಾನಪಕ್ಷದಿಂದ ಸುಶ್ರುತರ ಅಭಿಪ್ರಾಯದಂತೆ ಸ್ತ್ರೀಗೆ ಹದಿನಾರು ವರ್ಷಗಳು ಪೂರ್ಣವಾಗುವ ತನಕ ಅವಳೊಡನೆ

ಸಂಭೋಗವು ತ್ಯಾಜ್ಯವಾಗಿರುವದು. ಅಂತೂ ಸ್ತ್ರೀಯರ ವಿವಾಹಕ್ಕೆ ಉಚಿತ ಕಾಲವು ೧೬ ರಿಂದ ೨೦ ವರ್ಷದ ವಯಸ್ಸಿನವರೆಗೇ ದು ವೈದ್ಯಶಾಸ್ತ್ರ ದೃಷ್ಟಿಯಿಂದ ತಿಳಿಯಲಿಕ್ಕೆ ಅಡ್ಡಿ ಇಲ್ಲ. ಈ ಶಾಸ್ತ್ರೀಯ ನಿಯಮವನ್ನು ಮೀರಿದ ಬಾಲಸಂಭೋಗಗಳಿಗೆ ಆಸ್ಪದವನ್ನು ಕೊಟ್ಟರುವದರಿಂದ, ಸ್ತ್ರೀಯರ ಪೂರ್ಣ ಬೆಳವಣಿಗೆ ಯಾಗುವ ಪೂರ್ವದಲ್ಲಿ ಗರ್ಭಧಾರಣವಾಗಿ ಅವರ ಸ್ವಂತ ಶರೀರಾವಯವಗಳ ಪೋಷಣಕ್ಕೂ ದೃಢೀಕರಣಕ್ಕೂ ಅತ್ಯವಶ್ಯಕವಾದಂತಹ ಅದರ ಶರೀರದೊಳಗಿನ ಪೋಷಕ ರಸವು ಕೂಸಿನ ಬೆಳವಣಿಗೆಗೆ ಹೋಗುತ್ತದೆ. ಹೀಗಾಗುವದರಿಂದ ಸ್ತ್ರೀಯರ ಶರೀರವೃದ್ಧಿಯು ನಿಲ್ಲುತ್ತದೆ. ಮುಂದೆ ಶರೀರಾವಯವಗಳು ಬಲಹೀನವಾಗಿ ಒಂದೆರಡು ಪ್ರಸೂತವೇದನೆಗಳನ್ನು ತಾಳಿದಮೇಲೆ ಅವರಿಗೆ ಕ್ಷಯದಭಾವನೆಯು ಆಗ ಹತ್ತುತ್ತದೆ. ಮುಂದೆ ಪ್ರಾಯದಲ್ಲಿಯೇ ಅವರು ಮೃತ್ಯುವಶರಾಗುತ್ತಾರೆ. ಇಂತಹ ಉದಾಹರಣೆಗಳನ್ನು ತಾವು ಎಷ್ಟೋ ನೋಡಿರಬಹುದು. ಇಷ್ಟು ಹೊತ್ತಿನವರೆಗೆ ಸ್ತ್ರೀಯರ ಶಾರೀರಿಕ ಹ್ರಾಸವನ್ನು ಕುರಿತು ಹೇಳಿದ್ದಾಯಿತು. ಇನ್ನು ಪುರುಷರ ವಿಷಯವಾಗಿ ವಿಚಾರವನ್ನು ಮಾಡುವಾ;—ಸಾಂಪ್ರತದಲ್ಲಿ ಸ್ತ್ರೀಯರಂತೆ ಪುರುಷರೂ ಕೂಡ ಅಶಕ್ತರೂ ಅಲ್ಪಾಯುಗಳೂ ಆಗಿದ್ದಾರೆ. ಪೂರ್ಣ ಯೌವನಕಾಲದಲ್ಲಿ ಅವರ ಸ್ಥಿತಿಯನ್ನು ನೋಡಿರಿ ಎಷ್ಟು ಕರುಣಾಸ್ಪದವಾಗಿರುವದು? ಅವರ ಕಣ್ಣುಗಳು ಒಳನಟ್ಟರುತ್ತವೆ; ಮುಖವು ಬಾಡಿ ಹೋಗಿರುತ್ತದೆ; ಎದೆಯೂ ನಡುವೂ ಬೆನ್ನೂ ಬಾಗಿರುತ್ತವೆ; ಮಯ್ಯು ಬಡವಾಗಿರುತ್ತದೆ; ಶ್ರಮವು ಸಹನವಾಗುತ್ತಿರುವದಿಲ್ಲ. ಒಂದೆರಡು ಹರದಾರಿ ಕೂಡ ನಡಿದುಹೋಗುವಷ್ಟು ತ್ರಾಣವು ಇರುವದಿಲ್ಲ; ಇನ್ನೂ ಬೆಳವಣಿಗೆಯ ಕಾಲದಲ್ಲಿಯೇ ಅನೇಕ ಮಕ್ಕಳಾಗಿ, ಶಕ್ತಿಯು ನಾಶವಾಗಿ ಹತಾಶರಾಗಿರುವರು. ಈ ಪರಿಣಾಮವು ಬಾಲ್ಯವಿವಾಹದಿಂದಲೇ ಅಲ್ಲವೇ? ಅದೇ ನಮ್ಮ ಪೂರ್ವಜರನ್ನು ನೋಡಿರಿ? ಮಹಾಕವಿ ಭವಭೂತಿಯು ಉತ್ತರರಾಮಚರಿತ್ರವೆಂಬ ನಾಟಕದಲ್ಲಿ ಶ್ರೀರಾಮಪುತ್ರನಾದ ಲವನ ಉಬ್ಬಾಳುತನವನ್ನೂ ಅವನ ಶರೀರಸ್ಥಿತಿಯನ್ನು ಹೇಗೆ ವರ್ಣಿಸಿದ್ದಾನೆ! ... ... *

“ತ್ರೈಲೋಕ್ಯಸತ್ತ್ವವ ತೃಣಕ್ಕೆರೆ ಮಾಳ್ಪ ನೋಟಂ।
ಕಾಲಿಕ್ಕೆ ಭೂಮಿ ಕುಸಿವುದ್ಧತ ಧೀರಯಾನಂ॥
ಬಾಲತ್ವದೊಳ್ ಗಿರಿಗುರುತ್ವವ ನಾಳ್ವನಾರೀ।
ಬಾಲಂ! ಪ್ರವೀರರಸವೈದಿತೊ ದರ್ಪವೋ ಮೇಣ್॥೧॥

ಇದರ ಅರ್ಥವೇನೆಂದರೆ;—ತ್ರೈಲೋಕ್ಯದ ಸತ್ವವನ್ನು ಹುಲ್ಲಿಗೆ ಸರಿಮಾಡುವ ನೋಟವೂ, ಭೂಮಿಯನ್ನು ಬಾಗಿಸಿ ಬಿಡುವದೋ ಏನೋ ಎಂಬಂತಿರುವ ಬಳ್ಳೇ ದಿಟ್ಟನ ಅಬ್ಬರದ ನಡಿಗೆಯೂ, ಬಾಲ್ಯದಲ್ಲಿ ಕೂಡ ಬೆಟ್ಟಕ್ಕಿರುವಷ್ಟು ಸ್ಥಿರತ್ವವೂ ಇದ್ದಂಥ ಈ ಕುಮಾರನು ಯಾರಿರಬಹುದು! ವೀರರಸವು ಅಲ್ಲದೆ ದರ್ಪವೇ ಪ್ರತ್ಯಕ್ಷವಾಗಿ

ನಮ್ಮೆದುರಿಗೆ ನಡೆದು ಬರುತ್ತದೋ ಏನು ?? ,, ಇಂಥವರು ಈಗ ನಮ್ಮಲ್ಲಿ ಎಲ್ಲಿ ಇದ್ದಾರೆ! ಇದರಂತೆಯೇ ಶ್ರೀ ಷಡಕ್ಷರ ಮಹಾಕವಿಗಳು ,, ರಾಜಶೇಖರ ವಿಳಾಸ,, ಗ್ರಂಥದಲ್ಲಿ ಮಂತ್ರಿಪುತ್ರನಾದ ಮಿತವಚನನ ಸೌಂದರ್ಯ ಸೌಭಾಗ್ಯವನ್ನು ಹೇಗೆ ವರ್ಣಿಸುತ್ತಾರೆಂದರೆ.

,, ಶತಪತ್ರಾಯತಲೋಚನಂ ನಗೆಮೊಗಂ ಬಿಂಬಾಧರಂ ವಜ್ರರಂ ।
ಜಿತದಂತಾವಳಿ ದೀರ್ಘಬಾಹುಯುಗಳಂ ದಿವ್ಯತ್ಕಪೋಲದ್ವಯಂ ॥
ವಿತತೋರಸ್ಥಳಮುನ್ನತಾಂ ಸಮರುಣಾಂ ಭೋಜಸ್ಪುರತ್ಪಾಣಿರಂ ।
ಜಿತರಂಭೋರು ಬೆಡಂಗುವೀರೆ ತಳೆದಂ ಸೌಂದರ್ಯ ಸೌಭಾಗ್ಯಮಂ ॥೧॥

ಈ ವರ್ಣನೆಯಂತಹ ತರುಣರು ಈಗೆಲ್ಲಿ ದೃಷ್ಟಿಗೆ ಬೀಳುತ್ತಾರೆ? ಈ ಸ್ಥಿತಿಯು ನಮ್ಮ ಈಗಿನ ತರುಣರಿಗೆ ಬರುವದಕ್ಕೆ ಬಾಲ್ಯವಿವಾಹವೇ ಕಾರಣವಲ್ಲವೇ? ಶರೀರದ ವೃದ್ಧಿಯಕಾಲದಲ್ಲಿ ಬಾಲಸಂಭೋಗಗಳನ್ನೆಸಗಿ ಧಾತುಕ್ಷೀಣತೆಯನ್ನೂ ಅದರಮೂಲಕವಾಗಿ ಅಶಕ್ತತೆಯನ್ನು ಹೊಂದಿ, ಅಕಾಲದಲ್ಲಿ ವೃದ್ಧಾಪ್ಯವನ್ನೂ, ಬಂದುವೇಳೆ ಮೃತ್ಯುವನ್ನು ಸಹ ಪಡೆಯುವ ತರುಣರ ದುರ್ಭಾಗ್ಯವನ್ನೂ, ಮೊಮ್ಮಕ್ಕಳ ಮುಖವನ್ನೂ ಬೇಗನೆ ನೋಡುವ ಬಯಕೆಯಿಂದ ಮಕ್ಕಳ ಬಾಲ್ಯವಿವಾಹವನ್ನು ಮಾಡಿ, ಅವರಿಗೆ ಇಂತಹ ದುಃಸ್ಥಿತಿಯನ್ನು ಬೇಕೆಂದು ತಂದ ಅವರ ತಾಯಿತಂದೆಗಳನ್ನೂ, ನೋಡಿ ಯಾರ ಅಂತಃಕರಣಗಳು ದುಃಖ ಕೋಪಗಳಿಂದ ತುಂಬಿತುಳುಕಲಿಕ್ಕಿಲ್ಲ? ಅಜ್ಞಾನಿಗಳಾದ ತಾಯಿತಂದೆಗಳು ಹುಚ್ಚುಮೋಹಕ್ಕೆ ಬಿದ್ದು, ತಮ್ಮ ಸಂತತಿಗೆ ತಮ್ಮ ಅಜ್ಞಾನದಿಂದುಂಟಾದ ಇಂತಹಘೋರ ಕಷ್ಟಗಳನ್ನು ಅನುಭವಿಸಲಿಕ್ಕೆ ಹಚ್ಚಿ, ಯಾವ ಪುರುಷಾರ್ಥವನ್ನು ಸಂಪಾದಿಸುತ್ತಾರೋ ಶಿವನೇ ಬಲ್ಲನು. ಎಲೈ ಈ ಸಭೆಯಲ್ಲಿ ನೆರೆದ ಮಕ್ಕಳನ್ನು ಹಡೆದ ತಾಯಿತಂದೆಗಳೇ? ನೀವು ವಿದ್ಯಾಹೀನರಾಗಿ, ಆಥವಾ ವಿದ್ವಾಂಸರಾಗಿದ್ದರು ಮದಾಂಧರಾಗಿ, ಬಾಲ್ಯವಿವಾಹದಿಂದ ಆಗುವ ಹಾನಿಯ ವಿಷಯಕ್ಕೆ ಸ್ವಲ್ಪವಾದರೂ ವಿಚಾರವನ್ನು ಮಾಡದೆ, ನಿಮ್ಮ ಮುದ್ದು ಸಂತತಿಗೆ ಯಾಕೆ ಬಾಲ್ಯವಿವಾಹವೆಂಬ ಪ್ರೀತಿಯ ಉರುಲು ಹಾಕುತ್ತೀರಿ. ನೀವು ಮೋಹದಿಂದ ತಿಳಿಯದೇ ಬಾಲ್ಯವಿವಾಹವನ್ನು ಮಾಡಿದರೂ ಅದರ ದುಷ್ಪರಿಣಾಮಗಳು ಆಗದೇ ಬಿಡುವವೆ! ನೀವು ಮಾಡಿದ ತಪ್ಪಿನ ಫಲವನ್ನು ನಿಮ್ಮ ಮುದ್ದುಮಕ್ಕಳು ಉಣಬೇಕೇ! ವಿಚಾರವನ್ನು ಮಾಡಿರಿ? ವಿಚಾರವನ್ನು ಮಾಡಿರಿ! ವೈದ್ಯಶಾಸ್ತ್ರರೀತ್ಯಾ ಸಿದ್ಧವಾಗಿರುವದೇನೆಂದರೆ:— ... ... ... ... ... *

೧. ಶರೀರದಲ್ಲಿಯ ಬೇರೆ ಬೇರೆ ಎಲುಬುಗಳೆಲ್ಲ ಮೊದಲು ಮೃದುವಿರುತ್ತವೆ. ಮುಂದೆ ಅವು ಬಂದರ ಹಿಂದೊಂದು ದೃಢವಾಗಿಯೂ ಬಿರುಸಾಗಿಯೂ ಆಗುತ್ತ ಹೋಗುತ್ತದೆ. ಬೇರೆ ಬೇರೆ ಎಲುಬುಗಳ ದೃಢೀಕರಣವು ಬೇರೆ ಬೇರೆ ಕಾಲದಲ್ಲಿ ಆಗುತ್ತದೆ. ಕಟ್ಟಕಡೆಗೆ ತೊಡೆಯ ಎಲುಬು ಬಳಿತಾಗಿ ಗಟ್ಟಿಯಾಗುತ್ತದೆ. ಈ ಕಡೆಯ ತೊಡೆಯ ಎಲುಬು

ಗಟ್ಟಿಯಾಗುವಕಾಲವು ಪುರುಷರ ಇಪ್ಪತ್ತು ನಾಲ್ಕರಿಂದ ಇಪ್ಪತ್ತೆಂರು ವರ್ಷದ ವಯಸ್ಸಿನ ವರೆಗೆ ಇರುತ್ತದೆ. ... ... ... ... *

೨. ಪುರುಷರ ಎತ್ತರದ ಬೆಳವಣಿಗೆಯು ೧೯ ವರ್ಷಗಳ ವರೆಗೆ ಬಳ್ಳೇ ಭರದಿಂದ ಸಾಗುತ್ತದೆ. ಮುಂದೆ ಇಪ್ಪತ್ತು ಎಂಟನೇ ವರ್ಷದ ವರೆಗೆ ಅದು ತುಸು ತುಸು ಸಾಗುತ್ತದೆ. ಮುಂದೆ ಅದು ಕಟ್ಟಾಗುತ್ತದೆ. ... ... ... *

೩. ಶರೀರದ ಭಾರವು ವೃದ್ಧಿಕಾಲ ನಡೆಯುವ ವರೆಗೆ ಬೆಳೆಯುತ್ತದೆ. ಅದು ಹದಿನೈದರಿಂದ ೨೦ ವರ್ಷ ವಯಸ್ಸಿನವರೆಗೆ ಬಳ್ಳೇ ಭರದಿಂದ ಬೆಳೆಯುತ್ತದೆ. ಬಳಿಕ ಮುವ್ವತ್ತು ವರ್ಷದ ವಯಸ್ಸಿನ ತನಕ ಮಂದವಾಗಿ ಬೆಳೆಯುತ್ತ ಹೋಗಿ, ನಾಲ್ವತ್ತನೇ ವರ್ಷಕ್ಕೆ ಪೂರ್ಣವಾಗುತ್ತದೆ. ... ... ... ... *

ಈ ಮೂರು ಸಂಗತಿಗಳಿಂದ ಅನುಮಾನವಾಗುವ ದೇನೆಂದರೆ, ಪುರುಷರು ೨೦ ವರ್ಷದ ವಯಸ್ಸಿನ ವರೆಗೆ ಬಳ್ಳೇ ಭರದಿಂದ ಬೆಳೆಯುತ್ತಿರುತ್ತಾರೆ; ಮುಂದೆ ೨೫ನೇ ವರ್ಷದ ವರೆಗೆ ಬೆಳವಣಿಗೆ ನಡೆಯುತ್ತಿದ್ದರೂ, ಅಷ್ಟು ಭರದಿಂದ ಬೆಳೆಯುವದಿಲ್ಲ. ಆಮೇಲೆ ಪುರುಷರ ಶರೀರದ ಪೂರ್ಣಾವಸ್ಥೆಗೆ ಆರಂಭವಾಗುತ್ತದೆಂದೆನ್ನಲಿಕ್ಕೆ ಏನೂ ಅಡ್ಡಿ ತೋರುವದಿಲ್ಲ. ಈ ಸಿದ್ಧಾಂತವು ಪಾಶ್ಚಾತ್ಯ ವಿದ್ವಾಂಸರ ಶಾರೀರ ಶಾಸ್ತ್ರದ ವಿಚಾರಗಳಿಂದ ಗೊತ್ತು ಮಾಡಲ್ಪಟ್ಟಿದೆ. ನಮ್ಮ ದೇಶದ ಸುಶ್ರುತಾಚಾರ್ಯರ ಮತವಾದರೂ ಈ ಸಿದ್ಧಾಂತಕ್ಕೆ ಅನುಕೂಲವಾಗಿಯೇ ಇರುವದು. ಸುಶ್ರುತಾಚಾರ್ಯರ ಅಭಿಪ್ರಾಯವೇನೆಂದರೆ;—‹‹ ಶರೀರಕ್ಕೆ ವೃದ್ಧಿ, ಯೌವನ, ಪೂರ್ಣತ್ವ, ಕ್ಷಯಗಳೆಂಬ ನಾಲ್ಕು ಅವಸ್ಥೆಗಳುಂಟು. ವೃದ್ಧಿಯು ೧೬ ವರ್ಷಗಳ ತನಕ, ಯೌವನವು ೨೪ ವರ್ಷಗಳ ತನಕ, ಪೂರ್ಣತ್ವ ೪೦ ವರ್ಷಗಳ ತನಕ; ಆಮೇಲೆ ಕ್ಷಯಕ್ಕೆ ತುಸುತುಸು ಆರಂಭವಾಗುತ್ತದೆ. ‹‹ಇದರಲ್ಲಿ ವೃದ್ಧಿ ಯೌವನಗಳೆಂಬ ಎರಡು ಕಾಲಗಳನ್ನು ಹೇಳುವ ಉದ್ದೇಶವೇನೆಂದರೆ; — ಹದಿನಾರು ವರ್ಷದಿಂದ ಮನುಷ್ಯನ ಶರೀರದಲ್ಲಿ ವೀರ್ಯೋತ್ಪತ್ತಿಯಾಗಿ, ಅವನು ತೇಜೋತ್ಪಾದಕ್ಕೆ ಸಮರ್ಥನಾದರೂ ಶರೀರವೃದ್ಧಿಯು ಕಟ್ಟಾಗಿರುವದಿಲ್ಲ. ಧಾತು ಇಂದ್ರಿಯಗಳ ಪೋಷಣವೂ, ವಿಕಾಸವೂ, ದೃಢೀಕರಣವೂ, ಇನ್ನೂ ಆಗತಕ್ಕದ್ದಿರುವದು. ಇಪ್ಪತ್ತುನಾಲ್ಕು ವರ್ಷಗಳಮೇಲೆ ಪೂರ್ಣತ್ವದ ಕಾಲವು ಆರಂಭವಾಗುತ್ತದೆ. ಅದರ ಪೂರ್ವದಲ್ಲಿ ವೃದ್ಧಿಕಾಲವು ನಡೆದಿದ್ದು, ಧಾತುಗಳೂ, ಇಂದ್ರಿಯಗಳೂ ಪೂರಾ ವಿಕಸಿತವಾಗಿರುವದಿಲ್ಲ. ಆದುದರಿಂದ ಈ ಕಾಲದಲ್ಲಿ ಶರೀರದೊಳಗಿನ ರಸಗಳೂ, ಶಕ್ತಿಯೂ ವೀರ್ಯೋತ್ಪತ್ತಿಯಲ್ಲಿ ವೆಚ್ಚವಾಗಬಾರದು. ಇವುಗಳನ್ನು ಇನ್ನೂ ಶರೀರಸ್ಥ ಮಾಂಸ, ಮಜ್ಜಾದಿ ಧಾತುಗಳನ್ನೂ, ಎಷ್ಟೋ ಇಂದ್ರಿಯುಗಳನ್ನೂ ಪೋಷಿಸುವದರಲ್ಲಿಯೂ ದೃಢಪಡಿಸುವದರಲ್ಲಿಯೂ ಉಪಯೋಗಿಸತಕ್ಕದ್ದು. ವೀರ್ಯೋತ್ಪತ್ತಿ ಯಾಗತಕ್ಕ ಕಾಲವು ಒದಗಿದ ಕೂಡಲೇ, ಅದು ಆಗಿ ಹೋಗಲೆನ್ನುವದೂ,

ಪದೇ ಪದೇ ವೀರ್ಯಕ್ಷಯವಾಗುವದೂ ಕೇವಲ ಅನುಚಿತವು. ಹದಿನಾರುವರ್ಷ ವಯಸ್ಸಿನಲ್ಲಿ ಪುರುಷರವ್ಯೆಯಲ್ಲಿ ಬರುವ ಬಲವನ್ನೂ, ಪ್ರಫುಲ್ಲತೆಯನ್ನೂ ಬಹುಜಾಗ್ರತೆಯಿಂದ ವ್ಯೆಯಲ್ಲಿ ಕಾಯ್ದುಕೊಂಡು, ಅವನ್ನು ಶರೀರಾವಯವಗಳ ಪೋಷಣದಲ್ಲಿಯೂ, ಸಕಲ ಧಾತುಗಳನ್ನು ವರ್ಧಿಸುವದರಲ್ಲಿಯಲ್ಲ ವೆಚ್ಚ ಮಾಡಬೇಕು. ವೀರ್ಯವೆಂದರೆ, ಪಾರಿಭಾಷಿಕ ರೀತಿಯಿಂದ ಶುಕ್ರವೆಂಬ ಧಾತುವು, ಶರೀರದೊಳಗಿನ ಯಾವತ್ತು ಧಾತುಗಳಲ್ಲಿ ಶ್ರೇಷ್ಠವಾದದು. ಈ ಧಾತು ಹುಟ್ಟಲಿಕ್ಕೆ ಶರೀರದೊಳಗಿನ ಬಹಳ ಶಕ್ತಿಯು ವ್ಯಯವಾಗುತ್ತದೆ. ಆದುದರಿಂದ ಶಕ್ತಿಯನ್ನು ಶರೀರವೃದ್ಧಿಯಲ್ಲಿಯೂ, ಇಂದ್ರಿಯ ದೃಢೀಕರಣದಲ್ಲಿಯೂ ಉಪಯೋಗಿಸುವದು ಇಷ್ಟವಿದ್ದ ಕಾಲದಲ್ಲಿ, ಅದನ್ನು ವೀರ್ಯೋತ್ಪತ್ತಿಯಲ್ಲಿ ವೆಚ್ಚ ಮಾಡುವದು (ಅಂದರೆ, ಸ್ತ್ರೀಸಮಾಗಮಾಪೇಕ್ಷೆಯನ್ನು ಮಾಡುವದು) ತೀರ ಅಯೋಗ್ಯವಾಗಿದೆ. ವೀರ್ಯವನ್ನು ಹುಟ್ಟಿಸುವ ಸಾಮರ್ಥ್ಯವು ಶರೀರದಲ್ಲಿ ಬರಹತ್ತಿತೆಂದರೆ, ಮೈಯೊಳಗೆ ಉಂಟಾಗುವ ಉಬ್ಬಾಳುತನವು, ಶರೀರದೊಳಗಿನ ಉತ್ತಮ ಧಾತುಗಳು ಮುಂದೆ ಅಭಿವೃದ್ಧಿಯಾಗುವವೆಂದು ಸೂಚಿಸುತ್ತದೆ. ಈ ಉಬ್ಬಾಳುತನವನ್ನು ವೀರ್ಯಕ್ಷಯದಿಂದ ಕಳಕೊಂಡರೆ, ಶರೀರವು ನಿಸ್ಸತ್ತ್ವವಾಗಿ ಆಮರಣ ಪರ್ಯಂತರ ನಷ್ಟವೀರ್ಯವಾಗುತ್ತದೆ ೧೬ ವರ್ಷ ವಯಸ್ಸಿನಿಂದ ೨೫ ವರ್ಷ ವಯಸ್ಸಿನವರೆಗೆ ಉತ್ತಮವಾದ ಬೆಳವಣಿಗೆಯ ಕಾಲವು. ಆ ಕಾಲದಲ್ಲಿ ಬ್ರಹ್ಮಚರ್ಯ ವ್ರತವನ್ನು ಚೆನ್ನಾಗಿ ಪಾಲಿಸಿದರೆ, ಅದರಿಂದ ಶರೀರಕ್ಕೆ ಅತಿಶಯಹಿತವಾಗಿ, ಪರಿಣಾಮವು ಅತ್ಯುತ್ತಮವಾಗುತ್ತದೆ. ಹೀಗೆಮಾಡಲಿಕ್ಕೆ ನಾವು ತಪ್ಪಿದರೆ, ನಮ್ಮ ಸಮಾಜವು ನಿರ್ಬಲತೆ, ನಿರುತ್ಸಾಹತೆ, ಸಾಹಸ ಶೂನ್ಯತೆ, ನಿಸ್ತೇಜತೆ ಮೊದಲಾದವುಗಳಿಗೆ ತೌರಮನೆಯಾಗಿ, ಮುಂದೆ ನಮ್ಮ ಏಳ್ಗೆಯಾಗುವ ಸಂಭವವೇ ಇಲ್ಲವಾಗುವದು. ಮತ್ತು ನಾವು ಅಜಾಗಳಸ್ವರೂಪಿಗಳೂ, ನಾಮಶೇಷರೂ ನಿಶ್ಚಯವಾಗಿ ಆಗುವೆವು ಆದುದರಿಂದ ಈ ಬಾಲ್ಯವಿವಾಹದ ರೂಢಿಯು ನಮ್ಮ ಸಮಾಜವನ್ನು ಹಿಂಡಿ, ಹಿಪ್ಪಿಮಾಡುವ ಯಂತ್ರವೆಂದೇ ತಿಳಿದು, ಇದರ ಬಾಯೊಳಗಿಂದ ಬೇಗನೇ ಹೊರಬೀಳುವ ಯತ್ನವನ್ನು ಮಾಡಿರಿ; ಮತ್ತು ಎಲ್ಲ ಸಂಪತ್ತುಗಳಲ್ಲಿ ಶರೀರಸಂಪತ್ತು ಮೇಲಾದುದೆಂದು ಚೆನ್ನಾಗಿ ತಿಳಿಯಿರಿ; ಎಂದು ನಾನು ತಮ್ಮೆಲ್ಲರಿಗೆ ವಿನಯದಿಂದ ಬೇಡಿಕೊಳ್ಳುತ್ತೇನೆ. ಇಷ್ಟು ಹೊತ್ತಿನವರೆಗೆ ನಾನು ಮಾಡಿದ ವಿವೇಚನೆಯಿಂದ, ಸ್ತ್ರೀಯರ ವಿವಾಹಕ್ಕೆ ಉಚಿತಕಾಲವು ಹದಿನಾರರಿಂದ ಇಪ್ಪತ್ತು ವರ್ಷದ ತನಕವೆಂದೂ, ಪುರುಷರ ವಿವಾಹೋಚಿತ ಕಾಲವು ಇಪ್ಪತ್ತೈದರಿಂದ ಮುವ್ವತ್ತು ವರ್ಷದ ತನಕವೆಂದೂ ಪಾಶ್ಚಾತ್ಯ ಪೌರ್ವಾತ್ಯ ಭಿಷಗ್ವರ್ಯರು ಐಕ್ಯಮತದಿಂದ ಹೇಳುತ್ತಿರುವರೆಂಬ ಮಾತು ತಮ್ಮ ಚಿತ್ತಾರೂಢವಾಗಿರ ಬೇಕೆಂದು ನಾನು ನಂಬಿ, ಇನ್ನು ಮುಂದೆ ಸಾಗುತ್ತೇನೆ. ... ... ... *

ಬಾಲ್ಯವಿವಾಹದಿಂದ ಎರಡನೇಕೇಡು ಯಾವುದೆಂದರೆ, ವಿದ್ಯಾಭ್ಯಾಸದಹಾನಿಯು ಈ ಹಾನಿಯಿಂದ ನಾವು ಮನುಷ್ಯತ್ವಕ್ಕೇ ಎರವಾಗಿದ್ದೇವೆ. ಸಾಂಪ್ರತಕಾಲದಲ್ಲಿ ಪುರುಷರ

ವಿದ್ಯಾಭ್ಯಾಸವು ಸುಮಾರು ೨೫ನೇ ವಯಸ್ಸಿಗೆ ಪೂರ್ಣವಾಗುತ್ತದೆ. ಸ್ತ್ರೀಯರ ಪರಿಸ್ಥಿತಿಗೆ ಅನುಸರಿಸಿ ಅವರಲ್ಲಿ ವಿವೇಕಬುದ್ಧಿಯೂ ಅವರಿಗುಚಿತವಾದ ವಿಷಯಗಳ ಸಾಮಾನ್ಯ ಜ್ಞಾನವೂ ಹುಟ್ಟುವಷ್ಟು ವಿದ್ಯಾಭ್ಯಾಸವನ್ನು ಮಾಡಲಿಕ್ಕೆ ಹದಿನೇಳು ವರ್ಷದ ವಯಸ್ಸಿನತನಕ ಅವರು ವಿದ್ಯಾಲಯಗಳಿಗೆ ಹೋಗಬೇಕಾಗುವದು; ಅಥವಾ ಅಷ್ಟು ವಯಸ್ಸಿನವರೆಗೆ ಮನೆಯಲ್ಲಿಯೇ ಅವರಿಗೆ ಅಭ್ಯಾಸವನ್ನು ಹೇಳಿಸಬೇಕಾದೀತು. ಆದರೆ ಈ ಅಭ್ಯಾಸದ ವಿಷಯದಲ್ಲಿ ಗಂಡುಮಕ್ಕಳಿಗೆ ವಯಸ್ಸಿನ ನಿರ್ಬಂಧವಿಲ್ಲವಿದ್ದರೂ ಸ್ತ್ರೀಯರಿಗೆ ಮಾತ್ರ ಉಕ್ತವಯಸ್ಸಿನವರೆಗೆ ಅಭ್ಯಾಸಮಾಡಲಿಕ್ಕೆ ಈ ಬಾಲ್ಯವಿವಾಹದಿಂದ ಆತಂಕವಾಗುತ್ತಿರುವದು. ಆದುದರಿಂದ ಸ್ತ್ರೀ ಶಿಕ್ಷಣ ವೃದ್ಧಿಗೆ ಬಹು ತೊಂದರೆಯುಂಟಾಗಿರುತ್ತದೆ. ಈಗಿನಕಾಲದಲ್ಲಿ ನಮ್ಮ ಸ್ತ್ರೀಯರಿಗಿದ್ದ ಅನುಕೂಲತೆಯನ್ನು ಉಪಯೋಗಿಸಿ ಕೊಂಡರೆ, ದೇಶಭಾಷೆಯ ಐದು ಇಯತ್ತೆಗಳನ್ನು ಕಲಿಯಲಿಕ್ಕೆ ಅನುಕೂಲವಿರುವದು. ಆದರೆ ಇಷ್ಟು ಅಭ್ಯಾಸವು ಸ್ತ್ರೀಯರ ಮನಸ್ಸು ಸುಸಂಸ್ಕೃತವಾಗಲಿಕ್ಕೆ ಸಾಕಾಗದು. ಈಗಿನ ಸ್ಥಿತಿಯಲ್ಲಿ ಸ್ತ್ರೀಯರ ಮನಸ್ಸುಗಳು ತಕ್ಕಮಟ್ಟಿಗೆ ಸುಸಂಸ್ಕೃತವಾಗಬೇಕಾದರೆ, ಕನ್ನಡ ಪುರಾಣಗಳನ್ನು ಓದಲಿಕ್ಕೆ ಬರುವಷ್ಟು ಭಾಷಾಜ್ಞಾನವೂ, ತಮ್ಮ ಮನೋಭಿಪ್ರಾಯವನ್ನು ಬರೆದು ತಿಳಿಸಲಿಕ್ಕೆ ಬರುವಷ್ಟು ಶುದ್ಧಲೇಖನ ಜ್ಞಾನವೂ, ವ್ಯವಹಾರದಲ್ಲಿ ಉಪಯೋಗವಾಗುವಷ್ಟು ಗಣಿತ ಜ್ಞಾನವೂ, ದೇಶದ ಭೂಗೋಲ ಮತ್ತು ಇತಿಹಾಸ ಜ್ಞಾನವೂ, ಆರೋಗ್ಯಶಾಸ್ತ್ರ ಜ್ಞಾನವೂ, ಬಾಲಸಂಗೋಪನದ ಸಲುವಾಗಿ ಬೇಕಾಗುವಷ್ಟು ವೈದ್ಯವಿಷಯಿಕ ಜ್ಞಾನವೂ, ಕಸೂದಿಯ ಮತ್ತು ಹುಡುಗರಿಗೆಬೇಕಾಗುವ ಅಂಗಿ, ಟೊಪ್ಪಿಗೆ, ಕುಪ್ಪಸ ಮೊದಲಾದವುಗಳನ್ನು ಕತ್ತರಿಸಿ ಹೊಲಿಯುವಷ್ಟು ಹೊಲಿಗೆಜ್ಞಾನವೂ ಸ್ವಲ್ಪ ಸಂಸ್ಕೃತಭಾಷಾಜ್ಞಾನವೂ ಬೇಕಾಗುವವು ಇದಕ್ಕಿಂತ ಕಡಿಮೆ ಶಿಕ್ಷಣವು ಸಿಕ್ಕರೆ ಅದರ ಉಪಯೋಗವೇ ಆಗುವಂತಿಲ್ಲ. ಈಗ ಸ್ತ್ರೀಯರು ಬಹುತರವಾಗಿ ಗಂಡನಮನೆಗೆ ಹೋಗುವತನಕ ಕಲಿಯಬಹುದು. ಗಂಡನ ಮನೆಗೆ ಹೋಗುವ ಕಾಲವು ೧೧—೧೨ ವರ್ಷದ ವಯಸ್ಸು ಇರುವದು. ಇಷ್ಟು ವಯಸ್ಸಿನಲ್ಲಿ ಹಿಂದೆ ಹೇಳಿದ ವಿಷಯಗಳ ಅಭ್ಯಾಸವಾಗಲಾರದು. ಆದುದರಿಂದ ಈಗಿನಸ್ಥಿತಿಯಲ್ಲಿ ಮಾಡಿಸುತ್ತಿರುವ ಅಭ್ಯಾಸವು ನಿರರ್ಥಕವಾಗುವದು. ಮತ್ತು ಶೀಘ್ರವೇ ಕಲಿತುದೆಲ್ಲ ಮರೆತು ಹೋಗುವದು. ಈ ಕೊರತೆಯು ಬಾಲ್ಯವಿವಾಹಗಳಿಂದ ಉಂಟಾಗಿರುತ್ತದೆ. ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸವನ್ನು ಮಾಡಿಸುವ ಕಾರಣವೇ ಇಲ್ಲವೆನ್ನುವಂಥ ಹುಚ್ಚುಜನರು ಈ ಕಾಲದಲ್ಲಿ ಇದ್ದಾರೆಂದು ನಾನು ನಂಬಲಾರೆನು. ಇದ್ದರೂ ಈ ಕಾಲದಲ್ಲಿ ಅವರದೇನೂ ನಡೆಯದು. ಯಾವ ಭರತಖಂಡದಲ್ಲಿ ಗಾರ್ಗೀ, ವಾಚಕ್ನೇಯಿ, ಸುಲಭಾ ಮುಂತಾದವರೂ, ಯಾವ ವೀರಶೈವ ಮತದಲ್ಲಿ ಮುಕ್ತಾಯಿ, ಅಕ್ಕ ಮಹಾದೇವಿ, ನೀಲಮ್ಮ, ಬಿಜ್ಜಳದೇವಿ, ಗಾಳವ್ವೆ ಮೊದಲಾದವರೂ ಬ್ರಹ್ಮವಾದಿನಿಯರೂ ಅವರೊಳಗೆ ಕೆಲವರು ಗ್ರಂಥಕಾರರಾಗಿ ಹೋದರೋ ಆ ಭರತಖಂಡದಲ್ಲಿ ಮತ್ತು ಆ ವೀರಶೈವ ಮತದಲ್ಲಿ ಬಾಲ್ಯವಿವಾಹಗಳಾಗ

ಹತ್ತಿದಂದಿನಿಂದ ಎಷ್ಟುಜನ ಹೇಗಳೆಯರು ಬ್ರಹ್ಮಜ್ಞಾನಿಗಳೂ ಗ್ರಂಥಕಾರರೂ ಆಗಿರುವರೆಂಬು ಹೇಳಲಿಕ್ಕೆ ಬಂದೀತು? ಪೂರ್ವಕಾಲದ ಸ್ತ್ರೀಯರು ಅಷ್ಟುವಿದ್ವಾಂಸರಾಗಲಿಕ್ಕೆ ಆಗಿನ ಪ್ರೌಢವಿವಾಹವೇ ಕಾರಣವಲ್ಲವೇ! ಆಗಿನ ಕಾಲದಲ್ಲಿ ಮಹಾದೇವಿಯಕ್ಕ ಮುಂತಾದ ಮತಾಭಿಮಾನಿ ಸ್ತ್ರೀಯರು ಅವಿವಾಹಿತರಾಗಿ ಸಹಾ ಇರುತ್ತಿದ್ದರು. ಅಂತೇ ಅವರು ಇಚ್ಛಾಪೂರ್ತಿಯಾಗುವಷ್ಟು ಜ್ಞಾನಸಂಪಾದನೆಯನ್ನು ಮಾಡುತ್ತಿದ್ದರು. ಈಗ ಆ ಪುಣ್ಯಕಾಲವು ಹೋಗಿ, ಅಲ್ಪದೃಷ್ಟಿಯ ಅಜ್ಞಾನಕಾಲವು ಪ್ರಾಪ್ತವಾಗಿ, ,,ಹೇಗಸರೆಂದರೆ ಮೊಳಕಾಲಕೆಳಗೆ ಬುದ್ಧಿಯಿದ್ದವರು.,, ,,ಅವರ ಜ್ಞಾನವು ಅಡಿಗೆಯ ಮಟ್ಟಿಗೆ ,, ಎಂಬುವೇ ಮೊದಲಾದ ನೀಚತಾಪರ್ಶಕ ವಾಕ್ಯಗಳನ್ನು ಹೇಗಳೆಯರಿಗೆ ನುಡಿಯುವಂತಾಗಿದೆ. ಅಹಹಾ? ಯಾವ ಉದಾರ ವೀರಶೈವ ಮತವು, ಮಿಕ್ಕ ಆರ್ಯ ಸ್ತ್ರೀಯರಿಗೆ ಇಲ್ಲದಂಥ, ವೇದಾಗಮ ಮಂತ್ರಪೂರ್ವಕವಾಗಿ ಶಿವಪೂಜಾದಿಗಳನ್ನು ಮಾಡುವ ಅಧಿಕಾರವನ್ನು ಕೊಟ್ಟಿತೋ, ಆ ವೀರಶೈವ ಮತೀಯರು ಪವಿತ್ರರಾದ ಹೇಗಳೆಯರನ್ನು ನಿಂದಿಸುವಕಾಲವು ಒದಗಿತೇ? ಎಲೈ ಸುವಿಚಾರಿಗಳಾದ ಪ್ರತಿನಿಧಿಗಳೇ, ವೇದಾಗಮ ಮಂತ್ರಪೂರ್ವಕ ಶಿವಪೂಜಾವಿಧಾನ ಪ್ರ ಪವಿತ್ರ ಪುರಾಣಗಳ ವಾಚನವೂ ಯಥಾಪ್ರಕಾರವಾಗಿ ಆಗಬೇಕಾದರೆ, ನಮ್ಮ ಹೇಗೆಳೆಯರಿಗೆ ಎಷ್ಟು ಉತ್ತಮರೀತಿಯ ವಿದ್ಯಾಭ್ಯಾಸವಾಗಬೇಕು? ನೀವೇನೋಡಿರಿ. ಲೌಕಿಕ ವಿಷಯದಲ್ಲಿ ಕೂಡ, ಸಿರಿವಂತರಾದ ಪತಿಗಳ ಮರಣಾನಂತರದಲ್ಲಿ ವಿದ್ಯಾಭ್ಯಾಸವನ್ನು ಹೆಂಗಸರು ಮಾಡದೇ ಇರುವವರಿಂದ ಮತ್ತು ತನ್ಮೂಲಕ ವ್ಯವಹಾರದ ಲೆಕ್ಕವು ಅವರಿಗೆ ತಿಳಿಯದುದರಿಂದ ಎಷ್ಟು ಶ್ರೀಮಂತರ ಸಂಪತ್ತಿಯನ್ನು ಗುಮಾಸ್ತೆ ಮುಂತಾದವರು ಅಪಹಾರವ ಮಾಡಿರುವದಿಲ್ಲ? ಮತ್ತು ಈಗಳೂ ಮಾಡುತ್ತಿರುವದಿಲ್ಲ! ನೀವೇ ಹೇಳಿರಿ. ಅಂತಹ ಮನೆತನದ ಹೇಗಸರು ವಿದ್ಯಾಭ್ಯಾಸವನ್ನು ಮಾಡಿದ್ದರೆ, ಅವರ ಪತಿಯ ಸಂಪತ್ತು ಕೈಬಿಟ್ಟು ಹೋಗುತ್ತಿತ್ತೋ? ಮತ್ತು ದೈವ ದುರ್ವಿಲಾಸದಿಂದ ಪತಿಯು ಮರಣವನ್ನು ಹೊಂದಿದರೆ ಸನ್ಮಾನ್ಯರೀತಿಯಿಂದ ಉಪಜೀವನ ಮಾಡಿಕೊಳ್ಳಲಿಕ್ಕೆ ನಾನು ಹಿಂದೆ ಹೇಳಿದ ವಿದ್ಯಾಭ್ಯಾಸವು ಸಹಾಯವಾಗಲಾರದೋ! ವಿಚಾರವನ್ನು ಮಾಡಿರಿ. ನೀವು ಸ್ತ್ರೀಯರಿಗೆ ವಿದ್ಯಾಭ್ಯಾಸವನ್ನು ಮಾಡಿಸುವದನ್ನು ಬಿಟ್ಟು, ಅವರ ಜನ್ಮಸಾರ್ಥಕ್ಯದ ಮಾರ್ಗವನ್ನೂ ಲೌಕಿಕ ಹಿತದ ದಾರಿಯನ್ನೂ ಯಾಕೆ ಪ್ರತಿರೋಧಿಸುತ್ತೀರಿ? ಇದರಿಂದ ನೀವು ಈಶ್ವರನಲ್ಲಿ ತಪ್ಪಿಗೆ ಗುರಿಯಾಗಲಿಕ್ಕಿಲ್ಲವೇ? ಆದುದರಿಂದ ನಾನು ಹಿಂದೆ ಹೇಳಿದಮಟ್ಟಿಗಾದರೂ ಸ್ತ್ರೀಯರಿಗೆ ವಿದ್ಯಾಭ್ಯಾಸವನ್ನು ಮಾಡಿಸಿರಿ. ಸ್ತ್ರೀಯರ ಮನಸ್ಸು ಸುಸಂಸ್ಕೃತವಾಗಿ, ವಿವೇಕ ಹುಟ್ಟುವಷ್ಟು ವಿದ್ಯಾಭ್ಯಾಸವು, ಬಾಲ್ಯವಿವಾಹವನ್ನು ಮಾಡಿದರೆ ಆಗಲಾರದು. ಈ ಹಾನಿಯನ್ನು ತಪ್ಪಿಸುವಸಲುವಾಗಿ ಬಾಲ್ಯವಿವಾಹಗಳನ್ನು ನಿಲ್ಲಿಸಿ, ಪ್ರೌಢವಿವಾಹಗಳನ್ನು ಮಾಡಲಿಕ್ಕೆ ಸಿದ್ಧರಾಗಿರಿ. ಆಮೇಲೆ ನಿಮ್ಮ ಸಂತತಿಯೂ ನಿಮ್ಮ ಮನೆತನವೂ ಎಷ್ಟು ಉನ್ನತಸ್ಥಿತಿಗೆ ಬರುವದೆಂಬುದನ್ನು ಹೇಳಬೇಕೇ! ಹಿಂದೆ ಗಂಡುಹುಡುಗರಿಗೆ ವಿದ್ಯೆಯ ಅಭ್ಯಾಸವನ್ನು

ಮಾಡುವ ವಿಷಯದಲ್ಲಿ ವಯಸ್ಸಿನ ತೊಂದರೆಯಿಲ್ಲವೆಂದು ಹೇಳಿರುವನಷ್ಟೇ ಆದರೂ ಆವ ರಿಗೂ ಕೂಡ ಬಾಲ್ಯವಿವಾಹದಿಂದ ವಿದ್ಯಾಭ್ಯಾಸಕ್ಕೆ ತೊಂದರೆ ಯಾಗುತ್ತಿರುವದು. ಸ್ವಭಾ ವತಃ ನಮ್ಮ ಜನರಲ್ಲಿ ವಿದ್ಯಾಭ್ಯಾಸದ ವಿಷಯದಲ್ಲಿ ಪ್ರೀತಿ ಕಡಿಮೆ ಇರುತ್ತದೆ. ಅದರಲ್ಲಿ ಬಾಲ್ಯವಿವಾಹವಾಗಿದ್ದರೆ, ಆತನ ಹೆಂಡತಿಯು ಬೇಗನೇ ಗಂಡನ ಮನೆಗೆ ಬಂದು, ಕಣ್ಣ ಮುಂದೆ ಸುಳಿದಾಡ ಹತ್ತುವಳು. ಮತ್ತು ಮನೆಯೊಳಗಿನ ಹಿರಿಯರು ಅವರಿಬ್ಬರನ್ನೂ ಒಂದು ಮಾಡುವ ಯತ್ನದಲ್ಲಿಯೇ ಇರುವದರಿಂದ ಹುಡುಗನ ಪ್ರೀತಿಯು ವಿದ್ಯಾಭ್ಯಾಸದ ಮೇಲಿಂದ ಹಾರಿ, ಅವನು ಸ್ತ್ರೀಮೋಹಕ್ಕೆ ಒಳಗಾಗುತ್ತಾನೆ. ಹೀಗಾಗಿ ವಿದ್ಯಾಭ್ಯಾಸದಿಂದ ಉಂಟಾಗುವ ಜ್ಞಾನದ ಅಭಾವದಿಂದ ಇಹಪರ ಸೌಖ್ಯಗಳಿಗೆ ಎರವಾಗುತ್ತಾನೆ. ಮತ್ತು ಮನುಷ್ಯನಂತಹ ಉತ್ತಮ ಜನ್ಮದಲ್ಲಿ ಹುಟ್ಟಿ, ಜ್ಞಾನ ವಿಹೀನನಾಗಿ, ಪಶುಪಕ್ಷಿಗಳಂತೆ ಆ ಹಾರ, ನಿದ್ರೆ ಮತ್ತು ಮೈಥುನ ಇವುಗಳಲ್ಲಿಯೇ ತನ್ಮಯನಾಗಿ ಆವನು ನಿಜಕರ್ತವ್ಯಗಳಿಗೆ ಪರಾಙ್ಮುಖನಾಗುತ್ತಾನೆ. ಇದು ಸರಿಯಲ್ಲ. ಜ್ಞಾನಸಂಪಾದನಾರ್ಥವೇ ಮನುಷ್ಯನು ಜೀ ವಿಸತಕ್ಕದು. ಅದೇ ಒಂದು ಇಲ್ಲದಾದಮೇಲೆ ಆತನು ಮನುಷ್ಯನಾಗಿಹುಟ್ಟಿ ಏನುಫಲವು ಆದುದರಿಂದ ಅತ್ಯಂತ ಹಾನಿಯನ್ನುಂಟು ಮಾಡುವ ಬಾಲ್ಯವಿವಾಹವನ್ನು ತ್ಯಾಗ ಮಾಡಿ, ಪ್ರೌಢವಿವಾಹಗಳನ್ನು ಮಾಡುವದು ಯೋಗ್ಯವಲ್ಲವೆ ? ಇನ್ನೊಂದು ಸಂಗತಿಯೇನೆಂದರೆ ಸಾಂಪ್ರತಕಾಲದಲ್ಲಿ ವ್ಯವಹಾರಕ್ಕೆ ಅತ್ಯಗತ್ಯವುಳ್ಳ ಎಲ್ಲ ಭೌತಿಕ ಶಾಸ್ತ್ರಗಳಲ್ಲಿ ಪ್ರವೀಣರಾ ದವರೂ, ಅಂತಹ ಶಾಸ್ತ್ರಗಳನ್ನು ಕಲಿಸುವ ಕಲಾನಿಯಗಳೂ, ಅಮೇರಿಕಾ ಯೂರೋಪ ಖಂಡಗಳಲ್ಲಿ ಮಾತ್ರ ವಿಪುಲವಾಗಿರುವವಲ್ಲದೆ, ಈ ದೇಶದಲ್ಲಿ ಅವುಗಳ ಅಭಾವವಾಗಿರುವದ ರಿಂದ ಆ ಶಾಸ್ತ್ರಗಳನ್ನು ಕಲಿಯಲಿಕ್ಕೆ ಆ ಖಂಡಗಳಿಗೆ ಹೋಗಲೇ ಬೇಕಾಗಿದೆ. ಈ ದೇಶದೊ ಳಗೆ ಮೊದಲು ದೇಶಭಾಷೆಯನ್ನು ಕಲಿತು, ಬಳಿಕ ಇಂಗ್ಲೀಷ ಭಾಷಾಭ್ಯಾಸವನ್ನು ಮಾಡಿ ಇಲ್ಲಿಯ ಕಲಾವಿಲಯಗಳೊಳಗಿನ ಅಭ್ಯಾಸವನ್ನು ಮುಗಿಸಿ, ಆಮೇಲೆ ಪರ ಖಂಡಗಳಿಗೆ ಹೋಗಬೇಕಾಗುವದು. ಇಷ್ಟೆಲ್ಲ ಆಗುವವಕ್ಕೆ ನಾವು ವಿವಾಹದ ಗೊಡವೆಯನ್ನು ಬಿಡಲೇ ಬೇಕು. ಹೀಗೆ ಅವಿವಾಹಿತರಾಗಿ ನಿಲ್ಲದವಿನಹಾ ಆಧುನಿಕ ಕಲೆಗಳಲ್ಲಿ ನಾವು ಪರಿಪೂರ್ಣ ಪಂಡಿತರಾಗುವ ಸಂಭವವೇ ಇಲ್ಲ. ಇಂತಹಸ್ಥಿತಿಯಲ್ಲಿ ನಾವು ಬಾಲ್ಯವಿವಾಹಗಳನ್ನು ಮಾ ಡುತ್ತ ಕುಳಿತರೆ, ನಮ್ಮದೇಶದ ಅಭ್ಯುದಯದ ಆಶೆಯನ್ನೇ ಬಿಡಬೇಕಾದೀತು. ಅಂದ ಮೇಲೆ ಸಭ್ಯಗೃಹಸ್ಥರೇ, ದೇಶದ ಅಭ್ಯುದಯದ ಆಶೆಯನ್ನು ಬಿಡುವದೊಳಿತೋ ಅಥವಾ ಬಾಲ್ಯವಿವಾಹಗಳನ್ನು ಬಿಡುವದೊಳಿತೋ, ಇದರ ವಿಚಾರವನ್ನು ನೀವು ಚೆನ್ನಾಗಿ ಮಾ ಡಿರಿ. ಇನ್ನುಮೇಲೆ ನೀವು ಮೇಲಿನ ಎರಡು ಸಂಗತಿಗಳಲ್ಲಿ ಒಂದನ್ನು ಸ್ವೀಕರಿಸಲೇ ಬೇ ಕೆಂಬುವ ಮಹತ್ವದ ಕಾಲವು ಈಗ ಪ್ರಾಪ್ತವಾಗಿರುವದು. ಈ ಮಹಾಸಭೆಗಳನ್ನು ನೆರೆ ಯಿಸುವದು ನಮ್ಮ ದೇಶದ, ಅರ್ಥಾತ್, ಸಮಾಜದ ಅಭ್ಯುದಯದ ದೆಸೆಯಿಂದಲೇ ಅಲ್ಲವೇ ಅಂದಮೇಲೆ ತಾವೆಲ್ಲರು ಆರ್ಯಸಮಾಜ, ಬ್ರಹ್ಮೋಸಮಾಜ, ಜೈನಸಮಾಜ, ರಜಪೂತ

ಹಿತಕಾರಿಣೀ ಸಂಘಗಳಂತೆ ಬಾಲ್ಯವಿವಾಹಗಳನ್ನು ತ್ಯಾಗಮಾಡಿ, ಪ್ರೌಢವಿವಾಹಗಳನ್ನು ಮಾಡಲಿಕ್ಕೆ ಒಮ್ಮೆಲೇ ಸಿದ್ಧರಾದೀರೆಂದು ಅಂತಃಕರಣಪೂರ್ವಕವಾಗಿ ನಂಬುತ್ತೇನೆ.

ಬಾಲ್ಯವಿವಾಹದಿಂದಾಗುವ ಮೂರನೇ ನಷ್ಟವು ಯಾವುದೆಂದರೆ;— ಸಮಾಜದ ರಾಜಕೀಯ ವಿಷಯದ ಅವನತಿಯು, ನಮ್ಮ ವೀರಶೈವ ಸಮಾಜವೊಂದು ಪೃಥಕ್ ರಾಷ್ಟ್ರವಿಲ್ಲ; ನಮ್ಮ ಸಮಾಜವು ಹಿಂದೀರಾಷ್ಟ್ರದ ಘಟಕವಾಗಿರುವದು; ಆದುದರಿಂದ ನಮ್ಮ ದೇಶದ ರಾಜಕೀಯಾವನತಿಗೆ ಯಾವ ಕಾರಣಗಳಿರುವವೋ ಅದೇ ಕಾರಣಗಳಿಂದ ನಮ್ಮ ಸಮಾಜದ ರಾಜಕೀಯಾವನತಿ ಯಾಗಿರುತ್ತದೆ. ನಮ್ಮ ರಾಷ್ಟ್ರವು ಒಳ್ಳೇ ಅಭ್ಯುದಯ ಸ್ಥಿತಿಯಲ್ಲಿದ್ದಾಗ ನಮ್ಮಲ್ಲಿ ಪ್ರೌಢವಿವಾಹಗಳೇ ಆಗುತ್ತಿದ್ದು, ನಮ್ಮಲ್ಲಿ ಬಾಲ್ಯವಿವಾಹದ ಪ್ರಚಾರವು ಬಿದ್ದಮೇಲೆ ನಾವು ಅವನತಿಯತ್ತ ಹೋದಿದೆವು. ಹೀಗೆ ಪ್ರಾಚೀನಾರ್ವಾಚೀನಕಾಲದ ಇತಿಹಾಸದಿಂದ ಅರಿಕೆಯಾಗುತ್ತದೆ. ಆದುದರಿಂದಲೇ ನಾನು ನಮ್ಮ ರಾಜಕೀಯಾವನತಿಗೆ ಬಾಲ್ಯವಿವಾಹವೂ ಕೂಡ ಕಾರಣವಾಗಿರುವದೆಂದು ಖಂಡಿತವಾಗಿ ಹೇಳುತ್ತೇನೆ ಇವರಬಗ್ಗೆ ಇತಿಹಾಸದಿಂದ ಏನು ಸಿದ್ಧವಾಗುತ್ತದೆ, ನೋಡುವಾ— ವೇದಕಾಲದಲ್ಲಿ ಪುರುಷರಂತೆ ಸ್ತ್ರೀಯರಿಗೂ ಮೌಂಜೀಬಂಧನ, ವೇದಾಧ್ಯಯನ, ಮತ್ತು ವೈದಿಕ ಕರ್ಮಗಳ ಅಧಿಕಾರವಿತ್ತು. ಈ ಮಾತು ,,ಪುರಾಕಲ್ಪೇತು ನಾರೀಣಾಂ ಮೌಂಜೀಬಂಧನಮಿಷ್ಯತೇ ಎಂಬ ಪುರಾತನ ಸದಾತನವಾಕ್ಯದಿಂದ ಸಿದ್ಧವಾಗಿರುತ್ತದೆ. ಆ ಕಾಲದಲ್ಲಿ ಸ್ತ್ರೀ ಪುರುಷರಿಬ್ಬರೂ ಬ್ರಹ್ಮಚರ್ಯಾಶ್ರಮವನ್ನು ಚೆನ್ನಾಗಿ ಪಾಲಿಸಿ, ಪ್ರೌಢ ವಯಸ್ಸಿನಲ್ಲಿ ಗೃಹಸ್ಥಾಶ್ರಮವನ್ನು ಸ್ವೀಕರಿಸುತ್ತಿದ್ದರು. ಆದುದರಿಂದ ಅವರಸಂತತಿಯು ದೇಹದಾರ್ಢ್ಯವುಳ್ಳುದಾಗಿತ್ತು ಭಾರತ ರಾಮಾಯಣಗಳ ಇತಿಹಾಸವನ್ನು ಓದಿದರೆ, ಆಗಿನ ಆರ್ಯರು ಎಷ್ಟು ತೇಜೋಬಲಾದಿಗಳಿಂದ ಯುಕ್ತರಾಗಿದ್ದರೆಂಬುದು ವ್ಯಕ್ತವಾಗುತ್ತದೆ. ಆಗಿನ ಕಾಲದಲ್ಲಿ ಬಹುತರವಾಗಿ ವಾಡಿಕೆಯಾಗಿದ್ದ ಸ್ವಯಂವರದಲ್ಲಿ ಪುರುಷರು ತಮ್ಮ ಪರಾಕ್ರಮಾದಿ ಪುರುಷೋಚಿತ ಗುಣಗಳನ್ನು ತೋರಿಸ ಬೇಕಾಗುತ್ತಿತ್ತು. ಮತ್ತು ಸ್ತ್ರೀಯರು ಕೂಡ ಪುರುಷರ ಆ ಗುಣಗಳನ್ನು ಪರೀಕ್ಷಿಸಿ, ಅವರನ್ನು ವರಿಸುವಷ್ಟು ಪ್ರೌಢವಯಸ್ಸಿನವರೂ ರೂಪಗುಣಶೀಲಾದಿಗಳುಳ್ಳವರೂ ಇದ್ದರು. ಪರದೇಶದಿಂದ ಹಿಂದುಸ್ಥಾನದ ಮೇಲೆ ದಾಳಿಯನ್ನು ಮಾಡಿದವರಲ್ಲಿ ಸಿಕಂದರನು ಮೊದಲನೆಯವನೆಂದು ಉಪಲಬ್ಧೇತಿಹಾಸದಿಂದ ಕಂಡು ಬರುತ್ತದೆ. ಆತನ ಇತಿಹಾಸ ಲೇಖಕರು, ,,ಹಿಂದೂಜನರು ಮಿಕ್ಕ ಏಸಿಯಾಟಿಕಜನರಿಗಿಂತ ಎತ್ತರವಾದ ಮೈಕಟ್ಟುಳ್ಳವರೂ, ಗಟ್ಟಿಗರೂ, ಶೂರರೂ ಇದ್ದರು ,, ಎಂದು ಬರೆದಿದ್ದಾರೆ. ಕ್ರಿಸ್ತಾಬ್ದದ ಮುನ್ನೂರು ವರ್ಷಗಳ ಪೂರ್ವದಲ್ಲಿ ಚಂದ್ರಗುಪ್ತರಾಜನ ಓಲಗದಲ್ಲಿದ್ದ ಮೇಗಾಸ್ಥನೀಸನೆಂಬ ಸೆಲ್ಯೂಕಸ ರಾಜನ ರಾಯಭಾರಿಯು ,,ಹಿಂದೂ ಜನರು ಗಟ್ಟಿಗರೂ, ಶೂರರೂ, ಪರಾಕ್ರಮಿಗಳೂ ಇದ್ದರೆಂದು ,, ಬರೆದಿರುವನು. ಸಿಥಿಯನರೂ ಪಾರಸಿಕರೂ ಮುಂದೆ ಪಂಜಾಬವನ್ನೂ ಸಿಂಧವನ್ನೂ ಗೆದ್ದರೂ, ಅವರನ್ನು ಕೂಡಲೇ ಹೊರಗೆ ಹಾಕ

ಲಾಯಿತು. ವಿಕ್ರಮಾರ್ಕ ಶಾಲಿವಾಹನರು ಹೂಣರನ್ನೂ ಶಕರನ್ನೂ ಸೋಲಿಸಿ, ತಮ್ಮ ಶಕಗಳನ್ನು ಸ್ಥಾಪಿಸಿದ ಸಂಗತಿಯಿಂದ ಆಕಾಲದಲ್ಲಿ ನಮ್ಮ ತೇಜೋಬಲಾದಿಗಳು ಹೇಗಿದ್ದ ವೆಂಬುದು ತಾನೇ ಗೊತ್ತಾಗುವದು. ಏಳನೇ ಶತಮಾನದಲ್ಲಿ ಈ ದೇಶಕ್ಕೆ ಬಂದ ಚೀನದೇಶದ ಬುದ್ಧ ಧರ್ಮೀಯ ಹುಯೇನ ಸಿಂಗನೆಂಬ ಪ್ರವಾಸಿಯು ನಮ್ಮ ಮಹಾರಾಷ್ಟ್ರರ ವಸ್ತುತಃ ಕನ್ನಡಿಗರ, ವಿಷಯವಾಗಿ ಬರೆದಿರುವದೇನೆಂದರೆ:—,, ಇವರು ಎತ್ತರವಾದ ಮೈಕಟ್ಟುಳ್ಳವರೂ ಶೂರರೂ ಇರುವದಲ್ಲದೆ, ಅಪಕಾರವನ್ನು ಮಾಡಿದ ಮನುಷ್ಯನನ್ನೂ ಕೂಡ ಶಿಕ್ಷಿಸಬೇಕಾದರೆ, ಮೊದಲು ಆತನಿಗೆ ಹೇಳಿ ಕಳುಹಿಸಿ, ಬಳಿಕ ಶಿಕ್ಷಿಸುತ್ತಾರೆ. ಇವರು ತಮಗಿಂತ ಹತ್ತುಮಡಿ ದಂಡಿನಮೇಲೆ ನಿರ್ಭಯದಿಂದ ಸಾಗಿ ಹೋಗುತ್ತಾರೆ. ಮತ್ತು ಇವರ ರಾಜನಾದ ಪುಲಿಕೇಶಿಯು ನಿಜವಾದ ಕ್ಷತ್ರಿಯನೂ, ದಾನಶೂರನೂ, ಕನೋಜದ ರಾಜನಾದ ಶಿಲಾದಿತ್ಯನ ಸಮಾನನೂ ಇರುವನು.,, ಆವನು ತನ್ನ ಪ್ರವಾಸಗ್ರಂಥದಲ್ಲಿ ಈ ದೇಶದೊಳಗೆ ಆಗ ಬಾಲ್ಯವಿವಾಹಗಳಾಗುತ್ತಿದ್ದ ಬಗ್ಗೆ ಏನೂ ಬರೆದಿಲ್ಲ. ಅಂದಮೇಲೆ ಪ್ರಾಚೀನ ಕಾಲದಿಂದ ಈ ಕಾಲದವರೆಗೆ ಅಂದರೆ ಏಳನೇ ಶತಮಾನದ ವರೆಗೆ ನಮ್ಮಲ್ಲಿ ಪ್ರೌಢವಿವಾಹಗಳೇ ಆಗುತ್ತಿದ್ದವು. ಅಂತೇ ನಮ್ಮ ರಾಷ್ಟ್ರವು ಅಲ್ಲಿಯ ವರೆಗೆ ವೈಭವಶಾಲಿಯಾಗಿತ್ತು; ಎಂದು ತಿಳಿಯಲಿಕ್ಕೆ ಏನೂ ಅಡ್ಡಿಯಿಲ್ಲ. ಮುಂದೆ ಎಂಟನೇ ಒಂಭತ್ತನೇ ಶತಮಾನದಲ್ಲಿ ಶ್ರೀ ಶಂಕರಾಚಾರ್ಯರ ಕಾಲದಲ್ಲಿಯೂ ಅನಂತರವೂ ಆರ್ಯಧರ್ಮ ಬೌದ್ಧಧರ್ಮಗಳಲ್ಲಿ ಕದನಗಳು ನಡೆದು, ಬೌದ್ಧರನ್ನು ಆರ್ಯಧರ್ಮದಲ್ಲಿ ಸೇರಿಸಿಕೊಂಡು ಅವರನ್ನು ನಿರ್ನಾಮಮಾಡುವ ಕೋಲಾಹಲದ ಸಂಧಿಯಲ್ಲಿ ಬಾಲ್ಯವಿವಾಹದ ಆಗಿಯು ಹುಟ್ಟಿದಂತೆ ತೋರುತ್ತದೆ. ಮುಂದೆ ಬರಬರುತ್ತ ಅದು ತಕ್ಕ ಪರಿಸ್ಥಿತಿಯ ಅನುಕೂಲತೆಯಿಂದ ಬಲಿತು, ಮುಸಲ್ಮಾನರು ಈ ದೇಶದಲ್ಲಿ ಬರುವದರೊಳಗಾಗಿ ದೊಡ್ಡವೃಕ್ಷವಾಗಿ ಫಲಿಸಿತು. ಆದರಿಂದಲೇ ನಮ್ಮನ್ನುಗೆಲ್ಲಲಿಕ್ಕೆ ಮುಸಲ್ಮಾನರಿಗೆ ಕಷ್ಟವಾಗಲಿಲ್ಲ. ಬಾಲ್ಯವಿವಾಹದ ಪರಮಾವಧಿಯಾಗಿದ್ದ ಬಂಗಾಲದೇಶವು ಕೂಡಲೇ ಅವರ ಕೈವಶವಾಯಿತು; ಮತ್ತು ಮುಂದೆ ಬಂದರ ಹಿಂದೊಂದು ಎಷ್ಟೋ ಪ್ರಾಂತಗಳು ಅನ್ಯಾಕ್ರಾಂತವಾದುವು. ಅಂದಿನಿಂದ ಇಂದಿನವರೆಗೆ ಪ್ರೌಢವಿವಾಹಗಳನ್ನೇ ಮಾಡುತ್ತಬಂದ ರಜಪೂತ ಜನರು ಈಗಲೂ ಮಾನ್ಯಸ್ಥಿತಿಯಲ್ಲಿರುವರು. ಈ ಹೊತ್ತಿನವರೆಗೆ ಮಾಡಿದ ವಿವೇಚನೆಯಿಂದ ಪ್ರೌಢವಿವಾಹದ ಕಾಲದಲ್ಲಿ ನಮ್ಮದೇಶದ ಸ್ಥಿತಿಯು ಉತ್ತಮವಾಗಿಯೂ, ಬಾಲ್ಯ ವಿವಾಹಗಳು ಪ್ರಚಾರದಲ್ಲಿ ಬಂದಮೇಲೆ ಹೀನವಾಗಿಯೂ ಪರಿಣಮಿಸಿತೆಂದು ತಮ್ಮ ಮನವರಿಕೆಯಾಗಿರಬಹುದು ರಾಷ್ಟ್ರೀಯ ಮಾವನತಿಗೆ ಬಾಲ್ಯವಿವಾಹ ಒಂದೇ ಕಾರಣವೆಂದು ನಾನು ಹೇಳಲಾರೆನು. ಆದರೆ ಆನೇಕ ಕಾರಣಗಳಲ್ಲಿ ಇದೊಂದು ಬಲವತ್ತರವಾದ ಕಾರಣವಾಗಿರುವದೆಂದು ಖಂಡಿತವಾಗಿ ಹೇಳಬಹುದು. ಯಾಕೆಂದರೆ ಬಾಲ್ಯವಿವಾಹದಿಂದ ಪ್ರಜೆಗಳು ನಿರ್ಬಲರೂ, ಆ ನಿರ್ಬಲತೆಯಿಂದ ನಿರುತ್ಸಾಹಿಗಳೂ ಹತಾಶರೂ ಆಗಿ, ಕಾಲಾಂತರಕ್ಕೆ ಪರತಂತ್ರರಾಗುತ್ತಾರೆ. ಈ ವಿಧದಿಂದ

ರಾಷ್ಟ್ರೀಯ ಅವನತಿಯು ಸಂಭವಿಸುತ್ತದೆ. ಸಾಮಾಜಿಕ ಸುಸ್ಥಿತಿಯು ವಿವಾಹಪದ್ಧತಿಯನ್ನು ಅವಲಂಬಿಸಿರುತ್ತದೆಂದು ಸ್ಪೇನ್ಸರ ಸಾಹೇಬರು ಸ್ಪಷ್ಟವಾಗಿ ಹೇಳಿರುವರು. ಯುರೋಪದ ಇತಿಹಾಸವಾದರೂ ಇದೇಸಿದ್ಧಾಂತವನ್ನು ದೃಢೀಕರಿಸುತ್ತದೆ. ಹೇಗೆಂದರೆ;-

೧. ಮಹಾತತ್ತ್ವವೇತ್ತನಾದ ಆರಿಸ್ಟಾಟಲನು ಹೇಳಿರುವದೇನೆಂದರೆ; — ಗ್ರೀಕ ಜನರು ತಮ್ಮಹೆಂಡಂದಿರನ್ನು ಗುಲಾಮರಂತೆ ತಿಳಿಯದೆ, ಅವರು ತಮಗೆ ಸರಿಯಾದವರೆಂದೂ, ಪ್ರಪಂಚ ವ್ಯವಸ್ಥೆಯಲ್ಲಿ ಸಹಾಯಕಾರಿಗಳೆಂದೂ, ತಿಳಿದುದರಿಂದ ಪೂರ್ವದ ಬಾರ್ಬೇರಿಯನ ಜನಾಂಗದ ಮೇಲೆ ತಮ್ಮ ವರ್ಚಸ್ಸನ್ನೂ ನೆಲೆಗೊಳಿಸಿದರು. ... *

೨. ರೋಮನ ಗ್ರಂಥಕಾರನೊಬ್ಬನು ಬರೆದಿರುವದೇನೆಂದರೆ: — ,,ರೋಮನರು ತಮ್ಮಸ್ತ್ರೀಯರನ್ನು ಗ್ರೀಕರಿಗಿಂತಲೂ ಹೆಚ್ಚು ಚೆನ್ನಾಗಿ ನಡೆಯಿಸಿಕೊಳ್ಳುವದರಿಂದ ಅವರ ಸುಧಾರಣೆಯು ಗ್ರೀಕರಿಗಿಂತಲೂ ಹೆಚ್ಚು ಬಲವಂತವಿದೆ.,, ,,ಪ್ಯೂನಿಕ ವಾರ್ಸ ನಂತರದಲ್ಲಿ ರೋಮಾಯರ ನೀತಿಮತ್ತೆಯು ಕೆಟ್ಟುದರಿಂದ, ಅವರ ಲೋಕಸತ್ತಾಕ ರಾಜ್ಯವು ನಾಶವಾಯಿತು.,, ... ... ... *

೩. ಬಾರ್ಬೇರಿಯರನ್ನು ಗ್ರೀಕರೂ, ಗ್ರೀಕರನ್ನು ರೋಮಾಯರೂ, ರೋಮಾಯರನ್ನು ಜರ್ಮನರೂ ಪಾದಾಕ್ರಾಂತಮಾಡಿದರು. ಈ ಎಲ್ಲ ರಾಷ್ಟ್ರಗಳ ಸ್ತ್ರೀಯರ ಸ್ಥಿತಿಯು ಅನುಕ್ರಮವಾಗಿ ಹೆಚ್ಚು ಚೆನ್ನಾಗಿತ್ತು. ಮತ್ತು ಈ ಬಲಿಷ್ಠ ರಾಷ್ಟ್ರಗಳ ವೈವಾಹಿಕ ನೀತಿಯಾದರೂ ಕ್ರಮವಾಗಿ ಶ್ರೇಷ್ಠವಾಗಿತ್ತು. ... ... *

೪. ಜರ್ಮನರು ಎಂದೂ ಪರತಂತ್ರರಾಗಲಿಲ್ಲ. ೧. ಅವರೇ ೭ನೇ ಶತಮಾನದಲ್ಲಿದ್ದ ಅರಬರ ಹಾವಳಿಯನ್ನು ನಿಲ್ಲಿಸಿದರು ೨. ಹನ್ಸ ಜನಾಂಗದವರು ಹತ್ತನೇ ಶತಕದಲ್ಲಿ ಯುರೋಪಕ್ಕೆ ಅತ್ಯಂತ ತ್ರಾಸವನ್ನು ಕೊಟ್ಟರೂ, ಅವರನ್ನು ಜರ್ಮನರ ಅರಸರಾದ ಓಥೊಟುಗ್ರೇಟ ಮತ್ತು ಹೇನರಿ ಧಿ ಫೌವುಲರ ಈ ಉಭಯತರು ಸೋಲಿಸಿ ಕ್ರಿಸ್ತರಾಷ್ಟ್ರಗಳನ್ನು ಎಡರಿನಿಂದ ಮುಕ್ತಮಾಡಿದರು. ೩. ಹದಿನೈದನೇ ಶತಮಾನದಲ್ಲಿ ತುರ್ಕರು ಕಾನ್ಸ್ಟಾಂಟಿನೋಪಲವನ್ನು ಗೆದ್ದು, ರೋಮಾಯರನ್ನು ಗತಿಗೆಡಿಸಲು, ಅವರ ಉಪಟಳವನ್ನು ಜರ್ಮನರೇ ನಿಲ್ಲಿಸಿದರು. ಈ ತೆರದ ಜರ್ಮನರ ವರ್ಚಸ್ಸಿಗೆ ಇತರ ಕಾರಣಗಳೊಂದಿಗೆ ಅವರ ಉತ್ತಮ ವಿವಾಹಪದ್ಧತಿಯು ಕಾರಣವಾಗಿತ್ತು. ... ... *

ಈ ಉದಾಹರಣೆಗಳಿಂದ, ವೈವಾಹಿಕ ಸುಪದ್ಧತಿಯಮಹತ್ವವು ಸಮಾಜದ ಉತ್ಕರ್ಷಕ್ಕೆ ಎಷ್ಟು ಸಹಾಯ್ಯಕಾರಿ ಯಾಗುತ್ತದೆಂಬುದು ತಮಗೆ ತಿಳಿದು ಬಂದಿರ ಬಹುದು. ಇನ್ನು ನಮ್ಮ ಸ್ವಂತ ವೀರಶೈವ ಸಮಾಜದ ವಿಷಯವಾಗಿ ವಿಚಾರವನ್ನು ಮಾಡುವಾ;— ನಮ್ಮ ವೀರಶೈವ ಸಮಾಜದ ನಿಜವಾದ ಇತಿಹಾಸವು ಇನ್ನೂ ವಿಶದವಾಗಿ ಬರೆಯಲ್ಪಟ್ಟಿಲ್ಲ ಆದುದರಿಂದ ನಮ್ಮ ಸಮಾಜದ ರಾಜಕೀಯ ಸ್ಥಿತಿಯು ಯಾವಕಾಲದಲ್ಲಿ ಹೇಗೆ ಇತ್ತೆಂಬ

ವಿಷಯದಲ್ಲಿ ಚೆನ್ನಾಗಿ ತಿಳಿಯುವದಿಲ್ಲ. ಆದರೂ ಬೇರೆಬೇರೆ ಗ್ರಂಥಗಳಲ್ಲಿ ಬರೆದಿರುವ ಸಂಗತಿಗಳನ್ನು ಒಟ್ಟುಗೂಡಿಸಿ, ಅವರೀಂದ ಏನಾದರೂ ರಾಜಕೀಯಸ್ಥಿತಿಯ ಬೋಧೆಯು ಆಗುವದೋ ಹೇಗೆ! ಎಂಬುದನ್ನು ನೋಡಬೇಕಾಗಿದೆ. ಪ್ರಿಯಬಂಧುಗಳೇ, ನಮ್ಮ ವೀರಶೈವ ಸಮಾಜದ ಇತಿಹಾಸವು ಇನ್ನೂ ಸರಿಯಾಗಿ ಶಿಕ್ಕದಿದ್ದರೂ, ಉಪಲಬ್ಧವಾಗಿರುವ ಇತಿಹಾಸದಿಂದ, ವೀರಶೈವ ಜನಾಂಗದವರು ರಾಜಕೀಯ ವಿಷಯದಲ್ಲಿ ತಮ್ಮ ವರ್ಚಸ್ಸನ್ನು ಚೆನ್ನಾಗಿ ಕಾಯ್ದುಕೊಂಡಿದ್ದರೆಂದು ತಿಳಿದು ಬರುತ್ತಿರುವದು. ಚೋಳಮಂಡಳದ ರಾಜನಾದ ಸತ್ಯೇಂದ್ರ ಚೋಳನ ಪರಾಕ್ರಮಿ ಪುತ್ರನಾದ ರಾಜಶೇಖರನು, ಸಿಂಹಳದ್ವೀಪದ ರಾಜನನ್ನು ಸೋಲಿಸಿದ ಸಂಗತಿಯು „ರಾಜಶೇಖರವಿಳಾಸಂ,, ಎಂಬ ಪ್ರಸಿದ್ಧಗ್ರಂಥದಿಂದ ಎಲ್ಲರಿಗೂ ವಿದಿತವಾಗಿಯೇ ಇರುವದು. ಪಾಂಡ್ಯವಂಶದ „ಕೂನಪಾಂಡ್ಯ,, ರಾಜನ ಚರಿತ್ರೆಯು ಪುರಾಣ ಪ್ರಸಿದ್ಧವಾಗಿರುವದು. ಕೊಡಗುರಾಜರು ಸ್ವತಂತ್ರವಾಗಿ ನೂರಾರು ವರ್ಷಗಳವರೆಗೆ ರಾಜ್ಯವನ್ನು ಆಳಿದ್ದು, ಎಷ್ಟೋ ಪರಾಕ್ರಮಗಳನ್ನು ಮಾಡಿರುವರು. ಇಕ್ಕೇರಿ ಮತ್ತು ಬಿದರೂರಿನ ರಾಜರು ಸರ್ ೧೫೬೦ ಇಸ್ವಿಯಿಂದ, ಸರ್ ೧೭೬೩ ಇಸ್ವಿಯವರೆಗೆ ಅಂದರೆ ೨೦೩ ವರ್ಷಗಳವರೆಗೆ ಬಹಳ ಬುದ್ಧಿವಂತಿಕೆಯಿಂದಲೂ ಶೂರತನದಿಂದಲೂ ಆಳಿರುವರು ಪುಂಗನೂರು ದೊರೆಗಳ ರಾಜ್ಯವು ನೂರಾರು ವರ್ಷಗಳಿಂದ ಇಂದಿನವರೆಗೆ ಆಳಲ್ಪಡುತ್ತಲೇ ಇರುವರು. ಹಂಡೇವಂಶಸ್ಥರಾದ ಪಾಳ್ಯಗಾರರು, ವಿಜಯನಗರದ ಹಿಂದೂ, ಮತ್ತು ವಿಜಾಪೂರದ ಮುಸಲ್ಮಾನೀ ಬಾದಶಾಹಿಯ ಕೆಳಗೆ ಸರ್ ೧೫೬೮ ಇಸ್ವಿಯಿಂದ ಸರ್ ೧೭೭೪ ಇಸ್ವಿಯವರೆಗೆ ಎಷ್ಟೋ ಶೂರತನದ ಕೃತ್ಯಗಳನ್ನು ಮಾಡಿ ಪ್ರಸಿದ್ಧರಾಗಿರುವರು. ಇದಲ್ಲದೆ ಕಲಚೂರ್ಯ ಅರಸರಲ್ಲಿಯೂ ವಿಜಯನಗರದ ಅರಸರಲ್ಲಿಯೂ ರಾಜಕೀಯ ಮಹತ್ವದ ಎಷ್ಟೋ ದರಬಾರೀ ಕಾರ್ಯಗಳನ್ನು ನಮ್ಮ ಜನರು ಮಾಡಿರುವರು. ಈ ಇತಿಹಾಸವನ್ನು ಪರಿಶೀಲಿಸಿ ನೋಡಿದರೆ, ಈ ರಾಜರುಳ್ಳ ಪ್ರದೇಶದಲ್ಲಿ ಆದಿನಿಂದ ಇಂದಿನವರೆಗೂ ಪ್ರೌಢವಿವಾಹಗಳೇ ಆಗುತ್ತಿರುವವು. ಯಾವ ಪ್ರದೇಶದ ವೀರಶೈವರಲ್ಲಿ ಬಾಲ್ಯವಿವಾಹಗಳು ನಡೆದಿರುವವೋ ಅಲ್ಲಿಯ ವೀರಶೈವರು, ಹಿಂದೆ ಹೇಳಿದ ವೀರಶೈವ ಮಹಾಪುರುಷರ ಸರಿಯಾಗಿ, ಪೌರುಷಕೃತ್ಯಗಳನ್ನು ಮಾಡಿರುವದಿಲ್ಲವೆಂದು ಸ್ಪಷ್ಟವಾಗಿ ತಿಳಿದುಬರುವದು, ಎಲ್ಲಿ ಬಾಲ್ಯವಿವಾಹಗಳ ಪ್ರಚಾರವೋ ಅಲ್ಲಿ ಗೌಡಕಿ, ನಾಡಗೌಡಕಿ, ದೇಸಾಯಿಕಿ, ಇವೇ ಬಿರುದುಳ್ಳ ಸಾಧಾರಣ ವತನದಾರರು ಆಗಿ ಹೋಗಿರುವರು. ಎಲ್ಲಿ ಪ್ರೌಢವಿವಾಹದ ಪ್ರಚಾರವಿರುವದೋ, ಅಲ್ಲಿ ಸ್ವತಂತ್ರ ರಾಜ್ಯಗಳನ್ನು ಕೂಡ ಅಲ್ಲಿಯ ವೀರಶೈವರು ನಡೆಯಿಸಿರುವರೆಂದು ತಿಳಿಯದೇ ನಿಲ್ಲುವದಿಲ್ಲ. ಇತ್ತಿತ್ತಲಾಗಿ ನಮ್ಮ ವೀರಶೈವರ ದರಬಾರೀ ವರ್ಚಸ್ಸು ಎಲ್ಲಕಡೆಗೂ ಶೂನ್ಯಪ್ರಾಯವಾಗಿರುವದು. ಇದರ ಕಾರಣವು ಬಾಲ್ಯವಿವಾಹವೇ ಮೊದಲು ಹೇಳಿದಂತೆ ನಮ್ಮಲ್ಲಿ ಬಾಲ್ಯವಿವಾಹದ ಪ್ರಚಾರವು ಬೆಳೆಯುತ್ತ ನಡೆದಿರುವದರಿಂದ ಅಲ್ಪವಯಸ್ಸಿನಲ್ಲಿ ಪ್ರಪಂಚದ ತಿರುಗಣಿ ಮಡುವಿನಲ್ಲಿ ಬಿದ್ದು, ಅದರೊಳಗಿಂದ ಹೊರಬೀಳಲು

ಶಕ್ತಿಯಿಲ್ಲದೆ, ಗೋಳಾಡುತ್ತ ದೈನ್ಯಭಾವವನ್ನು ಸ್ವೀಕರಿಸಬೇಕಾಗಿರುವದು. ನಮ್ಮ ದಯಾಳುಪ್ರಭುಗಳಾದ ಬ್ರಿಟೀಶ ಸಾರ್ವಭೌಮರ ಆಳಿಕೆಯಲ್ಲಿ ನಾನಾಪ್ರಕಾರದ ವಿದ್ಯಾವ್ಯಾಸಂಗಗಳನ್ನು ಮಾಡಿ ವರ್ಚಸ್ಸನ್ನು ಪಡೆಯಲಿಕ್ಕೆ ಇತರರಂತೆ ನಮಗೂ ಅನುಕೂಲ್ಯಗಳನ್ನು ಚಕ್ರವರ್ತಿಗಳುಮಾಡಿ ಕೊಟ್ಟದ್ದರೂ, ಬಾಲ್ಯವಿವಾಹಗಳ ಸಲುವಾಗಿ, ವಿದ್ಯಾಭ್ಯಾಸ ಮಾಡಲು ಉತ್ಸಾಹವಿಲ್ಲದೆ, ದೈನ್ಯದಿಂದ ಹೀನಸ್ಥಿತಿಯಲ್ಲಿ ಬಿದ್ದುಕೊಂಡಿದ್ದೇವೆ. ಈ ಎಲ್ಲ ತೆರದ ಸಂಗತಿಯನ್ನು ಲಕ್ಷ್ಯದಲ್ಲಿ ತರಲು, ಬಾಲ್ಯವಿವಾಹದಿಂದ ನಮ್ಮ ಸಮಾಜದ ರಾಜಕೀಯ ವಿಷಯದ ಅವನತಿಯಾಗಿರುವದೆಂದು ಖಂಡಿತವಾಗಿ ತಿಳಿಯಲಿಕ್ಕೆ ಸಂದೇಹವೇನು? ಈಗ ಮುಂಚಿನ ರಾಜ್ಯಪದ್ಧತಿಯು ಮುಣುಗಿ ಹೋಗಿದ್ದು, ನವೀನ ನಾಗರೀಕತೆಯ ಹೊಸಪದ್ಧತಿಯಿಂದ ಬ್ರಿಟಿಶ ಸಾರ್ವಭೌಮರು ರಾಜ್ಯವನ್ನಾಳುತ್ತಿರುವರು. ಇವರ ಆಳಿಕೆಯಲ್ಲಿ ಎಲ್ಲತೆರದ ನಮ್ಮ ಉನ್ನತಿಯನ್ನು ಮಾಡಿಕೊಂಡೆವೆಂದರೆ ಬರುವಂತೆ ಅನುಕೂಲ್ಯಗಳು ನಮಗೆ ಸಿಕ್ಕಿರುತ್ತವೆ. ಆದುದರಿಂದ ಬ್ರಿಟಿಶ ರಾಜ್ಯದೊಳಗಿನ ಉತ್ಕೃಷ್ಟ ನಾಗರಿಕರಾಗಿ, ನಮ್ಮ ರಾಜಕೀಯ ವರ್ಚಸ್ಸನ್ನು ಸಂಪಾದಿಸುವಸಲುವಾಗಿ ಯತ್ನಗಳನ್ನು ಮಾಡಲಿಕ್ಕೆ ಬೇಗನೇ ಸಿದ್ಧರಾಗಿರಿ. ಇಂತಹಸುಸಂಧಿಯು ನಿಮಗೆ ಎಂದೂ ದೊರಕಲಿಕ್ಕಿಲ್ಲ ಬೇರೆ ಬೇರೆ ಸಮಾಜದವರು ಬಾಲ್ಯವಿವಾಹಗಳನ್ನು ತಳ್ಳಿ, ಪ್ರೌಢ ವಿವಾಹಗಳನ್ನು ಪ್ರಚುರಪಡಿಸಿ, ತಮ್ಮತಮ್ಮ ಅಭಿವೃದ್ಧಿಯನ್ನು ಮಾಡಿಕೊಳ್ಳುತ್ತಿರುವರು. ಅದರಂತೆ ಸಮಾಜಬಂಧುಗಳೇ, ತಾವೂ ಹಾನಿಕಾರಕ ಬಾಲ್ಯ ವಿವಾಹವನ್ನು ನಿಲ್ಲಿಸಿ, ಪ್ರೌಢ ವಿವಾಹಗಳನ್ನು ಉತ್ತೇಜಿಸಿ, ಸಾಂಪ್ರತಕಾಲದ ಅಪೂರ್ವ ಅನುಕೂಲತೆಯನ್ನು ಉಪಯೋಗಿಸಿ, ಬ್ರಿಟಿಶರ ಅಮೂಲ್ಯಗುಣಗಳನ್ನು ಹೊಂದಿ, ಈ ೨೦ನೇ ಶತಮಾನಕ್ಕೆ ಒಪ್ಪುವಂತಹ ಮಹತ್ತ್ವವನ್ನು ಪಡೆದುಕೊಳ್ಳಿರಿ; ಎಂದು ನಾನು ಆಗ್ರಹಪೂರ್ವಕವಾಗಿ ಸೂಚಿಸುತ್ತೇನೆ. ಆದರೆ ಇದೆಲ್ಲಾ ಬಾಲ್ಯವಿವಾಹವನ್ನು ಬಿಡದ ಹೊರತು ಉಂಟಾಗಲಾರದೆಂದು ತಾವು ನಿಶ್ಚಯದಿಂದ ತಿಳಿದುಕೊಳ್ಳಬೇಕು. ಯಾಕೆಂದರೆ ಇಷ್ಟುಕಾಲ ನಾನು ಮಾಡಿದ ವಿವೇಚನದಿಂದ ಬಾಲ್ಯವಿವಾಹಕ್ಕೂ ಸಮಾಜದ ರಾಜಕೀಯ ಅವನತಿಗೂ ದೃಢವಾದ ಸಂಬಂಧವಿರುವದೆಂದು ಸಿದ್ಧಮಾಡಿದ್ದೇನೆ. ... ... ... ...

ಹಿಂದೆ ಹೇಳಿದ ಹಾನಿಗಳ ಹೊರತು ಇನ್ನೂ ಅನೇಕ ಹಾನಿಗಳು ಬಾಲ್ಯವಿವಾಹದಿಂದ ಸಂಭವಿಸುತ್ತಿರುವವು. ಆದರೆ ಅಧ್ಯಕ್ಷಮಹಾಶಯರು ಕೊಟ್ಟ ಭಾಷಣಾವಧಿಯ ಕಾಲವು ಮೀರುವ ಹೆದರಿಕೆ ಇರುವದರಿಂದ ಮಿಕ್ಕಹಾನಿಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ ಯಾಕಂದರೆ ಅವುಗಳನ್ನು ವಿಸ್ತರಿಸುತ್ತ ನಿಂತರೆ, ನನ್ನ ಭಾಷಣವು ಮುಗಿಯುವದರೊಳಗಾಗಿ ಅಧ್ಯಕ್ಷರ ಗಂಟೆಯಾಗುವ ಸಂಭವವುಂಟು. ಹಾಗಾದ ಪಕ್ಷದಲ್ಲಿ, ಎಷ್ಟೋವಿಷಯಗಳ ವಿವೇಚನೆಯು ನಿಂತುಹೋಗಿ, ತಮ್ಮ ಮನಸ್ಸಿನ ಮೇಲೆ ನನ್ನ ಭಾಷಣದ ಪರಿಣಾಮವು ತಕ್ಕಷ್ಟು ಆಗಲಿಕ್ಕಿಲ್ಲ. ಅಸ್ತು ಮಿಕ್ಕ ಹಾನಿಗಳನ್ನು ಕ್ರಮವಾಗಿ ಹೇಳುವೆನು.

೪. ಬಾಲ್ಯವಿವಾಹದಲ್ಲಿ ವಧೂವರರವಯಸ್ಸುಗಳು ಚಿಕ್ಕವಾಗಿರುವದರಿಂದ ಅವರ ನಿಜವಾದ ಗುಣಾವಗುಣಗಳು ತಿಳಿಯಲಾರವು. ವಧೂವರರು ಪ್ರೌಢರಾದ ಮೇಲೆ ಅವರ ಶರೀರ ಪ್ರಕೃತಿ, ಸ್ವಭಾವ, ಶೀಲ, ಬುದ್ಧಿಗಳು ಗೊತ್ತಾಗುವವು. ಉಭಯತರಲ್ಲಿಯೂ ಸ್ವಭಾವ ಶೀಲಾದಿಗಳು ಸರಿಯಾಗಿದ್ದರೆ ಮಾತ್ರ, ಅವರಿಗೆ ಸುಖವು ಲಭಿಸುವದು. ಪರಸ್ಪರ ವಿರುದ್ಧ ಸ್ವಭಾವ ಶೀಲಾದಿಗಳಿದ್ದರೆ ಅವರದುಃಖಕ್ಕೆ ನೆಲೆಯೇ ಇಲ್ಲದಾಗುವದು. ಬಾಲ್ಯವಿವಾಹದಿಂದ ಅನುರೂಪ ವಧೂವರರನ್ನು ಕೂಡುಹಿಡಿಯಲು ಅಸಾಧ್ಯವಿರುವದರಿಂದ ಬಾಲ್ಯವಿವಾಹವು ತ್ಯಾಜ್ಯವಾಗಿರುವದು. ... ... ... *

೫. ಬಾಲ್ಯವಿವಾಹದಿಂದ ಸ್ತ್ರೀಪುರುಷರಲ್ಲಿ ಸ್ವಾಭಾವಿಕ ಪ್ರೇಮವು ಹುಟ್ಟಲಾರದು. ಪ್ರೌಢರಾದಮೇಲೆ ಪರಸ್ಪರ ಗುಣಧರ್ಮಗಳು ಗೊತ್ತಾಗಿ, ಅಂತಃಕರಣ ಪ್ರೇರಿತವಾದ ಪ್ರೇಮದಿಂದ ಅನುರಾಗವು ಹುಟ್ಟಿದ ಮೇಲೆ ವಿವಾಹವಾಗುವದು ವಿಹಿತವಾದುದು. ಬಾಲ್ಯವಿವಾಹದಿಂದ ಹೀಗಾಗುವ ಸಂಭವವಿಲ್ಲ. ಆದುದರಿಂದ ಬಾಲ್ಯವಿವಾಹವು ತ್ಯಾಜ್ಯವಾಗಿರುವದು. ... ... ... ... *

೬. ಬಾಲ್ಯವಿವಾಹದಿಂದ ಅನಾರೋಗ್ಯಕಾಲದಲ್ಲಿ ಪ್ರಜೋತ್ಪತ್ತಿಯಾಗಿ, ಕೂಸಿಗೂ ತಾಯಿತಂದೆಗಳಿಗೂ ಅಪಾಯಗಳು ಸಂಭವಿಸುವವು. ಚಿಕ್ಕವಯಸ್ಸಿನಲ್ಲಿ ಹಡೆದರೆ, ಅವುಗಳನ್ನು ಜೋಕೆಮಾಡುವ ಜ್ಞಾನವೂ, ಶಕ್ತಿಯೂ, ಮನೋನಿಗ್ರಹವೂ ಅವರಲ್ಲಿ ಬಂದಿರುವದಿಲ್ಲ. ಅದರಿಂದ ಕೂಸುಗಳಿಗೆ ಅಪಾಯವಾಗಿ ವಂಶಖಂಡನವಾಗುವ ಸಂಭವಹುಟ್ಟುವದು ಆದುದರಿಂದ ಬಾಲ್ಯವಿವಾಹವು ತ್ಯಾಜ್ಯವಾದದ್ದಾಗಿರುವದು. ... ... *

ಇದರಂತೆ ಅನೇಕ ಹಾನಿಗಳು ದಿನಾಲು ಸಂಭವಿಸುತ್ತಿದ್ದರೂ ನಮ್ಮ ಸಮಾಜವು ಶಾರೀರಿಕ ಹ್ರಾಸವನ್ನು ಹೊಂದುತ್ತಿದ್ದರೂ ಲಕ್ಷಿಸದೇ, ನಮ್ಮ ಜನರು ಬಾಲ್ಯವಿವಾಹಗಳನ್ನು ಮಾಡಿ, ತಮ್ಮಕೈಯಿಂದಲೇ ತಮ್ಮ ಭಾವಿಸಂತತಿಯನ್ನು, ಅರ್ಥಾತ್ ತಮ್ಮಸಮಾಜವನ್ನು ಅಧೋಗತಿಗೆ ಒಯ್ಯುವಂತಹ ಅನುಚಿತ ಕರ್ಮವನ್ನು ಮಾಡುತ್ತಿದ್ದಾರೆ. ಇದೆಂತಹ ದೈವದುರ್ವಿಪಾಕವು? ಆದುದರಿಂದ ಧರ್ಮಬಾಂಧವರೇ, ಇನ್ನು ನೀವು ಆಲಸ್ಯವನ್ನು ಬಿಟ್ಟು, ಇನ್ನು ಮುಂದೆ ಬಾಲ್ಯವಿವಾಹಗಳಾಗದಂತೆಯೂ ಸರ್ವತ್ರ ಪ್ರೌಢ ವಿವಾಹಗಳೇ ಪ್ರಚಾರದಲ್ಲಿ ಬರುವಂತೆಯೂ ಯತ್ನಿಸಿರೆಂದು ನನ್ನ ಬಿನ್ನಹವುಂಟು. ಪ್ರಿಯ ಪ್ರತಿನಿಧಿಗಳೇ, ಈ ಹೊತ್ತಿನವರೆಗೆ ನಾನು ಮಾಡಿದ ವಿವೇಚನೆಯಿಂದ ನಿಮಗೆ ಪ್ರೌಢವಿವಾಹದ ಆಗತ್ಯವು ತೋರಿದರೂ, ಧರ್ಮಶಾಸ್ತ್ರ ದೃಷ್ಟಿಯಿಂದ ಪ್ರೌಢವಿವಾಹವೇ ಉತ್ತಮವೆಂದು ನಾನು ಸಿದ್ಧಮಾಡದ ಹೊರತು ನೀವು ಸಮ್ಮತಿಯನ್ನು ಕೊಡಲಾರಿರಿ ಹೀಗೆ ನನಗೆ ತೋರುತ್ತದೆ. ಆದುದರಿಂದ ಈ ವಿಷಯವಾಗಿ ಧರ್ಮಶಾಸ್ತ್ರವು ಏನು ಆಜ್ಞಾಪಿಸುತ್ತದೆ? ಎಂಬುದನ್ನು ಹೇಳುತ್ತೇನೆ, ಕೇಳಬೇಕು. ... ... ... *

ಇನ್ನು ಧರ್ಮಶಾಸ್ತ್ರ ದೃಷ್ಟಿಯಿಂದ ವಿಚಾರವನ್ನು ಮಾಡುವದೇದರೇನು ! ಇದರ ನಿರ್ಣಯವು ಮೊದಲು ಆಗಬೇಕು. ಇವರ ವಿಷಯವಾಗಿ ಯಾಜ್ಞವಲ್ಕ್ಯ ಮಹಾಮುನಿಗಳ ಅಭಿಪ್ರಾಯವು ಏನಿರುವದೆಂದರೆ;— ... ... ... *

ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ ।

ಸಮ್ಯಕ್ಸಂಕಲ್ಪಜಃ ಕಾಮೋ ಧರ್ಮಮೂಲಮಿದಂ ಸ್ಮೃತಂ ।

ಇದರ ಅರ್ಥವು:—ವೇದಗಳೂ, ಸ್ಮೃತಿಗಳೂ, ಶಿಷ್ಟಾಚಾರವೂ, ಸ್ವಾತ್ಮಸುಖವೂ, ಸುಸಂಕಲ್ಪಜನ್ಯವಾದ ಇಚ್ಛೆಯೂ, ಹೀಗೆ ಐದು ಧರ್ಮನಿರ್ಣಾಯಕ ಮೂಲಗಳಿರುತ್ತವೆ. ಮೊದಲು ವೇದಗಳ ಅಭಿಪ್ರಾಯವನ್ನು ನೋಡುವಾ;— ... *

ಋಗ್ವೇದ ಅ. ೮, ಅ. ೩-೨೧

ಸೋಮೋವಧೂಯುರಭವ ದಶ್ವಿನಾಸ್ತಾವುಭಾವರಾ ।

ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾದದರತ್ ॥

ಇದರ ಭಾಷ್ಯಾರ್ಥವು:—ಸೋಮನಿಗೆ ಲಗ್ನವಾಗುವ ಇಚ್ಛೆಯಾಯ್ತು, ಅಶ್ವಿನೀಕುಮಾರರೂ ವರರಿದ್ದರು, ಆ ಕಾಲದಲ್ಲಿ ಪತಿಯನ್ನು ಇಚ್ಛಿಸುವ, ಅಂದರೆ ಪರ್ಯಾಪ್ತ ಯೌವನೆಯಾದ ಸೂರ್ಯೆಯ ಮೇಲೆ ಸೋಮನಪ್ರೀತಿ ಇರುವದನ್ನು ನೋಡಿ, ಅವಳ ತಂದೆಯು ಆಕೆಯನ್ನು ಸೋಮನಿಗೆ ಕೊಡಲು ನಿಶ್ಚಯಿಸಿದನು. ... *

ಇದರಲ್ಲಿ ಸೂರ್ಯೆಯು ಪತಿಯನ್ನು ಇಚ್ಛಿಸುವ ವಯಸ್ಸಿನವಳಿದ್ದಳೆಂಬುದು ಸ್ಪಷ್ಟವಿರುವದು. ... ... ... ... *

ತೈ. ಸಂಹಿ. ಕಾಂ. ೩ ಪ್ರ. ೩. ಅ. ೧೧.

ವಧೂರ್ಜಜಾನ ನವಗಜ್ಜನಿತ್ರೀ ।

ಇದರ ಭಾಷ್ಯಾರ್ಥವು:—ನೂತನ ವಿವಾಹಿತಳಾದ ವಧುವು, ಹೇಗೆ ಉತ್ತರೋತ್ತರವಾದ ಬಂದರ ಹಿಂದೊಂದು ಪೂಜೆಯನ್ನು ಹಡೆಯುವಳೋ, ಹಾಗೆ ವೃಷ್ಟಿಯು ಸೂರ್ಯನೊಡನೆ ಸಂಗತಳಾಗಿ ಹಡೆದಳು. ... ... ... *

ಇದರಲ್ಲಿ ವಧುವು ವಿವಾಹವಾದ ಕೂಡಲೇ ಸಂತತಿಯನ್ನು ಪಡೆಯಲಿಕ್ಕೆ ಯೋಗ್ಯಳು, ಅಂದರೆ ಪರ್ಯಾಪ್ತ ಯೌವನೆಯು ಇರಬೇಕೆಂದು ಹೇಳಿದೆ. ... *

ಋಗ್ವೇದ ಅ. ೮ ಅ. ೨ ಮತ್ತು ೧೧

ಕಾಮದ್ಯುವಂ ವಿಮದಾಯೋಹಥುರ್ಯುವಮ್ ॥

ಇದರ ಭಾಷ್ಯಾರ್ಥವು:—ಕಾಮೋದ್ದೀಪನವನ್ನು ಮಾಡುವ ವೇನರಾಜನಮಗಳನ್ನು ನೀವು ವಿಮದ ಋಷಿಗೆ ಕೊಟ್ಟರಿ. ... ... ... *

ಇದರಲ್ಲಿಯೂ ವೇನರಾಜನ ಮಗಳು ಪ್ರಾಯದವಳಿದ್ದಳೆಂದು ಹೇಳಲ್ಪಟ್ಟಿರುವವು.

ಋಗ್ವೇದ ಅಷ್ಟಕ. ೧ ಸೂ. ೬೬ ಕ್ರ. ೪

ಜಾರಃ ಕನೀನಾಂ ಪತಿರ್ಜನೀನಾಮ್ ।

ಸೋಮೋದದದ್ಗಂಧರ್ವಾಯ ಗಂಧರ್ವೋದದದಗ್ನಯೇ ।

ರಯಿಂ ಚ ಪುತ್ರಾಂಶ್ಚಾದಾ ದಗ್ನಿರ್ಮಹ್ಯಮಥೋ ಇಮಾನ್ ॥

ಇದರ ಭಾಷ್ಯಾರ್ಥವು:—ಪುರುಷ ಸಂಭೋಗೇಚ್ಛೆಯು ಹುಟ್ಟದ ಹುಡುಗಿಯು ಸೋಮನಿಗೆ ಪ್ರಾಪ್ತಳಾಗುತ್ತಾಳೆ. ಅವಳಿಗೆ ಸ್ವಲ್ಪ ಸಂಭೋಗೇಚ್ಛೆಯು ಹುಟ್ಟದ ಮೇಲೆ ಸೋಮನು ಅವಳನ್ನು ವಿಶ್ವಾವಸು ಗಂಧರ್ವನಿಗೆ ಕೊಡುತ್ತಾನೆ. ಆ ಗಂಧರ್ವನು ಹುಡುಗಿಯನ್ನು ವಿವಾಹಕಾಲದಲ್ಲಿ ಅಗ್ನಿಗೆ ಕೊಡುವನು. ಬಳಿಕ ಅಗ್ನಿಯು ಹುಡುಗಿಯನ್ನು ಧನಪುತ್ರರೊಡನೆ ಪತಿಗೆ ಕೊಡುತ್ತಾನೆ. ... ... ... *

ಇದರಲ್ಲಿ ಹುಡುಗಿಯು ವಿವಾಹ ಸಮಯದಲ್ಲಿ ಪುರುಷಸಂಭೋಗೇಚ್ಛೆಯು ಹುಟ್ಟದವಳಿರಬೇಕೆಂದು ಸ್ಪಷ್ಟವಿರುತ್ತದೆ. ... ... ... *

ಋ. ಮಂ. ೧೦ ಸೂತ್ರ ೮೫.

ಉದೀರ್ಷ್ವಾತೋ ವಿಶ್ವಾವಸೋ ನಮಸೇಳಾಮಹೇತ್ವಾ ।

ಅನ್ಯಾಮಿಚ್ಛ ಪ್ರಫರ್ವ್ಯಂ ಸಜಾಯಾಂ ಪತ್ಯಾಸೃಜ ॥

ಇದರರ್ಥವು:—ಎಲೈ ವಿಶ್ವಾವಸುವೇ, ಕನ್ಯಾಸ್ವಾಮಿಯಾದ ಗಂಧರ್ವನೇ, ಈ ಶಯನದಿಂದ ಏಳು. ನಿನ್ನನ್ನು ನಮಸ್ಕರಿಸಿ ನಾವು ಸ್ತುವಿಸುತ್ತೇವೆ. ಯಾವಳ ಶ್ರೋಣೀ ಭಾಗವು ದೊಡ್ಡದಾಗಿರುವದೋ ಅಂತಹ ಎರಡನೇ ಹುಡುಗಿಯ ಇಚ್ಛೆಯನ್ನು ಮಾಳು. ಮತ್ತು ನನ್ನನ್ನು (ಹೆಂಡತಿಯನ್ನು) ಪತಿಯೊಡನೆ ಸಂಸರ್ಗ ಮಾಡಗೊಡು. *

ಇದರಿಂದ ಇನ್ನೂ ಸಂಭೋಗೇಚ್ಛೆಯು ಹುಟ್ಟದ ಹುಡುಗಿಯ ಮೇಲೆ ಸೋಮನ ಅಧಿಕಾರವೂ, ಸ್ವಲ್ಪ ಸಂಭೋಗೇಚ್ಛೆಯು ಹುಟ್ಟಿದಂತಹ ಪ್ರೌಢ ಹುಡುಗಿಯಮೇಲೆ ಗಂಧರ್ವನ ಅಧಿಕಾರವೂ ಇರುವವೆಂದು ಸಿದ್ಧವಾಗುತ್ತದೆ. ಅರ್ಥಾತ್ ವಿವಾಹಕಾಲದಲ್ಲಿ ವಧುವು ಪರ್ಯಾಪ್ತಯೌವನೆ ಯಾಗಿರಬೇಕೆಂದು ಸಿದ್ಧವಾಯಿತು. ಹೀಗೆ ಅನೇಕ ಪ್ರಮಾಣಗಳಿಂದ ವಧುವು ವಿವಾಹಸಮಯದಲ್ಲಿ ಪರ್ಯಾಪ್ತಯೌವನೆಯೂ ವಿವಾಹವಾದ ಕೂಡಲೇ ಪ್ರಜಾ ಜನನಕ್ಕೆ ಸಮರ್ಥಳೂ ಇರಬೇಕೆಂದು ಸಿದ್ಧವಾಗುವದು. ಇಂದ ಮೇಲೆ ಶ್ರುತಿವಿಹಿತವಾದ ಸ್ತ್ರೀ ವಿವಾಹಕಾಲವು ಯಾವುದೆಂಬುದರ ನಿರ್ಣಯವಾದಂತಾಯಿತು. ಈ ಪ್ರಕಾರ ಪ್ರೌಢ ವಿವಾಹಕ್ಕೆ ವೇದಾಧಾರವು ದೊರೆತಮೇಲೆ ಯಾರೂ ಗುಣಗುಟ್ಟುವ ಕಾರಣವು ಉಳಿಯಲಿಲ್ಲ. ... *

ಇನ್ನು, ಕೆಲವರು ಶ್ರುತಿಗಳ ಅರ್ಥವು ಕಠಿಣವೆಂದು ಅಭಿಪ್ರಾಯ ಪಡುತ್ತಾರೆ. ಅವರ ಸಮಾಧಾನಾರ್ಥವಾಗಿ, ಆಶ್ವಲಾಯನಾದಿ ಸೂತ್ರಕಾರರ ಅಭಿಪ್ರಾಯವನ್ನು ತಿಳುಹಿಸುತ್ತೇನೆ. ಯಾಕೆಂದರೆ;—ಈ ಸೂತ್ರಕಾರರು ಶ್ರುತಿಗಳ ಅಭಿಪ್ರಾಯವನ್ನೂ ನಾವು ಹೇಗೆ ನಡೆಯ ಬೇಕೆಂಬುದನ್ನೂ ವಿಧಿನಿಷೇಧ ರೂಪಗಳಿಂದ ಆಜ್ಞಾಪಿಸುವ ಸಲುವಾಗಿ ಹುಟ್ಟಿರುತ್ತಾರೆ. ಸೂತ್ರಗಳಿಗೂ ಸ್ಮೃತಿಗಳಿಗೂ ವಿರೋಧವು ಬಂದ ಪಕ್ಷದಲ್ಲಿ ಸೂತ್ರಗಳ ಪ್ರಮಾಣವನ್ನೇ ಅಂಗೀಕರಿಸ ಬೇಕಾಗಿರುವದರಿಂದ, ಸೂತ್ರಕಾರರ ಅಭಿಪ್ರಾಯಗಳು ಮಹತ್ವವಾದವುಗಳಾಗಿರುತ್ತವೆ. ಆಶ್ವಲಾಯನ ಸೂತ್ರಗಳು ವಿವಾಹ ಸಂಬಂಧದಿಂದ ಹೀಗಿರುತ್ತವೆ.

ಆಶ್ವಲಾಯನ ಸೂತ್ರ.

ಉದಗಯನ ಆಪೂರ್ಯಮಾಣಪಕ್ಷೇ ಚೌಲಕರ್ಮೋಪನಯನ.
ಗೋದಾನ ವಿವಾಹಃ ।
ಸಾರ್ವಕಾಲಮಿತ್ಯೇಕೇ ವಿವಾಹಂ ।
ಬುದ್ಧಿಮತೇ ಕನ್ಯಾಂ ಪ್ರಯಚ್ಛೇತ್ ।
ಬುದ್ಧಿರೂಪ ಶೀಲಲಕ್ಷಣಸಂಪನ್ನಾಮುಪಯಚ್ಛೇತ್ ॥

ಇದರಲ್ಲಿ ವಧುವಿನ ಲಕ್ಷಣಗಳು ಹೇಳಲ್ಪಟ್ಟದ್ದು, ವಯಸ್ಸಿನ ಇಯತ್ತೆಯನ್ನು ಹೇಳಿರುವದಿಲ್ಲ. ಅಂದ ಮೇಲೆ ಬೇಕಾದ ವಯಸ್ಸಿನ ಸ್ತ್ರೀಯನ್ನು ಲಗ್ನವಾಗಲಿಕ್ಕೆ ಅಡ್ಡಿ ಇಲ್ಲವಾದಂತಾಯ್ತು. ಮುಂದೆ ವಿವಾಹವಾದ ಮೇಲೆ ಮೂರು, ಇಲ್ಲವೆ ಹನ್ನೆರಡು ವರುಷಗಳ ವರೆಗೆ ಬ್ರಹ್ಮಚರ್ಯವನ್ನು ಪಾಲಿಸ ಬೇಕೆಂದು ಹೇಳಲ್ಪಟ್ಟಿರುವದರಿಂದ ಅದರ ಮುಂದೆ ಸ್ತ್ರೀಸಮಾಗಮಕ್ಕೆ ಅಡ್ಡಿಯೆಂದು ಹೇಳಿದಂತಾಯ್ತು. ಅಂದಮೇಲೆ ಆಶ್ವಲಾಯನ ಮತದಿಂದ, ವಿವಾಹದಲ್ಲಿ ಋತುಮತಿಯಾದ ಕನ್ಯೆಯು ಸಹ ಪ್ರಶಸ್ತಳಾಗುತ್ತಾಳೆ. ಇಲ್ಲಿ ಆಶ್ವಲಾಯನನು ಚತುರ್ಥೀ ಕರ್ಮವನ್ನು ಹೇಳಿಲ್ಲ. ಆದರೆ ಸಾಂಖ್ಯಾಯನ ಸೂತ್ರದೊಳಗಿನ ವಿವಾಹ ವಿಷಯವಾಗಿರುವ ಕಾರಿಕೆಯು ಹೀಗಿರುವದು. ... ... *

,, ವಿವಾಹ ಉದಗಯನ ಆಪೂರ್ಯಮಾಣಪಕ್ಷೇ ಪುಣ್ಯಾಹೇ ।
ಕುಮಾರ್ಯ್ಯಾ ಪಾಣಿಂ ಗೃಹ್ಣೀಯಾತ್ ಯಾ ಲಕ್ಷಣಸಂಪನ್ನಾ ಸ್ಯಾತ್ ।
ತ್ರಿರಾತ್ರಂ ಬ್ರಹ್ಮಚರ್ಯ ಚರೆಯತಾಮ್ । ಅಥ ಚತುರ್ಥೀಕರ್ಮ ।
ತ್ರಿರಾತ್ರೇ ನಿವೃತ್ತೇ ಸ್ಥಾಲೀಪಾಕಸ್ಯ ಜುಹೋತಿ ॥ ಇತ್ಯಾದಿ ॥

ಇದರಲ್ಲಿ ಆಶ್ವಲಾಯನನು ಹೇಳದ ಚತುರ್ಥೀ ಕರ್ಮವನ್ನು ಸಾಂಖ್ಯಾಯನನು ಹೇಳುತ್ತಾನೆ. ಚತುರ್ಥೀಕರ್ಮದ ಉದ್ದೇಶವು ಸತೀಪತಿಗಳ ಸಮಾಗಮವಾಗಿ, ಅವಳು (ಸತಿಯು) ಪೂರ್ಣವಾಗಿ ಪತಿಯ ಅಧೀನವಾಗಬೇಕೆಂದಿರುವದು. ( ಚತುರ್ಥೀ ಹೋಮ ಮಂತ್ರೇಣ ತ್ವಙ್ಮಾಂಸ ಹೃದಯೇಂದ್ರಿಯೈಃ। ಭರ್ತ್ರಾಸಂಯುಜ್ಯತೇ ಪತ್ನೀ ತದ್ಗೋತ್ರಾ

ಸಾಭಸೇದಿತಿ ॥ ಇದರ ಅರ್ಥವೇನೆಂದರೆ:—ಚತುರ್ಥೀ ಹೋಮದಿಂದ ತ್ವಚೆ, ಮಾಂಸ, ಹೃದಯ, ಮತ್ತು ಇಂದ್ರಿಯಗಳಿಂದ ಪತ್ನಿಯು ಪತಿಯೊಡನೆ ಸಂಯೋಗ ಹೊಂದುತ್ತಾಳೆ ಆದರಿಂದ ಅವಳು ಪತಿಯ ಗೋತ್ರದಲ್ಲಿ ಕೂಡಿ ಹೋಗುವಳು. ಇದರಂತೆಯೇ ಪರಾಶರ ಸೂತ್ರವಿರುವದು. ಒಟ್ಟಿಗೆ ಸೂತ್ರಕಾರರ ಅಭಿಪ್ರಾಯವಾದರೂ ಸ್ತ್ರೀಯರ ವಿವಾಹಗಳು ಪ್ರೌಢವಯಸ್ಸಿನಲ್ಲಿಯೇ ಆಗಬೇಕೆಂದಿರುವದು. ಆಶ್ವಲಾಯನಾದಿ ಸೂತ್ರಕಾರರು ವಿವಾಹ ಕಾಲದಲ್ಲಿ ಕನ್ಯೆಯು ಎಷ್ಟು ವಯಸ್ಸಿನವಳಿರಬೇಕೆಂಬುದನ್ನು ಸ್ಪಷ್ಟವಾಗಿ ಹೇಳಿರುವದಿಲ್ಲ, ಆದುದರಿಂದ ಇನ್ನು ಸ್ಮೃತಿಕಾರರ ಅಭಿಪ್ರಾಯವೇನಿರುವದೆಂಬುದನ್ನು ನೋಡುವಾ:—

ಎಲ್ಲ ಸ್ಮೃತಿಗಳಲ್ಲಿ ಮನುಸ್ಮೃತಿಯು ಪ್ರಾಚೀನವಿರುವದು. ಈ ಸ್ಮೃತಿಯ ಅಭಿಪ್ರಾಯವು ಸ್ತ್ರೀಯರ ಪ್ರೌಢವಿವಾಹಕ್ಕೆ ಅನುಕೂಲವೇ ಇರುವದು. ಹೇಗೆಂದರೆ, ಮನುವು ,, ತ್ರಿಂಶದ್ವರ್ಷೋ ವಹೇದ್ಭಾರ್ಯಾಂ ಹೃದ್ಯಾಂ ದ್ವಾದಶವಾರ್ಷಿಕೀಂ ,, ಅಂದರೆ ಮೂವತ್ತು ವರ್ಷದ ವರನು ಹನ್ನೆರಡು ವರ್ಷದ ಸುಂದರಳಾದ ಹೆಂಡತಿಯನ್ನಾಗಬೇಕು ಎಂದು ಹೇಳಿ, ಮುಂದೆ ಧರ್ಮಹಾನಿಯಾಗುತ್ತಿದ್ದರೆ, ೨೪ ವರ್ಷದ ವರನು, ೮ ವರ್ಷದ ಕನ್ನಿಕೆಯನ್ನಾಗಬೇಕು ಎಂದು ಹೇಳುತ್ತಾನೆ. ಇದರಲ್ಲಿ ,ಹೃದ್ಯಾಂ, ಎಂಬ ಪದಪ್ರಯೋಗವಿರುವದರಿಂದ, ಮನುವಿನ ಅಭಿಪ್ರಾಯವು ಹನ್ನೆರಡು ವರ್ಷದ ವಯಸ್ಸಿನ ಕನ್ಯೆಯ ವಿವಾಹವು ಉತ್ತಮವಾದುದೆಂದು ಇದ್ದಂತೆ ಸ್ಪಷ್ಟವಾಗಿ ತೋರುತ್ತದೆ. ಪ್ರಯೋಗ ಪಾರಿಜಾತದಲ್ಲಿ ಆಶ್ವಲಾಯನೋಕ್ತವೆಂದು ,, ಊರ್ಧ್ವಂ ದಶಾಬ್ದಾತ್ ಯಾ ಕನ್ಯಾಪ್ರಾಕ್ ರಜೋದರ್ಶನಾತ್ತು ಸಾ । ಗಾಂಧಾರೀ ಸ್ಯಾತ್ಸಮುದ್ವಾಹ್ಯಾ ಚಿರಂ ಜೀವಿತುಮಿಚ್ಛತಾ॥ ,, ಎಂಬ ವಚನವುಂಟು. ಇದರ ಅರ್ಥವು, ಹತ್ತು ವರ್ಷದ ಮೇಲೆ, ರಜೋದರ್ಶನವಾಗುವವರೆಗೆ ಗಾಂಧಾರೀ ಎಂಬ ಸಂಜ್ಞೆಯು ಹುಡುಗಿಗೆ ಇರುವದು. ದೀರ್ಘಾಯುಷ್ಯವನ್ನು ಬಯಸುವವನು, ಅವಳೊಡನೆ ವಿವಾಹವನ್ನು ಮಾಡಬೇಕು, ಎಂದು ಇರುವದು. ಮತ್ತು ಸಂವರ್ತಸ್ಮೃತಿಯಲ್ಲಿ ,, ರೋಮದರ್ಶನ ಸಂಪ್ರಾಪ್ತೇ ಸೋಮೋಭುಂಕ್ತೇಥಕನ್ಯಕಾಂ।ರಜೋದೃಷ್ಟ್ವಾತುಗಂಧರ್ವಃ ಕುಚೌದೃಷ್ಟ್ವಾತು ಪಾವಕಃ। ,, ಎಂದುಕ್ತವಾದ ವಚನವನ್ನೂ ಋಗ್ವೇದ ವಚನವನ್ನೂ ಹೋಲಿಸಿ ನೋಡಿದರೆ, ವಿವಾಹ ಪೂರ್ವದಲ್ಲಿ ಕನ್ಯೆಗೆ ಸೋಮ, ಗಂಧರ್ವ, ವಹ್ನಿಗಳೆಂಬ ಮೂವ್ವರು ಪತಿಗಳಾಗುತ್ತಾರೆ. ಅನಂತರದಲ್ಲಿ ಕನ್ನೆಯನ್ನು ವರನಿಗೆ ಕೊಟ್ಟು ಮದುವೆ ಮಾಡಬೇಕಾದುದರಿಂದ, ವಿವಾಹಕಾಲದಲ್ಲಿ ಕನ್ಯೆಯು ಪ್ರೌಢ ವಯಸ್ಕಳಿರಬೇಕೆಂದು ಹೇಳಿದಂತಾಗುವದು. ಮತ್ತು ಮರೀಚೀ ವಚನದಲ್ಲಿ ,, ಮಗಳನ್ನು ಎಂಟು ವರ್ಷಕ್ಕೆ ದಾನಮಾಡಿದವನಿಗೆ ಸ್ವರ್ಗಪ್ರಾಪ್ತಿಯೂ, ಒಂಭತ್ತು ವರ್ಷಕ್ಕೆ ದಾನಮಾಡಿದವನಿಗೆ ವೈಕುಂಠವೂ, ಹತ್ತು ವರ್ಷದಿಂದ ಋತುಮತಿಯಾಗುವವರೆಗೆ ದಾನಮಾಡಿದವನಿಗೆ ಬ್ರಹ್ಮಲೋಕವೂ ಪ್ರಾಪ್ತವಾಗುವದೆಂದು ಹೇಳಿರುವದರಿಂದ, ಎಂಟು ವರ್ಷದಿಂದ ಋತುಮತಿ

ಡೂಗುಹಪವರೆಗೆ ದಾನಮಾಡಿದವನಿಗೆ ಉತ್ತರೋತ್ತರವಾಗಿ ಹೆಚ್ಚುಹೆಚ್ಚು ಫಲ ದೊರೆಯು ವದೆಂದು ಸ್ಪಷ್ಟವಾಗುತ್ತದೆ. ಅತ್ರಿಯ ಅಭಿಪ್ರಾಯವು ಇರುವದೇನೆಂದರೆ, ,, ವಿವಾಹವು ನಡೆದಿರುವಾಗ್ಗೆ ಕನ್ಯೆಯು ಋತುಮತಿಯಾದರೆ, ವಿಧಿಪೂರ್ವಕ ಸ್ನಾನಮಾಡಿಸಿ, ಎರಡನೇ ವಸ್ತ್ರಗಳನ್ನು ಉಡಿಸಿ, ಯುಂಜಾನೇತಿ ಮಂತ್ರದಿಂದ ಆಹುತಿಯನ್ನು ಕೊಟ್ಟು, ಮುಂದಿನ ವಿವಾಹಕರ್ಮವನ್ನು ನಡೆಯಿಸಬೇಕು. ,,ಅತ್ರಿಯು ಈ ಸ್ಥಿತಿಯಲ್ಲಿ ತಂದೆ, ಕನ್ಯೆ ಅಥವಾ ವರ ಇವರಾರಿಗೂ ಪ್ರಾಯಶ್ಚಿತ್ತವನ್ನು ಹೇಳುವದಿಲ್ಲ. ಇವರೆಲ್ಲರ ಅಭಿಪ್ರಾಯವು ವಿವಾಹಕಾಲದಲ್ಲಿ ಸ್ತ್ರೀಯು ಪ್ರೌಢವಯಸ್ಸಿನವಳಿರ ಬೇಕೆಂದು ಇರುವದು. ಮುಂದೆ ಮನುವು ಹೇಳುವದೇನಂದರೆ;—,, ತ್ರೀಣಿ ವರ್ಷಾಣ್ಯುದೀಕ್ಷೇತ ಕುಮಾರ್ಯೃತುಮತೀಸತೀ । ಊರ್ಧ್ವಂತು ಕಾಲಾದೇತಸ್ಮಾದ್ವಿಂದೇತ ಸದೃಶಂಪತಿಂ ॥ ,, ಅಂದರೆ ಋತುಮತಿ ಯಾದ ಮೇಲೆ ಮೂರುವರ್ಷಗಳ ವರೆಗೆ ತಂದೆಯು ತನ್ನನ್ನು ದಾನಮಾಡುವ ನಿರೀಕ್ಷಣೆಯನ್ನು ಮಾಡಿ, ಬಳಿಕ ತಾನೇ ಸದೃಶನಾದ ಪತಿಯನ್ನು ಲಗ್ನವಾಗಬೇಕು. ಈ ವಚನದಿಂದ ತಂದೆಗೆ ಕನ್ಯೆಯವಿವಾಹವನ್ನು ಅವಳು ಋತುಮತಿಯಾದ ಮೂರುವರ್ಷಗಳವರೆಗೆ ಮಾಡುವ ಅಧಿಕಾರ ವಿರುವದೆಂದೂ, ಅನಂತರದಲ್ಲಿ ಕನ್ಯೆಯು ತಾನೇ ತನ್ನ ವಿವಾಹವನ್ನು ಮಾಡಿಕೊಳ್ಳಬೇಕೆಂದೂ ಸ್ಪಷ್ಟವಾಗುತ್ತದೆ. ಮನುಸ್ಮೃತಿಯು ಮಿಕ್ಕ ಎಲ್ಲ ಸ್ಮೃತಿಗಳಿಗಿಂತ ಶ್ರೇಷ್ಠ ವಿರುವದರಿಂದ ಆತನ ಅಭಿಪ್ರಾಯದಂತೆ ತಂದೆಯು ಕನ್ಯೆಯ ವಿವಾಹವನ್ನು ಅವಳ ಹನ್ನೆರಡುವರ್ಷದ ವಯಸ್ಸಿನಿಂದ ಅವಳು ಋತುಮತಿಯಾದ ಮೇಲೆ ಮೂರುವರ್ಷಗಳ ವರೆಗೆ ಮಾಡಲಿಕ್ಕೆ ಏನೂ ಆತಂಕವಿರುವದಿಲ್ಲ. ಋತುಮತಿಯಾದ ಮೇಲೆ ಮೂರು ವರ್ಷಗಳು ತಂದೆಯು ವಿವಾಹವನ್ನು ಮಾಡದಿದ್ದ ಪಕ್ಷದಲ್ಲಿ ಕನ್ಯೆಯೇ ತನ್ನ ವಿವಾಹವನ್ನು ಮಾಡಿಕೊಳ್ಳಬೇಕು. ಹೀಗೆ ಮಾಡಿದಪಕ್ಷದಲ್ಲಿ ಕನ್ಯೆಗೂ ಪತಿಗೂ ಯಾವ ದೋಷವೂ ಇರುವದಿಲ್ಲ. ಹೀಗೆ ಸ್ಮೃತಿಗಳ ಅಭಿಪ್ರಾಯವು ಸ್ತ್ರೀಯರ ಪ್ರೌಢವಿವಾಹಕ್ಕೆಸಮ್ಮತವೇ ಇರುವದೆಂದು ಸಿದ್ಧಾಂತವಾಗುತ್ತದೆ. ... ... ... ... *

ಸದಾಚಾರವು, ಮೂರನೇ ಧರ್ಮಮೂಲವು. ಇದರ ವಿಷಯಕ್ಕೆ ಇನ್ನು ವಿಚಾರವನ್ನು ಮಾಡುವಾ:—ಶ್ರುತಿಸ್ಮೃತಿಗಳ ಆಧಾರಗಳ ಮುಂದೆ , ಸದಾಚಾರದ , ಮಹತ್ವವಿಲ್ಲವಾದರೂ ಶ್ರುತಿಸ್ಮೃತಿ ವಿಹಿತ ವಿವಾಹಕಾಲದಂತೆ ಪುರಾಣಗಳಲ್ಲಿ ಉದಾಹರಣೆಗಳು ಸಿಕ್ಕರೆ ಮತ್ತಿಷ್ಟು ಉತ್ತಮವಲ್ಲವೇ ! ಭಾರತದಲ್ಲಿ ಅಪ್ರೌಢ ಸ್ತ್ರೀಯರ ವಿವಾಹವಾದ ವಿಷಯದಲ್ಲಿ ಒಂದೂ ಉದಾಹರಣೆಯು ದೊರೆಯುವದಿಲ್ಲ. ದ್ರೌಪದಿಯು ವಿವಾಹ ಕಾಲದಲ್ಲಿ ಪ್ರೌಢವಯಸ್ಕಳೇ ಇದ್ದಳೆಂದು, ಅವಳ ಅವಯವಗಳ ವರ್ಣನೆಯಿಂದ ತಾನೇ ಗೊತ್ತಾಗುವದು. ಕೇವಲ ಕ್ಷತ್ರಿಯರಲ್ಲಿಯೇ ಸ್ತ್ರೀಯರ ಪ್ರೌಢವಿವಾಹಗಳಾದ ಉದಾಹರಣೆಗಳು ಭಾರತದಲ್ಲಿ ಇರುತ್ತವೆಂದು ತಾವು ತಿಳಿಯಬಾರದು. ಶುಕ್ರಕನ್ಯೆಯಾದ ದೇವಯಾನಿಯು ಬ್ರಾಹ್ಮಣ ವರ್ಣದವಳಿದ್ದು, ಕಚನು ಗುರುಗೃಹದಲ್ಲಿರುವಾಗ ಅವಳನ್ನು ಪ್ರಸನ್ನಚಿತ್ತ

ಮನ್ನಾಗಿಸಲಿಕ್ಕೆ ಅವನು ಯತ್ನಿಸುತ್ತಿದ್ದನೆಂದು ಭಾರತದಲ್ಲಿ ಹೇಳಿರುವದು. (ಸುಶೀಲಯಾ ಸ್ವದೇವಯಾನೀಂ ಕನ್ಯಾಂ ಸಂಪ್ರಾಪ್ತಯೌವನಾಮ್। ಪುಷ್ಪೈಃ ಫಲೈಃ ಪ್ರೇಷಣೈಶ್ಚ ತೋಷಯಾಮಾಸ । ಭಾರತ॥ ) ಇದರಲ್ಲಿ ‹ ಸಂಪ್ರಾಪ್ತಯೌವನಾಮ್, ಎಂದು ಹೇಳಲ್ಪಟ್ಟದೆ, ಇದನ್ನು ಚೆನ್ನಾಗಿ ಧ್ಯಾನದಲ್ಲಿಡಬೇಕು. ‹‹ ಸ ವೈ ದೀರ್ಘತಮಾ ನಾಮ ಶಾಪಾ ದೃಷಿರಜಾಯತ। ಜಾತ್ಯಂಧೋ ವೇದವಿತ್ಪ್ರಾಜ್ಞಃ ಪತ್ನೀಂ ಲೇಭೇಸವಿದ್ಯಯಾ । ತರುಣೀಂ ರೂಪ ಸಂಪನ್ನಾಂ ಪ್ರದ್ವೇಷೀಂ ನಾಮ ಬ್ರಾಹ್ಮಣೀಂ। ,, ಇದರಲ್ಲಿ ದೀರ್ಘತಮಾಖ್ಯಋಷಿಗೆ ಪ್ರದ್ವೇಷೀ ಎಂಬ ಬ್ರಾಹ್ಮಣವರ್ಣದ ತರುಣಪತ್ನಿಯು ದೊರೆದಳು, ಎಂದು ವರ್ಣಿಸಲ್ಪಟ್ಟಿರುವದು. ಒಬ್ಬ ಬ್ರಾಹ್ಮಣ ಸ್ತ್ರೀಯ ವಿವಾಹವು ವೃದ್ಧಾಪ್ಯದಲ್ಲಿಯಾದ ಸಂಗತಿಯು ಭಾರತದಲ್ಲಿ ಉಕ್ತವಾಗಿರುವದು. ಇದರಂತೆ ಸ್ಕಂದ, ಮಾರ್ಕಂಡೇಯ, ಪದ್ಮ ಮೊದಲಾದ ಪುರಾಣಗ್ರಂಥಗಳಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯ ಸಂಪ್ರಾಪ್ತ ಯೌವನಾ ಸ್ತ್ರೀಯರ ವಿವಾಹದ ಉದಾಹರಣೆಗಳು ಹೇರಳವಾಗಿರುತ್ತವೆ. ಕಾಲಾವಕಾಶವಿಲ್ಲದುದಕ್ಕೆ ಹೆಚ್ಚುವಿಸ್ತಾರವನ್ನು ಮಾಡುವಂತಿಲ್ಲವಾಗಿದೆ. ಇಂದಿಗೂ ಉತ್ತರ ಹಿಂದುಸ್ಥಾನದಲ್ಲಿ ಕನೋಜ ಮುಂತಾದ ಬ್ರಾಹ್ಮಣರಲ್ಲಿ ಪ್ರೌಢವಿವಾಹಗಳಾಗುತ್ತವೆ; ರಜಪೂತಾದಿ ಕ್ಷತ್ರಿಯರಲ್ಲಿಯೂ ಪ್ರೌಢವಿವಾಹಗಳಾಗುತ್ತಿರುವವು. ಇನ್ನು, ನನ್ನ ಪ್ರಿಯ ಪ್ರತಿನಿಧಿಗಳೇ, ನಮ್ಮ ವೀರಶೈವಮತದ ಪುರಾಣಗಳಲ್ಲಿ ಪ್ರೌಢವಿವಾಹಗಳು ಆಗುತ್ತಿದ್ದವೋ ಇಲ್ಲವೋ ಎಂಬುದರ ವಿಷಯವಾಗಿ ವಿಚಾರವನ್ನು ಮಾಡುವ ಬನ್ನಿ, ಪ್ರೌಢವಿವಾಹದ ಮೊದಲನೇ ಉದಾಹರಣವು ಗಿರಿಸಾರ್ವಭೌಮನ ಮಗಳಾದ ಪಾರ್ವತೀ ದೇವಿಯದಿರುವದು. ಇವಳು ಎಲ್ಲ ದೇವತೆಗಳನ್ನು ತಿರಸ್ಕರಿಸಿ, ಶ್ರೀ ಶಂಕರನನ್ನೇ ವರಿಸುವ ಸಲುವಾಗಿ ಉಗ್ರತಪಸ್ಸನ್ನು ಮಾಡಿ, ಅವನನ್ನು ಪ್ರಸನ್ನೀಕರಿಸಿ ಮದುವೆಯಾದಳು. ಇವಳು ತನಗೆ ಅನುರೂಪನಾದ ವರನನ್ನು ಪ್ರಯತ್ನದಿಂದ ಪಡೆದುದರಿಂದ, ಪ್ರೌಢಯಿರಲಿಕ್ಕೇ ಬೇಕು. ಇದಕ್ಕೆ ಸಂಶಯವೇ ಬೇಡ. ಹರಿಹರದೇವ ವಿರಚಿತ ‹‹ ಗಿರಿಜಾಕಲ್ಯಾಣ ,, ದ ಒಂಭತ್ತನೇ ಆಶ್ವಾಸದಲ್ಲಿ, ಶ್ರೀ ಶಂಕರನು ವಟುವೇಷದಿಂ ಬಂದು ಪಾರ್ವತೀ ದೇವಿಯನ್ನು ಕಂಡು, ಆವಳೊಡನೆ ನುಡಿದುದನ್ನು ಕವಿಯು ವರ್ಣಿಸುತ್ತಾನೇನಂದರೆ:— ... ... ... *

ಎಳಲತೆಯಂ ರೋಡಾಡುವ । ನೆಳತೋಳ್ ಕೋಕಂಗಳಂ ವಿಭಂಗಿಪ ಕುಚಮಂ।
ಡಲಮುಸಿರಲುಪವನಪಥದ ತುಳಮಧ್ಯಂ ತಪದ ಕೋಟಲೆಗೆ ಸಂಗಡಮೇ ॥ ೧೮೪
ವನಜಾನನೆ ಯೇರುಂಜವ್ವನದೊಳ್ ವನದೊಳ್ ನಿರೋಧದೊಳ್ ಪೇಳಂತಾ ।
ವನನುದ್ದೇಶಿಸಿ ತಪಮಿದ ನೆನೆಗರಿಪಿದೊಡೇನೊ ದೋಷವೇ ಮೃಗನಯನೇ ॥೧೮೫

ಈ ಎರಡೂ ಕಂದಪದ್ಯಗಳಲ್ಲಿ ಪಾರ್ವತೀದೇವಿಯು ತಾರುಣ್ಯ ಭರದಲ್ಲಿದ್ದ ಭಾವು ಪ್ರದರ್ಶಿತವಾಗಿದೆ. ೧೮೪ ನೇ ಕಂದದಲ್ಲಿ ‹‹ ಕೋಕಂಗಳಂ ವಿಭಂಗಿಪಕುಚಮಂಡಲಂ

ಎಂದು ಇರುವದು. ಇದು ತಾರುಣ್ಯದಲಕ್ಷಣವು. ಪಾರ್ವತಿಯು ,, ಪಿರುಂಜವ್ವನೆ ,, ಇದ್ದ ಳೆಂದು ೧೦೩ ನೇ ಪದ್ಯದಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ. ಹತ್ತನೇ ಆಶ್ವಾಸದಲ್ಲಿ:—

ಉಡುಪತಿಬಿಂಬವಮಂ ನೆಗುವ ನಿರ್ಮಳವಕ್ತ್ರಮ ನಾಸೆವಿಂಕ್ಕು ಧೀಂ ।
ಕಿಡುವ ಕಟಾಕ್ಷಮಾಲೆಗಳನುನ್ನತಪೀನ ಪಯೋಧರಂಗಳಂ ॥
ಮೃಡನೊಸೆದೀಕ್ಷಿಸುತ್ತೆ ನಿಲಲಾರದಪರ್ಣೆಯ ಪುಣ್ಯಹಸ್ತಮಂ ।
ಪಿಡಿದನಶೇಷದೇವ ಕುಳಮೌಳಿ ವಿರಾಜಿತಪಾದ ಪಂಕಜಂ ॥೪॥

ಎಂದರೆ, ಸರ್ವದೇವತೆಗಳಿಂದ ನಮಸ್ಕರಿಸಲ್ಪಡುವ ಶಂಕರನು, ಪಾರ್ವತಿಯ ಚಂದ್ರಬಿಂಬವನ್ನು ಧಿಕ್ಕರಿಸುವ ಮುಖವನ್ನೂ, ಮಿಗಿಲು ಆಸೆಯಿಂದ ಧೀಂಕಿಡುವ ಕಟಾಕ್ಷಮಾಲೆಯನ್ನೂ, ದೊಡ್ಡವೂ ಪುಷ್ಟವೂ ಆದ ಸ್ತನಗಳನ್ನೂ, ಬಲ್ಮೆಯಿಂದ ನೋಡಿ ಮನಸ್ಸು ನಿಲ್ಲಲಾರದೆ ಅವಳ ಪುಣ್ಯಹಸ್ತವನ್ನು ಹಿಡಿದನು ಎಂಬ ವರ್ಣನೆಯಿರುವದರಿಂದ ಪಾರ್ವತೀ ದೇವಿಯು ಮದುವೆಯ ಕಾಲದಲ್ಲಿ ಬಳ್ಕೀ ಪ್ರಾಯದವಳಿದ್ದಳೆಂದು ತಾನೇ ಸ್ಪಷ್ಟವಾಗುತ್ತದೆ. ಶ್ರೀ ಷಡಕ್ಷರಿ ಕವಿ ರಚಿತ ,ರಾಜಶೇಖರ ವಿಳಾಸಂ, ಎಂಬ ಗ್ರಂಥದ ಎಂಟನೇ ಆಶ್ವಾಸದಲ್ಲಿ, ಸರ್ವಮಂಗಳಾದೇವಿಯು ವಿವಾಹಮಂಟಪದಲ್ಲಿ ಬಂದಕಾಲಕ್ಕೆ.

,, ಸುತ್ತಿ ತಳ್ತ ಸುದತೀಜನೇಕ್ಷಣೋ ।
ದಾತ್ತಕಾಂತಿನವದುಗ್ಧವಾರ್ಧಿಯಂ ।
ತೆತ್ತಮುರ್ವೆ ಸಿರಿಯಲ್ಲಿ ಬರ್ಪವೊಲ್ ।
ವೃತ್ತಪೀನಕುಚೆ ಬರ್ಪಳೊಪ್ಪಿದಳ್ ॥೫೩॥ ,,

ಎಂದು ವರ್ಣಿಸಲ್ಪಟ್ಟಿರುವದು. ಇದರಲ್ಲಿ ವಿವಾಹ ಕಾಲದಲ್ಲಿ ವಧುವಾದ ಸರ್ವಮಂಗಳೆಯು ,ವೃತ್ತಪೀನಕುಚೆ, ಎಂದರೆ, ವರ್ತುಲವೂ ಪುಷ್ಟವೂ ಉಳ್ಳ ಕುಚಗಳುಳ್ಳವಳಿದ್ದಳೆಂದು ಹೇಳಿರುವದರಿಂದ, ಅವಳು ಪ್ರೌಢಳೂ ತರುಣಿಯೂ ಇದ್ದಳೆಂಬುದರಲ್ಲಿ ಸಂಶಯವೇ ಇಲ್ಲ. ಮತ್ತು ಅದೇ ಆಶ್ವಾಸದಲ್ಲಿ ವಿವಾಹವಾದ ಮೇಲೆ ಸರ್ವಮಂಗಳಾ ದೇವಿಯು ಶಯ್ಯಾಗೃಹದಲ್ಲಿ ಬಂದಕಾಲದ ವರ್ಣನೆ ಹೇಗಿರುವದೆಂದರೆ;—

,, ಇಂತೆಳ್ತಂದ ಸರ್ವಮಂಗಳಾ ದೇವಿಯೊಡನೆ ಕಳಾವಿದೆಯರಾದ ಕೆಳದಿಯರೊಡನೆಳ್ತಂ ದತಿಶಯಪ್ರಮೋದದಿನಾ ಕುವರಿಯ ನಾಯುಮರಾಜನ ಕೆಲದೊಳ್ ಕುಳ್ಳಿರಿಸಿ ಸರಸಾಲೋಕನದಿ ನವಲೋಕಿಸಿ ತಂಗಿವಲ್ಲಭಂಗೆ ತಾಂಬೂಲಂ ಗುಡುವದೆಂದು ಪೇಳ್ದೊಂದೊಂದು ನೆವದಿ ನೆಲ್ಲರ್ಮೆಲ್ಲ ಮೆಲ್ಲನೆ ತೊಲಗಲೊಡನೆ ಚಲ್ಲದಿಂ ನೆಲ್ಲಳ ಲಜ್ಜಾನತಮಾದ ನಗೆಮೊಗಮಂ ಸಂದಣಿಪ ಕಟಾಕ್ಷದಿ ನಡರೆನೋಡಿ ಕಾಮಕೇಳಿಗೆ ಮನೆಂದಂಪು ,,

ಇತ್ಯಾದಿ ಇದರ ಅರ್ಥವನ್ನು ಹೇಳುವಕಾರಣವಿಲ್ಲ. ತಾತ್ಪರ್ಯವೇನೆಂದರೆ:—ಸರ್ವಮಂಗಳೆಯು ವಿವಾಹಕಾಲದಲ್ಲಿ ಪತಿ ಸಮಾಗಮಕ್ಕೆ ಯೋಗ್ಯವಾದ ವಯಸ್ಸುಳ್ಳವಳಿದ್ದಳು. ಮತ್ತು, ಶ್ರೀಮದ್ಭವಿಷ್ಯೋತ್ತರಪುರಾಣ ದೊಳಗಿನ ಪ್ರಭುಲಿಂಗಲೀಲೆಯ ದಶಮೋಧ್ಯಾಯದಲ್ಲಿ ಉಡುತಡಿಯ ಗ್ರಾಮದ ವಿಮಲ, ಮತ್ತು ಸುಮತಿಗಳೆಂಬ ದಂಪತಿಯ ಉದರದಲ್ಲಿ ಹುಟ್ಟಿದ ಅಕ್ಕಮಹಾದೇವಿಯು ಉಪವರಳಾದವಿಷಯವು ಬರೆದಿರುವದು ಅದೇನೆಂದರೆ:—

"ಯೌವನೇನ ಪಿತರೌ ಜಿತರಂಭಾಂ ತಾಮವೇಕ್ಷ್ಯ ತನಯಾಂ ಪತಿರಸ್ಯಾಃ ।
ರೂಪಶೀಲಸುಗುಣೈರನುರೂಪಂ ಕೋನುವೇತಿ ಹೃದಿ ಚಿಂತಯತಃ ಸ್ಮ ॥೭

ಇದರ ಅರ್ಥವು:—ಅವಳ ತಾಯಿತಂದೆಗಳು ರಂಭೆಯನ್ನು ಸೋಲಿಸುವ ಯೌವನೆಯಾದ ಮಗಳನ್ನು ನೋಡಿ, ಅವಳಿಗೆ ಅನುರೂಪನಾದ ರೂಪ, ಗುಣ, ಶೀಲಗಳುಳ್ಳ ಪತಿಯು ಹೇಗೆ ದೊರೆಯುವನೆಂದು ಚಿಂತಿಸುತ್ತಿರುವರು. ಇದೇ ಅರ್ಥದ ವರ್ಣನೆಯು ಕನ್ನಡ ಪ್ರಭುಲಿಂಗಲೀಲೆಯ ಹತ್ತನೇ ಗತಿಯಲ್ಲಿ ಇರುವದು. ಹೇಗೆಂದರೆ;—

"ಇತ್ತಲೀ ಮಹದೇವಿ ಮಿಗೆ ಬೆಳೆ ।
ಯುತ್ತಲಿರ್ದಳು ಜವ್ವನದ ಕಳೆ ।
ಯೊತ್ತಿಭರದಲಿ ಪುಟವನಿಕ್ಕಿದ ಮಿಸುನಿಯಂದದಲಿ ॥ ,,

"ತುಂಬಿ ಲಿಂಗದ ನಿಷ್ಠೆಯೊಡನೆ ನಿ ।
ತಂಬ ಮೊಲೆ ಮುಡಿ ಹಚ್ಚಿ ಬೆಳೆದವು ।
ಶಂಭುವಿನ ಸತ್ಕರ್ಮ ಭಕ್ತಿ ಜ್ಞಾನ ವೆಂಬಂತೆ ॥ ,,

ಇದರಲ್ಲಿ ಹೇಳಿದಂತೆ ಅಕ್ಕಮಹದೇವಿಯು ತಾರುಣ್ಯವನ್ನು ಹೊಂದಿದ ಬಳಿಕ ಅವಳ ತಾಯಿತಂದೆಗಳು, ಅವಳ ವಿವಾಹವನ್ನು ಮಾಡಲಿಚ್ಛಿಸಿದರೆಂದ ಮೇಲೆ, ಹನ್ನೆರಡನೇ ಶತಮಾನದಲ್ಲಿ ಪ್ರೌಢ ಸ್ತ್ರೀಯರ ವಿವಾಹಗಳಾಗುತ್ತಿದ್ದವೆಂದು ಸಿದ್ಧವಾಗುತ್ತದೆ.

ಸಭ್ಯಗೃಹಸ್ಥರೇ ಹೀಗೆ ಎಷ್ಟೋ ಉದಾಹರಣೆಗಳನ್ನು, ವೀರಶೈವರಲ್ಲಿ ಪ್ರೌಢ ವಿವಾಹಗಳಾಗುತ್ತಿದ್ದ ವಿಷಯವಾಗಿ, ಕೊಡಬಹುದು. ಈಗ ಕೂಡ ಮೈಸೂರು, ಬೆಂಗಳೂರು, ಬಳ್ಳಾರಿ, ದಾವಣಗೇರಿ, ಹಾವೇರಿ ಮೊದಲಾದ ಪ್ರಾಂತಗಳಲ್ಲಿ ಸ್ತ್ರೀಯರ ಪ್ರೌಢ ವಿವಾಹಗಳಾಗುತ್ತವೆ. ಪುರುಷರು ಇಂತಿಷ್ಟು ವಯಸ್ಸಿನೊಳಗೆ ವಿವಾಹವನ್ನು ಮಾಡಿಕೊಳ್ಳಲೇ ಬೇಕೆಂಬ ಕಟ್ಟಳೆ ಇರುವದಿಲ್ಲ. ಆದುದರಿಂದ ಅವರನ್ನು ಕುರಿತು ಚರ್ಚಿಸದೆ ಸ್ತ್ರೀಯರ ವಿಷಯವಾಗಿಯೇ ಹೆಚ್ಚು ಚರ್ಚಿಸಿದ್ದೇನೆ. ... ... *

ನನ್ನ ಪ್ರಿಯಗುರುಗಳೇ ಬಾಂಧವರೇ, ಈ ಹೊತ್ತಿನವರೆಗೆ ಧರ್ಮಶಾಸ್ತ್ರದ ದೃಷ್ಟಿಯಿಂದ ಪ್ರೌಢವಿವಾಹದ ಸಮರ್ಪಕತೆಯನ್ನು ತಮಗೆ ಅರಿಕೆಮಾಡಿದ್ದೇನೆ. ಶೃತಿ, ಸ್ಮೃತಿ ಪುರಾಣಾದಿ ಧರ್ಮಮೂಲಗಳ ಆಧಾರಗಳನ್ನು ನನಗೆ ತಿಳಿದ ಮಟ್ಟಿಗೆ ತೋರಿಸಿರುತ್ತೇನೆ. ಅವುಗಳಿಂದ ತಮ್ಮಸಂಶಯಗಳು ಪರಿಹಾರವಾಗಿರ ಬಹುದೆಂದು ನಾನು ನಂಬುತ್ತೇನೆ.

ಇನ್ನು ವೃದ್ಧವಿವಾಹಗಳಿಂದಾಗುವ ಹಾನಿಗಳವಿಷಯವಾಗಿ ಮಾತಾಡಲಿಕ್ಕೆ ನನಗೆ ಅವಕಾಶವುಳಿಯಲಿಲ್ಲ. ಆದರೂ ವೃದ್ಧವಿವಾಹದ ಪರಿಣಾಮಗಳು ಬಹುಕೆಡಕಾಗುತ್ತವೆಂಬ ವಿಷಯವನ್ನು ತಾವೆಲ್ಲರು ಬಲ್ಲವರೇ ಇರುವಿರಿ. ಅವುಗಳನ್ನು ಸರ್ವಥಾ ನಿಲ್ಲಿಸಿ ಬಿಡಲಿಕ್ಕೆ ತಾವು ಯತ್ನಮಾಡಬೇಕೆಂದು ಬಿನ್ನವಿಸುತ್ತೇನೆ. ... ... *

ಮಹಾಶಯರೇ, ಇಲ್ಲಿಗೆ ನನ್ನ ಭಾಷಣವು ಮುಗಿಯಿತು. ಈ ಹೊತ್ತಿನ ವರೆಗೆ ಮಾಡಿದ ವಿವೇಚನೆಯನ್ನು ಲಕ್ಷಕ್ಕೆತಂದು, ಬಾಲ್ಯವಿವಾಹವನ್ನೂ ವೃದ್ಧವಿವಾಹಗಳನ್ನೂ ನಿಲ್ಲಿಸಿ, ಪ್ರೌಢವಿವಾಹಗಳನ್ನು ಪ್ರಚಾರದಲ್ಲಿ ತರುವಸಲುವಾಗಿ ಮಹಾಸಭೆಯವರ ಅಪ್ಪಣೆಯಿಂದ ನಾನು ಓದಿ ತೋರಿಸಿದ ನಿರ್ಣಯಕ್ಕೆ ತಮ್ಮೆಲ್ಲರ ಸಮ್ಮತಿಯು ದೊರೆಯ ಬಹುದೆಂದು ನಂಬಿದ್ದೇನೆ. ಆದುದರಿಂದ ಎಲ್ಲರು ಆನಂದದಿಂದ ಈ ನಿರ್ಣಯಕ್ಕೆ ಸಮ್ಮತಿಕೊಡಬೇಕೆಂದು ಬಿನ್ನವಿಸಿ, ಕೆಳಗೆ ಕುಳಿತು ಕೊಳ್ಳುತ್ತೇನೆ. ... ... *

( ಕೈಚಪ್ಪಾಳೆ. )

ತಮ್ಮಪ್ಪ ಸತ್ಯಪ್ಪ ಚಿಕ್ಕೋಡಿ, ರಬಕವಿ.

## ಮಹಿಳಾಪರಿಷತ್ತಿನಲ್ಲಿ,
## ಶ್ರೀಮತಿ ಬಸಮ್ಮ ಮಾನ್ವಿ ಗದಗು, ಇವರು ಮಾಡಿದ ಭಾಷಣವು.
## ಬಾಲ್ಯವಿವಾಹದಿಂದಾಗುವ ಹಾನಿಯು.

ಸಭಾಧ್ಯಕ್ಷರೇ? ಮತ್ತು ಪ್ರಿಯಭಗಿನಿಯರೇ? ನನ್ನ ಜನ್ಮಕ್ಕೆ ಸಭೆಯಲ್ಲಿನಿಂತು ಮಾತನಾಡುವದು ಇದು ಮೊದಲನೇದಾದ ಪ್ರಯುಕ್ತ ಬಹುಶಃ ಭಾಷಣದಲ್ಲಿರುವ ದೋಷಗಳನ್ನು ತಾವು ದಯೆಯಿಂದ ಕ್ಷಮಿಸುವುದೆಂದು ನಾನು ಪ್ರಾರ್ಥಿಸುವೆನು. ... *

ಪೂಜ್ಯರೇ ನಮ್ಮ ಈ ವೀರಶೈವ ಮತದಲ್ಲಿ ಬಾಲ್ಯವಿವಾಹವು ಬಹು ಪ್ರಬಲಸ್ಥಿತಿಯಲ್ಲಿ ಇರುತ್ತದೆ. ಇದು ಕೆಟ್ಟಪದ್ಧತಿಯೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಯಾಕೆಂದರೆ, ಹುಟ್ಟಿದ ೧-೩ ಇಲ್ಲವೆ ೫-೬ವರ್ಷದ ಕನ್ಯೆಗೂ ೩-೪ ಅಥವಾ ೭-೮ವರ್ಷದ ವರನಿಗೂ ವಿವಾಹವನ್ನು ಮಾಡಿದರೆ ಆ ವಧೂವರರಿಗೆ ಇವಳೆ ನನ್ನ ಪತ್ನಿಯು ಇವನೆ ನನ್ನ ಪತಿಯು ಎಂಬ ಭಾವನೆಯು ಇರುವದಿಲ್ಲ. ಮತ್ತು ಯಾವ ಸ್ತ್ರೀಯಳ ಪತಿಯು ಯೌವನಾವಸ್ಥೆಯಲ್ಲಿ ಗುಣಹೀನನಾಗಿ ಇಲ್ಲವೆ ದರಿದ್ರನಾಗಿದ್ದು ನಿರುದ್ಯೋಗಿಯಾಗಿ ಇದ್ದರೆ, ನೆರೆಹೊರೆಯ ಸ್ತ್ರೀಯರ ಗುಣವುಳ್ಳವರಾಗಿದ್ದು ಉದ್ಯೋಗಪರರಾದ ಪತಿಗಳನ್ನು ನೋಡಿ ಸ್ತ್ರೀಯಳು ನನ್ನ ತಾಯಿತಂದಿಗಳು ಇಂಥ ಕೆಟ್ಟಗಂಡನನ್ನು ಮಾಡಿ ನನ್ನ ಜನ್ಮಕ್ಕೆ ದುಃಖವನ್ನು ಕೊಟ್ಟರೆಂದು ತಿಳಿದು, ಮನಸ್ಸಿನಲ್ಲಿಯೆ ಸಂಕಟ ಪಡುತ್ತಾಳೆ. ಮತ್ತು ಇದಕ್ಕಿಂತಲು ಇನ್ನೊಂದು ದುಃಖದಾಯಕವಾದ ಸಂಗತಿಯುಂಟು. ಯೇನೆಂದರೆ:—ಹುಡಗಿಯು ಅಜ್ಞಾನದಲ್ಲಿರುವಾಗ್ಗೆ ತಾಯಿಯು ತಮ್ಮನೆ ಇರಲಿ, ಇಲ್ಲವೆ ತಂದಿಯು ಸೋದರಿಯ ಮಗನಿರಲಿ, ಇಂಥವನು ಕುರುಪನಿರಲಿ, ಕುಂಟನಿರಲಿ, ಇವನಿಗೆ ಇನ್ಯಾರು ಕನ್ಯೆಯನ್ನು ಕೊಡುವದಿಲ್ಲವೆಂದು ತಿಳಿದು, ಮತ್ತು ಅವನಿಗೆ ತನ್ನ ಮಗಳನ್ನು ಕೊಟ್ಟು ಲಗ್ನಮಾಡಿದರೆ ಅವನು ಮುಕ್ತನಾಗುವನಲ್ಲದೆ ತಾವು ಕೂಡಾ ಕನ್ಯಾದಾನದ ಫಲವುಳ್ಳವರಾಗುವೆವೆಂದು ತಿಳಿದು, ತಮ್ಮ ಕನ್ಯೆಯನ್ನು ಕೊಟ್ಟು ಅಂಥವನಿಗೆ ಲಗ್ನಮಾಡುವರು. ಸೋದರಿಯರೆ? ಆ ಕನ್ಯೆಯು ಅಗದೀ ಬಾಲ್ಯಾವಸ್ಥೆಯಲ್ಲಿರುವದರಿಂದ ಅಂಥ ಕೆಟ್ಟವರನಿಗೆ ಕೊಡುವಂತೆ, ಕೊಲ್ಲುವ ಕಟಗನಿಗು ಕೊಟ್ಟರು ಸಮ್ಮನಿರುತ್ತದೆ. ನೋಡಿರಿ ಆ ಕನ್ಯೆಯು ಯೌವ್ವನಕ್ಕೆ ಬಂದು ತನ್ನ ಪತಿಯ ಸ್ವರೂಪವನ್ನು ಕಂಡು ಅಯ್ಯೋ ಇಂಥ ಕುರುಡ ಕುಂಟ ವರನಿಗೆ ಕೊಡುವದಕ್ಕಿಂತು ಕಲ್ಲುಕಟ್ಟಿ ತನ್ನನ್ನು ಭಾವಿಯಲ್ಲಿ ಬಿಸಡಿದ್ದರೆ ಬಳ್ಳೇದಾಗುತ್ತಿತ್ತೆಂದು ದುಃಖಪಡುತ್ತ ಇರುತ್ತಾಳೆ. ಅದರಲ್ಲಿ ಉತ್ತಮರಾಗದಿರುವವರು ಅವನನ್ನು ಬಿಟ್ಟು, ಕೆಟ್ಟುಹೋಗುತ್ತಾರೆ. ಇದಕ್ಕೆಲ್ಲವು ತಾಯಿತಂದಿಗಳೇ ಕಾರಣ. ಇದರಿಂದ ಸಂಸಾರವು ನಷ್ಟವಾಗುತ್ತದೆ. ಸಂಸಾರವು ಸರಿಯಾಗಿ ಸಾಗಬೇಕಾದರೆ ಗಂಡನ ಪ್ರೇಮವು ಹೆಂಡತಿಯಲ್ಲಿದ್ದು, ಹೆಂಡತಿಯ ಪ್ರೇ

ಮನೆಗೆಲಸದಲ್ಲಿರಬೇಕಾಗುತ್ತದೆ. ಹೀಗಿದ್ದರೆ ಸಂಸಾರವು ಬಹು ಸುಖವಾಗಿ ಸಾಗುತ್ತದೆ. ಆದುದರಿಂದ ತಾವೆಲ್ಲರು ತಮ್ಮತಮ್ಮ ಮಕ್ಕಳಿಗೆ ಚಿಕ್ಕತನದಲ್ಲಿ ಲಗ್ನವನ್ನು ಮಾಡುವದು ತಪ್ಪಿಸಿ, ಪ್ರೌಢತನದಲ್ಲಿ ಮಾಡುವ ಪದ್ಧತಿಯನ್ನು ಅನುಸರಿಸಿ, ಸಮಾಜವನ್ನು ಸುಧಾರಿಸ ಬೇಕೆಂದು ತಮ್ಮೆಲ್ಲರಿಗೂ ನಾನು ಪ್ರಾರ್ಥಿಸುತ್ತೇನೆ. ... ... *

ಬಸಮ್ಮ ಮಾನ್ವಿ, ಗದಗು.

---

## ಶ್ರೀಮತಿ ವೀರಮ್ಮ ಭುಳ್ಳಾನವರ ಗದಗು ಇವರ ಭಾಷಣವು.

ಪ್ರಿಯಸಹೋದರಿಯರೇ? ನಾನು ಹೇಳುವ ಅಲ್ಪ ಭಾಷಣವನ್ನು ಚಿತ್ತವಿಟ್ಟು ಲಾಲಿಸಬೇಕೆಂದು ಬೇಡುತ್ತೇನೆ. ... ... ... *

ಪೂರ್ವದಲ್ಲಿ ಸ್ತ್ರೀಯರೆಲ್ಲರು ವಿದ್ಯಾವತಿಯರಾಗಿದ್ದರೆಂದು ಚರಿತ್ರೆಗಳಿಂದ ತಿಳಿಯ ಬರುತ್ತಿದೆ. ಅದೇನುಕಾರಣದಿಂದಲೋ ಕೆಲವು ದಿನಗಳಿಂದಲು ಸ್ತ್ರೀವಿದ್ಯಾಭ್ಯಾಸಕ್ಕೆ ಉತ್ತೇಜನಕೊಡದೆ ಮಂದಮತಿಗಳನ್ನಾಗಿ ಮಾಡಿಬಿಟ್ಟದರಿಂದ ನಮ್ಮ ಸ್ತ್ರೀಮಂಡಳಿಯು ನೂತನೋಪಾಯಗಳನ್ನು ತಿಳಿದುಕೊಳ್ಳುವಬಕ್ಕನುಕೂಲವಿಲ್ಲದಂತಾಗಿದೆ. ಈ ವರ್ಷ ಉದಾರ ಚಿತ್ತದಿಂದ ಸ್ತ್ರೀಸಭೆಯನ್ನು ಕೂಡಿಸುವಂತೆ ಏರ್ಪಡಿಸಿದುದಕ್ಕೋಸ್ಕರ ನಾವು ಕೃತಜ್ಞತೆಯನ್ನು ತೋರಿಸಬೇಕಾಗಿದೆ. ಇದರಂತೆಯೇ ಪ್ರತಿವರ್ಷವು ಮಹಾಸಭೆಯನ್ನು ಕೂಡಿಸುವಕಾಲಕ್ಕೆ ಸ್ತ್ರೀಸಭೆಯನ್ನು ಕೂಡಿಸುವಂತೆ ನಿರ್ಧರಮಾಡುವದುತ್ತಮವೆಂದು ನನಗೆ ತೋರುತ್ತಿದೆ. ಈ ಸಭೆಯು ತೀರಿದಮೂರನೇ ದಿನದಿಂದಲೇ ಸ್ತ್ರೀಶಿಕ್ಷಣಕ್ಕೆ ಮಾರ್ಗಗಳನ್ನು ಕಲ್ಪಿಸಬೇಕೆಂದು ಪ್ರಾರ್ಥನೆಮಾಡಿ, ಅಧ್ಯಕ್ಷಸ್ಥಾನವನ್ನು ವಹಿಸಿದ, ಆಲಮೇಲಿ ನಾಗಮ್ಮ ದೇಶಾಯಿ ಅಮ್ಮಣ್ಣಿಯವರಿಗೆ ವಂದನೆಮಾಡಿ ನನ್ನ ಭಾಷಣವನ್ನು ಮುಗಿಸಿ, ಕುಳಿತು ಕೊಳ್ಳುತ್ತೇನೆ. ... ... ... ... *

ವೀರಮ್ಮ ಬುಳ್ಳಾನವರ ಗದಗು.

---

## —( ಕರಸ್ಪಾಂಡೆನ್ಸ್. )—

ಈ ೫—ನೆಯ ಶ್ರೀಮದ್ವೀರಶೈವ ಮಹಾಸಭೆಯು ಗೊತ್ತಾಗಿದ್ದ ಮೇರೆ ಕಳೆದ ಡಿಶಂಬರ್ ತಾ॥ ೨೭ ನೇ ತಾರೀಖಿನಿಂದ ಆರಂಭಗೊಂಡು ೩೦ ನೆಯ ತೇದಿಯವರೆಗು ಸಾಂಗವಾಗಿ ನೆರವೇರಿತು. ಆದ್ಯಂತವಾಗಿ ನಡೆದ ಸಂಗತಿಯನ್ನು ಸವಿಸ್ತರ ತಿಳುವಿಕೆಗೋಸ್ಕರ ಇದರಡಿಯಲ್ಲಿ ಸಂಕ್ಷೇಪವಾಗಿ ಕೊಟ್ಟಿರುತ್ತೇನೆ. ಮಹಾರಾಷ್ಟ್ರ ದೇಶದವರು, ಆಂಧ್ರದೇಶದವರು, ದ್ರಾವಿಡ ದೇಶದ ಕೆಲವರು, ಕರ್ನಾಟ ದೇಶದ ಹಲವು ಭಾಗದವರು, ಪ್ರತಿನಿಧಿಗಳಾಗಿಯು, ಪ್ರೇಕ್ಷಕರಾಗಿಯು ಸಹಾ ಅತ್ಯುತ್ಸಾಹದಿಂದ ಬಂದು ಕಳೆದ ವರ್ಷಗಳ ಸಭೆಯಂತೆಯೇ ಈ ಮಹಾ ಸಭೆಗು ವಿಶೇಷ ಶೋಭೆಯನ್ನುಂಟುಮಾಡಿದ್ದರು. ಈ ಸಭೆಗೆ ಹಿಂದಣ ಸಭೆಗೆ ಬಾರದಿದ್ದಂಥಾ ಆಂಧ್ರದೇಶದವರನ್ನು ಪ್ರಯತ್ನ ಪೂರ್ವಕವಾಗಿ ಕರೆಯಿಸಿಕೊಂಡದ್ದು ಆಂಧ್ರದೇಶಕ್ಕೆ ನೂತನ ಜಾಗೃತಿಯನ್ನುಂಟುಮಾಡಲು ಕಾರಣವಾಯಿತು. ಪ್ರತಿನಿಧಿಗಳು ೧೦೦೦, ಪ್ರೇಕ್ಷಕರು ೧೫೦೦, ಆಶ್ರಯದಾತರು, ಅಜೀವ ಸಭಾಸದರು, ಮಹಾ ಸ್ವಾಮಿಗಳು, ಶಾಸ್ತ್ರಿಗಳು ಮೊದಲಾದವರು ೧೫೦೦, ಸ್ಥಳದ ಸಾವಿರಾರುಮಂದಿಗಳು ಇವರೆಲ್ಲರು ಸಭಾಮಂಟಪವು ಕಿಕ್ಕಿರಿಯುವಂತೆ ನೆರೆದಿದ್ದರು. ಒಟ್ಟು ಸಭಾಸ್ತೋರರ ಸಂಖ್ಯೆಯು ೬೦೦೦ ಸಾವಿರಕ್ಕೆ ಕಡಿಮೆಯಿಲ್ಲದೆ ಇದ್ದಿತು. ಸಭೆಯ ಸರ್ವಸೂತ್ರ ಚಾಲಕರಾದ ಶ್ರೀ॥ ಶ್ರೀ॥ ಶಿವಯೋಗಿವರೇಣ್ಯ ಹಾನಗಲ್ಲ ಕುಮಾರ ಮಹಾಸ್ವಾಮಿಯವರು, ಶ್ರೀ॥ ಬೀಳೂರ ಮಹಾಸ್ವಾಮಿಯವರು ಮೊದಲಾದ ಗುರುವರ್ಗವು ವಿಶೇಷವಾಗಿಯೇ ಬಂದಿದ್ದುದು ಅವರ ಮಹಾಕೃಪೆಯು ಈ ಸಭೆಯ ಮೇಲೆ ಪೂರ್ಣವಾಗಿರುವದೆಂಬುದನ್ನು ವ್ಯಕ್ತಪಡಿಸುತ್ತಿದ್ದಿತು. ಇದುವರೆಗು ಯಾವದೊಂದು ಸಭೆಗು ದಯಮಾಡಿಸದೆ ಇದ್ದ ಶ್ರೀಮಾನ್ ಪುಂಗನೂರು ವೀರ ಬಸವರಾಜ ಒಡೆಯರ್ ಯಶೋವಂತ ಬಹದ್ದೂರ್ ರವರು, ಈ ಸಭೆಗೆ ದಯಮಾಡಿಸಿದ್ದುದು ಸಂತೋಷಕರವಾಗಿದ್ದಿತು. ಶ್ರೀಮಾನ್ ಬಂಟನೂರಿದೇಸಾಯಿ ಬಸವ ಪ್ರಭುಯವರು, ಆಲಮೇಲ ಸಂಸ್ಥಾನದ ಶ್ರೀಮಂತ ಶಿವಲಿಂಗರಾವ್ ದೇಶಮುಖಯವರು ಶ್ರೀಮಂತ ಹಂದಿಗನೂರು ಸಂಸ್ಥಾನದ ಮುರಿಗೆಪ್ಪ ದೇಸಾಯಿಯವರು, ಸೊನ್ನ ಸಂಸ್ಥಾನದ ಶ್ರೀಮಂತ ಗಂಗಪ್ಪ ದೇಸಾಯಿಯವರೇ ಮೊದಲಾದ ನಲ್ವತ್ತುಮಂದಿ ದೇಸಾಯಿಗಳು ಲೌಕಿಕ ವಿದ್ಯಾವಿಶಾರದರಾದ ಪಂಡಿತ ಜನಮಂಡಲಿ ಎಂದರೆ, ರಾ॥ ಬ॥ ಶಾಂತವೀರಪ್ಪ ವೀರಸಂಗಪ್ಪ ಮೆಣಸಿನಕಾಯಿ, ಹು॥ ಡಿ॥ ಕಲೆಕ್ಟರು, ರಾ॥ ಸಾ॥ ರೇವಣಸಿದ್ದಯ್ಯ ಕಿತ್ತೂರು ಬಿ. ಏ. ಮಾಮಲೇದಾರುಯವರು, ರಾ॥ ಸಾ॥ ವೀರಭದ್ರಪ್ಪ ಪಾಲಭಾಂವಿ ಬಿ. ಎ. ಎಲ್. ಎಲ್. ಬಿ. ಸಬ್‌ಜಡ್ಜ ರವರು, ಮ॥ ರಾ॥ ರಾ॥ ಟಿ. ಯಸ್. ಸಿದ್ದಪ್ಪ ಎಲ್. ಯಂ. ಯಸ ಯವರು ಮೊದಲಾದ ೪೦—೫೦ ಮಂದಿ ಆಂಗ್ಲ ವಿದ್ಯಾಪಂಡಿತರುಗಳು, ಹೈದರಾಬಾದು ಸಂಸ್ಥಾನದ ಶ್ರೀಮಂತ ಬಾಪುರಾವ್, ರಾಜೇಶ್ವರರಾವು ಮುಂತಾದ ೪—೫ ಮಂದಿ ವಕೀಲರುಗಳು, ಪೂರ್ವ ಸಮುದ್ರ ತೀರದ ಹಲವು ಸ್ಥಳಗಳ ಆಂಧ್ರ ಪಂಡಿತರು ೩—೪ ಮಂದಿ

ಕವಿಗಳು, ರಾ॥ಸಾ॥ ಮಲ್ಲೇಶಪ್ಪ ಮಾನ್ವಿ, ಶ್ರೀಮಂತ ವೀರಪ್ಪ ಕೋಟಿ ಮೊದಲಾದ ಹ ಲವು ಶ್ರೀಮಂತರುಗಳು ಸಹ ಬಂದು ಸಭೆಗೆ ವಿಶೇಷ ಅಲಂಕಾರವನ್ನುಂಟುಮಾಡಿದ್ದರು.

ನೂತನವಾಗೇರ್ಪಡಿಸಿದ ಮಹಿಳಾಪರಿಷತ್ತಿನ ಗೋಸ್ಕರ ಕೆಲವು ಮಹನೀಯರು ವಿದ್ಯಾವತಿಯರಾದ ಸ್ತ್ರೀಯರನ್ನು ಎಲ್ಲ ಪ್ರಾಂತಗಳಿಂದಲು ಕಳುಹಿಸಿದ್ದುದು ಸ್ತ್ರೀವಿದ್ಯಾಭಿ ವೃದ್ಧಿಗೆ ಕಾರಣವಾಯಿತು. ಪರದೇಶದ ಸ್ತ್ರೀಮಂಡಲಿಯು ೩೧೦ ಸ್ಥಳದವರು ೭೦೦ ಮಂದಿ ಸೇರಿ ಮಹಿಳಾಪರಿಷತ್ತಿನಲ್ಲಿ ೧೨೦೦ ಮಂದಿ ಸಭಾಸ್ತರರು ಇದ್ದರು. ... *

—(ಸಭ್ಯ ಮಹನೀಯರ ಮತ್ತು ಅಧ್ಯಕ್ಷರ ಆಗಮನ.)—

ಶ್ರೀ ಶ್ರೀ ಹಾನಗಲ್ಲ ಮಹಾಸ್ವಾಮಿಯವರು ಶ್ರೀ ಮುಂಡ್ರಿಗಿ ಶ್ರೀಗಳೊಂದಿಗೆ ೮ ದಿನಗಳಿಗೆ ಮುಂಚಿತವಾಗಿಯೇ ದಯಮಾಡಿಸಿ, ಉಚಿತವಾದ ಏರ್ಪಾಟುಗಳನ್ನು ಮಾಡಿಸು ತ್ತಿದ್ದರು. ಇವರಿಗೆ ಸಹಾಯವಾಗಿ ೩ ದಿನಗಳು ಮುನ್ನವೇ ರಾ॥ ಸಾ॥ ಮಾಮಲೇದಾರ್ ರೇವಣಸಿದ್ದಯ್ಯ ಕಿತ್ತೂರ್ ಮಠರು, ರಾ॥ ಸಾ॥ ಮಾಮಲೇದಾರ್ ಸತ್ಯಪ್ಪ ಗೂಳಿ ಇವರು ಮ॥ರಾ॥ರಾ॥ ನೂರೊಂದಪ್ಪಶೆಟ್ರು, ಅಥಣಿ ಮ॥ರಾ॥ರಾ॥ ದೇವಿಹೊಸೂರು ಶೆಟ್ರು, ಮೊದ ಲಾದ ೧೦—೧೨ ಮಂದಿ ಸ್ಟ್ಯಾಂಡಿಂಗ್‌ಕಮಿಟಿ ಮೆಂಬರುಗಳೂ ಬಂದು ತಕ್ಕ ವ್ಯವಸ್ಥೆಯ ನ್ನು ಮಾಡಿಸುತ್ತಿದ್ದರು ಸ್ಟ್ಯಾಂಡಿಂಗ್‌ಕಮಿಟಿ ಛೇರ್‌ಮನ್‌ರೂ ಸೆಕ್ರೆಟರಿಗಳುಸಹಾ ಮುಂ ದಾಗಿಯೇ ಬಂದು ಸಕಲ ಕಾರ್ಯಗಳನ್ನು ಜಾಗರೂಕತೆಯಿಂದ ಮಾಡುವಂತೆ ಎಚ್ಚರಕೊ ಡುತ್ತಿದ್ದರೂ. ತಾ॥ ೨೪ ರಿಂದಲು ವಿಶೇಷವಾಗಿ ಜನಸ್ತೋಮವು ಬರಲಾರಂಭಿಸಿತು. ತಾ॥ ೨೬-ರ ಬೆಳಗ್ಯೆ ಪುಂಗನೂರು ಸಂಸ್ಥಾನದ ಶ್ರೀಮಾನ್ ಬಸವರಾಜ ರವರು ತಮ್ಮ ಸಹೋದ ರರ ಮತ್ತು ಪುತ್ರರುಗಳ ಸಮೇತರಾಗಿ ಪರಿವಾರದೊಡನೆ ದಯಮಾಡಿಸಿದರು. ಸತ್ಕಾರಕ ಸಂಘದವರು ನಿಲ್ದಾಣದ ಬಳಿಯಲ್ಲಿಕಾದಿದ್ದು ವೈಭವದೊಡನೆ ಇದಿರ್ಗೊಂಡು ಹಾರಪುಷ್ಪ ಗುಚ್ಛಗಳನ್ನರ್ಪಿಸಿ, ಕುದುರೆಯ ಬಂಡಿಯಮೇಲೆ ಕುಳ್ಳಿರಿಸಿ, ಮುಖ್ಯವೀಧಿಗಳಲ್ಲಿ ಉತ್ಸ ವಪೂರ್ವಕವಾಗಿ ಹೊರಟು ಮ॥ ರಾ॥ ರಾ॥ ಕೈ॥ ಗಡಿಗಿ ವೀರಭದ್ರಪ್ಪನವರ ಬಂಗಲೆಯಲ್ಲಿ ಳಿಸಿದರು. ಅದೇದಿನ ಸಾಯಂಕಾಲ ಸಭಾಧ್ಯಕ್ಷರಾದ ರಾ ಸಾ॥ ಶ್ರೀಮಂತ ಮಲ್ಲಪ್ಪ ಬಸಪ್ಪ ವಾರದ ಯವರು ಸಪರಿವಾರರಾಗಿಯೂ, ಶ್ರೀಮಾನ್ ಬಂಟಮುರಿ ಸಂಸ್ಥಾನಾದೀಶರಾದ ಬಸವ ಪ್ರಭು ಬ್ಯಾರಿಸ್ಟರ್ ಅಟ್ ಲಾಯವರು ಪುತ್ರರತ್ನ ಪರಿವಾರ ಸಮೇತರಾಗಿಯೂ ದಯ ಮಾಡಿಸಿದರು. ಮಹಾ ಜನಸ್ತೋಮ ದೊಡನೆ ಸತ್ಕಾರಕ ಸಂಘದವರು ನಿಲ್ದಾಣದ ಬಳಿ ಯಲ್ಲಿ ಕಾದಿದ್ದು, ಯಥೋಚಿತವಾದ ವಾದ್ಯವೈಭವಾದಿಗಳೊಡನೆ ಅವರುಗಳ ಸುಖಾಗಮ ನವನ್ನು ಕೋರಿ, ಪುಷ್ಪಹಾರಾದಿಗಳನ್ನರ್ಪಿಸಿ, ಗೌರವಿಸಿ- ರಥಾರೂಢರುಗಳನ್ನು ಮಾಡಿ ಪರಮಸಂಭ್ರಮದಿಂದ ಮುಖ್ಯವೀಧಿಗಳಲ್ಲಿ ಉತ್ಸವಗೊಳಿಸಿ, ಬಿಡಾರಗಳನ್ನು ಸೇರಿಸಿದರು. ಆದಿನವು ೨೭ನೇ ತಾರೀಖಿನದಿನವು ಒಂದೊಂದುಸಲ ಸಾವಿರಾರುಗಟ್ಟಲೆಯಾಗಿ ಜನಸ್ತೋ

ಮವು ಬಂದಿಳಿಯುತ್ತ ಬಳ್ಳಾರಿಯ ಪಟ್ಟಣದ ತುಂಬಾ ವೀರಶೈವರ ಸ್ತೋಮವೇ ಎತ್ತ ಕ್ಕೂ ಕಾಣುವಂತೆ ಮಾಡಿದ್ದಿತು. ... ... ... *

## —(ಸ್ವಾಗತ ಸಂಘದವರ ಏರ್ಪಾಟು.)—

ಹೊರಗಣಿಂದ ಬರತಕ್ಕ ಮಹಾಜನರ ಬಿಡದಿಗಳಿಗಾಗಿ ೬೦ ಬಿಡಾರಗಳನ್ನು ಬೇರೆಬೇರೆ ಏರ್ಪಡಿಸಿದ್ದರು. ಅವುಗಳಲ್ಲಿ ತಕ್ಕಷ್ಟು ಪರಿಚಾರಕರಲ್ಲದೆ ೨೦೦ ಜನ ವಾಲಂಟಿಯರುಗಳು ಮೇಲ್ವಿಚಾರಕರು ನಿಯಮಿತರಾಗಿದ್ದರು. ವಾಲಂಟಿಯರುಗಳು ಕ್ಯಾಪ್ಟನ್‌ಗಳಾಗಿ ನೇಮಕವಾಗಿದ್ದ ಮ॥ರಾ॥ರಾ॥ ಗಡಿಗಿ ಮುದ್ದಪ್ಪನವರು, ಮ॥ರಾ॥ರಾ॥ ಆರಳಿ ಬಸಪ್ಪನವರು ಮ॥ರಾ॥ರಾ॥ ಕೋರಿ ಕಟ್ಟಪ್ಪನವರು, ಮ॥ರಾ॥ರಾ॥ ಮೇಟ ಬಸಪ್ಪನವರು, ಜನಗಳನ್ನು ಬರಮಾಡಿಕೊಳ್ಳುವದರಲ್ಲಿಯೂ ಸತ್ಕರಿಸುವದರಲ್ಲಿಯೂ ತುಂಬಾ ಶ್ರದ್ಧೆಯನ್ನು ವಹಿಸಿದ್ದರು. ಎಲ್ಲರಕಿಂತಲು ಮ॥ರಾ॥ರಾ॥ ಗಡಿಗಿ ಮುದ್ದಪ್ಪ ನವರ ಕಾರ್ಯದಕ್ಷತೆಯು ಸಹಜವಾಗಿ ಅವರಲ್ಲಿರುವ ಮತಾಭಿಮಾನತೆಯನ್ನು ವ್ಯಕ್ತಪಡಿಸುತ್ತಿದ್ದಿತು. ಭೋಜನ ಸಾಮಗ್ರಿಗಳನ್ನೊದಗಿಸುವ ಬಿಡಾರದಲ್ಲಿ ಅಧ್ಯಕ್ಷರಾಗಿದ್ದ ಅನುಭವಶಾಲಿಗಳಾದ ಯಜಮಾನ್ ಮ॥ರಾ॥ರಾ॥ ಕೌತಾಳದ ಶಾಂತಮೂರ್ತೆಪ್ಪ ನವರು ಯಾರೊಬ್ಬರಿಗು ಕೊರತೆಯಿಲ್ಲದಂತೆ ಯಥೇಚ್ಛವಾಗಿ ಪದಾರ್ಥಗಳನ್ನು ಕೊಡುತ್ತಾ ಸಭೆಯ ೩—೪ ದಿನಗಳು ವಿಶೇಷ ಸಾಹಸವನ್ನು ತೆಗೆದುಕೊಂಡು ಸರ್ವರಿಗು ಸಂತೋಷವನ್ನುಂಟು ಮಾಡಿದರು. ನಿಲ್ದಾಣದಲ್ಲಿ ಪರಸ್ಥಳದ ಜನರನ್ನು ಇದಿರ್ಗೊಂಡು ಅವರವರ ಬಿಡಾರಗಳಲ್ಲಿ ಇಳಿಸುವದಕ್ಕೆ ತಕ್ಕ ಜನರು ಸ್ವಯಂಸೇವಕರು ಇದ್ದು, ಉತ್ತಮ ವ್ಯವಸ್ಥೆಯನ್ನು ಮಾಡಿದ್ದರು. ಪಟ್ಟಣದಲ್ಲಿ ೧೦ ೧೪ ಕಡೆ ಅಲಂಕರಣಾರ್ಥವಾಗಿ ಕಮಾನುಗಳನ್ನು ಕಟ್ಟಿಸಿ, ಅವುಗಳ ಮೇಲೆ ಸಂಘಾಗಮನವನ್ನು ಬಯಸುವ ವಾಕ್ಯಗಳನ್ನು ಆಂಗ್ಲ ಚಕ್ರವರ್ತಿಗಳ ಶ್ರೇಯಃ ಪ್ರಾರ್ಥನೆಯ ವಾಕ್ಯಗಳನ್ನು ಬರೆದಿದ್ದರು. ಸಭಾಮಂಟಪವು ಪುರಕ್ಕೆ ಸೇರಿದಂತೆಯೇ ಇರುವ ಮ॥ರಾ॥ರಾ॥ ಲೇಟ್ ಎ. ಸಭಾಪತಿ ಮೊದಲಿಯಾರ್ ಇವರ ಕಂಪಿನಿಯ ವಿಶಾಲವಾದ ಕಂಪೌಂಡಿನಲ್ಲಿ ಶೃಂಗಾರವಾಗಿ ರಚಿಸಲ್ಪಟ್ಟದ್ದಿತು. ಪೂಜ್ಯ ಮಹಾಸ್ವಾಮಿಗಳು ಸಭಾಧ್ಯಕ್ಷರು ಕುಳಿತುಕೊಳ್ಳಲು ಉನ್ನತವಾದ ಜಗಲಿಗಳನ್ನು ರಚಿಸಿದ್ದರು. ಪ್ರತಿನಿಧಿಗಳಗೂ ಪ್ರೇಕ್ಷಕರುಗಳಗೂ ನಿವ್ವಜ್ಜನರಿಗೂ ಸಂಸ್ಥಾನಾಧೀಶರು ಮೊದಲಾದ ಶ್ರೀಮಂತರುಗಳಗೂ ಯಥೋಚಿತವಾದ ಸ್ಥಲಗಳನ್ನು ಬೇರೆಬೇರೆ ಮಾಡಿಸಿದ್ದುದು ಅನುಕೂಲವಾಗಿದ್ದಿತು. ಮಂಟಪದ ಒಂದು ಭಾಗದಲ್ಲಿಯೇ ರಾತ್ರಿವೇಳೆ ಸುಮನೋರಮಸಭಾ ಎಂಬ ಸ್ಥಲದ ನಾಟಕ ಸಂಘದವರು ಎರಡು ದಿನಗಳು ಮೈಸೂರು ಅಭಿನವ ಕಾಳಿದಾಸರೆಂದು ಬಿರುದನ್ನು ಹೊಂದಿದ ಕ್ಕೆ॥ ವಾ॥ ಶಿ॥ ಬಸವಪ್ಪ ಶಾಸ್ತ್ರಿಗಳಿಂದ ರಚಿತವಾದ ಶಾಕುಂತಳ ನಾಟಕವನ್ನು ಆಡಲಿಕ್ಕೆ ಸ್ಥಲವನ್ನೇರ್ಪಡಿಸಿ ಕೊಟ್ಟದ್ದರು. ೧—೨ ಕುದುರೆಗಳ ಹಲವು ಬಂಡಿಗಳನ್ನು ಸಭ್ಯರ ಸಂಚಾರಕ್ಕೆ ಅನುಕೂಲಿಸುವಂತೆ ಸದಾ ಚಿತಿಮಾಡಿದ್ದರು. ... ... *

